ಮನೋಹರ ಗ್ರಂಥಮಾಲೆ ೩೯-೪೦ನೆಯ ಕುಸುಮ

# ಭಾರತಮಾರ್ಗ

( ವಿಚಾರಪ್ರಧಾನವಾದ ಕಾದಂಬರಿ )

ಅನುವಾದಕರು:

ಗುರುರಾಜ ಭೀ. ಜೋಶಿ,

ಎಂ. ಎ ಬಿ. ಟಿ.

ಶ್ರೀ

ಮನೋಹರ ಗ್ರಂಥಪ್ರಕಾಶನ ಸಮಿತಿ

— ಧಾರವಾಡ —

ಫೆಬ್ರುವರಿ ೧೯೪೦ ● ಬೆಲೆ ೨-೮-೦

**ಸಾಹಿತ್ಯ ವಿಷಯದಲ್ಲಿ ಸಲಹೆಗಾರರು :**

ಶ್ರೀ ದ. ರಾ. ಬೇಂದ್ರೆ, ಎಂ ಎ.
ಶ್ರೀ ರಂ. ಶ್ರೀ. ಮುಗಳಿ, ಎಂ. ಎ ಬಿ ಟಿ.
ಶ್ರೀ ವಿ ಕೃ ಗೋಕಾಕ, ಬಿ ಎ (ಆಕ್ಸಫರ್ಡ)


ಮುದ್ರಕರು
**ಕೆ. ಜಿ. ರಾಯದುರ್ಗ**
**ಮೋಹನ ಮುದ್ರಣಾಲಯ**
**ಧಾರವಾಡ.**

ಪ್ರಕಾಶಕರು :
**ಜಿ. ಬಿ. ಜೋಶಿ**
ಮನೋಹರ ಗ್ರಂಥಮಾಲಾ
**ಧಾರವಾಡ**

**ಸಂಪಾದಕ :**

**ಜಿ. ಬಿ. ಜೋಶಿ**

# ನಮ್ಮ ಮಾತು



ಈ ಭಾರತಮಾರ್ಗವು ಇ. ಎಂ. ಫಾಸ್ಟರ ಇವರ The Passage to India ಎಂಬ ವಿಚಾರಪ್ರಧಾನವಾದ ಮಾರ್ಮಿಕ ಇಂಗ್ಲೀಷ ಕಾದಂಬರಿಯ ಅನುವಾದ. ಇದನ್ನು ಕನ್ನಡಕ್ಕೆ ಪರಿವರ್ತಿಸಲು ಅನುಮತಿ ಕೊಟ್ಟು ಗೌರವಿಸಿದ್ದಕ್ಕಾಗಿ ಇ. ಎಂ. ಫಾಸ್ಟರ್ ಅವರಿಗೂ ಮತ್ತು ತಿಂಗಳೊಪ್ಪತ್ತಿನಲ್ಲಿಯೆ ನಮಗೆ ಇದರ ಅನುವಾದ ಮಾಡಿಕೊಟ್ಟ ಶ್ರೀಮಾನ್ ಗುರುರಾಜ ಛೀ. ಜೋಶಿಯವರಿಗೂ ಈ ಕಾದಂಬರಿಯನ್ನು ನಮಗೆ ದೊರಕಿಸಿ ಕೊಟ್ಟು, ಇದಕ್ಕೊಂದು ಮನೋಜ್ಞವಾದ ಮುನ್ನುಡಿಯನ್ನು ಬರೆದು ಕೊಟ್ಟ ಶ್ರೀಮಾನ್ ವಿ. ಕೃ. ಗೋಕಾಕ ಅವರಿಗೂ ನೋಡಿದೊಡನೆ ಮನಸ್ಸನ್ನೆಳೆಯುವಂತಹ ಹೊದಿಕೆಯ ಚಿತ್ರವನ್ನು ತೆಗೆದುಕೊಟ್ಟ ಶ್ರೀಮಾನ್ ರಾಘವೇಂದ್ರರಿಗೂ ನಾವು ಅತ್ಯಂತ ಉಪಕೃತರಾಗಿದ್ದೇವೆ.

'ಭಾರತಮಾರ್ಗ' ವು ನಮ್ಮ ಕಲ್ಪನೆ ಮೀರಿ ದೊಡ್ಡದಾಗಿದ್ದರೂ ನಾವು ಮೊದಲೆ ಸಂಕಲ್ಪಮಾಡಿದಂತೆ ಅದನ್ನು ಎರಡೆ ಭಾಗಗಳಲ್ಲಿ ಕೊಟ್ಟಿದ್ದೇವೆ. ಯುದ್ಧದ ನಿಮಿತ್ತವಾಗಿ ಕಾಗದವು ಮೊದಲಿನಕಿಂತ ಎರಡೂವರೆ ಪಟ್ಟು ಹೆಚ್ಚಾಗಿದ್ದ ಈ ಕಾಲದಲ್ಲಿ ನಾವು ಗ್ರಾಹಕರಿಗೆ ಇದರಲ್ಲಿ ೧೨೦ ಪುಟಗಳನ್ನು ಹೆಚ್ಚಿಗೆ ಕೊಡುವ ಸಾಹಸ ಮಾಡಿದ್ದೇವೆ. ಇದಕ್ಕಾಗಿ ನಾವು ಬೇಡುವದಿಷ್ಟೆ: ಚಂದಾಹಣ ಬಾಕಿಯಿದ್ದ ಗ್ರಾಹಕರು ಈ ಯುದ್ಧದ ನಿಮಿತ್ತದಿಂದ ಬಂದೊದಗಿದ ಆಪತ್ತಿನಿಂದ ನಮ್ಮ ಮಾಲೆಯನ್ನು ಪಾರು ಮಾಡಲು ಸಹಾಯ ಮಾಡಬೇಕಾಗಿದ್ದರೆ --ಅವರೇನು ಆಪದ್ಧನವೆಂದು ನಮಗೆ ಹಾಗೇ ಕೊಡಬೇಕಾಗಿಲ್ಲ, ಮುಂಗಡವಾಗಿಯೂ ಕೊಡಬೇಕಾಲ್ಲ-ಆದರೆ ಮಾಲೆಗೆ ತಮ್ಮಿಂದ ಸಲ್ಲಬೇಕಾಗಿದ್ದ ಹಣವನ್ನೆಲ್ಲ ಈ ಹೊತ್ತಿನಲ್ಲಿ ಸಲ್ಲಿಸಿ ಬಿಟ್ಟರೆ ಅದೇ ಅತ್ಯಂತ ಉಪಕಾರವಾಗುವದು. ಮತ್ತು ಸತತವಾಗಿ ಏಳು ವರ್ಷಗಳ ವರೆಗೆ ನಡೆದ ಗ್ರಂಥಮಾಲೆಯು ಆಪತ್ತಿನಲ್ಲಿದ್ದಾಗ ಅದನ್ನು ಎತ್ತಿ ಹಿಡಿದ ಶ್ರೇಯಸ್ಸು ಅವರ ಪಾಲಿಗೂ ಬರುವದು. ದಯವಿಟ್ಟು ಎಲ್ಲರೂ ಸಹಾಯ ಮಾಡಬೇಕು.

—ಸಂಪಾದಕ

# ಮುನ್ನುಡಿ



ಇ. ಎಮ್. ಫಾಸ್ಟರ್ ಎಂಬವರು ಬರೆದ 'ಭಾರತಮಾರ್ಗ'ವೆಂಬ ಕಾದಂಬರಿಯು ಕಳೆದ ಮೂವತ್ತು ನಾಲ್ವತ್ತು ವರ್ಷಗಳಲ್ಲಿ ಆಚ್ಛಾದ ಕಾದಂಬರಿಗಳಲ್ಲೆಲ್ಲ ಅತ್ಯುತ್ತಮವಾದುದೆಂದು ಅನೇಕ ಆಂಗ್ಲ ವಿಮರ್ಶಕರು ಅಭಿಪ್ರಾಯ ಪಟ್ಟಿದ್ದಾರೆ. ಇಂದಿನ ಶ್ರೇಷ್ಠತಮ ಕಾದಂಬರಿಗಳಲ್ಲಿ ಇದೂ ಒಂದಾಗಿದೆಯೆಂದು ನಾವು ನಿಸ್ಸಂದೇಹವಾಗಿ ಹೇಳಬಹುದು. ಇಂಥ ಕಾದಂಬರಿರತ್ನವನ್ನು ಕನ್ನಡದಲ್ಲಿ ಒದಗಿಸಿಕೊಡಬೇಕೆಂದು ಮನೋಹರ ಗ್ರಂಥಮಾಲೆಯವರು ಬಯಸಿದ್ದರೆ ಆಶ್ಚರ್ಯವಲ್ಲ. ಈಗಾಗಲೆ ಈ ಕಾದಂಬರಿ ಯನ್ನು ಬಂಗಾಲಿ ಭಾಷೆಗೆ ಪರಿವರ್ತಿಸಿದ್ದಾರೆ. ಕನ್ನಡದಲ್ಲಿ ಇದನ್ನು ಭಾಷಾಂತರಿಸಲು ಸಮ್ಮತಿಕೊಡಬೇಕೆಂದು ಕೇಳಿದಾಗ ಇ. ಎಮ್. ಫಾಸ್ಟ ರರು ಸಂತೋಷದಿಂದ ಒಪ್ಪಿಕೊಂಡರು. 'ಹೈದ್ರಾಬಾದಿಗೆ ಹೋಗುವಾಗ ನಿಜಾಮು ಸಂಸ್ಥಾನದ ಕೆಲವು ಭಾಗಗಳಲ್ಲಿ ಜನರಾಡುವ ಭಾಷೆಯು ಕನ್ನಡ ವಲ್ಲವೆ?' ಎಂದೂ ಅವರು ಕೇಳಿದ್ದರು. ಬಂಗಾಲಿಯ ತರುವಾಯ ಕನ್ನ ಡಕ್ಕೆ ಈ ಪರಿವರ್ತನೆಯ ಮಾನವು ದೊರಕಿದ್ದು ಅಭಿಮಾನಾಸ್ಪದವಾಗಿದೆ.

ಫಾಸ್ಟರರು ೧೮೭೯ರಲ್ಲಿ ಹುಟ್ಟಿದರು. **ದೇವದೂತರು ಅಡಿಯಿಡಲು ಹೆದರುವಲ್ಲಿ** (Where Angels fear to tread) ೧೯೦೫, **ತೀರದೂರ ಪಯಣ** (The Longest Journey) ೧೯೦೭, **ಹಾವರ್ಡ್ಸ್ ಎಂಡ್** ೧೯೧೦; **ಸ್ವರ್ಗದ ಬಸ್ಸು** (The Celestial Omnibus) **ಭಾರತಮಾರ್ಗ** (A Passage to India) ೧೯೨೪, **ಕಾದಂಬರಿಯ ಕಲಾರೀತಿಗಳು** (Aspects of the Novel) ೧೯೨೭: ಇವು ಅವರ ಕೆಲವು ಮುಖ್ಯ ಕೃತಿ ಗಳಾಗಿವೆ. ಶ್ರೇಷ್ಠ ಕಾದಂಬರಿಕಾರರೆಂದೂ ವಿಮರ್ಶಕರೆಂದೂ ಅವರು ಆಂಗ್ಲ ಸಾಹಿತ್ಯಲೋಕದಲ್ಲಿ ಹೆಸರು ಪಡೆದಿದ್ದಾರೆ.

**ಭಾರತ ಸಮಾರ್ಗ**ವೆಂಬ ಕಾದಂಬರಿಯು ಇವರ ಕೃತಿಗಳಲ್ಲೆಲ್ಲಾ ಶ್ರೇಷ್ಠವಾದುದು. ಇವರು ಬರೆಯುವದಕ್ಕಿಂತ ಮೊದಲು ಭಾರತದ ಬಗ್ಗೆ ಕಿಪ್ಲಿಂಗ್ ಎಂಬ ಕಾದಂಬರಿಕಾರನ ಅಪಪ್ರಚಾರವೇ ಬ್ರಿಟನ್ನಿನಲ್ಲಿ ಹೆಚ್ಚಾಗಿತ್ತು. ಆಂಗ್ಲೇಯರ ಬರವಿನಿಂದ ಭಾರತಕ್ಕಾದ ಕಲ್ಯಾಣ, ಭಾರತೀಯರ ಹೇಡಿತನ, ದಾಸ್ಯವೃತ್ತಿ ಹಾಗು ಲಾಂಗೂಲಚಾಲನ, ಆಂಗ್ಲೇಯರ ಪರಾಕ್ರಮ,-ಇವನ್ನೇ ಕಿಪ್ಲಿಂಗನು ಎತ್ತಿ ಹಿಡಿಯುತ್ತಿದ್ದ. ಆಂಗ್ಲರ ಸಾಮ್ರಾಜ್ಯವಾದವನ್ನು ಕಾದಂಬರಿ ಪ್ರಪಂಚದಲ್ಲಿ ತಂದಿರಿಸಿ ಅನ್ಯ ಜನಾಂಗಗಳ ದೋಷಗಳನ್ನೇ ದೊಡ್ಡದಾಗಿಸಿ ತೋರಿಸಿದ ಕಿಪ್ಲಿಂಗನು ಸಾಹಿತ್ಯಲೋಕದಲ್ಲಿಯು ಕವಿಮ್ಮಾರನೆಂದು ಮುಂದೆ ಬಂದ. ಭಾರತೀಯರನ್ನು ಕೀಳುಗೆಯ್ಯುವ ಅವಸಹಾದಿಯನ್ನು ಹಿಡಿದು ಅನೇಕ ಕೃತಿಗಳು ಇಂಗ್ಲಿಷಿನಲ್ಲಿ ಹುಟ್ಟಿದವು. ಕಥೆಗಾರಿಕೆಯಲ್ಲಿ ಕಿಪ್ಲಿಂಗನಷ್ಟೇ ಕೌಶಲ್ಯವನ್ನು ಹೊಂದಿ ಉದಾತ್ತ ವಿಚಾರಗಳನ್ನು ನಿರೂಪಿಸುವ ಕಲೋಪಾಸಕನು ಮುಂದೆ ಬರದ ಹೊರತು ಕಿಪ್ಲಿಂಗನ ವರ್ಚಸ್ಸು ಕಡಿಮೆಯಾಗುವ ಹಾಗಿರಲಿಲ್ಲ. ಫಾಸ್ಟರರ ಕೃತಿಯಲ್ಲಿ ಇಂಥ ಕಲಾವಂತಿಕೆಯು ಮೊಟ್ಟಮೊದಲಿಗೆ ಕಂಡುಬಂದಿತೆಂದು ನಾವು ಧಾರಾಳವಾಗಿ ಹೇಳಬಹುದು. ಎಡ್ವರ್ಡ್ ಟಾಮ್ಸನ್ ಮೊದಲಾದ ನಾಮಾಂಕಿತ ಲೇಖಕರು ಫಾಸ್ಟರರು ಹಾಕಿಕೊಟ್ಟ ಪಙ್ತಿಯಲ್ಲಿಯೇ ಇಂದಿಗೂ ಮುಂದೆ ನಡೆಯುತ್ತಿದ್ದಾರೆ. ಇತ್ತೀಚೆಗೆ ಆಡೆನ್, ಇಶರ್‌ವುಡ್, ಆನಂದ ಮೊದಲಾದವರು ಭಾರತದ ಸ್ವಾತಂತ್ರ್ಯದ ಬಗ್ಗೆ, ಅದರ ಸಂಸ್ಕೃತಿಯ ಬಗ್ಗೆ, ಅತ್ಯಂತ ಪ್ರಾಮಾಣಿಕತೆಯಿಂದ ಬರೆದು ಈ ವಿಷಯವನ್ನು ಕುರಿತು ಹೊಸದೊಂದು ದಾರಿಯನ್ನೇ ಆಂಗ್ಲಸಾಹಿತ್ಯದಲ್ಲಿ ತೆರೆದಿದ್ದಾರೆ. ಹಿಂದುಸ್ತಾನದ ವಿಷಯದಲ್ಲಿ ಮಂದ, ಮವಾಳ ಹಾಗು ಸಮತಾಪಕ್ಷಗಳಿಗಿರುವ ಅಭಿಪ್ರಾಯವನ್ನು ಆಂಗ್ಲಸಾಹಿತ್ಯದಲ್ಲಿ ಕಿಪ್ಲಿಂಗ್, ಫಾಸ್ಟರ್ ಹಾಗು ಆಡೆನ್ನರು ನಿದರ್ಶನಕ್ಕೆ ತರುತ್ತಾರೆಂದು ಹೇಳಬಹುದು.

ಫಾಸ್ಟರರ ಈ ಕಾದಂಬರಿಯು ೧೯೨೪ರಲ್ಲಿ ಪ್ರಸಿದ್ಧವಾದರೂ ಇದನ್ನು ಬರೆಯಲು ಬೇಕಾದ ಅನುಭವವನ್ನು ಅವರು ಇದಕ್ಕಿಂತ ಅನೇಕ ವರ್ಷಗಳ ಹಿಂದೆ ಪಡೆದಿದ್ದರು. ಒಮ್ಮೆ ಫಾಸ್ಟರರು 'ಮಜಲಿಸ್'ದೆದುರು ಭಾಷಣ ಮಾಡಲು ಆಕ್ಸಫರ್ಡಿಗೆ ಬಂದಿದ್ದರು. ಆಗ ನನ್ನ ಸ್ನೇಹಿತರೊಬ್ಬರು

ಅವರನ್ನು ಚಹಕ್ಕೆ ಕರೆದಾಗ ಅವರೊಡನೆ ಒಂದೆರಡು ತಾಸು ಕಳೆಯುವ ಪ್ರಸಂಗವು ನನಗೆ ದೊರಕಿತ್ತು. ಆಗ ನಡೆದ ವೃತ್ತಾಂತವನ್ನೆಲ್ಲ ನಾನು ವಿಮಾನ ಟಪಾಲಿನಿಂದ ಇಲ್ಲಿಗೆ ಕಳಿಸಿದ್ದೆ. ಆದರೆ ಅಕಸ್ಮಾತ್ತಾಗಿ ಸುಟ್ಟು ಹೋದ ವಿಮಾನದೊಡನೆ ನನ್ನ ಪತ್ರವೂ ಇಲ್ಲವಾಯಿತು. ಈಗ ನೆನಪಿದ್ದ ಕೆಲವು ಸಂಗತಿಗಳನ್ನು ಈ ಪುಸ್ತಕವನ್ನೋದುವವರಿಗೆ ಉಪಯೋಗವಾಗುವ ಹಾಗೆ ಬರೆಯುತ್ತಿದ್ದೇನೆ.

ಗಾಂಧಿಯುಗವು ಪ್ರಾರಂಭವಾಗುವದಕ್ಕಿಂತ ಮುಂಚೆ ಅನೇಕ ವರ್ಷಗಳ ಪೂರ್ವದಲ್ಲಿ ಫಾ:ಸ್ಟರರು ಹಿಂದುಸ್ತಾನಕ್ಕೆ ಬಂದಿದ್ದರು ಆಗ ಇಲ್ಲಿಯ ಆಂಗ್ಲರನ್ನೂ ದೇಶೀಯರನ್ನು ನೋಡಿ ಅವರಿಗೆ ವಿಚಿತ್ರವೆನಿಸಿತು, ಕರುಣೆಯುಂಟಾಯಿತು, ದುಃಖವಾಯಿತು. ಬ್ರಿಟನ್ನಿನಿಂದ ತೀರ ಸಾದಾ ಜನರು ಬಂದು ಇಲ್ಲಿ ಕಲೆಕ್ಟರರಾಗುವರು, ದೊಡ್ಡ ದೊಡ್ಡ ಹುದ್ದೆಗಳನ್ನೆಲ್ಲ ಎತ್ತಿ ಹಾಕುವರು; ಸ್ವದೇಶವನ್ನು ಬಿಟ್ಟುಬರುವದು ಹಾಗು ಭಾರತೀಯರೊಡನೆ ಒಂದಾಗದೆ ಇರುವದು,–ಈ ಕಾರಣಗಳ ಮೂಲಕ ತಮ್ಮ ತಮ್ಮ ನಡುವೆ ಮಾತ್ರ ಬಳಕೆಯಿಟ್ಟು ಅವರು ಭಾರತದ ಹೃದಯದಲ್ಲಿ ' ಆ್ಯಂಗ್ಲೊ ಇಂಡಿಯಾ' ಎಂಬ ತಮ್ಮದೊಂದು ಸಣ್ಣ ಜಗತ್ತನ್ನೇ ನಿರ್ಮಿಸಿಕೊಳ್ಳುವರು. ಸ್ವದೇಶದಲ್ಲಿದ್ದಾಗಲೆ ಅವರಿಗೆ ಆಂಗ್ಲಸಾಹಿತ್ಯವಾಗಲಿ ನಾಟ್ಯಕಲೆಯಾಗಲಿ ವಿಶೇಷವಾಗಿ ಗೊತ್ತಿರುವದಿಲ್ಲ; ಹೀಗಿದ್ದರೂ ಹರಕು-ಮುರುಕು ಹಾಡುಗಳನ್ನು ಹಾಡಿಕೊಳ್ಳುವರು, ಹುಚ್ಚುಹುಚ್ಚಾಗಿ ಅಭಿನಯಿಸಿ ನಾಟಕಗಳನ್ನಾಡುವರು. ಕೋರ್ಟಕಚೇರಿಗೆ ಹೋದಾಗ ಈ ಆಂಗ್ಲರ ಮಹಿಳೆಯರಿಗೆ ನ್ಯಾಯಾಧೀಶರ ವ್ಯಾಸಪೀಠದ ಮೇಲೆಯೇ ಜಾಗ ಬೇಕು. ಹೀಗೆಯೇ ಅವರ ಜೀವನವು ಭಾರತದ ಸಂಪತ್ತನ್ನು ಮನಬಂದಂತೆ ಸೂರೆಗೆಯ್ದರೂ ಭಾರತೀಯ ಸಂಸ್ಕೃತಿಯ ತಿರುಳನ್ನು ತಿಳಿಯದೆ ಮುಂದೆ ಸಾಗುವದು.

ಆದರೂ ' ಆ್ಯಂಗ್ಲೊ ಇಂಡಿಯ 'ವು ಹೇಗೆ ಕ್ರಮಶಃ ಪಲ್ಲಟಗೊಂಡಿದೆಯೆಂದು ಫಾ:ಸ್ಟರರು ಮನೋಹರವಾಗಿ ತೋರಿಸಿದ್ದಾರೆ. ಟರ್ಟನ್ ದಂಪತಿಗಳು ವರ್ಣಭೇದಮಾಡಿದರೆ ಮಿಸೆಸ್ ಮೂರ್ ಎಂಬಾಕೆ ಭಾರತೀಯರ ಬಗ್ಗೆ ಸಹಾನುಭೂತಿಯನ್ನು ತೋರಿಸುತ್ತಾಳೆ. ಒಂದು ಸರಕಾರಿ ಕಾಲೇಜಿನಲ್ಲಿ ಪ್ರೊಫೆಸರನಾಗಿದ್ದ ಫೀಲ್ಡಿಂಗ್ ಎಂಬವನಂತೂ ಹಿಂದೀಯರೊಡನೆ

ಕೂಡಿಕೊಂಡ. ಸಮರಸವಾಗಿ ಉಳಿದ ಆಂಗ್ಲರ ' ಪರ್ಲ 'ನ್ನು ಸಹ ಹರಿದು ಕೊಳ್ಳುತ್ತಾನೆ. ಭಾರತೀಯರೊಡನೆ ಸಂಪರ್ಕ ಬೆಳೆಯಿಸಲು ಹೋಗಿ ಯಶಸ್ವಿಯಾಗದೆ ಏಕೋಪಕ್ಕೆ ಹೋಗುವ ಸನ್ನಿವೇಶವೆ ಮಿಸ್. ಕ್ವೆಸ್ಟೆಡ್ ಎಂಬವಳನ್ನು ಕುರಿತು ಇಲ್ಲಿ ಚಿತ್ರಿತವಾಗಿಲ್ಲವೆ? ಹಿಂದುಸ್ತಾನದಲ್ಲ ಬಂದಿರುವ ಆಂಗ್ಲೇಯರ ರೀತಿ-ನಡತೆಗಳು ಹೇಗಿರುತ್ತವೆಂಬುದನ್ನು ತಿಳಿಯಲಪೇಕ್ಷಿಸುವವರು ' **ಭಾರತಮಾರ್ಗ** 'ವನ್ನು ಅವಶ್ಯವಾಗಿ ಓದಬೇಕು. ಅವರ ' ಕ್ಲಬ್ಬು ' ಜೀವನದ ರಹಸ್ಯಗಳನ್ನೆಲ್ಲ ಫಾಸ್ಟರರು ಇಲ್ಲಿ ಬೈಲಿಗೆಳೆದಿದ್ದಾರೆ.

ಹಿಂದುಸ್ತಾನದ ಸ್ಥಿತಿಯೇನು? ಇದನ್ನೂ ಕಾದಂಬರಿಕಾರರು ಚೆನ್ನಾಗಿ ತಿಳಿದಿದ್ದಾರೆ. ಭಾರತೀಯರ ಪರಂಪರೆಯಲ್ಲಿದ್ದ ಸಂಸ್ಕೃತ ಪರ್ಶಿಯನ್ ಸಮ್ಮಿಲನದ ಸಂಸ್ಕೃತಿವೈಭವ; ಭಾರತೀಯರನ್ನು ಇಂಥ ಉದಾತ್ತ ಹಾಗು ದೀನ ಪ್ರಾಣಿಗಳನ್ನಾಗಿ ಮಾಡಿದ ಪ್ರಕೃತಿ; ಅವರ ಗೌರವಯುಕ್ತ ಆಚಾರಗಳು, ವಿಚಿತ್ರ ರೂಢಿಗಳು; ಇವನ್ನೆಲ್ಲ ಫಾಸ್ಟರರು ರಮ್ಯವಾಗಿ ಚಿತ್ರಿಸಿದ್ದಾರೆ. ಹಿಂದೂ ಧರ್ಮವನ್ನು ಮಾತ್ರ ಅವರು ಸಂಪೂರ್ಣವಾಗಿ ತಿಳಿದುಕೊಂಡಿಲ್ಲ. ಕೃಷ್ಣಾಷ್ಟಮಿ ಮೊದಲಾದ ಉತ್ಸವಗಳನ್ನು ನೋಡಿಯೂ ಪ್ರೊ. ಗೋಡಬೊಲೆಯವರ ' ಭಜನಿ 'ಯನ್ನು ಕೇಳಿಯೂ ಅವರಿಗೆ ಹಿಂದೂ ಧರ್ಮದ ಬಹಿರಂಗ ಸ್ವರೂಪವು ಗೊತ್ತಾಗಿದೆಯೇ ಹೊರತು ಅದರ ತಿರುಳು ಅವರಿಗೆ ಹೊಳೆದಂತೆ ತೋರುವದಿಲ್ಲ. ಉತ್ತರ ಹಿಂದುಸ್ತಾನದಲ್ಲಿ ಪ್ರೊ. ಗೋಡಬೊಲೆಯವರು ಎಲ್ಲಿಂದ ಬಂದರೆಂದು ನಾನು ಕೇಳಿದಾಗ, ಲಾಹೋರದ ಹತ್ತಿರ ಎಲ್ಲಿಯೋ ಒಂದು ಶಾಲೆಯಲ್ಲಿ ಗೋಡಬೋಲೆಯೆಂಬುವರನ್ನು ತಾವು ಕಂಡ ವಿಷಯವನ್ನು ಫಾಸ್ಟರರು ಹೇಳಿದರು. ಆದರೆ ಮುಹಮ್ಮದೀಯ ಸಂಸ್ಕೃತಿಯನ್ನೂ ಭಾರತ ಸ್ವಾತಂತ್ರ್ಯದ ತತ್ವವನ್ನೂ ಫಾಸ್ಟರರು ಚೆನ್ನಾಗಿ ಬಲ್ಲರು.

ಉನ್ನತಕಾಯದವನಾಗಿ ರಾಜಾಧಿರಾಜನ ಶರೀರಸಂಪತ್ತಿದ್ದರೂ ಕೋರ್ಟಿನಲ್ಲಿ ಬೀಸಣಿಕೆಯನ್ನು ಬೀಸುವ ಕೆಲಸವನ್ನು ಕೈಕೊಂಡ ಕೂಲಿ ಯುವ; ಭಾವನಾಪರವಶನಾದ ಅಝೀಜ; ದಾಸ್ಯವೃತ್ತಿಯ ದೇಶದಲ್ಲಿಯೂ ಅಭಿಮಾನದಿಂದ ನಡೆದುಕೊಳ್ಳುವ ವಕೀಲ; ನಿಷ್ಪಕ್ಷಪಾತಿಯಾಗಲು ಸಾಹಸ ಪಡುವ ನ್ಯಾಯಾಧೀಶ; ಜಮೀನುದಾರರಾದ ನವಾಬ ಬಹದ್ದೂರರು;

ಸರಕಾರಿ ನೌಕರರು; ಹೀಗೆ ಭಾರತೀಯರ ಅನೇಕ ಪ್ರಕಾರಗಳನ್ನು ಫಾ:ಸ್ಟರರು ಚಿತ್ರಿಸಿದ್ದಾರೆ. ಹಿಂದೂ-ಮುಸಲ್ಮಾನರ ನಡುವೆ ಮೇಲಿಂದ ಮೇಲೆ ಉದ್ಭವಿಸುವ ವೈಮನಸ್ಸನ್ನು ಅವರು ಅಲ್ಲಲ್ಲಿ ಮಾರ್ಮಿಕವಾಗಿ ಕಾಣಿಸಿದ್ದಾರೆ. ಕಾದಂಬರಿಯು ಮುಗಿದಾಗ ಒಂದು ಮಾತು ನಮಗೆ ಮನದಟ್ಟಾಗುತ್ತದೆ. ಈ ವೈಮನಸ್ಸನ್ನೆಲ್ಲ ಬದಿಗೊತ್ತಿ ಹಿಂದೂ-ಮುಸಲ್ಮಾನರು ಒಂದಾಗಿ ಭಾರತದ ಸ್ವಾತಂತ್ರ್ಯವನ್ನು ಗಳಿಸುವ ಶುಭಲಕ್ಷಣಗಳು ಕಾಣುತ್ತವೆ; ಮೊದಲುಮೊದಲಿಗೆ ಒಬ್ಬರೊಡನೊಬ್ಬರು ಬೆರೆಯಲು ಹೆದರಿದರೂ ಕ್ರಮೇಣ ಆಂಗ್ಲರು ಹಾಗು ಭಾರತೀಯರ ನಡುವೆ ತಿಳುವಳಿಕೆ ಬೆಳೆದು ಸ್ವತಂತ್ರಭಾರತವು ಬ್ರಿಟನ್ನಿನೊಡನೆ ಸಖ್ಯದಿಂದಿರುವ ಸೂಚನೆಯೂ ತೋರುತ್ತಿದೆಯೆಂದು. ಇದು ಲಿಬರಲ್ ಪಕ್ಷದ ನಂಬಿಕೆ. ಆಂಗ್ಲೇಯ ಹಾಗು ಭಾರತೀಯ ಲಿಬರಲ್ ಪಕ್ಷಗಳು ಇಂದಿಗೂ ಡೊಮಿನಿಯನ್ ಸ್ಟೇಟಸ್ಸಿನ ಈ ಮಾತನ್ನೇ ನಂಬಿ ನಡೆಯುತ್ತಿವೆ.

ಆದರೆ ಮಜಲಿಸ್‌ದಲ್ಲಿ ಮಾತನಾಡುವಾಗ ಫಾ:ಸ್ಟರರು: 'ಈ ಕಾದಂಬರಿಯನ್ನು ಬರೆದಾಗ ಆಂಗ್ಲೇಯ-ಭಾರತೀಯರ ಆರ್ಥಿಕ ಸಂಬಂಧದ ಪ್ರಶ್ನೆಯು ನನಗೆ ಹೊಳೆದಿರಲಿಲ್ಲ. ಒಂದು ದೇಶದ ಸಂಪತ್ತನ್ನೆಲ್ಲ ಇನ್ನೊಂದು ದೇಶವು ಸ್ವಾಧೀನ ಪಡೆಸಿಕೊಂಡಾಗ,—ಬರಿ ಸ್ನೇಹಭಾವದಿಂದ ಆ ಪ್ರಶ್ನೆಯು ಬಿಡುವದಿಲ್ಲ. ಪರಸ್ಪರ ತಿಳುವಳಿಕೆಯಿಂದ ಬ್ರಿಟನ್-ಭಾರತದೇಶಗಳನ್ನು ಹೊಂದಿಸಿ ನಡೆಯುವದು ಸಾಧ್ಯವೆಂದು ನಾನು ತಿಳಿದಿದ್ದೆ. ಆದರೆ ಆರ್ಥಿಕ ಪ್ರಶ್ನೆಯನ್ನು ಬಿಡಿಸಲು ಬೇರೆ ಹಾದಿಯನ್ನು ಸಹ ಹಿಡಿಯಬೇಕಾಗುವದೆಂದು ತೋರುತ್ತದೆ' ಎಂಬರ್ಥದ ಮಾತುಗಳನ್ನು ಹೇಳಿದರು. 'ಅಝೀಜ ಹಾಗು ಫೀಲ್ಡಿಂಗ್‌ರಂಥ ಭಾರತೀಯ ಆಂಗ್ಲೇಯರ ಮೈತ್ರಿಯು ಬಾಳಿ ಬೆಳೆಯುವದೆಂದು ನಿಮಗೆನಿಸುವದಿಲ್ಲವೆ?' ಎಂದು ಭಾರತೀಯ ವಿದ್ಯಾರ್ಥಿಯೊಬ್ಬನು ಕೇಳಿದಾಗ 'ಅಂಥ ಮೈತ್ರಿಯಿಂದೇನು ಫಲ? ಅದರಿಂದ ನಿಮ್ಮ ದೇಶಕ್ಕೇನು ಬಂತು?' ಎಂಬರ್ಥದ ಉತ್ತರವನ್ನು ಫಾ:ಸ್ಟರರು ಕೊಟ್ಟರು. ಈಗ ಭಾರತದಲ್ಲಿ ನಡೆದಿರುವ ಆಂದೋಲನದ ಬಗ್ಗೆ ಫಾ:ಸ್ಟರರಿಗೆ ಎಷ್ಟೊಂದು ಸಹಾನುಭೂತಿಯಿರುವದೆಂಬುದು ಇದರಿಂದ ಸಹಜವಾಗಿ ಗೊತ್ತಾಗುತ್ತದೆ.

ಈ ಕಾದಂಬರಿಯ ಮಹತಿಯು ಎಲ್ಲಿದೆ? ಇದೊಂದು ನಡೆವಳಿಕೆಯ

ಕಾದಂಬರಿಯೆಂದೂ ತಿಳಿಯಬಹುದು. ಹಿಂದುಸ್ಥಾನದಲ್ಲಿಯ ವಿದೇಶೀಯರ ಹಾಗು ದೇಶೀಯರ ರೀತಿನೀತಿಗಳನ್ನು ಫಾಸ್ಟರರು ಬಹಳ ಮಾರ್ಮಿಕವಾಗಿ ಚಿತ್ರಿಸಿದ್ದಾರೆ. ಇಲ್ಲಿಯ ಪಾತ್ರಗಳಲ್ಲಿ ವೈವಿಧ್ಯವಿದೆ. ಮಿಸೆಸ್ ಮೂರ್, ಮಿಸೆಸ್ ಟರ್ಟನ್, ಮಿಸ್. ಕ್ವೆಸ್ಟೆಡ್ ಮೊದಲಾದ ಸ್ತ್ರೀಪಾತ್ರಗಳ ಮನೋವೃತ್ತಿ; ಟರ್ಟನ್, ಹೆಸ್ಲಪ್, ಫೀಲ್ಡಿಂಗ್, ಅಝೀಜ, ಹಮೀದುಲ್ಲಾ, ರಾಮಚಂದನ್ ಮೊದಲಾದ ಪಾತ್ರಗಳ ವ್ಯಕ್ತಿಪರಿಚಯ; ಇವೆಲ್ಲವುಗಳಿಂದ, ವಿವಿಧವ್ಯಕ್ತಿಗಳ ಅಂತಃಕರಣವನ್ನು ಹೊಕ್ಕು ಅವರವರ ದೃಷ್ಟಿಕೋನವನ್ನೂ ವಿಚಾರಪದ್ಧತಿಯನ್ನೂ ಕಂಡುಹಿಡಿದು ನಿರೂಪಿಸುವ ಜಾಣ್ಮೆಯ ವೈಶಾಲ್ಯವು ಎಂತಹದೆಂದು ಮನದಟ್ಟಾಗುತ್ತದೆ. ಪಾತ್ರಗಳ ಅನೇಕ ಸಂಭಾಷಣೆಗಳಲ್ಲಿ ಬ್ರಿಟನ್–ಭಾರತಗಳ ಸಂಬಂಧದ ಪ್ರಶ್ನೆಯನ್ನು ಕುರಿತು ಬೇರೆ ಬೇರೆ ದೃಷ್ಟಿಯಿಂದ ಸಾಗಿಸಿದ ವಿಚಾರಪರಿಪೂರ್ಣ ಚರ್ಚೆಗಳು ಇಲ್ಲಿ ಹೇರಳವಾಗಿ ದೊರೆಯುತ್ತವೆ. ಅಲ್ಲದೆ ಭಾರತದ ನಿಸರ್ಗಶಕ್ತಿಯ ಗುಣಾವಗುಣಗಳನ್ನು ಹೊರಗಿನವರ ದೃಷ್ಟಿಯಿಂದ ಫಾಸ್ಟರರು ಅಲ್ಲಲ್ಲಿ ರಮ್ಯವಾಗಿ ವರ್ಣಿಸಿದ್ದಾರೆ. ಆದರೆ ಇವೆಲ್ಲವುಗಳನ್ನೊಳಗೊಂಡ ಒಂದೇ ಒಂದು ಮಾತಿನಲ್ಲಿ '**ಭಾರತ ಮಾರ್ಗ**'ದ ಮಹತಿಯಿದೆ. ಅದಾವುದೆಂದರೆ: ಎರಡು ಜನಾಂಗಗಳ, ದೇಶಗಳ, ಸಂಸ್ಕೃತಿಗಳ, ಚಿತ್ತವೃತ್ತಿಗಳ ಸಂಘರ್ಷಣದ ಚಿತ್ರ; ಇನ್ನೂ ಬೆಳೆಯಲ್ಲಿದ್ದ ಒಂದು ರಾಷ್ಟ್ರವನ್ನು ಬೆಳೆದು ನಿಂತ ಇನ್ನೊಂದು ರಾಷ್ಟ್ರವು ಜಯಿಸಿದಾಗ ಅದರ ಪರಿಣಾಮವಾಗಿ ಜನಿಸುವ ನೂರೆಂಟು ಪಾಪ-ಪುಣ್ಯಗಳ ದಿಗ್ದರ್ಶನ. ಜಗತ್ತಿನ ಇತಿಹಾಸದಲ್ಲಿಯೇ ಇದರಂಥ ಕರುಣಮಯವಾದ ಸನ್ನಿವೇಶವು ಇನ್ನೊಂದೆಡೆಗೆ ದೊರಕುವದಿಲ್ಲ. ಇಂಗ್ಲಂಡಿನಂಥ ಕುದುರು (ನಡುಗಡ್ಡೆ) ಭರತಖಂಡವನ್ನು ಆಳುವ ವಿಚಿತ್ರ; ಭರತಖಂಡದವರಾದ ನಾವು ಒಬ್ಬ ಆಂಗ್ಲೇಯನಿಗೆ ಎಂಟು ಜನರಂತೆ ಜನಗಣನೆಯಲ್ಲಿ ಲೆಕ್ಕ ಕೊಟ್ಟು ಆಳಿಸಿಕೊಳ್ಳುವ ವಿಚಿತ್ರ; ನಮ್ಮ ಸಂಪತ್ತನ್ನೆಲ್ಲ ಸೂರೆಗೈದರೂ ನಮ್ಮ ಕಲ್ಯಾಣವನ್ನೇ ಚಿಂತಿಸುತ್ತಿರುವಂತೆ ತೋರಿಸುವ ಆಂಗ್ಲರು; ಅದನ್ನು ಕಂಡು ಕಂಡೂ ನಂಬುವ ನಾವು; ಐತಿಹಾಸಿಕ ಕಾರಣಗಳ ಮೂಲಕ ಆಂಗ್ಲ ಸಂಸ್ಕೃತಿಯ ಸಂಪರ್ಕದಿಂದ ನಮ್ಮಲ್ಲಾದ ಪ್ರಗತಿ; ನಮ್ಮ ಬಡತನದಿಂದ ಮೂಲೆಗುಂಪಾಗಿ ಬಿದ್ದು ಆ ಪ್ರಗತಿಯಿಂದ ಲಾಭ ಪಡೆಯದೆ ಹೋದ ನಾವು;

ಇವೇ ಈ ಎರಡು ಜನಾಂಗಗಳ ತಾಕಲಾಟದಿಂದ ಬಂದು ನಿಂತ ಪ್ರಶ್ನೆಗಳಾಗಿವೆ. ಒಂದು ಕ್ಷಣ ತಾವು ಆಂಗ್ಲರೆಂಬುದನ್ನು ಮರೆತು ಸಾಕ್ಷಿರೂಪವಾಗಿ ಈ ಕರುಣಾಮಯ ಸನ್ನಿವೇಶವನ್ನು ತ್ರಿಕರಣಪೂರ್ವಕವಾಗಿ ಅನುಭವಿಸಿ ಅದನ್ನು ಕಂಡಂತೆ ನುಡಿಯಲ್ಲರಳಿಸಿ ಫಾ:ಸ್ಟರರು ಸಾಹಿತ್ಯಕ್ಕೆ ಮರೆಯಲಾಗದ ಕಾಣಿಕೆಯನ್ನು ಸಲ್ಲಿಸಿದ್ದಾರೆ. ಜಗತ್ತಿನ ಮಹಾಕಾವ್ಯಗಳೆಲ್ಲ ಒಂದಿಲ್ಲೊಂದು ರೀತಿಯಿಂದ ಜನಾಂಗ-ಜನಾಂಗಗಳ ಸಂಘರ್ಷಣವೆಂಬ ಘನವಸ್ತುವನ್ನೇ ಅವಲಂಬಿಸಿ ಬೆಳೆದು ಬಂದಿವೆ. ತಮ್ಮ ಕಾದಂಬರಿಯಲ್ಲಿ ಇದೇ ತರಹದ ಆಧುನಿಕ ಸನ್ನಿವೇಶವೊಂದನ್ನು ಚಿತ್ರಿಸಿ ಕಾದಂಬರಿ-ಪ್ರಪಂಚವೆಂದರೆ ಆಧುನಿಕ ಯುಗದ ಮಹಾಕಾವ್ಯಪ್ರಕಾರವೆಂಬ ಮಾತನ್ನು ಫಾ:ಸ್ಟರರು ಇಲ್ಲಿ ಸಿದ್ಧಪಡಿಸಿದ್ದಾರೆ.

೧—೩—೧೯೪೦
ಸಾಂಗ್ಲಿ

ವಿ. ಕೃ. ಗೋಕಾಕ

---

ಮನೋಹರ ಗ್ರಂಥಮಾಲೆಯ ೪೧ನೆಯ ಕುಸುಮ

ಮುಂದಿನ ಕುಸುಮ

# ಗ್ರಾಮ ಪಂಚಾನನ

(ಹಳ್ಳಿಯ ಜೀವನವನ್ನು ಚಿತ್ರಿಸುವ ಸ್ವತಂತ್ರ ಕಾದಂಬರಿ)

ಬರೆದವರು:

ಬಾ. ಕೃ. ಲಕ್ಷ್ಮೇಶ್ವರ

# ಭಾರತಮಾರ್ಗ

—❖—

## ಮಸೀದೆ



### ಪ್ರಕರಣ ೧

ಇಪ್ಪತ್ತು ಮೈಲುಗಳಾಚೆ ದೂರದಲ್ಲಿರುವ ಮಾರವಾರ ಗುಹೆಗಳನ್ನು ಉಳಿದು ಚಂದ್ರಪುರದಲ್ಲಿ ಅಂತಹ ಹೇಳಿಕೊಳ್ಳುವಂತಹ ವಿಶೇಷವೇನೂ ಇಲ್ಲ. ಈ ಪಟ್ಟಣವು ಗಂಗಾನದಿಯ ದಂಡೆಗುಂಟ ಉದ್ದೋ ಉದ್ದವಾಗಿ ಎರಡು ಮೈಲುಗಳ ವರೆಗೆ ಚಾಚಿಕೊಂಡಿದೆ. ಗಂಗೆಯೇನೊ ಈ ಊರಿಗೆ ಅಂಚು-ಗಟ್ಟೆಯೆ ಹರಿಯುತ್ತಿದ್ದರೂ ಅದು ಈ ಊರನ್ನೇನು ತೊಳೆಯುವುದಿಲ್ಲ. ದಂಡೆಗುಂಟ ರಾಶಿರಾಶಿಯಾಗಿ ಬಿದ್ದ ಹೊಲಸಿನ ತಿಪ್ಪೆಗಳಿಗೂ ಆ ಕೊಳಚಿ ನೀರಿಗೂ ಮಹದಂತರವಿಲ್ಲದಾಗ ಈ ಹೊಳೆ ಊರನ್ನು ತೊಳೆದುಕೊಂಡು ಹೊರಟಿದೆಯೆಂದೆನ್ನುವುದಾದರೂ ಎಂತು? ಉಳಿದ ಮಹಾ ಪವಿತ್ರ ಕ್ಷೇತ್ರಗಳಲ್ಲಿಯಂತೆ ಗಂಗಾನದಿಯು ಇಲ್ಲಿ—ಈ ಊರಲ್ಲಿ—ಅಷ್ಟೇನು ಪವಿತ್ರಳಾಗಿ ಇದ್ದಂತೆ ಕಾಣುವುದಿಲ್ಲ. ಯಾಕಂದರೆ ಇಲ್ಲಿ ಸ್ನಾನಕ್ಕಾಗಿ ನದಿಯ

ನೀರಿನ ಪಾತ್ರದ ವರೆಗೆ 'ಘಾಟು'ಗಳ ನಿರ್ಮಾಣವೇನೂ ಇನ್ನೂ ಆಗಿಲ್ಲ. ಆ ಪ್ರವಾಹದ ವಿಶಾಲವಾದ ಚಲದೃಶ್ಯಕ್ಕೆ ಅಡ್ಡವಾಗಿ ನಿಂತ ಬಜಾರದ ಅಂಗಡಿಗಳ ಸಾಲುಗಳನ್ನು ನೋಡಿದರೆ ಈ ಊರಿಗೆ ನದಿಯೇ ಇಲ್ಲವೇನೊ ಎಂದೆನಿಸುತ್ತದೆ. ಆ ಹೊಲಸು ದರಿದ್ರ ಓಣಿಗಳೇನು! ಈಗೊ, ಇನ್ನೊಂದು ಕ್ಷಣಕ್ಕೊ ಬೀಳಲಾಗಿರುವ ಜೋಲು ಮುಖದ ಗುಡಿಗಳೇನು! ಇದ್ದಬಿದ್ದ ನಾಲ್ಕಾರು ಅಚ್ಚುಕಟ್ಟಾದ ಮನೆಗಳು ಕೂಡ ಎದ್ದು ಕಾಣದೆ ತೋಟಗಳ ಮರೆಯಲ್ಲಿಯೊ ದುರ್ಗಂಧ ತುಂಬಿದ ಸಂದಿಗೊಂದಿಗಳಲ್ಲಿಯೊ ಅಡಗಿ ಹೋಗಿವೆ. ಆ ದುರ್ಗಂಧವೊ, ಆಮಂತ್ರಿತ ಅತಿಥಿಗಳನ್ನುಳಿದು ಎಲ್ಲರನ್ನೂ ತಡೆಗಟ್ಟುತ್ತದೆ. ಚಂದ್ರಪುರವು ಹಿಂದೆ ಎಂದಿಗೂ ಇದಕ್ಕೂ ಹೆಚ್ಚಿಗೆ ಹಬ್ಬಿ ಮಹಾನಗರವಾಗಿದ್ದಿಲ್ಲ; ಮಹಾನಗರದ ರಮ್ಯತೆಯೂ ಅದಕ್ಕಿದ್ದಿಲ್ಲ. ಆದರೆ ಎರಡುನೂರು ವರುಷಗಳ ಹಿಂದೆ ಸಾಮ್ರಾಜ್ಯಕ್ಕೊಳಪಟ್ಟ ಉತ್ತರ ಹಿಂದುಸ್ಥಾನದಿಂದ ಸಮುದ್ರದ ವರೆಗಿದ್ದ ಮಾರ್ಗದ ಮಧ್ಯದಲ್ಲಿದ್ದದ್ದೆ ಅದರದೊಂದು ಭಾಗ್ಯ. ಈಗ ಕಾಣುವ ಆ ನಾಲ್ಕಾರು ಅಚ್ಚುಕಟ್ಟಾದ ಮನೆಗಳು ಆ ಕಾಲದವು. ಗೃಹಾಲಂಕಾರದಲ್ಲಿಯ ಆಸಕ್ತಿಯು ಹದಿನೆಂಟನೆಯ ಶತಮಾನಕ್ಕೇ ನಿಂತುಹೋಗಿದ್ದರಿಂದ, ಜನಸಾಮಾನ್ಯರಲ್ಲಿ ಆಸಕ್ತಿಯು ಎಂದಿಗೂ ಬೆಳೆದುಬಾರದ್ದರಿಂದ ಹದಗೆಟ್ಟ ಜೀವನದಂತೆ ಚಂದ್ರಪುರದ ಬಜಾರವೆಲ್ಲ ಕಳೆಗೆಟ್ಟು ನಿಂತಿದೆ. ಅಲ್ಲಿ ಕಳೆಕಟ್ಟುವ ಚಿತ್ರಗಳಿಲ್ಲ; ಕುಸುರಿನ ಕೆಲಸವಿಲ್ಲ; ರಮಿಸುವ ಶಿಲ್ಪವಂತೂ ಹೇಳಹೆಸರಿಲ್ಲ. ಅಲ್ಲಿಯ ಬನಕ್ಕೆ ಬನವೆಲ್ಲ ಕೆಸರು ಮೆತ್ತಿಕೊಂಡು, ಮಣ್ಣೊ ಗಿಡದಂತೆ ಬೆಳೆದುನಿಂತಂತಿದೆ. ಅಲ್ಲಿದ್ದ ಮನುಷ್ಯಪ್ರಾಣಿಗಳೆಲ್ಲ ಓಡಾಡುವ ಮಣ್ಣಿನ ಮೂರ್ತಿಗಳಂತಿವೆ. ಕಿವಿಗೆ ಬೇಸರ ಹಿಡಿಸುವ ಏಕಸ್ವರದಂತೆ ಇಲ್ಲಿ ಕಣ್ಣಿಗೆ ಬಿದ್ದುದೆಲ್ಲವೂ ಮನಸಿಗೆ ಬೇಸರ ಹಿಡಿಸುತ್ತದೆ; ಗಂಗೆಯು ತುಂಬಿ ಹರಿಬಂದು, ವಿಶ್ವಪುರುಷನ ಮೈ-ಮೇಲೆ ವಾಳದಂತೆ ಅನವಶ್ಯಕವಾಗಿ ಬೆಳೆದ ಈ ಪಟ್ಟಣವನ್ನು ಸೆಳೆದುಕೊಂಡು ಹೋಗಿ ಮಣ್ಣಿನ ಮಡಲಲ್ಲಿಟ್ಟಿದ್ದರೆ ಅನಪೇಕ್ಷಿತವೇನೂ ಅಲ್ಲ. ಆಗ ಮನೆಗಳು ಬಿದ್ದಿರಬಹುದು; ಜನರು ಮುಳುಗಿ ಕೊಳೆತುಹೋಗಿರಬಹುದು. ಆದರೂ ಈ ಪಟ್ಟಣವೇನು ತನ್ನ ಬಾಹ್ಯರೂಪದಲ್ಲಿ ಬದಲಾಗಲಿಲ್ಲ. ಅವಿನಾಶವಾದ ಯಾವುದೋ ಒಂದು ರೋಗಿಷ್ಠ ಕೀಳು ಪ್ರಾಣಿಯಂತೆ—ಇಲ್ಲಿಷ್ಟು ಬಾತು-

ಕೊಂಡು,– ಅಲ್ಲಿಷ್ಟು ಬಾಗಿಕೊಂಡು– ಮತ್ತೆಲ್ಲಿಯೊ ಒಳಸೇದಿಕೊಂಡು ಬಿದ್ದುಕೊಂಡಿದೆ ಮಾತ್ರ.

ಒಳಮೈ ನೋಡಿದರೆ ದೃಶ್ಯ ಸ್ವಲ್ಪ ಬದಲಾಗುತ್ತದೆ. ಒದಾಮಿ ಆಕಾರದ ಮೈದಾನವೊಂದಿದೆ; ಒಂದು ಕಳೆಗುಂದಿದ ಹಳದೀ ಬಣ್ಣದ ಆಸ್ಪತ್ರೆಯಿದೆ; ರೇಲ್ವೆ ಸ್ಟೇಶನ್ನಿನ ಹತ್ತಿರ ಎತ್ತರವಾದ ದಿಬ್ಬದ ಮೇಲೆ 'ದೇಶೀ ಸಾಹೇಬರ' ಮನೆಗಳು ನಿಂತಿವೆ. ನದಿಯ ದಂಡೆಗುಂಟ ಹೋಗುತ್ತಿರುವ ರೈಲಿನಾಚೆಗೆ ಭೂಮಿಯು ತಗ್ಗು-ದಿನ್ನೆಯಾಗಿ ಹಬ್ಬಿಕೊಂಡಿದೆ. ಎರಡನೆಯ ದಿನ್ನೆಯ ಮೇಲೆ ಒಂದು 'ಸಿವಿಲ್' ಸ್ಟೇಶನ್ನಿದೆ. ಈ ಸಿವಿಲ್ ಸ್ಟೇಶನ್ನಿನ ಮೇಲೆ ನಿಂತು ಚಂದ್ರಪುರವನ್ನು ನೋಡಿದರೆ ಅದರ ರೂಪವೇ ಸಂಪೂರ್ಣವಾಗಿ ಬೇರೆಯಾಗುತ್ತದೆ. ಅದು ತೋಟಗಳಿಂದ ತುಂಬಿದ ನಗರವಾಗಿ—ಅಲ್ಲ, ನಗರವಲ್ಲ; ಅಲ್ಲಲ್ಲಿ ಚದರಿದ ಗುಡಿಸಲುಗಳಿದ್ದ ವನವಾಗಿ—ತೋರುತ್ತದೆ. ಮಹಾನದಿಯಲ್ಲಿ ಮಿಂದು ಚೇತನಗೊಂಡ ರಮ್ಯ ಉಷ್ಣ ಭೂಮಿಯದು! ಇಷ್ಟೊತ್ತಿನ ವರೆಗೆ ಬಜಾರಗಳಿಂದ ಮರೆಯಾಗಿದ್ದ ಈಚಲ, ಅರಳಿ, ಬೇವು, ಮಾವು ಮರಗಳು ಈಗ ಮೇಲಕ್ಕೆದ್ದು ನಿಂತು ಬಜಾರಗಳನ್ನೆ ಮರೆಮಾಡುವವು. ಇವು ಅಲ್ಲಿಯ ತೋಟಗಳಲ್ಲಿದ್ದ ಪುರಾತನ ಹೊಂಡಗಳಿಂದ ಪೋಷಣೆ ಹೊಂದಿ ಚಿಗಿತು–ಚಿಗುರಿ ಉಸಿರು ಕಟ್ಟುವ ಆ ಪ್ರದೇಶವನ್ನೂ, ಉದಾಸೀನವಾಗಿ ಕಾಣುವ ಆ ಗುಡಿಗಳನ್ನೂ ತಲೆಮೆಟ್ಟಿ ನಿಂತಿವೆ-ಗಾಳಿ ಬೆಳಕನ್ನರಸುತ್ತ, ಅವು ಮನುಷ್ಯನಿಗಿಂತ, ಮನುಷ್ಯ ನಿರ್ಮಿತಕ್ಕಿಂತ ಹೆಚ್ಚು ಬಲಯುತವಾಗಿ, ಕೊಳಚೆಯನ್ನೆಲ್ಲ ತಮ್ಮ ಕಾಲಕೆಳಗಿಟ್ಟು, ಮೇಲಕ್ಕೆ ಎದ್ದು, ತಲೆಯೆತ್ತಿ, ಮೌನದ ಮಾತುಗಳಿಂದ ಕರೆಯುವ ಚಿಗುರೆಲೆ ಬಿಟ್ಟ ತಮ್ಮ ಟೊಂಗೆ-ತೋಳುಗಳನ್ನು ಚಾಚಿ ಬಂದನ್ನೊಂದು ಸ್ವಾಗತಿಸಿ ಪಕ್ಷಿಗಳಿಗಾಗಿ ನಂದನವನ್ನು ನಿರ್ಮಿಸುತ್ತಿವೆ. ಮಳೆಗಾಲದಲ್ಲಿಯಂತೂ ಇವು ತಮ್ಮ ಕೆಳಗೆಲ್ಲ ಹಸಿರು ಹಾಸಿ ಎಲ್ಲವನ್ನೂ ಮರೆಮಾಡುವುದಲ್ಲದೆ, ಉರಿಬಿಸಿಲಿನಲ್ಲಿಯೂ,—ತಾವು ಬೆಂದು ಬೇಗುದಿಗೊಂಡದ್ದರೂ, ತಮ್ಮ ಎಲೆಗಳೆಲ್ಲ ಉದುರಿದ್ದರೂ—ಈ ದಿನ್ನೆಯ ಮೇಲೆ ತಳವೂರಿದ ಇಂಗ್ಲಿಷ ಜನರಿಗಾಗಿ, ಪಟ್ಟಣದ ಕೀರ್ತಿಯು ಕಳೆಗೆಡದಂತೆ ಅದನ್ನು ಶಿಂಗರಿಸುತ್ತಾವೆ. ಹೀಗಿರುವುದರಿಂದ ಇಲ್ಲಿಗೆ ಬಂದ ಹೊಸಬದು ಇದನ್ನು ನೋಡಿ, ಮೊದಲು ಮಾಡಿದ

ಪಟ್ಟಣದ ವರ್ಣನೆಯನ್ನು ಸಂಬದೆ ಹೋಗುವರು. ಅವರ ಈ ಭ್ರಮೆಯನ್ನು ನಿರಸನ ಮಾಡುವುದಕ್ಕಾಗಿ ಅವರನ್ನು ಮತ್ತೆ ಕೆಳಕ್ಕೆ ಆ ಪಟ್ಟಣಕ್ಕೆ ದಬ್ಬ ಬೇಕಾಗುವುದು. ಇನ್ನು ಈ 'ಸಿವಿಲ್' ಸ್ಟೇಶನ್ನಿನ ವಿಷಯವಾಗಿ ಹೇಳ ಬೇಕೆಂದರೆ, ಇದನ್ನು ನೋಡಿದರೆ ಮನಸಿನಲ್ಲಿ ಯಾವ ಭಾವನೆಯೂ ಮೂಡುವುದಿಲ್ಲ. ಬೇಕೆನಿಸುವುದೂ ಇಲ್ಲ; ಬೇಡೆನಿಸುವುದೂ ಇಲ್ಲ. ಒಳ್ಳೆ ಬುದ್ಧಿಯಿಂದ ಅದರ ಪಾಯ ಹಾಕಿದ್ದಾರೆ. ಮುಂದುಗಡೆ ಒಂದು ಕೆಂಪು ಇಟ್ಟಿಂಗಿಯ 'ಕ್ಲಬ್ಬು' ಮುಖಕ್ಕೆ ಹಣೆಯಿದ್ದಂತೆ. ತೀರ ಹಿಂದುಗಡೆ ಒಂದು ಕಿರಾಣಿಯ ಅಂಗಡಿ ಮತ್ತು ಮಸಣ. ಕಾಟಕೋನವಾಗಿ ವಿಭಾಗ ಮಾಡುವ ಬೀದಿಗಳ ಗುಂಟ ಉಳಿದ ಬಂಗ್ಲೆಗಳೆಲ್ಲ ಕ್ರಮವಾಗಿ ಬೆಳೆದುಕೊಂ ಡಿವೆ. ಇಲ್ಲಿ ಅಂತಹ ಭಯಂಕರವೇನೂ ಇಲ್ಲ; ಇಷ್ಟೇ, ನೋಟ ಮಾತ್ರ ರಮ್ಯವಾಗಿದೆ. ಇದಕ್ಕೂ ಪಟ್ಟಣಕ್ಕೂ ಎಲ್ಲವನ್ನೂ ಒಳಗಿಟ್ಟುಕೊಳ್ಳುವ ಆಕಾಶವೊಂದನ್ನು ಬಿಟ್ಟು ಉಳಿದಾವ ಸಂಬಂಧವೂ ಇಲ್ಲ.

ಆಕಾಶದಲ್ಲಿಯೂ ಬದಲಾವಣೆಗಳುಂಟು. ಆದರೆ ಭೂಮಿಯ ಮೇಲೆ— ಹಸರಿನಲ್ಲಿ, ಪ್ರವಾಹದಲ್ಲಿ—ಕಂಡುಬರುವಷ್ಟು ಸ್ಪಷ್ಟವಾಗಿ ಅಲ್ಲಿ ಕಂಡು ಬರುವುದಿಲ್ಲ. ಒಮ್ಮೊಮ್ಮೆ ಮೋಡಗಳು ಆಕಾಶಕ್ಕೂ ಆಕೃತಿಯ ರೂಪ ವನ್ನು ಕೊಡಬಹುದು. ಆದರೆ ಅದು ಬರಿ ಬಣ್ಣಗಳ ಬೆರಕೆಯದು; ಕುಂಚದ ರೇಖೆಗಳದು ಅದರಲ್ಲಿಯೂ ಸ್ಥಾಯಿಯಾಗಿ ನಿಂತದ್ದೆಂದರೆ ಯಾವಾಗಲೂ ನೀಲಿ. ಈ ನೀಲಿಯೆ ಹಗಲು ಭೂಮಿಗೆ ಸಮೀಪಿಸಿದಂತೆ ಬೆಳ್ಳಗಾಗಿ ನೆಲದ ಬಳ್ಪನ್ನು ಕೂಡಬಹುದು. ಸೂರ್ಯಾಸ್ತವಾದ ಮೇಲೆ ಮತ್ತೆ ಬೇರೆ ಬಣ್ಣ ಗಳ ಮೆರುಗು ಹೊಂದಿದಂತೆ ಹೊಸ ಪರಿಘವೇ ಕಾಣಬಹುದು. ಕಿತ್ತಳೆಯ ಬಣ್ಣವು ಮೇಲೇರಿದಂತೆ ತಿಳಿಯಾಗಿ ಕೊನೆಗೆ ಮೃದುಧೂಮ್ರಬಣ್ಣದಲ್ಲಿ ಪರಿಣಮಿಸಬಹುದು—ಆದರೆ ಒಳತಿರುಳಾದ ನೀಲಿಯು ಮತ್ತೆ ತುಂಬು ತ್ತದೆ. ರಾತ್ರಿಯೆಲ್ಲ ಮತ್ತೆ ನೀಲಿಯೇ ನೀಲಿ. ಭೂಮಿಯ ಮನೆಯ ಛತ್ತಿಗೆ ನಕ್ಷತ್ರಗಳ ದೀಪಗಳನ್ನು ತೂಗುಬಿಟ್ಟಂತಾಗುವುದು. ಈ ದೀಪ ಗಳಿಗೂ ಆ ಛತ್ತಿಗೂ ಇರುವ ಅಂತರವು, ಇನ್ನೂ ಅವುಗಳ ಹಿಂದಿರುವ ಅಪರಿಮಿತವಾದ ಅಂತರವನ್ನು ನೆನೆದರೆ, ಏನೂ ಅಲ್ಲ. ಆ ಅಪರಿಮಿತವಾದ

ಅಂತರವು ವರ್ಣಾತೀತವಾಗಿದ್ದರೂ ಆಕಾಶದ ಸೀಲಿಯಿಂದ ವಿಭಕ್ತವಾಗಿಯೆ ಉಳಿದಿದೆ.

ಆಕಾಶವೇ ಎಲ್ಲವನ್ನೂ ನಿರ್ಣಯಿಸುತ್ತದೆ. ಬರಿ ಹವೆಯನ್ನಾಗಲಿ, ಋತುಮಾಸಗಳನ್ನಾಗಲಿ ನಿರ್ಣಯಿಸುವುದಷ್ಟೇ ಅಲ್ಲದೆ ಭೂಮಿಗೆ ಸೌಂದರ್ಯದ ಕಳೆಯನ್ನೂ ಕಟ್ಟುವುದು. ಭೂಮಿಯೊಂದೇ ಏನನ್ನೂ ಮಾಡಲಾರದು. ಬಹಳವಾದರೆ ಹೂಲರುಗಳನ್ನು ಅರಳಿಸಬಹುದು; ಆದರೆ ಆಕಾಶದ ಮನಸಿಗೆ ಬಂದರೆ ಇದೆ ಚಂದ್ರಪುರದ ಪೇಟೆಯಲ್ಲಿಯೆ ಸೌಂದರ್ಯದ ಮಳೆಗರೆಯಬಹುದು. ಕ್ಷಿತಿಜದ ಈ ತುದಿಯಿಂದ ಇನ್ನೊಂದು ತುದಿಯ ವರೆಗೆ ಅನುಗ್ರಹ ಸಂಪತ್ತನ್ನು ಸೂರೆಮಾಡಬಹುದು. ಆಕಾಶವು ವಿಶಾಲವಿದ್ದುದರಿಂದ, ಬಲಿಷ್ಠವಿದ್ದುದರಿಂದ ಇದನ್ನೆಲ್ಲ ಮಾಡಬಹುದು. ಬಲವು ದಿನಾಲು ಸೂರ್ಯನಿಂದ ಬಂದು ಆಕಾಶದಲ್ಲಿ ಒಂದಾಗಿ ಬೆಳೆಯುತ್ತಿದೆ; ವಿಶಾಲತೆಯು ಭೂಮಿಯಿಂದ ಅದಕ್ಕೆ ದೊರೆಯುತ್ತಿದೆ. ಯಾವ ಪರ್ವತಗಳೂ ಇಲ್ಲಿ ಈ ಕ್ಷಿತಿಜಕ್ಕೆ ಅಡ್ಡಗಟ್ಟಿಲ್ಲ. ಗಾವುದ ಗಾವುದಗಳ ವರೆಗೆ ಭೂಮಿಯು ಸಮನಾಗಿ ಪರಹಿಕೊಂಡಿದೆ. ನಡುವೆಲ್ಲಿಯೊ ಒಂದು ಸ್ವಲ್ಪ—ಉಸಿರಾಡಿಸುವಾಗ ಹೊಟ್ಟೆಯುಬ್ಬಿದಂತೆ— ಭೂಮಿಯು ಎದ್ದಿದೆ; ಅಲ್ಲಿಂದ ಮುಂದೆ ಮತ್ತೆ ಸಮನಾಗಿ ಸಾಗಿದೆ. ದಕ್ಷಿಣಕ್ಕೆ ಮಾತ್ರ ಮುಟ್ಟಿಗೆಗಳೂ-ಕೈಬೆರಳುಗಳೂ ಮಣ್ಣಿನೊಳಗಿಂದ ಒಡೆದೆದ್ದು ನಿಂತು ಅನಂತವಾದ ಆ ವಿಶಾಲತೆಗೆ ಅಡ್ಡ ಬಂದಿವೆ. ಈ ಮುಟ್ಟಿಗೆ-ಕೈಬೆರಳುಗಳೆಂದರೇ ಅದ್ಭುತವಾದ ಗುಹೆಗಳನ್ನೊಳಕೊಂಡ ಆ ಮಾರವಾರ ಗುಡ್ಡಗಳು.

—

## ಪ್ರಕರಣ ೨

ಕೈಯೊಳಗಿನ ಸೈಕಲ್ಲನ್ನು ಆಳು ಹಿಡಿಯುವಷ್ಟರಲ್ಲಿ ಬಿಟ್ಟುಬಿಟ್ಟು ಯುವಕನು ಟಣ್ಣನೆ ಒಳಂಗಳಕ್ಕೆ ಜಿಗಿದನು. ಸೈಕಲ್ಲು ಬಿತ್ತು. ಯುವಕನಲ್ಲಿ ಉತ್ಸಾಹ ಕುಣಿದಾಡುತ್ತಿತ್ತು. 'ಹವಿಾದುಲ್ಲಾ! ಹವಿಾದುಲ್ಲಾ! ನನ್ನಿಂದ ತಡವಾಯಿತೇ?' ಎಂದು ಯುವಕನು ಕೂಗಿದನು

'ಕ್ಷಮೆ ಬೇಡುವ ಕಾರಣವೇನೂ ಇಲ್ಲ. ನೀನು ಯಾವಾಗಲೂ ತಡವೇ.' ಎಂದು ಮನೆಯ ಯಜಮಾನನು ವ್ಯಂಗ್ಯವಾಗಿ ನುಡಿದನು.

'ದಯವಿಟ್ಟು ನನ್ನ ಪ್ರಶ್ನೆಗೆ ಉತ್ತರ ಕೊಡು. ನನ್ನಿಂದ ತಡವಾಯಿತೇ? ಮಹಮ್ಮದಲಿ ಎಲ್ಲವನ್ನೂ ಬಕ್ಕರಿಸಿದನೇ? ಹಾಗಿದ್ದರೆ ನಾನು ಬೇರೆ ಕಡೆಗಾದರೂ ಹೋಗುತ್ತೇನೆ. ಓ! ಮಹಮ್ಮದಲಿ, ಹೇಗಿದ್ದಿಯಾ?'

'ತಮ್ಮ ಅನುಗ್ರಹ ಡಾಕ್ಟರ ಅಝೀಜ, ನಾನೀಗ ಸಾಯುತ್ತಿದ್ದೇನೆ.'

'ಊಟಕ್ಕೆ ಮುಂಚೇ ಸಾಯುತ್ತೀರಾ? ಪಾಪ! ಮಹಮ್ಮದಲಿ,'

'ಇಗೊ, ಇಲ್ಲಿ ಹಮೀದುಲ್ಲಾ ಪ್ರತ್ಯಕ್ಷವಾಗಿ ಸತ್ತೇಬಿಟ್ಟಿದ್ದಾನೆ. ನೀನು ನಿನ್ನ ಸೈಕಲ್ಲಮೇಲಿಂದ ಬರುತ್ತಿರುವಾಗಲೆ ಅವನು ಹೊರಟು ಹೋದ.'

'ಹೌದಯ್ಯಾ, ಹೌದು; ಅದು ನಿಜ. ನಾವಿಬ್ಬರೂ ಈಗ ಆ ನಮ್ಮ ಸುಖಮಯವಾದ ಪರಲೋಕದಿಂದ ಮಾತಾಡುತ್ತಿದ್ದೇವೆಂದು ತಿಳಿದುಕೋ' ಎಂದು ಇನ್ನೊಬ್ಬನೆಂದ.

'ನಿಮ್ಮ ಆ ಸುಖಮಯವಾದ ಪರಲೋಕದಲ್ಲಿ ಹುಕ್ಕಾ ಎನ್ನುವ ವಸ್ತುವೇನಾದರೂ ಇರುವ ಸಂಭವವುಂಟೇ?'

'ಅಝೀಜ, ಸುಮ್ಮನೆ ಹರಟಬೇಡ. ಯಾಕೊ ನಮ್ಮ ಮಾತು ಕೆಟ್ಟ ವಿಷಯದ ಮೇಲೆಯೆ ನಡೆದಿದೆ.'

ಗೆಳೆಯನ ಮನೆಯ ಪದ್ಧತಿಯಂತೆ ಹುಕ್ಕಾ ರಿಕ್ಕಾಗಿ ತುಂಬಿಡಲ್ಪಟ್ಟಿತ್ತು. ಅದು ಮೆಲ್ಲಗೆ 'ಗುಳುಗುಳು' ಎಂದು ಸಪ್ಪಳ ಮಾಡಹತ್ತಿತು. ಅವನು ಅದನ್ನು ರಮಿಸಿದನು. ಕೊನೆಗೆ ತಂಬಾಕವು ಅವನ ವಶವಾಗಿ ಅವನ ಮೂಗಿನಲ್ಲಿ, ಪುಪ್ಪುಸದಲ್ಲಿ ಸೇರಿಕೊಂಡಿತು. ಅವನು ಪೇಟೆಯಲ್ಲಿ ಹಾಯ್ದು ಬರುವಾಗ ಅವನಲ್ಲಿ ತುಂಬಿದ ಕುಳ್ಳಿನ ಹೊಗೆಯನ್ನು ಹೊರದೂಡಿತು. ಅದೊಳ್ಳೆಯ ರುಚಿಯಾಗಿತ್ತು. ಅವನು ಅದರ ಅಮಲಿನ ಗುಂಗಿನಲ್ಲಿ ಮುಳುಗಿ ಸಮಾಧಿಯನ್ನು ಹೊಂದಿದನು. ಈ ಸಮಾಧಿಯು ಇಂದ್ರಿಯಜನ್ಯವಾಗಿದ್ದರೂ ಆರೋಗ್ಯಕರವಾಗಿತ್ತು. ಆ ಸಮಾಧಿಯಲ್ಲಿ ಇದ್ದಾಗ ಅವನಿಗೆ ಅವರಿಬ್ಬರ ಮಾತುಗಳು ಅಷ್ಟೇನು ಕೆಟ್ಟವೆಂದು ತೋರಲಿಲ್ಲ. ಅವರು ಇಂಗ್ಲಿಷ ಮನುಷ್ಯನ ಕೂಡ ಗೆಳೆತನ ಬೆಳೆಯಿಸುವುದು

ಶಕ್ಯವೋ ಅಶಕ್ಯವೋ ಎಂಬುದನ್ನು ಚರ್ಚಿಸುತ್ತಿದ್ದರು. ಮಹಮ್ಮದಲಿಯು ಅಶಕ್ಯವೆಂದು ವಾದ ಹೂಡಿದ. ಹಮೀದುಲ್ಲಾ ಅದಕ್ಕೆ ಒಪ್ಪಲಿಲ್ಲ. ಆದರೂ ತನ್ನ ಅಸಮ್ಮತಿಯನ್ನೂ ಕೂಡ ಮಾತಿನ ತೂಕ ತಪ್ಪದಂತೆ ಹೇಳಿದ್ದರಿಂದ ಅವರಿಬ್ಬರ ನಡುವೆ ಕಿಡಿಗಳೇನೂ ಹಾರಲಿಲ್ಲ. ಹರವಾದ ಒಳಂಗಳದಲ್ಲಿ ಬಿದ್ದುಕೊಂಡಾಗ, ಕಣ್ಣೆದುರಿಗೆ ಕೌಮುದಿಯು ಕುಣಿಯುತ್ತಿದ್ದಾಗ, ಒಳಗೆ ಆಳುಗಳು ಅಡಿಗೆಯ ಸಿದ್ಧತೆ ನಡೆಸಿದ್ದಾಗ, ಮತ್ತು ಉಳಿದಾವ ತೊಂದರೆಯೂ ಮನಸಿಗಿಲ್ಲದಾಗ, ಎಂಥ ಸೌಖ್ಯ ಅದು !

'ಒಳ್ಳೇದು, ಈ ಹೊತ್ತು ಮುಂಜಾನೆ ನನಗಾದ ಅನುಭವವನ್ನೇ ನೋಡಿ. .'

'ಅದಕ್ಕೆ ನನ್ನದಿಷ್ಟೆ; ಅದು ಇಂಗ್ಲಂಡದಲ್ಲಿಯೆ ಸಾಧ್ಯ.' ಎಂದು ಹಮೀದುಲ್ಲಾ ಉತ್ತರ ಕೊಟ್ಟನು. ಇವನು ಇಂಗ್ಲಂಡಕ್ಕೆ ಬಹಳ ದಿನಗಳ ಹಿಂದೆ ಹೋಗಿದ್ದ. ಕೆಂಬ್ರಿಜ್‌ದಲ್ಲಿ ಆದರದ ಸ್ವಾಗತವನ್ನೂ ಸ್ವೀಕರಿಸಿದ್ದ.

'ಅದು ಇಲ್ಲಿ ಅಸಾಧ್ಯ, ಅಝೀಜ! ಆ ಕೆಂಪು ಮೂಗಿನ ಹುಡುಗ ಮತ್ತೆ ನನ್ನನ್ನು ಕೋರ್ಟಿನಲ್ಲಿ ಅವಮಾನಗೊಳಿಸಿದ. ನಾನು ಅವನ ತಪ್ಪೆನ್ನುವುದಿಲ್ಲ. ನನ್ನ ಅವಮಾನ ಮಾಡಬೇಕೆಂದು ಅವನಿಗೆ ಹೇಳಿದರು; ಅವನು ಮಾಡಿದ ಅಷ್ಟೆ. ಮೊನ್ನೆಮೊನ್ನೆಯ ವರೆಗೆ ಆ ಹುಡುಗ ನೆಟ್ಟಗಿದ್ದ. ಆದರೆ ಈಗ ಯಾರೊ ಅವನನ್ನು ಬಗಲಿಗೆ ಹಾಕಿದ್ದಾರೆ.'

'ಹೌದು, ಅವರಿಗೆ ಇಲ್ಲಿ ಸಂಧಿಯೆ ದೊರೆಯುವುದಿಲ್ಲ, ಅದೆ ನಾನು ಹೇಳುವುದು. ಪಾಪ, ಅವರೇನೊ ಸಭ್ಯಗೃಹಸ್ಥರಂತೆ ನಡೆದುಕೊಳ್ಳಬೇಕೆಂದು ಅಲ್ಲಿಂದಿಲ್ಲಿಗೆ ಬರುತ್ತಾರೆ. ಆದರೆ ಅದು ನಡೆಯುವ ಮಾತಲ್ಲೆಂದು ಯಾರೊ ಹೇಳುತ್ತಾರೆ, ತೀರಿತು. ಲೆಸ್ಲಿಯನ್ನು ನೋಡು; ಬ್ಲಾಕಿಸ್ಟನ್ನನನ್ನು ನೋಡು; ನಿಮ್ಮ ಈ ಕೆಂಪು ಮೂಗಿನ ಹುಡುಗನನ್ನೇ ನೋಡು; ಇನ್ನು ಮುಂದೆ ಬರುವ ಫೀಲ್ಡಿಂಗ್‌ನನ್ನು ನೋಡು. ಯಾಕೆ ? ಮೊದಲಿಗೇ ಬಂದ ಟರ್ಟನ್ನನ ನೆನಪೂ ನನಗಿದೆ. ಆದರೆ ಅದು ಇನ್ನೊಂದು ಪ್ರಾಂತದ ಭಾಗದಲ್ಲಿ. ನೀವು ಮಕ್ಕಳು, ನಂಬಲಿಕ್ಕಿಲ್ಲ ನನ್ನನ್ನು, ಆ ಮಾತು ಹೇಳಿದರೆ—ನಾನು, ಟರ್ಟನ್ ಇಬ್ಬರೂ ಕೂಡಿಯೆ ಒಂದೇ ಬಗಿಯಲ್ಲಿ ಕುಳಿತು ತಿರುಗಾಡಿದ್ದೇವೆ, ಏನು? ನಾನು ಮತ್ತು ಟರ್ಟನ್ ಅಂದೆ! ಓ! ನಾವಿಬ್ಬರೂ ಒಂದು ಕಾಲಕ್ಕೆ

ಜೀವದ ಗೆಳೆಯರಾಗಿದ್ದೆವು. ಅವನು ನನಗೆ ತನ್ನ ಸ್ಟ್ಯಾಂಪುಗಳ ಸಂಗ್ರಹ ವನ್ನು ತೋರಿಸಿದ್ದಾನೆ.'

'ಯಾಕಂದರೆ ನೀನು ಈಗ ಆ ಸಂಗ್ರಹವನ್ನು ಕದಿಯಬೇಕೆಂದು ಅವನು ಅಪೇಕ್ಷಿಸುತ್ತಿರಬಹುದು. ಏನೇ ಅಂದರೂ ಕೆಂಪು ಮೂಗಿನ ಹುಡುಗ ಟರ್ಟನ್ನನಿಗಿಂತ ಮೇಲು.'

'ನನಗೇನು ಹಾಗನಿಸುವುದಿಲ್ಲ. ಅವರೆಲ್ಲರೂ ಒಂದೇ ಆಗುತ್ತಾರೆ, ಒಬ್ಬರು ಹೆಚ್ಚಲ್ಲ—ಇನ್ನೊಬ್ಬರು ಕಡಿಮೆಯಲ್ಲ. ಯಾವನೇ ಇಂಗ್ಲೀಷ ಮನುಷ್ಯನಿರಲಿ—ಅವನು ಟರ್ಟನ್ ಇರಲಿ—ಬರ್ಟನ್ ಇರಲಿ—ಬರಿ ಅಕ್ಷರ ದಲ್ಲಿ ವ್ಯತ್ಯಾಸ ಅಷ್ಟೆ; ಅವನಿಗೆ ಎರಡು ವರ್ಷ ಕಾಲ ಕೊಟ್ಟರಾಯಿತು— ಎರಡು ವರ್ಷವೂ ಬೇಡ; ಆರು ತಿಂಗಳು ಸಾಕು—ಎಲ್ಲರೂ ಒಂದೇ ಆಗು ತ್ತಾರೆ. ಹೌದೋ, ಅಲ್ಲವೋ ?'

'ಅಲ್ಲ, ನಾನೊಪ್ಪುವುದಿಲ್ಲ.' ಎಂದು ಮಹಮ್ಮದಲಿಯು ಕುಚೇ ಷ್ಟೆಯ ಎಳೆಯನ್ನು ಹಿಡಿದು, ಅವನು ನುಡಿದ ಪ್ರತಿಶಬ್ದಕ್ಕೂ ಹಿಗ್ಗು- ಕುಗ್ಗುಗಳನ್ನನುಭವಿಸುತ್ತ ನುಡಿದನು. ನಾನು ಹೇಳುವುದೆಂದರೆ, ನಮ್ಮನ್ನು ಆಳುವವರಲ್ಲಿ ವ್ಯಕ್ತಿವ್ಯಕ್ತಿಗೂ ಮಹದಂತರವಿದೆ. ಕೆಂಪು ಮೂಗಿನ ಹುಡುಗ ಬಚ್ಚಬಾಯ ಮುದುಕರಂತೆ ಬಾಯಿ ಚಪ್ಪರಿಸುತ್ತದೆ; ಟರ್ಟನ್ ಸ್ಪಷ್ಟವಾಗಿ ಮಾತಾಡುತ್ತಾನೆ. ಟರ್ಟನ್‌ನ ಹೆಂಡತಿ ಲಂಚ ತಿನ್ನುತ್ತಾಳೆ. ಆದರೆ ಕೆಂಪು ಮೂಗಿನ ಹುಡುಗನ ಹೆಂಡತಿ ಏನನ್ನೂ ತೆಗೆದುಕೊಳ್ಳುವುದಿಲ್ಲ— ತೆಗೆದುಕೊಳ್ಳಲು ಸಾಧ್ಯವೂ ಇಲ್ಲ; ಯಾಕಂದರೆ ಅವನಿಗೆ ಇನ್ನೂವರೆಗೆ ಹೆಂಡತಿಯೆ ಇದ್ದಂತೆ ಕಾಣುವುದಿಲ್ಲ.'

'ಲಂಚ ?'

'ಅಯ್ಯೋ ! ನಿನಗೆ ಗೊತ್ತಿಲ್ಲವೇನು ? ಮಧ್ಯಹಿಂದುಸ್ತಾನದಲ್ಲಿ ಒಂದು ಕಾಲುವೆಯನ್ನು ತೆಗೆಯುವ ಯೋಜನೆಯನ್ನು ನಡೆಸಿದ್ದಾಗ ಇವರು ಆ ಕೆಲಸದ ಮೇಲೆ ತಾತ್ಪೂರ್ತಿಕವಾಗಿ ನಿಯಮಿಸಲ್ಪಟ್ಟರು. ಆಗ ಯಾವನೊ ಒಬ್ಬ ರಾಜನು ತನ್ನ ಸಂಸ್ಥಾನದಲ್ಲಿಯೂ ನೀರನ್ನು ಹಾಯಿಸಬೇಕೆಂದು ಬೇಡಿಕೊಂಡು ಇವಳಿಗೆ ಒಂದು ಇಡಿ ಬಂಗಾರದ ಹೊಲಿಯುವ ರಾಟಿ ಯನ್ನು ಕೊಟ್ಟನು!'

'ಅವನ ಸಂಸ್ಥಾನದಲ್ಲಿ ನೀರು ಹಾಯಿತೇನು ಹಾಗಾದರೆ?'

'ಇಲ್ಲ, ಹೀಗೆ ಮಾಡುವುದರಲ್ಲಿಯೆ ಟರ್ಕನ್ನರ ಚಾತುರ್ಯವಿದೆ. ನಾವಾದರೆ ಯಾವುದಕ್ಕಾಗಿ ಲಂಚ ತಿನ್ನುತ್ತೇವೆಯೊ ಅದನ್ನು ಮಾಡಿ ಕೊಡುತ್ತೇವೆ. ಆದರ ಪರಿಣಾಮವೆಂದರೆ ಕೊನೆಗೆ ನಾವು ಕಾಯಿದೆಯ ಬಾಯಿಗೆ ತುತ್ತಾಗುತ್ತೇವೆ. ಇಂಗ್ಲೀಷರು ಲಂಚ ತೆಗೆದುಕೊಳ್ಳುತ್ತಾರೆ. ಆದರೆ ಕೆಲಸ ಮಾಡಿಕೊಡುವುದಿಲ್ಲ. ಇದನ್ನು ನೋಡಿ ಬೊಟ್ಟುಕಚ್ಚಬೇಕು! ಅನಬೇಕು ಅವರಿಗೇ ಬಪ್ಪರೆ ಎಂದು.!'

'ಎಲ್ಲರೂ ಹೌದೆನ್ನುವ ಮಾತು. ಅಝೀಜ, ಆ ಹುಕ್ಕಾ ಇತ್ತಕಡೆ ಸ್ವಲ್ಪ ಕಳಿಸು.'

'ಓ! ಇನ್ನೂ ಮುಗಿದಿಲ್ಲಪಾ. ಹುಕ್ಕಾದ ಸುಖ ಈಗ ಅದೆ ನೋಡು!'

'ನೀನು ಮಹಾ ಸ್ವಾರ್ಥಿ ಹುಡುಗ ತೆಗೆ.' ಎಂದು ಅವನು ಒಮ್ಮಿಂದೊಮ್ಮೆ ದನಿಯೇರಿಸಿ 'ಊಟ! ಊಟ!' ಎಂದು ಕೂಗಿಕೊಂಡನು ಆಳುಗಳು ಪ್ರತಿಯಾಗಿ 'ಸಿದ್ಧವಿದೆ' ಎಂದು ಕೂಗಿ ಹೇಳಿದರು. ಆದರೆ ಅವರರ್ಥ 'ಸಿದ್ಧವಿದೆ'ಯೆಂದರೆ 'ಸಿದ್ಧವಾಗಬೇಕು' ಎಂದಿತ್ತು. ಕೂಗಿದವರೂ ತಮ್ಮನ್ನು ಹಾಗೇ ತಿಳಿದುಕೊಂಡಿದ್ದಾರೆಂದು ಅವರು ತಮ್ಮ ಜಾಗ ಬಿಟ್ಟು ಕದಲಲಿಲ್ಲ. ಇದನ್ನು ನೋಡಿ ಹಮೀದುಲ್ಲಾ ತನ್ನ ಮಾತಿನ ರೀತಿಯನ್ನೂ ಮುಖಭಾವವನ್ನೂ ಬದಲಿಸಿ ತನ್ನ ಮಾತು ಮುಂದರಿಸಿದ. 'ಇದರೆ ನನ್ನ ವಿಷಯವನ್ನೇ ತೆಗೆದುಕೊಳ್ಳೋಣ—ಅಂದರೆ ಆ ತರುಣ ಬ್ಯಾನಿಸ್ಟರನದು. ಅವನು ನನ್ನ ಪರಮ ಮಿತ್ರನಾದ—ನಾನು ಇಂಗ್ಲೆಂಡಿನಲ್ಲಿದ್ದಾಗ್ಗೆ ನನ್ನನ್ನು ತಂದೆ-ತಾಯಿಗಳಂತೆ ಸಲಹಿ, ನನಗೆ ಅಂತಃಕರಣ ಮಾಡಿದ—ರೆವ್ಹರೆಂಡ್ ಬ್ಯಾನಿಸ್ಟರ ಮತ್ತು ಅವನ ಹೆಂಡತಿ ಮಿಸೆಸ್ ಬ್ಯಾನಿಸ್ಟರ ಇವರ ಮಗ. ಅವರು ನನಗೆ ಮಾಡಿದ್ದನ್ನು ಹೇಳಲಿಕ್ಕೆ ಶಬ್ದಗಳಿಲ್ಲ, ಮರೆಯಲಿಕ್ಕೆ ಮನಸ್ಸಿಲ್ಲ. ರಜೆಯ ದಿನಗಳಲ್ಲಿ ಅವರ ಧರ್ಮೋಪದೇಶದ ಮನೆಯೆ ನನ್ನ ಮನೆಯಾಗುತ್ತಿತ್ತು. ತಮ್ಮ ಮಗುಗಳನ್ನೆಲ್ಲ ನನ್ನ ಪಾಲಿಗೇ ಬಿಟ್ಟುಕೊಡುತ್ತಿದ್ದರು. ಇದೇ ಈ ಹುಡುಗ-ಬ್ಯಾನಿಸ್ಟರನನ್ನು ನಾನು ಅದೆಷ್ಟೊ ಸಲ ಎತ್ತಿಕೊಂಡು ತಿರುಗಾಡಿದ್ದೇನೆ; ವ್ಹಿಕ್ಟೋರಿಯಾ ಮಹಾರಾಣಿಯ ಸಿಥನ

ಸಮಾರಂಭಕ್ಕೆ ಕರೆದುಕೊಂಡು ಹೋಗಿ. ಗದ್ದಲದಲ್ಲಿ ಅವನಿಗೆ ಕಾಣ-ಬೇಕೆಂದು ನನ್ನ ಹೆಗಲ ಮೇಲೆ ಹತ್ತಿಸಿಕೊಂಡಿದ್ದೇನೆ.'

' ವಿಕ್ಟೋರಿಯಾ ಮಹಾರಾಣಿಯವರ ಸ್ವಭಾವವೇ ಬೇರೆ ! ' ಎಂದು ಮಹಮ್ಮದಲಿ ಗೊಣಗಿದನು.

' ಇದೆ ಹುಡುಗನು ಈಗ ಕಾನಪುರದಲ್ಲಿ ಚರ್ಮದ ವ್ಯಾಪಾರವನ್ನು ಮಾಡುತ್ತಿದ್ದಾನೆಂದು ಕೇಳುತ್ತೇನೆ. ಅವನನ್ನು ಕಾಣಬೇಕೆಂದು ಜೀವ ಹಾತೊರೆಯುತ್ತಿದೆ. ಅವನನ್ನು ಈ ಮನೆಗೆ ಹಣಕೊಟ್ಟು ಕರೆಯಿಸಿಕೊಂಡಾದರೂ ಆತಿಥ್ಯ ಮಾಡಬೇಕೆಂದು ಮನಸ್ಸು ಓಡುತ್ತಿದೆ. ಆದರೆ ಏನು ಮಾಡುವುದು ? ಎಲ್ಲ ವ್ಯರ್ಥ. ಈಗಾಗಲೆ ಇಲ್ಲಿಯ ಸಾಹೇಬರು ಅವನ ತಲೆ ಕೆಡಿಸಿರಬಹುದು. ನಾನೀಗ ಅವನಲ್ಲಿಗೆ ಹೋದರೆ ನಾನೇನೊ ಅವನಿಂದ ಬೇಡಲಿಕ್ಕೆ ಬಂದಿದ್ದೇನೆಂದು ಅವನು ತಿಳಿದುಕೊಳ್ಳಬಹುದು. ನನ್ನ ಗೆಳೆಯರ ಮುಗಿಸಿಂದ ನಾನಿದನ್ನು ತಾಳಲಾರೆ. ಮತ್ತು ಇದನ್ನು ಎದುರಿಸುವುದೂ ನನ್ನಿಂದಾಗದು. ಓ ! ಈ ದೇಶದಲ್ಲಿ ಪ್ರತಿಯೊಂದೂ ಕೆಟ್ಟುಹೋಗಿದೆ! ಏನಾಗಿರಬಹುದು ವಕೀಲಸಾಹೇಬ ? '

ಅಝೀಜನೂ ಹರಟೆಯಲ್ಲಿ ಕೂಡಿಕೊಂಡ. ' ಇಂಗ್ಲೀಷರ ವಿಷಯವಾಗಿಯೇ ಏಕೆ ಈ ಮಾತು ? ಅವರೊಡನೆ ಗೆಳೆತನವಾದರೂ ಯಾಕೆ ? ಹಗೆ-ತನವಾಗಲೂ ಯಾಕೆ ? ಅವರನ್ನು ಹೊರಗೇ ಅಟ್ಟಿಬಿಟ್ಟು ಸುಖದಿಂದಿದ್ದ-ರಾಯಿತು ವಿಕ್ಟೋರಿಯಾ, ಬ್ಯಾನಿಸ್ಟರ—ಇದ್ದಿರಬಹುದು ಇವರು ಅಪವಾದವಾಗಿ. ಈಗಂತೂ ಅವರು ಸತ್ತುಹೋಗಿದ್ದಾರೆ.'

' ಉಹುಂ–ಉಹುಂ. ನಾನೀ ಮಾತು ಒಪ್ಪುವುದಿಲ್ಲ. ಅವರಿಬ್ಬರೇ ಅಲ್ಲ; ಇನ್ನೂ ನಾನು ಬೇರೆ ಜನರನ್ನು ಕಂಡಿದ್ದೇನೆ.'

' ನಾನೂ ಕಂಡಿದ್ದೇನೆ.' ಎಂದು ಮಹಮ್ಮದಲಿ ಅನಿರೀಕ್ಷಿತವಾಗಿ ಮಾತು ತಿರುಗಿಸಿದನು: ' ಎಲ್ಲ ಸ್ತ್ರೀಯರೂ ಒಂದೇ ಎಂದೂ ಇರಲಾರರು.' ಅವರ ಮನೋವೃತ್ತಿಯು ಈಗ ಬದಲಾಯಿತು. ಆ ಜನರ ಅಂತಃಕರಣ, ಮಾನ, ಮರ್ಯಾದೆ ಇವುಗಳನ್ನು ನೆನೆದುಕೊಂಡರು. ' ಅವಳು ಬಹಳ ಸ್ನೇಹವಾದ ಮಧುರ ಮಾತಿನಲ್ಲಿ ' ಬಹಳ ಉಪಕಾರವಾಯಿತು ' ಎಂದಳು.' ' ಧೂಳಿ ನನ್ನ ಗಂಟಲಲ್ಲಿ ಹೊಕ್ಕು ಅದನ್ನು ಕೆರೆಯುತ್ತಿದ್ದಾಗ ಅವಳು ನನಗೆ

ಬತ್ತಾಸ ಕೊಟ್ಟಳು.' ಎಂದು ಒಬ್ಬೊಬ್ಬರು ಒಂದೊಂದು ಪ್ರಸಂಗ ನೆನೆಸಿದರು. ಹಮೀದುಲ್ಲಾನಿಗೆ ಇದಕ್ಕೂ ಹೆಚ್ಚು ಕಳೆಕಟ್ಟುವ ದಿವ್ಯ ಪ್ರಸಂಗಗಳು ನೆನಪಿದ್ದವು. ಆದರೆ ಇವರೆಲ್ಲರೂ ಹಿಂದುಸ್ಥಾನದಲ್ಲಿಯ ಇಂಗ್ಲೀಷರನ್ನಷ್ಟೆ ನೋಡಿದವರಿದ್ದುದರಿಂದ ಅವನಿಗೆ ಇಂತಹರೆದುರಿಗೆ ಹೇಳುವ ಪ್ರಸಂಗಗಳನ್ನು ನೆನೆಸಿಕೊಳ್ಳಬೇಕಾದರೆ ಎಷ್ಟೋ ಹೊತ್ತು ತಲೆ ತುರಿಸಿಕೊಳ್ಳಬೇಕಾಯಿತು. ಕೊನೆಗೆ ಅವನು ನಿರ್ವಾಹವಿಲ್ಲದೆ ಈ ಮಾತಿಗೆ ಬಂದನು: 'ಆದರೆ ಇದೆಲ್ಲ ಅಪವಾದದ ಮಾತಾಯಿತು. ಅಪವಾದದಿಂದ ಸಾಮಾನ್ಯ ನಿಯಮ ಹೋಗುವುದಿಲ್ಲ; ಅಥವಾ ಸಾಮಾನ್ಯ ನಿಯಮ ಸಿದ್ಧವಾಗುವದಿಲ್ಲ. ಅವರಲ್ಲ ಸಾಮಾನ್ಯ ಸ್ತ್ರೀಯ ಮಟ್ಟ ಟರ್ಟನ್ನಳಷ್ಟು; ಅಝೀಜ, ನಿನಗಂತೂ ಅವಳದೆಲ್ಲ ಗೊತ್ತಿದೆಯಲ್ಲವೆ?' ಅಝೀಜನಿಗೆ ನಿಜವಾಗಿ ಗೊತ್ತಿರಲಿಲ್ಲ. ಆದರೆ ಗೊತ್ತಿದೆಯೆಂದು ಹೇಳಿಬಿಟ್ಟ. ಅವನೂ ತನ್ನ ನಿರಾಶೆಯ ಅನುಭವಗಳಿಂದ ಇದೇ ಮಾತಿಗೇ ಬಂದು ಮುಟ್ಟಿದ್ದ. 'ದಾಸ್ಯದಲ್ಲಿರುವ ಜನಾಂಗಕ್ಕೆ ಇದಕ್ಕೂ ಬೇರೆ ಕಲ್ಪಿಸುವುದೇ ಸಾಧ್ಯವಿಲ್ಲ. ಇವಿಷ್ಟು ಅಪವಾದಗಳನ್ನು ಬಿಟ್ಟರೆ ಎಲ್ಲ ಆಂಗ್ಲ ಸ್ತ್ರೀಯರೂ ಗರ್ವಿಷ್ಠರೂ ಲಂಚಗುಳಿಗಳೂ ಎಂದು ಹೇಳಬೇಕು.' ಎಂದು ಅವನ ಮಾತಿಗೆ ಮಲ್ಲಿನಾಥಿ ಬರೆದು ಒಪ್ಪಿಗೆಕೊಟ್ಟ. ಅಲ್ಲಿಂದ ಅವರ ಒಟ್ಟು ಮಾತಿನಲ್ಲಿಯ ನಗೆಯ ಮುಸುಗೇ ಮಾಯವಾಗಿ ಜಾಡ್ಯದ ಹೊದಿಕೆಯು ಆವರಿಸಿಕೊಂಡಿತು.

'ಆಳು ಬಂದು 'ಊಟ ಸಿದ್ಧವಿದೆ' ಎಂದು ಸಾರಿದ. ಅವರು ಅತ್ತ ಲಕ್ಷ್ಯಕೊಡಲಿಲ್ಲ. ಹಿರಿಯರೆನಿಸಿಕೊಂಡವರು ಆಗಲೆ ತಮ್ಮ ಚಿರಂತನ ರಾಜಕಾರಣಕ್ಕೆ ಮಾತು ಹರಿಬಿಟ್ಟಿದ್ದರು. ಅಝೀಜನು ಮೆಲ್ಲಗೆ ತೋಟಕ್ಕೆ ನುಸುಳಿದನು. ಅಲ್ಲಿಯ ಗಿಡಗಳ ಸುವಾಸನೆಯಿಂದ, ಹಸಿರು ಸುರಿದ ಚಂಪಕದಿಂದ ಪರ್ಶಿಯನ್ ಕಾವ್ಯದ ತುಣುಕುಗಳು ಅವನ ತಲೆಯಲ್ಲಿ ಸುಳಿದಾಡಹತ್ತಿದವು. ಆದರೆ 'ಊಟ! ಊಟ! ಊಟ!' ಎಂದು ಅವನು ಅಲ್ಲಿಂದ ಮರಳಿ ಬರುವ ಹೊತ್ತಿಗೆ ಮುಹಮ್ಮದಲಿ ತನ್ನ ಕಾಸ್ತಾರನೊಡನೆ ಮಾತಾಡುವುದಕ್ಕಾಗಿ ಇತ್ತ ಜಾರಿದ್ದ. 'ಅಝೀಜ, ನನ್ನ ಹೆಂಡತಿಯನ್ನಷ್ಟು ಕಾಣಬೇಕಲ್ಲ? ಬಾ ಹೋಗೋಣ.' ಎಂದು ಹಮೀದುಲ್ಲಾ ಅಝೀಜನನ್ನು ಕರೆದುಕೊಂಡು ಹೋಗಿ ಪರದೆಯ ಹಿಂದೆ ಇಪ್ಪತ್ತು ನಿಮಿಷಗಳ ವರೆಗೆ

ಮಾತನಾಡುತ್ತ ಕುಳಿತರು. ಹಮೀದುಲ್ಲಾ ಬೇಗಮ್ಮಳು ಅಝೀಜನಿಗೆ ದೂರ ದಿಂದ ಕಕ್ಕಿಯಾಗಬೇಕು. ಅಝೀಜನಿಗೂ ಚಂದ್ರಪುರದಲ್ಲಿ ಆಪ್ತ ಹೆಣ್ಣು-ಮಕ್ಕಳೆಂದರೆ ಇವಳೇ ಒಬ್ಬಳು. ಅವಳಿಗೂ ಬಹಳ ಹೇಳುವುದಿತ್ತು. ತಮ್ಮ ಮನೆತನದಲ್ಲಿ ಜರುಗಿದ ಸುಂತಿಯ ಸಮಾರಂಭವು ಎಷ್ಟು ಅವ್ಯವಸ್ಥಿತವಾಗಿ ಆಯಿತೆಂಬುದನ್ನು ಹೇಳುವುದಕ್ಕಾಗಿ ಕುದಿಯುತ್ತಿದ್ದಳು. ಅಝೀಜನಿಗೆ ಇದರೊಳಗಿಂದ ಪಾರಾಗುವುದು ಕಠಿಣವಾಗಿ ತೋರಿತು. ಗಂಡಸರೆಲ್ಲರ ಊಟವಾಗದ ಹೊರತು ಬೇಗಮ್ಮಳು ಉಣ್ಣುವಂತಿಲ್ಲ. ಮಾತಿನಲ್ಲಿ ಅವಸರ ಮಾಡಿದರೆ, ಅವರೆಲ್ಲಿ ಅವಳು ಊಟಕ್ಕಾಗಿ ಆತುರಪಡುತ್ತಾಳೆಂದು ತಿಳಿದು ಕೊಳ್ಳುತ್ತಾರೋ ಎಂಬ ಭೀತಿಯಿಂದ ಬೇಗಮ್ಮಳು ಮಾತನಾಡುವುದನ್ನು ಸಾವಕಾಶವಾಗಿಯೆ ಸಾಗಿಸಿದ್ದಳು. ಕೊನೆಗೆ ಸುಂತಿಯ ವಿಷಯ ಇತಿಶ್ರೀ ಮಾಡಿ ಇನ್ನುಮುಂದೆ ಯಾವ ವಿಷಯ ತೆಗೆಯಬೇಕೆಂದು ಆಲೋಚಿಸಿ 'ಇನ್ನೆಂದು ನಿನ್ನ ಮದುವೆ?' ಎಂದು ಅಝೀಜನನ್ನು ಕೇಳಿದಳು.

'ಒಮ್ಮೆಯಾದದ್ದೆ ಸಾಕು.' ಎಂದು ಕೆರಳಿದರೂ ಮರ್ಯಾದೆಯಿಂದ ಉತ್ತರವನ್ನಿತ್ತನು

'ಅವನು ತನ್ನ ಕರ್ತವ್ಯ ಮಾಡಿದ್ದಾನೆ ಅವನನ್ನು ಸುಮ್ಮನೆ ಕೆರಳಿಸ ಬೇಡ. ಎರಡು ಹುಡುಗರು, ಒಂದು ಹುಡುಗಿ ಇವರನ್ನು ಕಟ್ಟಿಕೊಂಡು ಈಸುತ್ತಿದ್ದಾನೆ.' ಎಂದು ಹಮೀದುಲ್ಲಾ ತನ್ನ ಹೆಂಡತಿಗೆ ಸೂಚಿಸಿದನು.

'ಕಕ್ಕೀ, ಹುಡುಗರೆಲ್ಲ ನನ್ನ ಹೆಂಡತಿಯ ತಾಯಿಯ ಹತ್ತರವೆ ಸುಖ ವಾಗಿವೆ. ಅವಳೂ ಕೂಡ ಸಾಯುವ ಮುಂಚೆ ಅಲ್ಲಿಯೆ ಇದ್ದಳು. ನನಗೆ ಜೀವ ನೆನೆಸಿದಾಗಲೆಲ್ಲ ಅಲ್ಲಿಗೆ ಹೋಗಿ ಕಂಡು ಬರುತ್ತೇನೆ. ಪಾಪ! ಇನ್ನೂ ಹಸುಗೂಸುಗಳು!'

'ಇವನು ತನ್ನೆಲ್ಲ ಪಗಾರವನ್ನೂ ಅವರಿಗೆ ಕಳಿಸಿ ತಾನೊಬ್ಬ ಸಣ್ಣ ಪಗಾರದ ಕಾರಕೂನನಂತೆ ಇರುತ್ತಾನೆ. ಯಾರೆದುರಿಗೂ ಇದರ ಬಗ್ಗೆ ಪಿಟ್ಟೆನ್ನುವದಿಲ್ಲ. ಇದಕ್ಕೂ ಹೆಚ್ಚು ಇವನು ಇನ್ನೇನು ಮಾಡಬೇಕು?'

ಆದರೆ ಬೇಗಮ್ಮಳಿಗೆ ಬೇಕಾದದ್ದು ಈ ವಿಷಯವಲ್ಲ. ಅವಳು ಬಳ್ಳಿ ಚತುರತೆಯಿಂದ ಕೆಲಹೊತ್ತು ಮಾತಿನ ದಿಕ್ಕು ತಪ್ಪಿಸಿ ಕೊನೆಗೆ ತನ್ನ ಮಾತಿಗೇ ಅವನನ್ನು ಜಗ್ಗಿ ತಂದಳು. 'ನಿಮ್ಮಂತಹ ಗಂಡುಹುಡುಗರೆಲ್ಲ

ಮದುವೆಮಾಡಿಕೊಳ್ಳಲಿಕ್ಕೆ ಒಲ್ಲೆಂದರೆ ನಮ್ಮ ಹೆಣ್ಣುಹುಡುಗರ ಗತಿ ಏನು' ಎಂದು ಕೇಳಿ, ತಾನು ಯಾವಾಗಲೂ ಹೇಳುವ ಒಂದು ಕಥೆಯನ್ನೆ ಸುರುವು ಮಾಡಿದಳು. ರಾಜವಂಶದಲ್ಲಿ ಹುಟ್ಟಿದ ಒಬ್ಬ ಹೆಣ್ಣುಹುಡುಗಿಗೆ ಇದ್ದ ತಮ್ಮ ಸಣ್ಣ ಸಮಾಜದಲ್ಲಿ ತಮ್ಮ ಮರ್ಯಾದೆಗೆ–ಅಭಿಮಾನಕ್ಕೆ ತಕ್ಕಂತಹ ವರನು ಸಿಗದ್ದರಿಂದ ಅವಳು ಮದುವೆಯಾಗದೆಯೆ ಉಳಿದಳಂತೆ. ಈಗ ಅವಳಿಗೆ ಮೂವತ್ತು ವರ್ಷವಂತೆ. ಮದುವೆಯಾಗುವವರು ಯಾರೂ ಇಲ್ಲದ್ದರಿಂದ ಅವಳೀಗ ಮದುವೆಯಿಲ್ಲದೆಯೆ ಸಾಯಬೇಕಾಯಿತಲ್ಲ ಎಂದು ಕೊರಗುತ್ತಿದ್ದಾಳಂತೆ. ಈ ಕತೆ ಇನ್ನೂ ನಡೆದಿರುವಾಗಲೆ ಅವರಿಬ್ಬರ ಮನಸ್ಸು ಬಾಗಿತು. 'ಒಂದು ಜೀವನವಲ್ಲಿಯ ಈ ವಿರಸದ ಸಿಡಿಲು ಸಮಾಜದ ವೃಕ್ಷವನ್ನೇ ಸೀಳುವುದು. ಒಬ್ಬ ಸ್ತ್ರೀಯು ದೇವದತ್ತವಾಗಿ ಬಂದ ಸುಖಗಳಿಗೆ ಎರವಾಗಿ ಸಾಯುವುದಕ್ಕಿಂತ ಒಬ್ಬೊಬ್ಬರು ನಾಲ್ಕು ನಾಲ್ಕು ಮದುವೆಗಳನ್ನು ಮಾಡಿಕೊಳ್ಳುವ ಪದ್ಧತಿಯಿದ್ದರೆ ಏನು ತಪ್ಪು? ಮದುವೆ, ತಾಯಿತನ, ಗೃಹನೇತೃತ್ವ, ಇವಕ್ಕಲ್ಲದೆ ಹೆಣ್ಣು ಯಾತಕ್ಕಾಗಿ ಹುಟ್ಟಿದ್ದು? ಹೆಣ್ಣಿಗೆ ಇವನ್ನೆಲ್ಲ ಎರವು ಮಾಡಿದ ಗಂಡಸು ಇಬ್ಬರನ್ನೂ ಹುಟ್ಟಿಸಿದ ದೇವರೆದುರಿಗೆ ಏನೆಂದು ಮುಖ ತೋರಿಸುವನು?' ಎಂದುಕೊಂಡು ಅವರು ಭಾವನೆಯ ಆಳದಲ್ಲಿ ಮುಳುಗಿದರು. ಅಝೀಜನು 'ಒಳ್ಳೇದು.... ಮುಂದೆ ನೋಡೋಣ....' ಎಂದು ಅಪ್ಪನಿಗೆ ನುಡಿದನು. ಮನಸ್ಸು ಬಾಗಿದಾಗಲೆಲ್ಲ ಅವನು ತಪ್ಪದೆ ಇದನ್ನೇ ನುಡಿಯುತ್ತಿದ್ದನು.

'ನಿನಗೆ ಸರಿಯೆನಿಸಿದ್ದನ್ನು ಮುಂದೆ ಹಾಕಬಾರದು. ಹಿಂದುಸ್ಥಾನವು ಈ ದುಸ್ಥಿತಿಗಿಳಿದದ್ದು ನಮ್ಮ ಈ ದುರ್ಗುಣದಿಂದಲೇ.' ಎಂದು ಅಝೀಜನ ಮಾತಿಗೆ ಹಮೀದುಲ್ಲಾ ಟೀಕೆ ಮಾಡಿದನು. ಆದರೆ ತನ್ನ ಅಪ್ಪನು ತ್ರಸ್ತನಾದದ್ದನ್ನು ನೋಡಿ ಸಮಾಧಾನಗೊಳಿಸುವ ನಾಲ್ಕು ಮಾತುಗಳನ್ನೂ ಹೇಳಿ, ಅವನ ಮನಸಿನ ಮೇಲೆ ಮೂಡಿದ ತನ್ನ ಹೆಂಡತಿಯ ಪರಿಣಾಮವನ್ನು ಅಳಿಸಿ ತೆಗೆದನು.

ಇವರಿಬ್ಬರೂ ಇಲ್ಲದಾಗ ಮಹಮ್ಮದಲಿಯು ತನ್ನ ಗಾಡಿಯಲ್ಲಿ ಕುಳಿತುಕೊಂಡು ಹೊರಟುಹೋಗಿದ್ದನು. ಹೋಗುವಾಗ 'ನಾನಿನ್ನು ಐದು ನಿಮಿಷಗಳಲ್ಲಿಯೆ ಬರುವೆ. ಆದರೆ ದಾಕ್ಷಿಣ್ಯದ ಕಾರಣವಿಲ್ಲ.'

ಎಂದು ತಿಳಿಸಿದ್ದನು. ಆದ್ದರಿಂದ ಉಳಿದವರೆಲ್ಲರೂ ಊಟಕ್ಕೆ ಕುಳಿತರು. ಅವರೊಡನೆ ಆ ಮನೆಗೆ ದೂರಿನ ಸಂಬಂಧಿಯಾದ, ಹಮೀದುಲ್ಲಾನ ಮೇಲೆಯೆ ತನ್ನ ಚಕ್ಕಂದವನ್ನೆಲ್ಲ ಸಾಗಿಸುತ್ತಿದ್ದ ಮಹಮ್ಮದ ಲತೀಫ್ ಎಂಬವನೂ ಒಬ್ಬ ಕೂಡಿಕೊಂಡಿದ್ದ. ಅವನ ದರ್ಜೆ ನೋಡಿದರೆ—ಇತ್ತ ಆಳಿಗೆ ಆಳೂ ಅಲ್ಲ; ಅತ್ತ ಸರಿಸಮಾನಸ್ಕಂದನೂ ಅಲ್ಲ. ಮಾತನಾಡಿಸದ ಹೊರತು ಮಾತಿಲ್ಲ. ಮಾತನಾಡಿಸುವವರೂ ಇಲ್ಲದ್ದರಿಂದ ನಿಶ್ಚಿಂತನಾಗಿ ಸುಮ್ಮನಿದ್ದ. ಆದರೆ ನಡುನಡುವೆ ಊಟದ ರುಚಿಸಂಪತ್ತಿಗೆ ಮನ್ನಣೆ ಕೊಡುವವನಂತೆ 'ಥರ್ರೆ'ಂದು ತೇಗುತ್ತಿದ್ದ. ನಿರುಪದ್ರವ ಪ್ರಾಣಿ; ಸುಖಿ ಪುರುಷ; ಆದರೆ ಸ್ವಲ್ಪ ತಗಲು ಮನುಷ್ಯ. ಮುದುಕ ಮತ್ತೆ. ತನ್ನ ಇಡಿ ಆಯುಷ್ಯದಲ್ಲಿ ಕೆಲಸ ಮಾಡಿದವನಲ್ಲ; ಮಾಡಬೇಕೆನ್ನುವವನೂ ಅಲ್ಲ. ತನ್ನ ಆಪ್ತರಿಗೆ ಮನೆ ಇದ್ದರಾಯಿತು; ಅದನ್ನೇ ತನ್ನದೆಂದು ತಿಳಿದುಕೊಳ್ಳುವ ಉದಾರ ಮನಸ್ಸು. ತನಗೆ ಇಂಥ ದೊಡ್ಡ ಬಳಗವಿದ್ದಾಗ ಎಲ್ಲರೂ ಒಮ್ಮೆಲೆ ದಿವಾಳಿ ತೆಗೆಯುವುದಂತೂ ಎಂದಿಗೂ ಶಕ್ಯವಿಲ್ಲವೆಂದು ಅವನ ದೃಢ ವಿಶ್ವಾಸ. ಇವನ ಹೆಂಡತಿ, ಇವನಂತೆಯೆ. ಆದರೆ ನೂರು ಮೈಲುಗಳಾಚೆ ಅಷ್ಟೆ. ಮತ್ತೆ ಇಬ್ಬರದೂ ಭೆಟ್ಟಿ? ಇಲ್ಲ, ರೈಲಿಗೆ ರೊಕ್ಕ ಇಲ್ಲದ್ದರಿಂದ. ಅಝೀಜನು ಈ ಉತ್ಸವಮೂರ್ತಿಯನ್ನು ನೋಡಿಕೊಂಡು ಮಾತುಗಳಿಂದ ಚುಚ್ಚದೆ ಬಿಡಲಿಲ್ಲ. ಸೇವಕರೂ ಅವನಿಗೆ ಪರಿಹಾಸ ಮಾಡಿದರು. ಇಷ್ಟಾದ ಮೇಲೆ ಕಾವ್ಯಕ್ಕೆ ಪ್ರಾರಂಭವಾಯಿತು. ಪರ್ಶಿಯನ್, ಉರ್ದು, ಅರೇಬಿಕ್ ಕಾವ್ಯಗಳಲ್ಲಿಯ ತುಂಡುಗಳನ್ನು ಅಝೀಜನು ಅಂದು ತೋರಿಸಿದನು. ಅಝೀಜನ ಸ್ಮರಣಶಕ್ತಿ ಬಹಳ ತೀಕ್ಷ್ಣ. ಅವನ ಚಿಕ್ಕ ವಯಸ್ಸನ್ನು ನೋಡಿದರೆ ಅವನು ಬಹಳ ಓದಿಕೊಂಡಿದ್ದನೆಂದೇ ಹೇಳಬೇಕು ಅವನ ಮನಸ್ಸಿಗೆ ಹಿಡಿದ ವಿಷಯಗಳೆಂದರೆ ಇಸ್ಲಾಂಧರ್ಮದ ಅಳಿಗಾಲ, ಪ್ರೇಮದ ಅಲ್ಪಬಾಳು. ಅಝೀಜನ ಮಾತುಗಳನ್ನು ಕೇಳಿ ಎಲ್ಲರೂ ಸಂತೋಷಬಟ್ಟರು. ಅವರ ಸಂತೋಷಕ್ಕೆ ಕಾವ್ಯವನ್ನು ಸಾರ್ವಜನಿಕತೆಯಿಂದ ನೋಡುವ ಅವರ ಸಾಮಾನ್ಯ ದೃಷ್ಟಿಯೆ ಕಾರಣವಾಗಿತ್ತು. ಇಂಗ್ಲಂಡದಲ್ಲಿಯಂತೆ ವೈಯಕ್ತಿಕ ದೃಷ್ಟಿಯು ಅವರಲ್ಲಿ ಇರಲಿಲ್ಲ. ಶಬ್ದಗಳನ್ನು ಹಿಡಿದು ಎಳೆದಾಡಿ, ಜಗ್ಗಾಡಿ ವಿರಸವನ್ನವರು ಹುಟ್ಟಿಸಿಕೊಳ್ಳಲಿಲ್ಲ. ಉಸಿರೆಳೆದುಕೊಂಡಂತೆ ಅವರು ಶಬ್ದಗಳನ್ನು ಒಳಗೆ

ಎಳೆದುಕೊಂಡರು ಹಾಫೀಜ್, ಹಾಲಿ, ಇಕ್ಬಾಲ್ ಮೊದಲಾದ ನಾಲ್ಕು ಹೆಸರುಗಳ ಪರಿಚಯವೆ ಅವರ ರಸಾನುಭಾವಕ್ಕೆ ಸಾಕಾಗಿತ್ತು. ಕೇಳಿ ಕೇಳಿ ದಂತೆ, ಹಿಂದುಸ್ತಾನವು—ಹೊರಗೆ ನೂರು ಹಿಂದುಸ್ತಾನಗಳಾಗಿ ಒಡೆದು ಹೋಗಿದ್ದರೂ—ಅವರಿಗೆ ಒಂದು ಹಿಂದುಸ್ತಾನವಾಗಿ—ಅದೂ ತಮ್ಮ ಹಿಂದುಸ್ತಾನವಾಗಿ— ಕಂಡಿತು. ಗತವೈಭವವನ್ನು ನೆನೆನೆನೆಸಿದಂತೆ ಆ ವೈಭವವನ್ನೆ ಅವರಿಗೆ ಮರಳಿ ಪಡೆದಂತೆನಿಸಿತು. ತಾರುಣ್ಯ ಕಳೆದು ಮುಪ್ಪು ಆಗುವುದೆಂಬುದರ ಅರಿವು, ಅವರ ತಾರುಣ್ಯವನ್ನು ಚೇತರಿಸಿತು. ಕೆಂಪು ವೇಷದ ಸೇವಕನೊಬ್ಬನು ಒಮ್ಮೆಲೆ ಬಂದು ಅವರ ಮಾತಿನ ಪ್ರವಾಹಕ್ಕೆ ಅಡ್ಡಿಯಾದನು. ಬಂದವನು ಸಿವಿಲ್‌ಸರ್ಜನ್ನನ ಚಪರಾಸಿ. ಅಝೀಜನ ಕೈಯಲ್ಲಿ ಒಂದು ಕಾಗದ ಕೊಟ್ಟನು.

'ಈ ಮುದಿ ಕ್ಯಾಲೆಂಡರನು ನನ್ನನ್ನು ತನ್ನ ಬಂಗ್ಲೆಯಲ್ಲಿ ಕಾಣ-ಬಯಸುತ್ತಾನೆ! ಅಲ್ಲ, ಏತಕ್ಕಾಗಿ ಎಂದು ಬರೆಯುವಷ್ಟೂ ಸೌಜನ್ಯವಿರ ಬಾರದೇ ಇವನಿಗೆ?' ಎಂದು ಅಝೀಜನು ಕಾಗದವನ್ನು ನೋಡಿ ಏಳದೆ ಕುಳಿತಲ್ಲಿಂದಲೆ ಮಾತನಾಡಿದನು.

'ಯಾವುದೋ ಒಂದು ಗಿರಾಕಿ ಬಂದಿರಲಿಕ್ಕೇ ಬೇಕು.

'ಗಿರಾಕಿ ಇಲ್ಲ, ಏನೂ ಇಲ್ಲ. ನಾವಿಲ್ಲಿ ಊಟಕ್ಕೆ ಬಂದದ್ದು ಅವನಿಗೆ ಗೊತ್ತಾಗಿದೆ ಅಷ್ಟೆ. ಇದಕ್ಕೆ ಅಡ್ಡಿಮಾಡಿ ತನ್ನ ಅಧಿಕಾರ ತೋರಿಸುವು ದರಲ್ಲಿಯೆ ಅವನಿಗೆ ಸಮಾಧಾನ!'

'ಹಾಗಲ್ಲ; ಅವನು ಯಾವಾಗಲೂ ಹೀಗೆ ಮಾಡುತ್ತಿರಬೇಕು ಒಂದು. ಇಲ್ಲವೆ ಒಂದು ಜೋರಿದ್ದಂಥ ಕೇಸು ಇರಬೇಕು. ನಿನಗದು ತಿಳಿಯ ಲಾರದು.' ಎಂದು ಹಮೀದುಲ್ಲಾನು ತೂಕದಿಂದ ಮಾತನಾಡಿ ಅವನಿಗೆ ಹೋಗುವುದಕ್ಕೆ ಅನುಕೂಲ ಮಾಡಿಕೊಟ್ಟನು. 'ತಾಂಬೂಲ ಹಾಕಿದ ಮೇಲೆ ಹಲ್ಲು ಉಜ್ಜಿಕೊಳ್ಳುವುದು ಲೇಸಲ್ಲವೆ?'

'ಹಲ್ಲು ಉಜ್ಜಿಕೊಂಡು ಹೋಗಬೇಕಾದರೆ ನಾನು ಹೋಗುವುದೇ ಇಲ್ಲ. ನಾನು ಹಿಂದೀಯನಿದ್ದೇನೆ. ತಾಂಬೂಲ ಹಾಕುವುದು ಹಿಂದೀಯರ ಚಟ. ಸಿವ್ಹಿಲಾ ಸರ್ಜನ್ನನು ಇದನ್ನು ಸಹಿಸಲೇ ಬೇಕು. ಲತೀಫ್! ನನ್ನ ಸೈಕಲ್ಲು ಕೊಡು.'

ಪಾಪ! ಲತೀಫನು ಎದ್ದನು. ಏನೋ ವಿಚಾರದ ಭಾರದಿಂದ ಹೋಗಿ ಸೈಕಲ್ಲ ಸೀಟಿನ ಮೇಲೆ ಕೈಯಿಟ್ಟನು ಮಾತ್ರ. ಆಳೇ ಅದನ್ನು ದೂಕಿಸಿ ಕೊಂಡು ಬಂದನು. ಅಂತೂ ಇಬ್ಬರೂ ಕೂಡಿ ಅದನ್ನು ತಂದರು. ಅಝೀಜನು ಕೈ ತೊಳೆದುಕೊಂಡು—ತನ್ನ ಹಸಿರು 'ಫೆಲ್ಟ' ಟೊಪ್ಪಿಗೆಯನ್ನು ಹಾಕಿಕೊಂಡು, ಉತ್ಸಾಹದಿಂದ ಸೈಕಲ್ಲು ಹತ್ತಿ ಜೋರಿನಿಂದ ಹಮೀದು-ಲ್ಲಾನ ಕಂಪೌಂಡಿನಿಂದ ಹೊರಬಿದ್ದನು.

'ಅಝೀಜ! ಅಝೀಜ!....ಅವಿವೇಕಿ ಹುಡುಗ' ಅಷ್ಟರಲ್ಲಿ ಅವನು ಪೇಟೆಯುಗುಂಟ ಕೆಳಕ್ಕೆ ದೂರ ಹೋಗಿದ್ದನು. ಅವನ ಸೈಕಲ್ಲಿಗೆ ಗಂಟೆ ಇದ್ದಿಲ್ಲ; ದೀಪ ಇದ್ದಿಲ್ಲ; ಬ್ರೆಕ್ ಇದ್ದಿಲ್ಲ. ಸುಮ್ಮನೆ ಒಂದು ತುದಿಯಿಂದ ಇನ್ನೊಂದು ತುದಿಗೆ ಸೈಕಲ್ಲಿನ ಮೇಲೆ ತಿರುಗಾಡುವುದೇ ಯಾರ ಧ್ಯೇಯವಾಗಿದೆಯೋ ಅವರು ಈ ಬ್ರೆಕ್ಕು, ಬೆಲ್ಲುಗಳನ್ನು ತೆಗೆದುಕೊಂಡಾದರೂ ಏನು ಮಾಡಬೇಕು? ಥಕ್ಕಾಥಿಕ್ಕಿಯಾಗುವುದರೊಳಗಾಗಿ ಸೈಕಲ್ಲೆ ಗಪ್ಪಾ-ಗಿರುತ್ತದೆ. ಏನೇ ಇರಲಿ, ಆ ಹೊತ್ತಿನಲ್ಲಿ ಬೀದಿಗಳೂ ತೆರವಿದ್ದವು. ಅಷ್ಟರಲ್ಲಿ ಗಾಲಿಯೊಳಗಿನ ಗಾಳಿಯೆಲ್ಲ ಹೋಗಿ ಚಪ್ಪಟೆಯಾದ ಕೂಡಲೆ ಅಝೀಜನು ಕೆಳಕ್ಕಿಳಿದು ಟಾಂಗಾಕ್ಕಾಗಿ ಕೂಗಿದನು.

ಟಾಂಗಾ ಸಿಗಲಿಲ್ಲ. ಸೈಕಲ್ಲನ್ನು ಅಲ್ಲಿಯೆ ತನ್ನ ಗುರುತಿನವರ ಮನೆಯಲ್ಲಿ ಒಗೆದನು. ಹಲ್ಲು ಉಜ್ಜುವುದರಲ್ಲಿ ಕೆಲಹೊತ್ತು ಕಳೆದನು. ಕೊನೆಗೆ ಟಾಂಗಾ ಹತ್ತಿ, ಖಟ್ ಖಟ್ ಎಂದು ಒಳ್ಳೇ ಜೋರಿನಿಂದ ಸಿವ್ಹಿಲ್ ಲೈನದ ಕಡೆಗೆ ನಡೆದನು. ಅವರ ಆ ಒಣ ಪೌಲಿಸ ಸೀಮೆಯನ್ನು ಸೇರಿದೊಡನೆ ಅವನ ಮನಸ್ಸು ಜರ್‍ರೆಂದು ಇಳಿದುಹೋಯಿತು. ವಿಜಯಶಾಲಿಗಳಾದ ಸೇನಾಪತಿಗಳ ಹೆಸರು ಹೊತ್ತ ಅಲ್ಲಿಯ ಬೀದಿಗಳನ್ನು ನೋಡಿ, ಆಂಗ್ಲ ದೇಶವು ಹಿಂದುಸ್ಥಾನದ ಮೇಲೆ ಬೀಸಿದ ಮಾಯಾಜಾಲದ ಅರ್ಥವು ಅವನಿಗೆ ಹೊಳೆಯಿತು. ತಾನೂ ಆ ಜಾಲದಲ್ಲಿ ಸಿಕ್ಕಿಬಿದ್ದಂತೆ ಅವನಿಗನಿಸಿತು. ಮೇಜರ ಕ್ಯಾಲೆಂಡರನ ಕಾಂಪೌಂಡನಲ್ಲಿ ಟಾಂಗಾ ಹೊರಳಿದೊಡನೆಯೆ ಇಳಿಯಬಾರದೆಂದು ಮನಸಿನಲ್ಲಿ ಮಾಡಿದ್ದರೂ ಕೆಳಗಿಳಿದು ಕಾಲುನಡಿಗೆಯಿಂದ ಬಂಗ್ಲೆಯ ಸಮೀಪಕ್ಕೆಬಂದನು. ಅವನು ಹೀಗೆ ಮಾಡಿದ್ದರಲ್ಲಿ ಅವನ ಮನಸ್ಸುಅಷ್ಟೇನು ದಾಸ್ಯವೃತ್ತಿಯನ್ನು ತಾಳಲಿಲ್ಲ. ಆದರೆ ಬಳ್ಳಿಯು ಕುಡಿಯುಂತಿದ್ದ ಅವನ

ಸೂಕ್ಷ್ಮಭಾವನೆಗಳು, ಕ್ಯಾಲೆಂಡರಸ ಕಡಿ ಚಿವ್ರುವ ಬಿರುಸು ಕೈಗೆ ಹೆದರಿ ಮುದುಡಿಕೊಂಡವು, ಅಷ್ಟೆ. ಹೋದ ವರ್ಷ ಒಂದು ಸಂಗತಿ ಜರುಗಿತು ಒಬ್ಬ ಹಿಂದೀ ಗೃಹಸ್ಥ ಗಾಡಿಯಲ್ಲಿ ಕುಳಿತುಕೊಂಡೇ ಒಬ್ಬ ಯುರೋಪಿಯನ್ ಅಧಿಕಾರಸ್ಥನ ಮನೆಯ ವರೆಗೂ ಹೋದ. ಸೇವಕರಿಂದ ಹೊರಗೆ ಹಾಕಿಸಿಕೊಂಡ. ಅಲ್ಲದೆ ಇನ್ನೊಮ್ಮೆ ಬರುವುದಾದರೆ ಯೋಗ್ಯ ರೀತಿಯಿಂದ ಬರಬೇಕೆಂದು ಉಪದೇಶವನ್ನೂ ಪಡೆದ. ನೂರಾರು ಅಧಿಕಾರಸ್ಥರನ್ನು ಸಾವಿರಾರು ಜನರು ಭೆಟ್ಟಿಯಾಗಲು ಹೋಗುವಲ್ಲಿ ಇಂಥ ಸಂಗತಿ ನಡೆದದ್ದು ಒಂದೇ ಇದ್ದರೂ ಅದರ ಪ್ರಸಿದ್ಧಿ ವಸಾತ್ರ ದೂರದ ವರೆಗೆ ಹಬ್ಬಿತ್ತು. ಅಝೀಜನು ಇನ್ನೊಮ್ಮೆ ಈ ತರಹದ್ದಾಗಬಾರದೆಂದೇ ಹಾಗೆ ಇಳಿದನು.

ಸಿವ್ಹಿಲ್ ಸರ್ಜನ್ನನು ಹೊರಗೆ ಹೋಗಿದ್ದನು.

'ಏನಾದರೂ ಹೇಳಿಟ್ಟು ಹೋಗಿದ್ದಾರೆಯೊ ?'

'ಇಲ್ಲ' ಎಂದು ಸೇವಕನು ಒಗರಿನಿಂದ ಉತ್ತರಕೊಟ್ಟನು. ಅಝೀಜನಿಗೆ ನಿರಾಶೆಯಾಯಿತು ತಾನು ಖುಶಿ ಕೊಡಲಿಕ್ಕೆ ಮರೆತಿದ್ದ ಸೇವಕನೇ ಇವನೆಂದು ತಿಳಿಯಿತು. ಆದರೆ ಈಗ ಕೊಡುವಂತಿಲ್ಲ; ಜನರಿದ್ದಾರೆ. ಅವನಿಗೆ ಸಾಹೇಬರೇನೋ ಹೇಳಿರಲೇಬೇಕು; ಆದರೆ ಇವನು ಮುಯ್ಯ ತೀರಿಸಬೇಕೆಂದು ಅದನ್ನು ಮುಚ್ಚಿಡುತ್ತಿರಬೇಕೆಂದು ಅವನಿಗೆ ಸ್ಪಷ್ಟವಾಯಿತು. ಆಳಿನೊಡನೆ ಇವನ ಮಾತು ನಡೆದಾಗ ಆ ಜನ ಹೊರಗೆ ಬಂತು. ಆ ಜನ ಎಂದರೆ ಇಬ್ಬರು ಹೆಣ್ಣುಮಕ್ಕಳು. ಅಝೀಜನು ತನ್ನ ಟೊಪ್ಪಿಗೆ ಎತ್ತಿದ. ಸಂಜೆ ವೇಷದಲ್ಲಿದ್ದ ಮೊದಲನೆಯವಳು ಈ ಹಿಂದೀಮನುಷ್ಯನನ್ನು ನೋಡಿ ಸ್ವಾಭಾವಿಕವಾಗಿ ದೂರ ತಿರುಗಿದಳು.

'ಲೆಸ್ಲೀ ! ಅಗೊ ಟಾಂಗಾ !' ಎಂದು ಕೂಗಿದಳು.

'ನಮ್ಮದೇ ಏನು ?' ಎಂದು ಕೇಳಿ ಅಝೀಜನನ್ನು ನೋಡಿ ಮೊದಲಿನವಳಂತೆಯೇ ಮಾಡಿದಳು.

'ಹೇಗಾದರೂ ದೇವರು ಕೊಟ್ಟದ್ದು; ಸ್ವೀಕರಿಸಬೇಕು.' ಎಂದು ಅವಳು ಕಿರುಚಿದಳು. ಇಬ್ಬರೂ ಟಾಂಗಾದಲ್ಲಿ ಹತ್ತಿದರು. 'ಏ ಟಾಂಗಾವಾಲಾ ! ಕ್ಲಬ್, ಕ್ಲಬ್...ಈ ಮೂರ್ಖ ಇನ್ನೂ ಯಾಕೆ ಹೋಗಲೊಲ್ಲ !'

'ಹೋಗು, ನಾಳೆ ನಾನು ರೊಕ್ಕ ಕೊಡುತ್ತೇನೆ.' ಎಂದು ಅಝೀಜನು ಟಾಂಗಾವಾಲನಿಗೆ ಹೇಳಿದ. ಟಾಂಗಾ ಹೊರಟಿತು. ಆಗ ಅಝೀಜನು ಆ ಸ್ತ್ರೀಯರಿಗೆ 'ಹೋಗಿ ಬರಬಹುದು' ಎಂದು ಅತಿ ವಿನಯದಿಂದ ಹೇಳಿದನು. ತಮ್ಮ ಮಾತಿನಲ್ಲಿಯೆ ಗರ್ಕಾಗಿ ಕುಳಿತಿದ್ದ ಅವರು ಇವನಿಗೆ ಉತ್ತರವನ್ನೇ ಕೊಡಲಿಲ್ಲ.

ಮುಹಮ್ಮದಲಿ ಯಾವಾಗಲೂ ಹೇಳುವ ಮಾತಿಗೇ ಇದು ಬಂದಂತಾಯಿತು. ಅಝೀಜನ ವಿನಯದ ನಮಸ್ಕಾರಕ್ಕೆ ಅವರ ತುಚ್ಛ ಉದಾಸೀನವು ಉತ್ತರ ಕೊಟ್ಟಿತು. ಅವನ ಟಾಂಗೆಯನ್ನೂ ತೆಗೆದುಕೊಂಡದ್ದಾಯಿತು. ಆ ಮುದ್ದಮ್ಮರು ಟಾಂಗಾದಲ್ಲಿ ಕುಳಿತೊಡನೆ ಅವರ ಭಾರಕ್ಕಾಗಿ ಅದು ಟಾಂಗ್‌ವೇಲಾಯಿತು. ಅವರ ಆ ಭವ್ಯ ಸ್ಥೂಲಕಾಯಗಳನ್ನು ನೋಡಿ, ಅಝೀಜನು ಇದ್ದುದರಲ್ಲಿಯೆ ಸಮಾಧಾನಹೊಂದಿದನು. ಅದೆ ಚೆಂದುಳ್ಳ ಹೆಣ್ಣುಹುಡುಗಿಯರಿದ್ದು ತನಗೆ ಹೀಗಾಗಿದ್ದರೆ ಅವನು ಇದಕ್ಕೂ ಬಹಳ ಮನಸಿಗೆ ಹಚ್ಚಿಕೊಳ್ಳುತ್ತಿದ್ದನು. ಆಳಿನ ಕಡೆಗೆ ತಿರುಗಿ ಅವನ ಕೈಯಲ್ಲಿ ಒಂದೆರಡು ರೂಪಾಯಿ ಇಟ್ಟು ಮತ್ತೆ ತನ್ನ ಸಾಹೇಬರ ವಿಷಯ ಕೇಳಿದನು. ಅವನು ಈ ಸಲ ಅತಿ ವಿನೀತನಾಗಿ ಅದೇ ಉತ್ತರವನ್ನೇ ಕೊಟ್ಟನು. ಅಲ್ಲದೆ ಮೇಜರ ಕ್ಯಾಲೆಂಡರ ಸಾಹೇಬರು ಅರ್ಧ ತಾಸಿನ ಹಿಂದೇ ಹೋದರೆಂದೂ ಹೇಳಿದನು.

'ಏನೂ ಹೇಳದೇ ?'

ಸಾಹೇಬರೇನೊ ಅಂದಿದ್ದರು, 'ಡ್ಯಾಮ್ ಅಝೀಜ' ಎಂದು. ಆಳಿಗೆ ಇದರ ಅರ್ಥ ಗೊತ್ತಿತ್ತು. ಅಂತೇ ಈಗ ಅದನ್ನು ಅವನು ಉಚ್ಚರಿಸಲಿಲ್ಲ. ಒಬ್ಬನು ಹೆಚ್ಚಿಗೆ 'ಖುಶಿ' ಕೊಡಬಹುದು, ಇನ್ನೊಬ್ಬನು ಕಡಿಮೆ ಕೊಡಬಹುದು. ಆದರೆ ಸತ್ಯವನ್ನು ಮಾರಾಟಕ್ಕೆ ತೆಗೆದುಕೊಳ್ಳುವ ನಾಣ್ಯವಿನ್ನೂ ಹುಟ್ಟಿಲ್ಲ!

'ಹಾಗಾದರೆ ನಾನವರಿಗೊಂದು ಪತ್ರ ಬರೆಯಬೇಕು.'

'ಒಳಗೆ ಬಂದು ಬೇಕಾದ ಹಾಗೆ ಬರೆಯಬಹುದು.' ಎಂದು ಸೇವಕನು ಹೇಳಿದನು. ಆದರೆ ಇಂಥವನ ಮನೆಯೊಳಕ್ಕೆ ಹೋಗುವುದು ಅಝೀಜನ ಅಭಿಮಾನಕ್ಕೆ ಸಾಲಲಿಲ್ಲ. ಕಾಗದ, ಮಸಿ ಅವನಿದ್ದಲ್ಲಿಗೇ ಬಂದವು.

ಅಝೀಜ ಪ್ರಾರಂಭಿಸಿದ: 'ಮಹನೀಯ— ತಮ್ಮ ಅವಸರದ ಆಜ್ಞೆಯ ಮೇರೆಗೆ ನಾನು ಬಂದೆ—ಕೈಕೆಳಗಿನವರು ಬಂದೇ ಬರುವಂತೆ—' ಇಲ್ಲಿಗೆ ಬರೆಯುವುದೇ ನಿಂತಿತು. 'ನಾನು ಬಂದು ಹೋದೆ, ಎಂದಿಷ್ಟೇ ಹೇಳು, ಸಾಕು.' ಎಂದು ಆಳಿಗೆ ಹೇಳಿ ಬರೆದ ಕಾಗದವನ್ನು ಹರಿದುಹಾಕಿ 'ಇಕಾ ನನ್ನ ದರ್ಶನಪತ್ರ. ಒಂದು ಟಾಂಗಾ ಕಳಿಸು.' ಎಂದು ಹೇಳಿದನು.

'ಹುಜೂರ, ಎಲ್ಲ ಕಬ್ಬಿನಲ್ಲಿವೆ.'

'ಹಾಗಾದರೆ ಸ್ಟೇಶನ್ನಿಗೆ ಫೋನ್ ಮಾಡು, ಒಂದು ಕಳಿಸಲು.' ಆಳು ಅವಸರದಿಂದ ಹಾಗೆ ಮಾಡಲು ಹೊರಟ. ಆದರೆ ಅಝೀಜನು ಮತ್ತೆ ಅವನನ್ನು ಕೂಗಿ 'ಏನೂ ಬೇಡ. ನಾನು ನಡೆಯುತ್ತ ಹೋಗುತ್ತೇನೆ.' ಎಂದು ಹೇಳಿ ಸಿಗರೇಟು ಹೊತ್ತಿಸಿದ. ಆಳಿನಿಂದ ಕೊಂಡುಕೊಂಡ ಈ ಉಪಚಾರವು ಕೂಡ ಅವನನ್ನು ಸಮಾಧಾನಗೊಳಿಸಿತು. ಜೇಬಿನಲ್ಲಿ ರೂಪಾಯಿ ಇರುವ ವರೆಗೂ ಈ ಉಪಚಾರ ಇದ್ದೇ ಇರುತ್ತದೆ. ಇದೇ ಎಷ್ಟೋ ಇನ್ನೂ ಗುಣ! ಆದರೆ ಈ ಸಾಹೇಬರ ಪಾದಾಕ್ರಾಂತವಾದ ಹಿಂದುಸ್ತಾನದ ಧೂಳಿ ನಮ್ಮ ಕಾಲು ಮುಟ್ಟದಂತೆ ಹೇಗೆ ಮಾಡಬೇಕು! ಅವರ ಆ ಮಾಯಾಜಾಲದಿಂದ ತಪ್ಪಿಸಿಕೊಂಡು ಹೇಗೆ ನಮ್ಮತನವನ್ನು ಕಾಯ್ದುಕೊಳ್ಳಬೇಕು! ಎಂದು ಅವನು ಕಳವಳಿಸಿದನು.

ಆಳು ಸಣ್ಣದಿದ್ದರೂ ಗಟ್ಟಿಮುಟ್ಟಿಯಾಗಿತ್ತು. ಆದರೂ ನಡೆಯುವುದರಿಂದ ಈಗ ಅವನಿಗೆ ದಣುವಾಗಿತ್ತು. ಹಿಂದುಸ್ತಾನದಲ್ಲಿ ಹೊಸಬರನ್ನು ಬಿಟ್ಟು ಎಲ್ಲರಿಗೂ ನಡೆಯುವುದರಿಂದ ದಣುವಾಗುತ್ತದೆ. ಈ ಮಣ್ಣಿನಲ್ಲಿಯೇ ಏನೋ ಅಂತಹ ಪ್ರತಿಕೂಲ ಗುಣವಿರಬೇಕು. ಇಲ್ಲಿಯ ನೆಲ ಒತ್ತಟ್ಟಿಗೆ ಕಾಲು ಸಿಗಿಬೀಳುವಷ್ಟು ಮೆತ್ತಗಿದ್ದರೆ, ಇನ್ನೊತ್ತಟ್ಟಿಗೆ ಕಾಲಿಗೆ ಚುಚ್ಚುವಷ್ಟು ಚೂಪಾಗಿ ಬಿರುಸಾಗಿರುತ್ತದೆ. ಇದರಿಂದ ನಡೆಯುವ ಮನುಷ್ಯನು ಬಲು ಹಣ್ಣಾಗುತ್ತಾನೆ. ಆದರಲ್ಲಿಯಂತೂ ಅಝೀಜನು 'ಪಂಪ್' ಬೂಟು ಬೇರೆ ಹಾಕಿದ್ದನು. ಇವನ್ನು ಹಾಕಿದರೆ ಯಾವ ದೇಶದಲ್ಲಿಯೂ ನಡೆಯಲಿಕ್ಕೆ ಅನನುಕೂಲ. ನಡೆದು ನಡೆದು ಬೇಸತ್ತು ಅಝೀಜನು ಸಿವ್ಹಿಲ್ ಸ್ಟೇಶನ್ನದ ಕೊನೆಯ ತುದಿಗೆ ಹೊರಳಿ ಒಂದು ಮಸೀದೆಯಲ್ಲಿ ವಿಶ್ರಾಂತಿಗೆಂದು ಹೊಕ್ಕನು.

ಈ ಮಸೀದೆ ಅವನ ಪ್ರೀತಿಯದು. ಒಳ್ಳೇ ಕಳೆಯುಳ್ಳದ್ದು. ಒಳಗಿನ ವ್ಯವಸ್ಥೆ ಅಚ್ಚುಕಟ್ಟಾಗಿತ್ತು. ಒಂದು ಮುರುಕು ಬಾಗಿಲದಿಂದ ಹೋದೊಡನೆಯೆ ಎದುರಿಗೆ ಅಂಗಳದಲ್ಲಿ ಒಂದು ಸ್ವಚ್ಛ ನೀರಿನಿಂದ ತುಂಬಿದ ಹೊಂಡ. ಇದರಲ್ಲಿಯ ನೀರು ನಿಲ್ಲದೆ ಯಾವಾಗಲೂ ಹರಿಯುತ್ತಿತ್ತು. ಆದರೂ ಹೊಂಡ ಮಾತ್ರ ತುಂಬಿರುತ್ತಿತ್ತು. ಅಂಗಳದಲ್ಲಿ ತುಂಡು ಕಲ್ಲುಗಳನ್ನು ಜೋಡಿಸಿದರು. ಮಸೀದೆಯ ಮುಚ್ಚಿದ ಭಾಗವು ಎಲ್ಲ ಕಡೆಯುಂತಿರದೆ ಬಹಳ ದೂರದವರೆಗೆ ಹೋಗಿತ್ತು. ಇದರ ಪರಿಣಾಮವಾಗಿ ಅದು ಒಂದು ಮಗ್ಗುಲ ಗೋಡೆಯಿಲ್ಲದ ಇಂಗ್ಲೀಷ-ಪ್ಯಾರಿಶ್ ಚರ್ಚದಂತೆ ತೋರುತ್ತಿತ್ತು. ಅಝೀಜನು ತಾನು ಕುಳಿತಲ್ಲಿಂದ ಮೂರು ಕಮಾನುಗಳೊಳಗೆ ನೋಡಿದನು. ಅಲ್ಲಿಯ ಕತ್ತಲು ಒಂದು ತೂಗುದೀಪದಿಂದ ಮತ್ತು ಚಂದ್ರನ ಬೆಳಕಿನಿಂದ ಸರಿದು ನಿಂತಿತ್ತು. ಹುಣ್ಣಿಮೆಯ ಬೆಳದಿಂಗಳ ಬೆಳಕಿನಲ್ಲಿ ನೋಡಿದರೆ ಆ ಮಸೀದಿಯ ಮುಂಭಾಗವು ಸಂಗಮವರಿಯ ಕಲ್ಲಿನಿಂದ ಕಟ್ಟಿದಂತೆ ತೋರುತ್ತದೆ. ದೇವರ ತೊಂಬತ್ತೊಂಬತ್ತು ಹೆಸರುಗಳು ಮಾತ್ರ ಆಕಾಶಕ್ಕೆ ತೆರೆದಿಟ್ಟ ಕಮಾನಿನ ಮೇಲೆ ಕಪ್ಪಾಗಿ ಎದ್ದು ಕಾಣುತ್ತವೆ. ಈ ದ್ವಂದ್ವಗಳ ಹೋರಾಟವೂ ಒಳಗಿನ ಕತ್ತಲೆಯ ಒದ್ದಾಟವೂ ಅಝೀಜನ ಮನಸ್ಸನ್ನು ತಟ್ಟಿದವು. ಇದೆಲ್ಲವೂ ಒಂದು ಧರ್ಮದ, ಪ್ರೇಮದ ತತ್ವವನ್ನು ಸೂಚಿಸುವದೆಂದು ಅವನು ಮನಗಂಡನು. ಈ ಮಸೀದೆಯು ಅವನ ಮನಸ್ಸಿನ ಬಳ್ಳಿಗೆ ನೀರೆರೆದು ಕಲ್ಪನೆಯ ಕುಡಿಯೊಡಸಿತು. ಅನ್ಯಧರ್ಮದ—ಹಿಂದೂ, ಕ್ರಿಶ್ಚನ್ ಅಥವಾ ಗ್ರೀಕ—ದೇವಾಲಯಗಳು ಅವನ ಮನಸ್ಸಿಗೆ ಬೇಸರವನ್ನುಂಟುಮಾಡುತ್ತಿದ್ದವು; ಮತ್ತು ಅವನ ಸೌಂದರ್ಯದ ಕಣ್ಣನ್ನು ಎಂದೂ ಅರಳಿಸುತ್ತಿದ್ದಿಲ್ಲ. ಈ ಮಸೀದೆಯಲ್ಲಿ ಅವನ ಪಾಲಿಗೆ ಇಸ್ಲಾಂ ಇದೆ, ಅವನ ದೇಶವಿದೆ, ಅವನ ಧರ್ಮದಕಿಂತಲೂ ಹೆಚ್ಚಿನದು-ರಣಗರ್ಜನೆಯಕಿಂತಲೂ ಹೆಚ್ಚಿನದು—ಹೆಚ್ಚು—ಇನ್ನೂ ಹೆಚ್ಚು....ಇಸ್ಲಾಂ ಎಂದರೆ ತನ್ನ ದೇಹಕ್ಕೂ ವಿಚಾರಕ್ಕೂ ಎಡೆಗೊಡುವ ಒಂದು ಅನಂತವಾದ ರಮ್ಯ ಜೀವನದ ಒಲವು-ನಲಿವು ಎಂದು ಅವನ ಕಲ್ಪನೆ.

ಅವನು ಕುಳಿತದ್ದು ಅಂಗಳದ ಸುತ್ತಲೂ ಕಟ್ಟಿದ್ದ ಒಂದು ಸಣ್ಣ ಗೋಡೆಯ ಮೇಲೆ ಅವನ ಕಾಲಕೆಳಗಿನಿಂದ ಭೂಮಿಯು ಶಹರದ ಕಡೆಗೆ

ಇಳಿಯುತ್ತ ಹೋಗಿತ್ತು. ಅವನು ಕುಳಿತಲ್ಲಿಂದ ಆ ಶಹರವು ಮಸುಕಾಗಿ ಕಪ್ಪು ಮುದ್ದೆಯಂತೆ ತೋರುತ್ತಿತ್ತು. ಪ್ರಶಾಂತವಾದ ಆ ಸಮಯದಲ್ಲಿ ಅವನಿಗೆ ಮೆಲ್ಲಗೆ ಕೆಲ ದನಿಗಳು ಕೇಳಹತ್ತಿದವು. ಇತ್ತ ಬಲಗಡೆಗೆ ನೋಲಕ್ಕೆ ಕ್ಲಬ್ಬಿನಲ್ಲಿ ಇಂಗ್ಲೀಷ ಜನರ ಸಂಗೀತ ಕಚೇರಿ ನಡೆದಿತ್ತು. ಇನ್ನೊಂದು ಕಡೆಗೆ ಹಿಂದುಗಳು ಹಲಗೆ ಬಾರಿಸುವುದು ಸಾಗಿತ್ತು—ಬಾರಿಸುವ ಗತ್ತು ಅಖ್ತೀಜನಿಗೆ ಸೇರದ್ದರಿಂದ ಅದು ಹಿಂದುಗಳದಿರಬೇಕೆಂದು ಭಾವಿಸಿದನು— ಮಗದೊಂದು ಕಡೆಗೆ ಯಾರೋ ಸತ್ತವನ ಸಲುವಾಗಿ ಅಳುತ್ತಿದ್ದರು— ತಾನೇ ಮಧ್ಯಾಹ್ನದಲ್ಲಿ ಸರ್ಟಿಫಿಕೆಟ್ ಬರೆದು ಕೊಟ್ಟದ್ದರಿಂದ ಸತ್ತದ್ದು ಯಾರೆಂಬುದೂ ಅವನಿಗೆ ಗೊತ್ತಾಯಿತು— ಗೂಬೆಗಳು ಕೂಗಿದವು, ಪಂಜಾಬ ಮೇಲ್ ಗಾಡಿ ಗಡಗಡ ಸಪ್ಪಳ ಮಾಡುತ್ತ ಹೋಯಿತು,.... ಸ್ಟೇಶನ್ ಮಾಸ್ತರನ ತೋಟದಲ್ಲಿಯ ಹೂಗಳು ಒಳ್ಳೇ ವಾಸನೆಯನ್ನು ಬೀರಿದವು; ಇದೆಲ್ಲದರಲ್ಲಿಯೂ ಅವನಿಗೆ ಆ ಮಸೀದೆ ಒಂದೇ ಮಹತ್ವದ್ದೆನಿಸಿತು. ರಾತ್ರಿಯ ಈ ಬೆರೆತ ಬೆಡಗನ್ನು ಬದಿಗಿರಿಸಿ ಅವನು ಮತ್ತೆ ಮೊದಲಿನ ವಿಚಾರವನ್ನೇ ಬೆಳೆಸಿದನು. ಮಸೀದೆಯನ್ನು ಕಟ್ಟಿಸಿದವನು ಕಾಣದ ಅರ್ಥಗಳನ್ನು ತಾನು ಕಂಡೆನೆಂದೆಸಿಕೊಂಡನು. ತಾನೂ ಒಂದು ದಿನ ಹೀಗೆಯೆ ಒಂದು ಮಸೀದೆಯನ್ನು ಕಟ್ಟಿಸಬಹುದು. ಅದು ಇದರಕಿತ ಸಣ್ಣದಾಗಬಹುದು. ಆದರೆ ಕಲೆಯ ಕಣ್ಣಿಗೆ ತೃಪ್ತಿ ಕೊಡುವುದು. ತಾನೀಗ ಅನುಭವಿಸುತ್ತಿರುವ ಆನಂದವು ಆಗ ಹಾದುಹೋಗುವವರೆಲ್ಲರಿಗೂ ದೊರೆಯುವುದು. ಅದರ ಹತ್ತಿರವೆ ಒಂದು ಸಣ್ಣ ಗುಮ್ಮಟದ ಕೆಳಗೆ ತನ್ನದೂ ಗೋರಿಯಿರಬೇಕು. ಅದರ ಮೇಲೆ ಈ ಚರಮಗೀತವನ್ನು ಬರೆಯಬೇಕು:

**ಸಾವಿರ ಸಾವಿರ ವರ್ಷದ ವರೆಗೂ ನಾನಿಲ್ಲದೆ**
**ಅರಳುವುದು ಗುಲಾಬಿ, ಮೆರೆಯುವುದು ವಸಂತ!**
**ನನ್ನ ಹೃದಯಾಂತರಾಳವನು ಅರಿತವರು ಮಾತ್ರ**
**ಬರುವರಿಲ್ಲಿ, ನಾ ಮಲಗಿದ ಈ ನನ್ನ ಸಮಾಧಿ ಬಳಿ.**

ಇದನ್ನು ಅವನು ದಕ್ಷಿಣದ ಒಬ್ಬ ರಾಜನ ಗೋರಿಯ ಮೇಲೆ ನೋಡಿದ್ದನು, ಮತ್ತು ಇದರಲ್ಲಿ ಗೂಢವಾದ ತತ್ವವಿದೆಯೆಂದು ತಿಳಿದಿದ್ದನು. ಮನಸ್ಸನ್ನು ವಿಧುವು ಮಾಡಬೇಕಾದರೆ ಕರುಣಾರಸವನ್ನು ಬಿಟ್ಟರೆ

ಇನ್ನೊಂದು ರಸವಿಲ್ಲ ಎಂದು ಅವನ ನಂಬಿಕೆ. 'ಹೃದಯ ಪರಿಚಯಕ್ಕೆ ಅದು ವಾಹನ' ಎಂದು ಇದೇ ಮಾತನ್ನೇ ಮೂರು ನಾಲ್ಕು ಸಲ ಕಣ್ಣಲ್ಲಿ ನೀರುದುರಿಸುತ್ತ ತಿರುತಿರುಗಿ ನುಡಿದನು. ಅಷ್ಟರಲ್ಲಿ ಮಸೀದೆಯಲ್ಲಿಯ ಒಂದು ಕಂಬವು ಹೊಯ್ದಾಡಿದಂತೆ ತೋರಿತು. ಅಲ್ಲಿಂದ ಅದು ಕತ್ತಲೆಯಲ್ಲಿ ತೂಗಾಡುತ್ತ ಬಂದು ಬೇರೆಯಾಗಿ ನಿಂತಿತು. ಅಝೀಜನ ಮೈಯಲ್ಲೆಲ್ಲ ದೆವ್ವಗಳ ಹೆದರಿಕೆಯು ತುಂಬಿಕೊಂಡಿತು. ಆದರೂ ಅವನು ಕದಲಲಿಲ್ಲ. ಅಷ್ಟರಲ್ಲಿ ಮತ್ತೊಂದು ಕಂಬವು ಸರಿಯಿತು; ಮೂರನೆಯದೂ ಸರಿಯಿತು. ಅಲ್ಲಿಂದ ಒಬ್ಬ ಆಂಗ್ಲ ಹೆಣ್ಣುಮಗಳು ಹೊರಗೆ ಒಂದು ಬೆಳುದಿಂಗಳಲ್ಲಿ ನಿಂತಳು. ಅಝೀಜನು ಒಮ್ಮೆಲೆ ಕೆರಳಿ ಗಟ್ಟಿಯಾಗಿ, 'ಮಡಮ್ ಸಾಹೇಬ! ಮಡಮ್ ಸಾಹೇಬ!' ಎಂದು ಕೂಗಿದನು.

'ಓ! ಓ!' ಎಂದು ಆ ಹೆಣ್ಣುಮಗಳು ಗಾಬರಿಯಾದ ದನಿ ತೆಗೆದಳು.

'ಮಡಮ್ ಸಾಹೇಬ! ಇದು ಮಸೀದೆ. ಇಲ್ಲಿ ನೀವು ಬರಬಾರದು; ನಿಮಗೆ ಅಧಿಕಾರವಿಲ್ಲ. ನೀವು ನಿಮ್ಮ ಕಾಲೊಳಗಿನವನ್ನು ತೆಗೆಯಬೇಕಾಗಿತ್ತು. ಇದು ಮುಸಲ್ಮಾನರ ಪವಿತ್ರ ಸ್ಥಳ.'

'ನಾನು ತೆಗೆದಿದ್ದೇನೆ.'

'ತೆಗೆದಿದ್ದೀರಾ!?'

'ಅಲ್ಲೇ ಬಾಗಿಲ ಹತ್ತಿರ ಬಿಟ್ಟಿದ್ದೇನೆ.'

'ಹಾಗಿದ್ದರೆ ನನ್ನನ್ನು ಕ್ಷಮಿಸಬೇಕು.'

ಆದರೂ ಆ ಹೆಣ್ಣುಮಗಳು ಗಾಬರಿಯಾಗಿ ಹೊರಗೇ ಹೊರಟಳು. ಅಝೀಜನು ಅವಳ ಹಿಂದೆಯೆ ಮತ್ತೆ ಕೂಗಿದನು. 'ನಿಮಗೆ ಹಾಗೆ ಮಾತನಾಡಿದ್ದಕ್ಕಾಗಿ ನನಗೆ ಬಹಳ ಕೆಡಕೆನಿಸುತ್ತದೆ.'

'ಹೌದು, ನಾನು ಮಾಡಿದ್ದು ಸರಿಯಿತ್ತಲ್ಲವೆ? ಕಾಲೊಳಗಿನವು ಬಿಟ್ಟರೆ ಒಳಗೆ ಬರಬಹುದು?'

'ಓಹೋ, ಬೇಕಾದ ಹಾಗೆ ಬರಬಹುದು. ಆದರೆ ಇಷ್ಟೆಲ್ಲ ತೊಂದರೆ ತೆಗೆದುಕೊಳ್ಳುವ ಸ್ತ್ರೀಯರೇ ಕಡಿಮೆ.'

'ಅದರಲ್ಲೇನು ತೊಂದರೆ? ಇಲ್ಲಿ ದೇವರಿದ್ದಾನೆ.'

'ಅಂ! ಎಂಥ ಮಾತಿದು! ಮಡಮ್ ಸಾಹೇಬ!'

' ದಯವಿಟ್ಟು ನಾನು ಹೋಗಲು ಅಪ್ಪಣೆಯೆ ? '

' ನಾನು ತಮ್ಮ ಸೇವೆಗೆ ಸಿದ್ಧನಿದ್ದೇನೆ; ಈಗಾಗಲಿ, ಇನ್ನೊಮ್ಮೆಯಾಗಲಿ ಅದನ್ನು ತಾವು ತೆಗೆದುಕೊಳ್ಳಬಹುದೇ ? '

' ಬೇಡ, ಬೇಡ ತಮ್ಮ ಉಪಕಾರವಾಯಿತು; ಹೋಗಿಬರುತ್ತೇನೆ. '

' ತಮ್ಮ ಹೆಸರನ್ನು ಕೇಳಬಹುದೇ ? '

ಹೊರಬಾಗಿಲದ ನೆರಳಲ್ಲಿ ಅವಳು ನಿಂತಿದ್ದರಿಂದ ಅವನಿಗೆ ಅವಳ ಮುಖವು ಕಾಣುತ್ತಿರಲಿಲ್ಲ. ಆದರೆ ಅವಳಿಗೆ ಮಾತ್ರ ಅವನದು ಕಾಣುತ್ತಿತ್ತು. ಸ್ವಲ್ಪ ಧ್ವನಿ ಬದಲು ಮಾಡಿ ಅವಳು ಹೇಳಿದಳು ' ಮಿಸೆಸ್ ಮೂರ್ '

' ಮಿಸೆಸ್ . . ! ' ಅಝೀಜನು ಮುಂದೆ ಬಂದು ನೋಡಿದ. ಮುದುಕಿ! ಆ ಮಸೀದೆಯಕಿಂತಲೂ ದೊಡ್ಡದಾಗಿ ಕಟ್ಟಿದ ಅವನ ಮನೋಮಂದಿರವು ನೆಲಸಮವಾಯಿತು. ತನಗೀಗ ಆನಂದವಾಯಿತೊ ದುಃಖವಾಯಿತೊ ಅವನಿಗೇ ಗೊತ್ತಾಗಲಿಲ್ಲ. ನೋಡಿದರೆ ಹಮೀದುಲ್ಲಾ ಬೇಗಮ್ಮಳಕ್ಕಿಂತ ಹಿರಿಯಳು—ಕೆಂಪು ಮುಖ, ಬಿಳಿ ಕೂದಲು. ಆದರೆ ಅವಳ ಧ್ವನಿ ಅವನನ್ನು ಮೋಸಗೊಳಿಸಿತ್ತು.

' ನಾನು ನಿಮ್ಮನ್ನು ಗಾಬರಿಗೊಳಿಸಿದೆನೆಂದು ತೋರುತ್ತದೆ. 'ದೇವರು ಇಲ್ಲಿ ಇದ್ದಾನೆ ' ಎಂದು ನೀವು ಹೇಳಿದ ಮುತ್ತಿನಂಥ ಮಾತನ್ನು ನಾನು ನಮ್ಮ ಸಮಾಜಕ್ಕೆ—ನಮ್ಮ ಗೆಳೆಯರಿಗೆ—ಹೇಳುತ್ತೇನೆ. ನೀವು ಹೇಳಿದ ಮಾತೆಂದೂ ನಿಮ್ಮ ಬಗ್ಗೆಯೂ ಹೇಳುತ್ತೇನೆ. ಆ ಮಾತು ನಿಜವಾಗಿಯೂ ಚೆನ್ನಾದದ್ದು! ನೀವು ಹಿಂದುಸ್ಥಾನಕ್ಕೆ ಹೊಸದಾಗಿ ಬಂದಂತೆ ಕಾಣುತ್ತದೆ ?'

' ಹೌದು. ಅದು ನಿಮಗೆ ಹೇಗೆ ತಿಳಿಯಿತು ? '

' ನೀವು ನನ್ನೊಡನೆ ಮಾತನಾಡಿದ ಪದ್ಧತಿಯ ಮೇಲಿಂದ. ಅದಿರಲಿ, ನಾನು ನಿಮಗಾಗಿ ಗಾಡಿಯನ್ನು ಕರೆಯಲೆ ? '

' ನಾನು ಕ್ಲಬ್ಬಿನಿಂದ ಬಂದಿದ್ದೇನೆ. ನಾನು ಲಂಡನ್ನಿನಲ್ಲಿ ನೋಡಿದ ಒಂದು ನಾಟಕವನ್ನು ಅವರಾಡುತ್ತಿದ್ದರು. ಅಲ್ಲಿ ಬಹಳ ಸೆಕೆ '

' ನಾಟಕದ ಹೆಸರೇನು ? '

' ಕಝಿನ್ ಕೇಟ್ '

' ಮಿಸೆಸ್ ಮೂರಳು ಇಂಥ ರಾತ್ರಿಯಲ್ಲಿ ಒಬ್ಬರೇ ತಿರುಗಾಡಬಾರ

ದೆಂದು ನನಗನಿಸುತ್ತದೆ. ಕೆಟ್ಟ ಜನರಿರುತ್ತಾರೆ; ಮಾರವಾರ ಗುಡ್ಡಗಳೊಳಗಿಂದ ಚಿರ್ತೆಗಳೂ ಒಮ್ಮೊಮ್ಮೆ ಎದುರು ಒರುವುದುಂಟು; ಹಾವುಗಳೂ ಇವೆ.'

ಹಾವಿನ ವಿಷಯ ಅವಳ ತಲೆಯೊಳಗಿಂದ ಜಾರಿಹೋಗಿತ್ತು. ಅಝೀಜನು ಅದರ ನೆನಪು ಮಾಡಿದೊಡನೆ ಅವಳು ಚೀರಿದಳು.

'ಇಲ್ಲಿ ಒಂದು ಜಾತಿಯ ಕಿರು ಚಿಕ್ಕನೆಯ ರೆಕ್ಕೆಹುಳು ಇರುತ್ತದೆ. ಅದನ್ನು ನೀವು ಮುಟ್ಟಿದರೆ ಕಚ್ಚುತ್ತದೆ. ಕಚ್ಚಿದ ಮೇಲೆ ನಿಮ್ಮದು ಮುಗಿಯಿತೆಂದೇ ತಿಳಿಯಬೇಕು.'

'ಆದರೆ ನೀವೆಲ್ಲ ಹಾಗೇ ಅಡ್ಡಾಡುತ್ತಿದ್ದೀರಲ್ಲ ?'

'ಓ! ನಮಗೆಲ್ಲ ಅದರ ಅಭ್ಯಾಸವಿದೆ.'

'ಹಾವುಗಳ ಅಭ್ಯಾಸವೇ ?'

ಅವರಿಬ್ಬರೂ ನಕ್ಕರು. 'ನಾನು ಡಾಕ್ಟರನಿದ್ದುದರಿಂದ ಹಾವುಗಳಿಗೆ ನನ್ನನ್ನು ಕಚ್ಚಲು ಧೈರ್ಯವಿಲ್ಲ.' ಎಂದು ಅಝೀಜನು ಹೇಳಿದನು. ಅಲ್ಲಿಯೆ ಬಾಗಿಲ ಹತ್ತಿರ ಒಬ್ಬರ ಹತ್ತಿರ ಒಬ್ಬರು ಕುಳಿತುಕೊಂಡರು. ಕಾಲಲ್ಲಿ ಜೋಡುಗಳನ್ನು ಹಾಕಿಕೊಂಡರು. 'ನಾನೊಂದು ಮಾತು ನಿಮ್ಮನ್ನು ಕೇಳಬೇಕೆನ್ನುತ್ತೇನೆ. ನೀವು ಈ ಹೊತ್ತಲ್ಲದ ಹೊತ್ತಿನಲ್ಲಿ—ಚಳಿಗಾಲ ಮುಗಿಯಬಂದಿರುವಾಗ— ಹಿಂದುಸ್ತಾನಕ್ಕೆ ಬಂದುದೇತಕ್ಕೆ ?' ಎಂದು ಅಝೀಜನೇ ಸುರುವು ಮಾಡಿದನು.

'ನಾನೇನೊ ಈ ಮೊದಲೇ ಹೊರಟು ಬರಬೇಕೆಂದು ಮಾಡಿದ್ದೆ. ಆದರೆ ಏನೋ ಅನಿವಾರ್ಯ ಕಾರಣಗಳ ಮೂಲಕ ತಡವಾಯಿತು.'

'ಈ ಜಾಗ ಬೇಗನೆ ನಿಮಗೆ ಅನಾರೋಗ್ಯದ ತವರುಮನೆಯಾಗಿ ಪರಿಣಮಿಸುವುದು. ನೀವು ಈ ಚಂದ್ರಪುರಕ್ಕೆ ಬಂದದ್ದಾದರೂ ಏತಕ್ಕೆ ?'

'ನನ್ನ ಮಗನನ್ನು ಭೆಟ್ಟಿಯಾಗುವುದಕ್ಕಾಗಿ. ಅವನಿಲ್ಲಿ ಸಿಟಿ ಮ್ಯಾಜಿಸ್ಟ್ರೇಟನಿದ್ದಾನೆ.'

'ಓ! ನನ್ನನ್ನು ಕ್ಷಮಿಸಿ, ಅವರಿರುವುದು ಶಕ್ಯವಿಲ್ಲ. ನಮ್ಮ ಸಿಟಿ ಮ್ಯಾಜಿಸ್ಟ್ರೇಟರ ಹೆಸರು ಹೆಸ್ಲೋಪ ಎಂದಿದೆ. ಅವರ ಗುರುತು ನನಗೆ ಚೆನ್ನಾಗಿದೆ.'

' ಇದ್ದರೇನಾಯಿತು ? ಅವನೇನು ನನ್ನ ಮಗ ಸುಳ್ಳಲ್ಲ.' ಎಂದು ಮುಗುಳುನಗೆ ನಕ್ಕಳು.

' ಆದರೆ ನೀವು ಮಿಸೆಸ್ ಮೂರ್,ಅವರು ಹೆಸ್ಲೋಪ; ಇದುಹೇಗೆ?'

' ನಾನು ಎರಡು ಸಲ ಮದುವೆಯಾಗಿದ್ದೇನೆ.

' ಹಾಂ, ಅಂದರೆ ಸರಿಯಾಯಿತು. ಮೊದಲಿನ ಗಂಡ ತೀರಿಕೊಂಡಿದ್ದಾರೆ?'

' ಹೌದು. ಎರಡನೆಯವರೂ ತೀರಿದ್ದಾರೆ.'

' ಅಂದಮೇಲೆ ನಾವಿಬ್ಬರೂ ಒಂದೇ ಹಡಗದಲ್ಲಿ ಹೊರಟಂತಾಯಿತು.' ಎಂದು ಅರ್ಥವಿಟ್ಟು ಮಾತನಾಡಿದನು. ' ಈಗ ಸಿಟಿ ಮ್ಯಾಜಿಸ್ಟ್ರೇಟರು ಒಬ್ಬರೇ ನಿಮ್ಮ ಮನೆತನಕ್ಕೆ ಸರ್ವಸ್ವ ಎನ್ನಿರಿ?'

' ಅಲ್ಲ, ಇನ್ನೂ ಇಬ್ಬರು ಚಿಕ್ಕವರು ಇಂಗ್ಲಂಡದಲ್ಲಿದ್ದಾರೆ, ರಾಲ್ಫ ಮತ್ತು ಸ್ಟೇಲಾ ಎಂದು.'

' ಹಾಗಾದರೆ ಇಲ್ಲಿರುವ ಸದ್ಗೃಹಸ್ಥರು ಅವರ ಮಲಅಣ್ಣಂದಿರೇನು?'

' ಹೌದು, ಬರಾಬರಿ.'

' ಮಿಸೆಸ್ ಮೂರ್! ಇದೆಲ್ಲ ಅತ್ಯಂತ ವಿಚಿತ್ರವದೆ. ಯಾಕಂದರೆ ನಿಮ್ಮಂತೆಯೆ ನನಗೂ ಎರಡು ಗಂಡುಹುಡುಗರೂ ಒಂದು ಹೆಣ್ಣು ಹುಡುಗಿಯೂ ಇವೆ. ಅಂದಮೇಲೆ ಇಬ್ಬರೂ ಹೊರಟದ್ದು ಒಂದೇ ಡೋಣಿಯಲ್ಲವೇ?'

' ಅವರ ಹೆಸರೇನು? ರೋನಿ, ರಾಲ್ಫ ಮತ್ತು ಸ್ಟೇಲಾ ಎಂದೇ ಇಲ್ಲವಷ್ಟೆ?'

ಈ ಮಾತಿನಿಂದ ಅವನು ಹಿಗ್ಗಿದನು. ' ಛೇ, ಹಾಗೇನೂ ಇಲ್ಲ. ಅವು ನಿಮಗೆ ತಮಾಷೆಯಾಗಿ ಕೇಳಬಹುದು. ಅವು ತೀರ ಬೇರೆಯಾಗಿವೆ. ಮೊದಲಿನವನ ಹೆಸರು ಅಹಮ್ಮದ; ಎರಡನೆಯವನದು ಕರೀಮ; ಮೂರನೆಯವಳು— ಇವಳೇ ಎಲ್ಲಕ್ಕೂ ಹಿರಿಯಳು—ಜಮೀಲಾ. ಮೂರು ಮಕ್ಕಳು ಸಾಕು. ಇದಕ್ಕೆ ನಿಮ್ಮದೂ ಒಪ್ಪಿಗೆ?'

' ಒಪ್ಪಿಗೆ.'

ಅವರಿಬ್ಬರೂ ಕೆಲಹೊತ್ತು ಮೌನವಾಗಿ ಕುಳಿತುಕೊಂಡು ತಮ್ಮ ತಮ್ಮ ಮನೆತನಗಳನ್ನು ನೆನೆಯುಹತ್ತಿದರು. ಮೂರಳು ನಿಟ್ಟುಸಿರು ಬಿಟ್ಟು ಹೊರಡಬೇಕೆಂದು ಎದ್ದಳು.

'ತಾವು ಇಲ್ಲಿಯ ಮಿಂಟೊ ಆಸ್ಪತ್ರೆಯನ್ನು ಎಂದಾದರೂ ಒಂದು ದಿನ ನೋಡಬಹುದಲ್ಲವೆ? ಚಂದ್ರಪುರದಲ್ಲಿ ಅದನ್ನು ಬಿಟ್ಟು, ತಮಗೆ ತೋರಿಸಲು ಮತ್ತೇನೂ ಇಲ್ಲ.'

'ಕ್ಷಮಿಸಬೇಕು, ಅದನ್ನು ನಾನಾಗಲೆ ನೋಡಿದ್ದೇನೆ. ಇಲ್ಲದಿದ್ದರೆ ನಿಮ್ಮೊಡನೆ ಬಂದು ಅದನ್ನು ನೋಡಬೇಕೆಂದು ನನಗೆ ಬಹಳ ಆಶೆಯಿತ್ತು.'

'ಓಹೊ! ಸಿವ್ಹಿಲ್ ಸರ್ಜನರು ನಿಮ್ಮನ್ನು ಅಲ್ಲಿಗೆ ಕರೆದುಕೊಂಡು ಹೋಗಿದ್ದರೆಂದು ಕಾಣುತ್ತದೆ.'

'ಹೌದು, ಮಿಸೆಸ್ ಕ್ಯಾಲೆಂಡರರೂ ಇದ್ದರು.'

ಅವನ ದನಿಯು ನಡುಗಿತು. 'ಆಹಾ! ಬಹಳ ಸೊಗಸಾದ ಹೆಣ್ಣು-ಮಗಳು!'

'ಇರಬಹುದು; ಆದರೆ ಅವಳನ್ನರಿತವರೇಲೆ.'

'ಏನು! ಏನು! ಅವಳು ನಿಮ್ಮ ಮನಸಿಗೆ ಬರಲಿಲ್ಲವೆ?'

'ಅವಳ ಆಶೆಯೇನೊ ಅಂತಃಕರಣಿಯಾಗಬೇಕೆಂದಿದೆ ಎನ್ನಬಹುದು. ಆದರೆ ಅವಳಲ್ಲಿ ಸೊಗಸೇನೂ ಇಲ್ಲ.'

'ಆ ಹೆಣ್ಣುಮಗಳು ನನ್ನನ್ನು ಕೇಳದೆ ಹೇಳದೆ ನನ್ನ ಟಾಂಗಾದಲ್ಲಿ ಕುಳಿತು ಹೋದಳು-ಇದಕ್ಕೆ ನೀವೇನೆನ್ನುತ್ತೀರಿ? ಇದೇನು ರೀತಿಯೋ? ನಡತೆಯೋ?—ಮೇಜರ ಕ್ಯಾಲೆಂಡರನೂ ನಾನು ನನ್ನ ನಾಲ್ಕು ಗೆಳೆಯರೊಡನೆ ಊಟ ಮಾಡುತ್ತಿರುವಾಗಲೆ ಬರಬೇಕೆಂದು ಪತ್ರ ಕಳಿಸಿ ತೊಂದರೆಕೊಡು-ತ್ತಾನೆ—ಏನೊ ಆ ಸಾಖ್ಯವನ್ನೆಲ್ಲ ಬಿಟ್ಟು ನಾನು ಅವನಲ್ಲಿಗೆ ಹೊರಟು ಹೋದರೆ ಮನೆಯಲ್ಲಿಯೆ ಇರಬಾರದೇ?—ಕೊನೆಗೆ ಒಂದು ಪತ್ರ ಬರೆದಿಟ್ಟು ಹೋಗಬಾರದೇ? ನೀವೇ ಹೇಳಿರಿ ಇದು ಏನು ರೀತಿ? ಅವರಿಗೆ ಇದೇನೂ ಅನಿಸುವುದಿಲ್ಲ—ಯಾಕಂದರೆ ನಾನೇನೂ ಮಾಡಲಾರೆ ಎನ್ನುವುದು ಅವನಿಗೆ ಗೊತ್ತು-ನಾನು ಅವನ ಕೈಕೆಳಗಿನವನಲ್ಲವೆ! ನಮ್ಮ ಹೊತ್ತಿಗೆ ಬೆಲೆ ಇಲ್ಲ-ನಮಗೆಲ್ಲ ಹಿಂದೀಯರಿಗೆ ಹೊರಗಿನ ಅಂಗಳವೇ ಗತಿ—ಇದೆಲ್ಲದರ ಮೇಲೂ

ಆ ಮಹಾರಾಯತಿ ಒಂದು ನನ್ನ ಟಾಂಗಾ ತೆಗೆದುಕೊಂಡು ಹೋಗಿ ಅವಮಾನದ ಮಡಲಲ್ಲಿ ನೂಕಿದ್ದಾಳೆ—' ಎಂದು ಅಯ್ಝೀಜನು ತನ್ನ ಹೊಟ್ಟೆಯೊಳಗಿನದೆಲ್ಲವನ್ನೂ ತೋಡಿಕೊಂಡನು.

ಅವಳು ಲಕ್ಷ್ಯಕೊಟ್ಟು ಕೇಳಿದಳು

ಅಯ್ಝೀಜನು ತನಗಾದ ಅನ್ಯಾಯಗಳಿಂದ ಸ್ವಲ್ಪಮಟ್ಟಿಗೆ ಕೆರಳಿದ್ದೇನೋ ನಿಜ. ಆದರೆ ಅದಕ್ಕೂ ಹೆಚ್ಚಾಗಿ ತಾನು ತೋಡಿಕೊಂಡದ್ದನ್ನು ಸಹಾನುಭೂತಿಯಿಂದ ಕೇಳುವ ಸಹೃದಯರೊಬ್ಬರು ತನಗೆ ಇದ್ದಾರಲ್ಲ ಎಂಬ ಭಾವನೆಯಿಂದ ಮೈಮರೆತನು. ಈ ಭಾವನೆಯೆ ಅಂದದ್ದನ್ನು ಅನ್ನಲು ಹಚ್ಚಿತು; ಇದ್ದದ್ದಕ್ಕೆ ರಾವುಗನ್ನಡಿ ಹಿಡಿಸಿತು; ಕಂಡದ್ದನ್ನು ಅಲ್ಲಗಳೆಸಿತು. ತನ್ನ ದೇಶದ ಹೆಣ್ಣುಮಗಳು ಹೀಗೆ ಮಾಡಿದ್ದು ತಪ್ಪೆಂದು ನಿರ್ದಾಕ್ಷಿಣ್ಯವಾಗಿ ಅವಳು ಹೇಳಿ ತನ್ನ ಸಹಾನುಭೂತಿಯನ್ನು ತೋರಿದಳು. ಆದರೆ ಇದಕ್ಕೂ ಮೊದಲೇ ಅಯ್ಝೀಜನಿಗೆ ಇದು ತಿಳಿದಿತ್ತು. ಸೌಂದರ್ಯವು ಕೂಡ ಪ್ರಜ್ವಲಿಸದೆ ಇದ್ದ ಜ್ವಾಲೆಯನ್ನು ಅವಳ ಈ ಸಹಾನುಭೂವಿತಿಯು ಅವನ ಹೃದಯದಲ್ಲಿ ಪ್ರಜ್ವಲಿಸಿತು. ಅವನ ಶಬ್ದಗಳು ಅದರ ಬೆಳಕು ಕಾಣದಿದ್ದರೂ ಅವನ ಹೃದಯ ಕಂಡಿತು. ಆ ಹೃದಯದ ಬೆಳಕಿನಿಂದ ಈ ಮಾತು ಹೊರಹೊಮ್ಮಿತು.

' ನೀವು ನನ್ನನ್ನು ಹೊಕ್ಕು ತಿಳಿದಿದ್ದೀರಿ. ಎರಡನೆಯವರಿಗೆ ನಮ್ಮ ಬಗ್ಗೆ ಅನಿಸುವುದೂ ನಿಮಗೆ ಗೊತ್ತಿದೆ. ಓ! ಎಲ್ಲರೂ ನಿಮ್ಮ ಹಾಗೆಯೆ ಇದ್ದಿದ್ದರೆ....!'

' ನಾನು ಜನರನ್ನು ಹೊಕ್ಕು ತಿಳಿಯಬಲ್ಲೆನೆಂದು ನನಗನಿಸುವುದಿಲ್ಲ. ಇವರು ಬೇಕು, ಇವರು ಬೇಡ ಎಂದಿಷ್ಟೇ ನನಗೆ ತಿಳಿಯುತ್ತದೆ.'

' ಅಂದರೆ ನೀವೂ ಪೌರ್ವಾತ್ಯರಂತೆಯೆ ಇದ್ದಂತಾಯಿತಲ್ಲ! '

ಅವಳು, ಅಯ್ಝೀಜನು ಕ್ಲಬ್ಬಿನ ವರೆಗೆ ಜೊತೆಗೆ ಬರಬಹುದೆಂದು ಒಪ್ಪಿಕೊಂಡಳು. ಇಬ್ಬರೂ ಹೊರಟರು. ಕ್ಲಬ್ಬಿನ ಬಾಗಿಲ ಹತ್ತಿರ ಅಯ್ಝೀಜನನ್ನು ಬಿಡುವಾಗ ' ನಾನೂ ಈ ಕ್ಲಬ್ಬಿನ ಸದಸ್ಯಳಿದ್ದಿದ್ದರೆ ನಿಮ್ಮನ್ನು ಒಳಗೆ ಕರೆದುಕೊಂಡಾದರೂ ಹೋಗಲಿಕ್ಕೆ ಬರುತ್ತಿತ್ತು. ಉಪಾಯವಿಲ್ಲ ' ಎಂದು ತನ್ನ ವಿಷಾದ ವ್ಯಕ್ತಮಾಡಿದಳು.

'ಚಂದ್ರಪುರದ ಕ್ಲಬ್ಬಿನಲ್ಲಿ ಒಳಗೆ ಅತಿಥಿಗಳಾಗಿ ಬರಲು ಹಿಂದೀಯರಿಗೆ ಅಪ್ಪಣೆಯಿಲ್ಲ.' ಎಂದಿಷ್ಟೇ ಹೇಳಿದನು. ತನಗಾದ ಅನ್ಯಾಯಗಳ ಸುರುಳಿಯನ್ನು ಮತ್ತೆ ಬಿಚ್ಚದೆ ತಿರುಗಿ ಹೊರಟನು. ಆ ರಮ್ಯ ಬೆಳುದಿಂಗಳನ್ನೂ ಅದರಲ್ಲಿ ತೇಲುತ್ತಿರುವಂತೆ ಕಾಣುತ್ತಿದ್ದ ಮಸೀದೆಯನ್ನೂ ನೋಡಿ ಅವನಿಗೆ 'ಇದು ನನ್ನ ದೇಶ' ಎಂಬ ಆವೇಶ ತುಂಬಿತು. ಕೈಲಾಗದ ಕೆಲ ಹಿಂದುಗಳು ಈ ದೇಶದಲ್ಲಿ ತಮಗಿಂತ ಮೊದಲು ನೆಲಸಿದ್ದರೇನಾಯಿತು? ಕೆಲ ನಡತೆಹೀನ ಆಂಗ್ಲರು ತಮ್ಮ ಈಚೆಗೆ ಬಂದರೇನಾಯಿತು!!

—

## ಪ್ರಕರಣ ೩

ಮಿಸೆಸ್ ಮೂರಳು ತಿರುಗಿ ಕ್ಲಬ್ಬಿನಲ್ಲಿ ಹೋದಾಗ 'ಕಝಿನ್ ಕೇಟ' ನಾಟಕದ ಮೂರನೆಯ ಅಂಕು ಬಹುಮಟ್ಟಿಗೆ ಮುಗಿಯುತ್ತ ಬಂದಿತ್ತು. ಸೇವಕರು ತಮ್ಮ ಮೇಮ್‌ಸಾಹೇಬರು ನಾಟಕ ಮಾಡುವುದನ್ನು ನೋಡಬಾರದೆಂದು ಕಿಟಿಕಿಗಳನ್ನು ಗಟ್ಟಿಯಾಗಿ ಮುಚ್ಚಿದ್ದರು. ಆದರಿಂದ ಒಳಗೆ ಗಮ್ ಕುಚ್ಚುತ್ತಿತ್ತು. ಗಾಯ ಹೊಂದಿದ ಪಕ್ಷಿಯಂತೆ ಒಂದು 'ಇಲೆಕ್ಟ್ರಿಕ್ ಫ್ಯಾನು' ತಿರುಗುತ್ತಿತ್ತು. ಇನ್ನೊಂದು ಫ್ಯಾನು ಕೆಟ್ಟಿತ್ತು. ಪ್ರೇಕ್ಷಕರ ಗುಂಪಿನಲ್ಲಿಯೇ ತಿರುಗಿ ಹೋಗಿ ಕುಳಿತುಕೊಳ್ಳಲು ಮನಸ್ಸಿಲ್ಲದೆ ಮೂರಳು 'ಬಿಲಿಯರ್ಡ' ಆಟದ ಕೋಣೆಯನ್ನು ಹೊಕ್ಕಳು. ಅಲ್ಲಿ 'ನನಗೆ ನಿಜವಾದ ಹಿಂದುಸ್ಥಾನವನ್ನು ನೋಡಬೇಕಾಗಿದೆ.' ಎಂಬ ವಾಕ್ಯವು ಅವಳನ್ನು ಸ್ವಾಗತಿಸಿತು. ಕೂಡಲೆ ಅವಳಿಗೆ ತನ್ನ ಜೀವನದ ಸಾರ್ಥಕತೆಯ ನೆನವು ನುಗ್ಗಿ ಬಂತು. ಸ್ವಾಗತಿಸಿದವಳು ಅಡೀಲಾ ಕ್ವೆಸ್ಟೆಡ್. ಒಳ್ಳೇ ವಿಕ್ಷಿಪ್ತ ಹುಡುಗಿಯಾದರೂ ಬಹಳ ಚುರುಕು. ಇವಳನ್ನು ಇಂಗ್ಲೆಂಡದಿಂದ ಕರೆತರಲು ರೋನಿಯು ಮೂರಳಿಗೆ ಹೇಳಿದ್ದ. ರೋನಿ ಎಂದರೆ ಮೂರಳ ಮಗ. ಇವನೂ ಚುರುಕು ಹುಡುಗ. ಕುಮಾರಿ ಕ್ವೆಸ್ಟೆಡ್‌ಳಿಗೆ ತಕ್ಕ ವರ. ಇವರಿಬ್ಬರೂ ಮದುವೆಯಾಗಿಯೆ ಆಗುವರೆಂದು ನಿಶ್ಚಯವಾಗಿ ಹೇಳಲಿಕ್ಕೆ ಬಾರದಿದ್ದರೂ ಆಗಬಹುದೆಂದು ಆಶೆಯೆನೂ ಕಡಿಮೆಯಾಗುವದಿಲ್ಲ. ಇವರೆಲ್ಲರಲ್ಲಿ ಮೂರಳೇ ಹಿರಿಯಳು.

" ನನಗೂ ಅದನ್ನೇ ನೋಡಬೇಕಾಗಿದೆ. ನಾವು ನೋಡಬಹುದೆಂಬ ನಂಬಿಗೆಯೂ ನನ್ನಲ್ಲಿದೆ. ಟರ್ಟನ್ನರು ಮುಂದಿನ ಮಂಗಳವಾರ ಏನೋ ಯಾವುದಕ್ಕೊ ವ್ಯವಸ್ಥೆ ಮಾಡುವರಂತೆ."

'ಆನೆಯ ಮೇಲೆ ಕುಳಿತುಕೊಂಡು ಹೋಗುವುದರಲ್ಲಿಯೆ ಅದರ ಮುಕ್ತಾಯ. ಯಾವಾಗಲೂ ಹಾಗೆಯೆ ಮತ್ತೆ. ಈ ಹೊತ್ತು ಸಂಜೆ ಯದು ನೋಡು! ಈ ಕಝಿನಾ ಕೇಟ! ಕಲ್ಪನೆ ಮಾಡು: ಕಝಿನ್ ಕೇಟ! ಅದಿರಲಿ, ನೀನೆಲ್ಲಿ ಈಗ ಹೊರಗೆ ಹೋಗಿದ್ದಿ? ಗಂಗೆಯಲ್ಲಿ ಕನ್ನಡಿಸಿದ ಚಂದ್ರನನ್ನು ಕಾಣುವುದು ಸಾಧ್ಯವಾಯಿತೇ?'

ಇಬ್ಬರೂ ಹಿಂದಿನ ಒಂದು ರಾತ್ರಿ ಅಕಸ್ಮಾತ್ತಾಗಿ ಒಂದು ದೂರದ ಕಾಲುವೆಯಲ್ಲಿ ಚಂದ್ರನ ಬಿಂಬವನ್ನು ಕಂಡಿದ್ದರು. ಅದು ಚಂದ್ರನಕಿಂತಲೂ ದೊಡ್ಡದಾಗಿ, ಮನೋಹರವಾಗಿ ಕಂಡಿತ್ತು. ನೋಡಿ ಇಬ್ಬರೂ ಸಂತೋಷ ಪಟ್ಟಿದ್ದರು.

'ನಾನು ಮಸೀದೆಗೆ ಹೋಗಿದ್ದೆ. ಆದರೆ ಚಂದ್ರನನ್ನು ಕಾಣಲಿಲ್ಲ.'

ಚಂದ್ರನ 'ಕೋನವೇನಾದರೂ ಬದಲಾಗಿರಬಹುದು; ಯಾಕೆಂದರೆ ತಡ ವಾಗಿ ಬೇರೆ ಬರುತ್ತಾನೆ.'

'ಹೌದು; ಬಹಳ ತಡ; ಬಹಳ ತಡ' ಎಂದು ಮೂರಳು ನಡೆದು ಬಂದು ದಣಿದಿದ್ದರಿಂದ ಆಕಳಿಸಿದಳು. 'ನಾವು ಇಲ್ಲಿಂದ ಆ ಚಂದ್ರನ ಆ ವೈಯ್ಯನ್ನು ಕಾಣಲಾರೆವು—ಕಾಣಿಸುವುದಿಲ್ಲ—ಇಲ್ಲ.'

'ಇರಲಿ ಬನ್ನಿ; ಹಿಂದುಸ್ತಾನವೇನು ಅಷ್ಟೆಲ್ಲ ಕೆಟ್ಟದಿಲ್ಲ. ಇನ್ನೊಂದು ಭಾಗವನ್ನು ಬೇಕಾದರೆ ನೋಡೋಣ. ಆದರೆ ನಾವೆಲ್ಲ ಆ ಹಳೆಯ ಚಂದ್ರ ನಿಗೇ ಹತ್ತಿಕೊಂಡು ಬೀಳುತ್ತೇವೆ.' ಎಂದು ಒಂದು ಮಧುರವಾಣಿ ನುಡಿ ಯಿತು. ಇಬ್ಬರಲ್ಲಿ ಒಬ್ಬರಿಗೂ ಮಾತನಾಡಿದವನ ಗುರುತಿರಲಿಲ್ಲ. ಅಲ್ಲಿಂದ ಅವನನ್ನು ಮುಂದೆ ಅವರೆಂದಿಗೂ ನೋಡಲೂ ಇಲ್ಲ. ಈ ಸಖ್ಯದ ಮಾತು ಗಳನ್ನಾಡಿ ಆ ವ್ಯಕ್ತಿಯು ಕೆಂಪು ಇಟ್ಟಂಗಿ ಕಂಬಗಳ ಸಾಲಿನಲ್ಲಿ ಹಾಯ್ದು ಕತ್ತಲೆಯಲ್ಲಿ ಕಾಣದಾಯಿತು.

'ನಾವು ಈ ಜಗತ್ತಿನ ಇನ್ನೊಂದು ಮಗ್ಗುಲನ್ನಾದರೂ ಎಲ್ಲಿ ನೋಡಿ ದ್ದೇವೆ? ಅದೇ ನಮ್ಮ ತಕರಾರು,' ಎಂದು ಅಡೀಲಾ ಮಾತನಾಡಿದಳು.

ಮೂರಳೂ ಅದಕ್ಕೆ ಸಮ್ಮತಿಸಿದಳು. ಅವಳೂ ತಮ್ಮ ಈ ಹೊಸ ಬಾಳು ವೆಯ ನಿಸ್ಸಾರವನ್ನು ಕಂಡು ನಿರಾಶೆಗೊಂಡಿದ್ದಳು. ಜೂಮಧ್ಯಸಮುದ್ರದ ಮೇಲಿಂದ, ಇಜಿಪ್ತದ ಉಸುಬಿನ ಪ್ರದೇಶದೊಳಗಿಂದ ಹಾಯ್ದು ಮುಂಬೈ ಬಂದರದ ವರೆಗೆ ಮಾಡಿದ ತಮ್ಮ ಅತ್ಯಂತ ರಮ್ಯ ಪ್ರವಾಸವನ್ನು, ಕೊಸೆಗೆ ಮಾಂಸ ಬೇಯಿಸುವುದಕ್ಕಾಗಿ ಕೆಂಡದ ಮೇಲೆ ಇರುವ ಅಡ್ಡಣಿಗೆಯಂತಿ ರುವ ಇಲ್ಲಿಯ ಬಂಗ್ಲೆಗಳನ್ನು ನೋಡಿ ಮುಗಿಸಬೇಕಾಯಿತು. ಕುಮಾರಿ ಕ್ವೆಸ್ಟೆಡ್‌ಳಷ್ಟು ಇವಳೇನು ಜೀವನದಲ್ಲಿಯ ನಿರಾಶೆಗಳಿಂದ ಮನಸಿಗೆ ಹಚ್ಚಿ ಕೊಂಡಿದ್ದಿಲ್ಲ ಇದಕ್ಕೆ ಕಾರಣ, ಅವಳ ವಯಸ್ಸು. ಜೀವನವು ಬೇಡಿದ್ದನ್ನು ಬೇಡಿದಾಗ ಕೊಡುವುದಿಲ್ಲವೆಂಬುದನ್ನು ಅವಳು ತನ್ನ ನಲವತ್ತು ವರ್ಷ ಜೀವನದ ಅನುಭವದಿಂದ ಮನಗಂಡಿದ್ದಳು. ಸಾಹಸ ಮಾಡುವ ನಿಮಿಷ ಗಳು ಜೀವನದಲ್ಲಿ ಬರುತ್ತವೆ. ಆದರೆ ನಿಯತವಾಗಿ ಬರುವುದಿಲ್ಲ. ಮುಂದಿನ ಮಂಗಳವಾರ ಮನಸ್ಸನ್ನು ಹಿಡಿಯುವ ಚಮತ್ಕಾರವನ್ನೇನಾದರೂ ಏರ್ಪಡಿಸುವರೆಂಬ ಆಶೆಯಿದೆಯೆಂದು ಅವಳು ಮತ್ತೆ ಮತ್ತೆ ಹೇಳಿದಳು.

'ಕುಡಿಯಲಿಕ್ಕೇನಾದರೂ ಪೇಯ ತೆಗೆದುಕೊಳ್ಳಬೇಕು ಇಬ್ಬರೂ. ಒಂದು ಬೇಕಾದರೆ ಒಂದು, ಎರಡು ಬೇಕಾದರೆ ಎರಡು, ತೆಗೆದುಕೊಳ್ಳ ಬಹುದು.' ಎಂದು ಮತ್ತೊಂದು ಮಧುರವಾಣಿಯು ಕೇಳಿಸಿತು. ಈ ಸಲ ಮಾತನಾಡಿದವರು ಯಾರೆಂಬುದು ಅವರಿಗೆ ಗೊತ್ತಾಯಿತು—ಮಧ್ಯಾಹ್ನದ ಊಟಕ್ಕೆ ತಮಗೆ ಜೋಡಾಗಿದ್ದ ಕಲೆಕ್ಟರ ಟರ್ಟನ. ಅವನಿಗೂ ಇವರಂ ತೆಯೆ 'ಕಝಿನ್ ಕೇಟ' ನಾಟಕದ ವಾತಾವರಣವು ಕುದಿಸಿತ್ತು. ಮೇಜರ ಕ್ಯಾಲೆಂರಡನ ಬದಲಾಗಿ ರೋನಿಯು ರಂಗಭೂಮಿಯ ವ್ಯವಸ್ಥೆಯನ್ನು ನೋಡಿಕೊಳ್ಳುತ್ತಿದ್ದಾನೆಂದೂ—ಮೇಜರ ಕ್ಯಾಲೆಂಡರನನ್ನು ಯಾವನೋ ಒಬ್ಬ ಆವನ ಕೈಕೆಳಗಿನವನು ಕೆಳಗಿಳಿಸಿದ್ದನೆಂದೂ—ರೋನಿಯು ತನ್ನ ಕೆಲಸ ಚೆನ್ನಾಗಿ ನಡೆಸಿದನೆಂದೂ ಹೇಳಿ ರೋನಿಯ ಬೇರೆ ಗುಣವರ್ಣನೆಗೆ ಪ್ರಾರಂಭಿ ಸಿದನು. ಅದರಲ್ಲಿ, ಅವನು ಆಟದಲ್ಲಿ ನುರಿತವನೆಂದು ಹೇಳಲಿಲ್ಲ—ಮಾತು- ಗಾರಿಕೆಯಲ್ಲಿ ನುರಿತವನೆಂದು ಹೇಳಲಿಲ್ಲ—ಕಾಯಿದೆ ಜ್ಞಾನದಲ್ಲಿ ಪಂಡಿತ ನೆಂದು ಹೇಳಲಿಲ್ಲ—ಆದರೆ ನಿಜವಾಗಿಯೂ ದೊಡ್ಡ....ಆದರೆ ರೋನಿಯು ಒಳ್ಳೆ ಪೋಕ್ತ ಮನುಷ್ಯ ಎಂದಿಷ್ಟೆ ಹೇಳಿದ.

ಯಾವ ತಾಯಿಯೂ ತನ್ನ ಮಗನಲ್ಲಿ ಈ ಪ್ರೋಕ್ತತನಕ್ಕೆ ಅಷ್ಟೊಂದು ಬೆಲೆ ಕೊಡದೆ ಇರುವಾಗ, ಟರ್ಟನ್ನನ ಈ ವಿಚಿತ್ರ ಮಾತನ್ನು ಕೇಳಿ ಅವಳಿಗೆ ಆಶ್ಚರ್ಯವಾಯಿತು. ಮಿಸ್ ಕ್ವೆಸ್ಟೆಡ್ ಮಾತ್ರ ಪ್ರೋಕ್ತ ಜನರ ಬಗ್ಗೆ ಕೆಟ್ಟ ಹಲೊ ಯಾವುದನ್ನೂ ನಿರ್ಣಯಿಸಿರದ್ದರಿಂದ ಈಗ ಚಿಂತೆಯಲ್ಲಿ ಬಿದ್ದಳು. ಇದನ್ನೇ ಟರ್ಟನ್ನನೊಡನೆ ಚರ್ಚಿಸಬೇಕೆಂದೂ ಅವಳು ಹವಣಿಸಿದಳು. ಆದರೆ ಆವನು ತನ್ನ ಕೈಯ ವಿನೋದವಾದ ಭಂಗಿಯಿಂದ ಅವಳ ಬಾಯಿ ಕಟ್ಟಿ ತಾನು ಹೇಳುತ್ತಿದ್ದುದನ್ನೇ ಮತ್ತೆ ಮುಂದೆ ಸಾಗಿಸಿದನು. 'ಮುಖ್ಯ ಮಾತೆಂದರೆ ಇಷ್ಟು: ಹಸ್ಲೋಪರು ಸಾಹೇಬರು. ನಮಗೆ ಬೇಕಾದದ್ದು ಇಂಥ ಜನ. ಅವರು ನಮ್ಮ ಪೈಕಿ ಜನ.' ಇದನ್ನು ಕೇಳಿ ಬಿಲಿಯರ್ಡ ಟೇಬಲ್ಲ ಮೇಲೆ ಬಾಗಿ ನಿಂತ ಒಬ್ಬ ಗೃಹಸ್ಥರು 'ಕೇಳಿ; ಕೇಳಿ' ಎಂದು ಕೂಗಿದರು. ಇದರಿಂದಂತೂ ಅವನ ವಿಷಯವು ನಿಸ್ಸಂದಿಗ್ಧವಾಗಿ ಪ್ರಸ್ಥಾಪಿತವಾದಂತಾಯಿತು. ಅಲ್ಲಿಂದ ಬೇರೆ ಕೆಲಸಗಳಿದ್ದುದರಿಂದ ಕಲೆಕ್ಟರರು ಹೊರಟುಹೋದರು.

ಇಷ್ಟರಲ್ಲಿ ನಾಟಕವೂ ಮುಗಿಯಿತು. ರಾಷ್ಟ್ರಗೀತೆಯನ್ನೂ ಬಾಜಿಸಿದರು. ಮಾತು-ಕತೆಗಳು ನಿಂತವು. ಬಿಲಿಯರ್ಡ ಆಟವು ಗಪ್ಪಾಯಿತು. ಎಲ್ಲರ ಮುಖಗಳೂ ಬಿಗುವುಗೊಂಡವು. ಬಾಜಿಸಿದ್ದು ವಸಾಹತು ಪಥಕದ ರಾಷ್ಟ್ರಗೀತೆಯಾಗಿತ್ತು. ಅದನ್ನು ಕೇಳಿ ಅಲ್ಲಿಯ ಪ್ರತಿಯೊಬ್ಬನಿಗೂ ತಾನು ಬ್ರಿಟಿಶ್ ನಾಗರಿಕನಿದ್ದು, ಇಲ್ಲಿ ದೇಶಭ್ರಷ್ಟನಾದವನಂತೆ ವಾಸಿಸುತ್ತಿರುವೆನೆಂಬ ಮಾತು ನೆನಪಿಗೆ ಬಂದಿತು. ಮನಸ್ಸು ಉದ್ವೇಗಗೊಂಡಿತು; ಸಿಧ್ಧಾರವು ಸಹಾಯದ ಕೈ ಕೊಟ್ಟಿತು. ಕರುಣ ಸ್ವರವೂ, ಜಹೋವಾನಿಗೆ ಕೇಳಿದ ಒತ್ತಾಯದ ಒರಟು ಬೇಡಿಕೆಗಳೂ ಆ ಹಾಡಿನಲ್ಲಿ ಬೆರೆತುಕೊಂಡು ಇಂಗ್ಲೆಂಡಿನಲ್ಲಿಯ ರಾಷ್ಟ್ರಗೀತೆಗೆ ಅಪರಿಚಿತವಾದ ಒಂದು ಬೇರೆ ರಸವನ್ನೇ ಅದು ಹುಟ್ಟಿಸಿತ್ತು. ಅವರು ಅಲ್ಲಿಯ ರಾಜಸತ್ತೆಯನ್ನಾಗಲಿ, ದೇವಸತ್ತೆಯನ್ನಾಗಲಿ. ಕಾಣದೆ, ಯಾವುದೊ ಇನ್ನೊಂದನ್ನು ಕಂಡು ಅದನ್ನು ಸಂರಕ್ಷಿಸುವುದಕ್ಕಾಗಿ ತಾವು ಪುಷ್ಟರಾಗುತ್ತಿದ್ದೇವೆಂದು ಭಾವಿಸಿದರು. ಆಮೇಲೆ 'ನೀವು ತೆಗೆದುಕೊಳ್ಳಿರಿ, ನೀವು ತೆಗೆದುಕೊಳ್ಳಿರಿ' ಎಂದು ಒಬ್ಬರಿಗೊಬ್ಬರು ಪೇಯಗಳನ್ನು ಹಣಿಸಿದರು.

' ಅಡೀಲಾ, ನೀನೂ ಕುಡಿ. ತಾಯಿ, ನಿಮಗೆ ? '

ಕುಡಿದು ಕುಡಿದು ಸಾಕಾಗಿದ್ದರಿಂದ ಅವರು ಒಲ್ಲೆಂದರು. ತನ್ನ ಮನಸಿನಲ್ಲಿದ್ದುದನ್ನು ಇದ್ದಂತೆ ಹೇಳುವ ಮಿಸ್ ಕ್ವೆಸ್ಟೆಡ್‌ಳು ನಿಜವಾದ ಹಿಂದುಸ್ಥಾನವನ್ನು ನೋಡಬೇಕೆಂಬ ತನ್ನ ಬಯಕೆಯನ್ನು ಮತ್ತೆ ಸಾರಿದಳು.

ರೋನಿಯು ಬಹಳ ಖುಷಿಯಲ್ಲಿದ್ದನು. ಅವಳ ಪ್ರಶ್ನೆಯು ಅವನಿಗೇನೊ ಮೋಜೆನಿಸಿತು. ಅವನು ಇನ್ನೊಬ್ಬ ಹಾಯ್ದು ಹೋಗುವವನನ್ನು ಕರೆದು ' ಫೀಲ್ಡಿಂಗ್, ನಿಜವಾದ ಹಿಂದುಸ್ಥಾನವನ್ನು ನೋಡುವುದೆಂದರೇನು ? ' ಎಂದು ಕೇಳಿದನು.

' ಹಿಂದೀಯರನ್ನು ಕಾಣಲಿಕ್ಕೆ ಪ್ರಯತ್ನಿಸುವುದೆ. ' ಎಂದು ಅವನು ಉತ್ತರ ಕೊಟ್ಟು ಮರೆಯಾದನು.

' ಯಾರು ಅವರು ? '

' ನಮ್ಮ ಶಾಲೆಯ ಮಾಸ್ತರು—ಸರಕಾರೀ ಕಾಲೇಜ. '

' ಆ ಹಿಂದೀಯರನ್ನು ನೋಡುವುದು ತಪ್ಪಿಸಲಿಕ್ಕೆ ಸಾಧ್ಯವಿದ್ದರಲ್ಲವೆ ಆ ಮಾತು ! ' ಎಂದು ಮಿಸೆಸ್ ಲೆಸ್ಲೀಯು ಉಸಿರೆಳೆದಳು.

' ನಾನು ಹಾಗೆ ತಪ್ಪಿಸಿದ್ದೇನೆ. ' ಎಂದು ಮಿಸ್ ಕ್ವೆಸ್ಟೆಡ್‌ಳು ಹೇಳಿದಳು.

' ನಾನು ಹಡಗು ಇಳಿದಂದಿನಿಂದ ನನ್ನ ಆಳನ್ನು ಬಿಟ್ಟು ಒಬ್ಬ ಹಿಂದೀಯನ ಕೂಡೂ ಮಾತನಾಡಿಲ್ಲ.'

' ಓ! ಪುಣ್ಯವಂತಿ ನೀನು. '

' ಆದರೂ ಅವರನ್ನು ನನಗೆ ನೋಡಬೇಕಾಗಿದೆ. '

ಇದನ್ನು ಕೇಳಿ ನಗೆಯಾಡುವ ಅನೇಕ ಸ್ತ್ರೀಯರು ಅವಳ ಸುತ್ತಲೂ ನೆರೆದರು. ಒಬ್ಬಳೆಂದಳು: ' ಹಿಂದೀ ಜನರನ್ನು ನೋಡಬೇಕೇ ? ನಮ್ಮ ಕಿವಿಗೆ ತೀರ ಹೊಸ ಮಾತಿದು ! ' ಇನ್ನೊಬ್ಬಳೆಂದಳು: ' ದೇಶೀ ಜನರನ್ನೇ ? ಏನು ಹುಚ್ಚು ಕಲ್ಪನೆ ನಿಮ್ಮದು ! ' ಮೂರನೆಯವಳು ಸ್ವಲ್ಪ ಗಂಭೀರವಾಗ ಹೇಳಿದಳು: ' ನಾನು ಸ್ವಲ್ಪ ನಿಮಗೆ ತಿಳಿಸಿ ಹೇಳುತ್ತೇನೆ. ದೇಶೀ ಜನರು ಭೆಟ್ಟಿಯಾದ ಮೇಲೂ ಯಾರನ್ನೂ ಗೌರವಿಸುವುದಿಲ್ಲ, ತಿಳಿಯಿತೇ ? '

' ಇದು ಬಹಳ ಸಲ ಭೆಟ್ಟಿಯಾದ ಮೇಲೇ ಆಗಬಹುದು.'

ಆ ಸ್ತ್ರೀಯು ಪೂರ ಎಬಡತನದಿಂದ ಆದರೂ ಸಖ್ಯದ ಸಲುಗೆಯಿಂದ ಮುಂದರಿಸಿದಳು. ' ನಾನು ಹೇಳುವುದರ ಅರ್ಥ ಇಷ್ಟೆ. ನಾನು ನನ್ನ ಮದುವೆಯ ಮೊದಲು ದಾಯಿಯಾಗಿದ್ದೆ. ಆಗ ಎಷ್ಟೋ ಜನರ ಪರಿಚಯದ ಪ್ರಸಂಗ ನನಗೆ ಬಂದಿತ್ತು. ಅಂತೆ ನನಗೆಲ್ಲ ಗೊತ್ತು. ಹಿಂದೀಯರ ಒಳ ತಿರುಳೆಲ್ಲ ನನಗೆ ಗೊತ್ತಿದೆ. ಯಾವ ಆಂಗ್ಲ ಸ್ತ್ರೀಯಳಿಗೂ ಹಿತದ ಪರಿಸ್ಥಿತಿ ಇಲ್ಲ—ನಾನೊಂದು ದೇಶೀ ಸಂಸ್ಥಾನದಲ್ಲಿ ದಾಯಿಯಾಗಿದ್ದೆ—ನಾವು ನಮ್ಮ ಖಿಗುವನ್ನು ಕಾಯ್ದುಕೊಂಡು ಅವರಿಂದ ದೂರಿರುವುದೇ ಯೋಗ್ಯ.'

' ನಿಮ್ಮ ರೋಗಿಗಳಿಂದ ಕೂಡ ದೂರವೇ ?'

' ಯಾಕೆ, ದೇಶೀ ಜನರಿಗೆ ಯಾವನೂ ಅತ್ಯುಪಕಾರ ಮಾಡಬೇಕೆಂದರೆ ಅವರನ್ನು ನಿರಾತಂಕವಾಗಿ ಸಾಯಗೊಡಬೇಕು.' ಎಂದಳು ಮಿಸೆಸ್ ಕ್ಯಾಲೆಂಡರ.

' ಅವನು ಸ್ವರ್ಗಕ್ಕೆ ಹೋದರೆ ಹೇಗೆ ?' ಎಂದು ಮೂರಳು ಸೌಮ್ಯ ಎದ್ದರೂ ವಕ್ರ ಕೂಡಿದ ನಗೆಯಿಂದ ಕೇಳಿದಳು.

' ಅವನು ಎಲ್ಲಿಗೆ ಬೇಕಾದಲ್ಲಿಗೆ ಹೋಗಲಿ; ನನ್ನ ಸಮೀಪಕ್ಕೆ ಬಾರ ದಿದ್ದರಾಯಿತು. ಅವರನ್ನು ನೋಡಿದರೆ ನನ್ನ ಮೈಯಲ್ಲಿ ಹೇಗೊ ಹೇಗೊ ಆಗುತ್ತದೆ.'

' ಆಗಲೆ ನೀವು ಸ್ವರ್ಗದ ವಿಷಯ ತೆಗೆದಿದ್ದಿರಲ್ಲ—ನಿಜವಾಗಿ ಹೇಳ ಬೇಕಾದರೆ ನಾನು ಆ ವಿಷಯಕ್ಕೂ ವಿಚಾರಮಾಡಿ ನೋಡಿದ್ದೇನೆ. ಅಂತೇ ನಾನು ಮಿಶನರಿಗಳಿಗೆ ತೀರ ವಿರುದ್ಧ ಇದ್ದೇನೆ. ಧರ್ಮಗುರುಗಳಿಗೆ ನನ್ನ ಸಹಾನುಭೂತಿಯಿದ್ದರೂ ಈ ಮಿಶನರಿಗಳಿಗೆ ಮಾತ್ರ ಇಲ್ಲ. ನಾನು ಇದನ್ನು ತಿಳಿಸಿ ಹೇಳುತ್ತೇನೆ.' ಎಂದು ದಾಯಿಯಾಗಿದ್ದವಳು ಮತ್ತೆ ತನ್ನ ಪುರಾಣ ಬಿಚ್ಚುವುದರಲ್ಲಿದ್ದಳು.

ಅಷ್ಟರಲ್ಲಿ ಕಲೆಕ್ಟರನು ಬಂದದ್ದರಿಂದ ಅದು ಅಲ್ಲಿಗೇ ನಿಂತಿತು.

' ಮಿಸ್ ಕ್ವೆಸ್ಟೆಡ್ ! ನಿನಗೆ ನಿಜವಾಗಿಯೂ ಈ ಆರ್ಯ ಅಣ್ಣತಮ್ಮಂ ದಿರನ್ನು ನೋಡಬೇಕಾಗಿದೆಯೇನು ? ಅದನ್ನು ನಾನು ಸುಲಭವಾಗಿ ಮಾಡಿಸಿ ಕೊಡಬಲ್ಲೆ. ಅದು ನಿನ್ನ ಮನಸ್ಸನ್ನು ಇಷ್ಟು ರಮಿಸಬಹುದೆಂದು ನನಗೆ

ತಿಳಿಯುಲಿಲ್ಲ.' ಎಂದು ಕಲೆಕ್ಟರನು ಸ್ವಲ್ಪಹೊತ್ತು ಆಲೋಚಿಸಿದನು. ಅಲ್ಲಿಂದ ಅಲ್ಲಿಂದ 'ನೀನು ಬೇಕಾದಂತಹ ಮಾದರಿಯನ್ನು ನೋಡಬಹುದು. ನೀನೇ ಆರಿಸಬಹುದು. ನನಗೆ ಸರಕಾರೀ ಜನರ ಮತ್ತು ಜಮೀನುದಾರರ ಪರಿಚಯು ಇದೆ. ಮಿಸ್ಲೋಪನು ಬ್ಯಾರಿಸ್ಟರರ ಗುಂಪಿಗೆ ಗುಂಪನ್ನೇ ಹಿಡಿದು ತರಬಹುದು. ನಿನಗೆ ಶಿಕ್ಷಣದ ಮೇಲೆ ವಿಶೇಷ ಅಭ್ಯಾಸ ಮಾಡುವುದಿದ್ದರೆ ಫೀಲ್ಡಿಂಗನ ಕಡೆಗೆ ಹೋಗಬಹುದು.'

'ನನ್ನ ಕಣ್ಣೆದುರಿಗೆ ಹಾಯ್ದು ಹೋಗುತ್ತಿರುವ ಈ ಚಿತ್ರಮಯ ಆಕೃತಿಗಳನ್ನು ನೋಡಿ ನೋಡಿ ನನಗೆ ಬೇಸರ ಬಂದುಹೋಗಿದೆ. ನಾನು ಹಡಗದಿಂದಿಳಿದಾಗ ಅದ್ಭುತವಾಗಿ ತೋರಿತು. ಆದರೆ ಖೊಟ್ಟಿ ಮಿಂಚು ಬೇಗನೆ ಮಾಯವಾಯಿತು.' ಎಂದು ಹುಡುಗಿಯು ವಿವರಿಸಿ ಹೇಳಿದಳು.

ಅವಳ ಈ ಅಭಿಪ್ರಾಯದಲ್ಲಿ ಕಲೆಕ್ಟರನಿಗೇನು ಮಹತ್ವವೆನಿಸಲಿಲ್ಲ. ಅವಳ ಹೊತ್ತು ಸುಖವಾಗಿ ಹೋಗುವಂತೆ ಮಾಡುವುದಿಷ್ಟೆ ಅವನ ಹೊತ್ತೆ ಭಾರ. 'ನಿಮಗೆ 'ಬ್ರಿಜ್ ಪಾರ್ಟಿ' ಮನಸ್ಸಿಗೆ ಬರುತ್ತದೋ?' ಎಂದು ಕೇಳಿ, ಅದು ಆಟವಲ್ಲ, ಪೂರ್ವ-ಪಶ್ಚಿಮಗಳ ಅಂತರಕ್ಕೆ ಸೇತುವೆ ಕಟ್ಟುವ ಕೂಟ, ತಾನೇ ಆ ಶಬ್ದ ಹುಡುಕಿ ತೆಗೆದದ್ದು, ಎಂದು ತಿಳಿಸಿ ಹೇಳಿ ಕೇಳಿದವರನ್ನೆಲ್ಲ ರಂಜಿಸಿದನು.

'ಸಮಾಜದಲ್ಲಿ ಸಾಮಾಜಿಕರಂತೆ ನಿಮ್ಮೊಡನೆ ಗೆಳೆತನವಿದ್ದ ಹಿಂದೀಯರನ್ನಷ್ಟೇ ನಾನು ಕಾಣಬೇಕೆನ್ನುತ್ತೇನೆ.'

'ಒಳ್ಳೇದು; ನಾವು ಅವರೊಂದಿಗೆ ಸಾಮಾಜಿಕ ಸಂಬಂಧವಾಗಿ ಬೆರೆಯುವುದೇ ಇಲ್ಲ.' ಎಂದು ನಗುತ್ತ ಹೇಳಿದನು. 'ಅವರೇನೊ ಪಾಪ, ಎಲ್ಲ ಸದ್ಗುಣಗಳಿಂದ ತುಂಬಿದ್ದಾರೆ. ಆದರೂ ನಾವು ಬೆರೆಯುವುದಿಲ್ಲ. ಈಗಾಗಲೆ ಹನ್ನೊಂದು ಮೂವತ್ತಾಯಿತು. ಕಾರಣ ಮೀಮಾಂಸೆಗೆ ಇದು ಹೊತ್ತಲ್ಲ.'

'ಮಿಸ್ ಕ್ವೆಸ್ಟೆಡ್! ಏನು ಹೆಸರಿದು?' ಎಂದು ಮಿಸೆಸ್ ಟರ್ಟನ್‌ಳು ಮನೆಗೆ ಹೋಗುವ ಹಾದಿಯಲ್ಲಿದ್ದಾಗ ತನ್ನ ಗಂಡನನ್ನು ಕೇಳಿದಳು. ಈ ಹೊಸ ತರುಣ ಹುಡುಗಿಯು ಅವಳ ಮನಸ್ಸಿಗೆ ಬರಲಿಲ್ಲ. ಅವಳ ಅಸಭ್ಯತೆಯನ್ನೂ ವಿಕ್ಷಿಪ್ತತೆಯನ್ನೂ ನೋಡಿ ಅವಳು ಅಸಹ್ಯಪಟ್ಟುಕೊಂಡಿದ್ದಳು.

ಮಿಸ್ ಕ್ರೈಸ್ಟೈಡ್‌ಳನ್ನು ಆ ನಾಜೂಕಾದ ಪ್ರೋಕ್ತ ಹಿಸ್ಲೋಪನೊಡನೆ ಮದುವೆ ಮಾಡಿಕೊಡಲು—ಹೊರಗೆ ತೋರಿಕೆಗೆ ಹಾಗೆ ಕಂಡರೂ—ಇಲ್ಲಿಗೆ ಕರೆತಂದಿಲ್ಲವೆಂದು ಅವಳು ದೃಢವಾಗಿ ನಂಬಿದಳು. ಅವಳ ಗಂಡನು ಅವಳ ಈ ಅಭಿಪ್ರಾಯಕ್ಕೆ ಮನಸ್ಸಿನಲ್ಲಿಯೆ ಒಪ್ಪಿಗೆ ಕೊಟ್ಟಿದ್ದನು. ತಪ್ಪಿಸುವುದು ಸಾಧ್ಯವಿದ್ದಾಗ ಅವನೆಂದಿಗೂ ಆಂಗ್ಲ ಹೆಣ್ಣುಮಗಳ ವಿರುದ್ಧವಾಗಿ ಮಾತ-ನಾಡುತ್ತಿದ್ದಿಲ್ಲ. ಆದರೆ ಮಿಸ್ ಕ್ರೈಸ್ಟೈಡಾಳು ಸ್ವಾಭಾವಿಕವಾಗಿ ತಿಳಿಯದೆ ತಪ್ಪು ಮಾಡುತ್ತಾಳೆಂದಿಷ್ಟೆ ಮಾತ್ರ ಹೇಳಿದನು. ಅಲ್ಲದೆ 'ಹಿಂದುಸ್ತಾನವು ವಿಶೇಷವಾಗಿ ಬೇಸಗೆಯಲ್ಲಿ ನಿರ್ಣಯದ ವಿಷಯವಾಗಿ ಎಂಥ ಅಗಾಧ ಕೆಲಸಗಳನ್ನು ಮಾಡಿದೆ! ಅದು ಫೀಲ್ಡಿಂಗನ ಸಲುವಾಗಿಯೂ ಅದ್ಭುತಗಳನ್ನು ಮಾಡಿದೆ!' ಎಂದು ಮೊದಲಿನ ತನ್ನ ಮಾತಿಗೆ ಜೋಡಿಸಿದ. ಫೀಲ್ಡಿಂಗನ ಹೆಸರು ಕೇಳಿದೊಡನೆ ಟರ್ಟನ್ನಳು ಕಣ್ಣು ಮುಚ್ಚಿ 'ಫೀಲ್ಡಿಂಗನೇನು ಪಕ್ಕಾ ಅಲ್ಲ. ಆದುದರಿಂದ ಮಿಸ್ ಕ್ರೈಸ್ಟೈಡ್‌ಳನ್ನು ಮದುವೆಯಾಗಬಹುದು. ಯಾಕೆಂದರೆ ಅವಳೂ ಪಕ್ಕಾ ಅಲ್ಲ' ಎಂದು ಮಾತಿನ ಬಾಣ ಬಿಟ್ಟಳು. ಅಷ್ಟರಲ್ಲಿ ಅವರು ತಮ್ಮ ಬಂಗ್ಲೆಗೆ ಬಂದು ಮುಟ್ಟಿದರು. ಬಂಗ್ಲೆ ನೋಡಿದರೆ ತೀರ ಚಿಕ್ಕದು. ಬಹಳ ಹಳೆಯದು. ಯಾವ ತರಹದ ಸೌಕರ್ಯಗಳೂ ಇಲ್ಲ. ಎದುರಿಗೆ ಬೈಲಲ್ಲಿ ದುಂಡುದುಂಡಾಗಿ ಹುಲ್ಲು ಹಾಸಿದಂತಿತ್ತು. ಒಂದವರೆ ಮತ್ತೊಮ್ಮೆ ಕುಡಿದರು, ಆದರೆ ಈ ಸಲ ಬಾರ್ಲಿ ನೀರು ಮಾತ್ರ. ಕುಡಿ-ಯುವುದಾದ ಮೇಲೆ ಮಲಗಲಿಕ್ಕೆ ಹೋದರು.

ಟರ್ಟನ್ ದಂಪತಿಗಳು ಕ್ಲಬ್ಬಿನಿಂದ ಹೊರಹೊರಟ ಮೇಲೆ ಕ್ಲಬ್ಬಿನಲ್ಲಿ ಕೂಡಿದ ಗುಂಪೂ ಚದರಿತು. ಎಲ್ಲ ಸಭೆಗಳಂತೆ ಇದಕ್ಕೂ ಒಂದು ಸರಕಾರೀ ಕಳೆ ಬಂದಿತ್ತು. ಯಾವ ಸಮಾಜವು ವೈಸರಾಯರಿಗೆ ಮೊಳಕಾಲೂರಿ ಬಾಗುತ್ತದೊ, ಮತ್ತು ರಾಜಪ್ರಭೆಯನ್ನು ರಾಜಪರಿವಾರದಲ್ಲಿ ಒಡಮೂಡಿಸಲು ಸಾಧ್ಯವಿದೆಯೆಂದು ನಂಬುತ್ತದೋ ಅಂತಹ ಸಮಾಜಕ್ಕೆ ರಾಜಪ್ರತಿ-ನಿಧಿಯಂತಿರುವ ವೈಸರಾಯರ ಸ್ಥಳದಲ್ಲಿಯ ಯಾವ ಪ್ರತೀಕಕ್ಕೂ ರಾಜಮನ್ನಣೆಯನ್ನು ತೋರಿಸಬೇಕೆಂದೆನಿಸಲೇಬೇಕು. ಅಂತೆಯೆ ಚಂದ್ರಪುರದಲ್ಲಿ ಟರ್ಟನ್ನರೆಂದರೆ ದೇವರ ಮರಿಯಾಗಿಯೇ ಇದ್ದಾರೆ. ಬೇಗನೆ ಅವರೂ ನಿವೃತ್ತರಾಗಿ ನಗರದ ಸಮೀಪದಲ್ಲಿಯೆ ಒಂದು ವಿರಾಮಗೃಹ ಮಾಡಿಕೊಂಡು

ಆದರಲ್ಲಿದ್ದು ಕೊನೆಗೆ ಈಗಿನ ಈ ಅಧಿಕಾರದ ಕೀರ್ತಿಯಿಂದ ಮರೆಯಾಗಿ ಹೊರಟುಹೋಗುವರು.

'ಆ ದೊಡ್ಡ ಮನುಷ್ಯನು ಹೀಗೆ ಮಾಡಿದ್ದು ಅವನ ದೊಡ್ಡಿತೆಗೆ ಒಪ್ಪಿತು.' ಎಂದು ರೋನಿಯು ತನ್ನ ಅತಿಥಿಗಳಿಗೆ ತೋರಿಸಲ್ಪಟ್ಟ ಆದರಾತಿಥ್ಯ ವನ್ನು ನೋಡಿ ಸಂತೋಷಬಟ್ಟು ತನ್ನಲ್ಲಿಯೆ ಒಟಗುಟ್ಟಿದನು. 'ಇವನು ಈ ಮೊದಲು ಎಂದೂ 'ಬ್ರಿಜ್ ಪಾರ್ಟಿ'ಯನ್ನೇ ಕೊಟ್ಟಿರಲಿಲ್ಲ, ಗೊತ್ತೇನು ನಿಮಗೆ?' ಎಂದು ಮಿಸ್ ಕ್ವೆಸ್ಟೆಡ್‌ಳೊಡನೆ ಮಾತು ಮುಂದರಿಸಿದ. 'ಅದೂ ಕೂಡ ಮೃಷ್ಟಾನ್ನ ಭೋಜನವಾದ ಮೇಲೆ! ನಾನೇ ಏನಾದರೂ ಏರ್ಪಾಟು ಮಾಡಬೇಕೆಂದು ಮನಸ್ಸಿನಲ್ಲಿ ಬಂದಿತ್ತು; ಆದರೆ ನಿಮಗೇ ದೇಶೀಜನರ ಪರಿಚಯ ಹೆಚ್ಚಾದಾಗ ಇದನ್ನು ಮಾಡುವುದು ನನಕಿಂತ ಬಡಾ ಸಾಹೇಬ ರಿಗೇ ಸುಲಭವಾದದ್ದೆಂದು ನಿಮಗೆ ಗೊತ್ತಾಗುವುದು. ಅವರೆಲ್ಲ ಅವನನ್ನು ಒಲ್ಲರು; ಅವನು ಮಬ್ಬು ಬೀಳಲಾರನೆಂಬುದೂ ಅವರಿಗೆ ಗೊತ್ತು; ಎಷ್ಟೆಂ ದರೂ ನಾನಿನ್ನೂ ಹೊಸಬ; ಇಪ್ಪತ್ತು ವರ್ಷಗಳ ವರೆಗೆ ಈ ದೇಶದಲ್ಲಿರುವ ವರೆಗೆ ಇಲ್ಲಿಯದೆಲ್ಲವನ್ನೂ ತಿಳಿದಿದ್ದೇನೆನ್ನುವುದು ಅಸಾಧ್ಯವಾದ ಮಾತು. ಒಳ್ಳೇದು, ತಪ್ಪುಗಳನ್ನು ಮಾಡುವ ಉದಾಹರಣೆಯೊಂದನ್ನು ಹೇಳುತ್ತೇನೆ ನೋಡಿ. ಒಂದು ದಿನ ನಾನು ಕಚೇರಿಯಿಂದ ಹೊರಗೆ ಬಂದೊಡನೆ ವಕೀ ಲರ ಪೈಕಿ ಒಬ್ಬನನ್ನು ನನ್ನೊಡನೆ ಸೇದಲು—ಲಕ್ಷ್ಯದಲ್ಲಿರಲಿ, ಸಿಗರೇಟನ್ನು ಮಾತ್ರ—ಕೇಳಿದೆ. ಇಷ್ಟೇ ಸಾಕಾಯಿತು. ಈ ಸುದ್ದಿಯನ್ನು ಪೇಟೆಯಲ್ಲೆಲ್ಲ ಹಬ್ಬಿಸಲು ಆ ವಕೀಲನ ತನ್ನ ಕುಂಟ್ಲಗನ್ನು ಕಳುಹಿದ್ದನೆಂದು ಹಿಂದುಗಡೆ ನನಗೆ ತಿಳಿಯಿತು. ಆ ಕುಂಟ್ಲರು ಸುದ್ದಿಯನ್ನಷ್ಟೆ ಹೇಳದೆ, 'ಓ! ನೀವು ನಮ್ಮ ಮಹಮ್ಮದಲಿ ವಕೀಲರ ಹತ್ತರ ಬಂದರೆ ಹೆಚ್ಚು ಒಳ್ಳೇದು; ಯಾಕಂ ದರೆ ಅವರೂ ಸಿಟಿ ಮ್ಯಾಜಿಸ್ಟ್ರೇಟರೂ ಬಹಳ ಕೇವಲ. ಮೊನ್ನೆ ಇಬ್ಬರೂ ಕೂಡಿ ಸಿಗರೇಟು ಸೇದಿದರು..' ಎಂದು ಕೈಗಂಟಿಷ್ಟು ಹಾಕಿ ಪಕ್ಷಗಾರ ರನ್ನು ಹಾದಿಗೆಡಿಸಿ ಒಳಕೊಳ್ಳುವ ಯುಕ್ತಿಯನ್ನು ಮಾಡಿದರಂತೆ ಅಂದಿ ನಿಂದ ಕೋರ್ಟಿನಲ್ಲಿ ಆ ವಕೀಲನ ಮೇಲೆ ನಾನೆಷ್ಟೋ ಸಲ ನಿರ್ದಯದಿಂದ ಹರಿದುಬಿದ್ದಿದ್ದೇನೆ. ಇದರಿಂದ ನಾನೂ ಬುದ್ದಿಗಲಿತೆ; ಅವನೂ ಕಲಿತಿರ ಬಹುದು.'

'ಕಲಿತದ್ದೆಂದರೆ ಎಲ್ಲ ವಕೀಲರನ್ನೂ ನಿನ್ನೊಡನೆ ಸೇದುವುದಕ್ಕಾಗಿ ಆಮಂತ್ರಿಸಬೇಕೆಂದಲ್ಲವೇ ?'

'ಇರಬಹುದು. ಆದರೆ ನನಗೆ ಇರುವ ಹೊತ್ತು ತೀರ ಸ್ವಲ್ಪ; ದೇಹವೂ ಅಶಕ್ತ. ನನಗೆ ನನ್ನವರೊಡನೆ ಕ್ಲಬ್ಬಿನಲ್ಲಿ ಸೇದುವುದೇ ಹೆಚ್ಚು ಮನಸ್ಸಿಗೆ ಬರುತ್ತದೆ.'

'ಆ ವಕೀಲರನ್ನು ಕ್ಲಬ್ಬಿಗೇ ಏಕೆ ಕರೆಯಬಾರದು ?' ಎಂದು ಮಿಸ್ ಕ್ವೆಸ್ಟೆಡ್‌ಳು ಛಲಹಿಡಿದು ಕೇಳಿದಳು.

'ಅವರಿಗೆ ಅಲ್ಲಿ ಅಪ್ಪಣೆಯಿಲ್ಲ.' ಟರ್ಟನ್ನನು ಖುಷಿಯಲ್ಲಿದ್ದನು; ತಾಳ್ಮೆಯಲ್ಲಿದ್ದನು. ಕ್ವೆಸ್ಟೆಡ್‌ಳಿಗೆ ಏತಕ್ಕಾಗಿ ಇದೆಲ್ಲ ತಿಳಿಯಲೊಲ್ಲದೆಂಬುದನ್ನೂ ಅವನು ಅರಿತುಕೊಂಡನು. ತಾನೂ ಒಮ್ಮೆ ಅವಳಂತೆಯೇ ಇದ್ದನೆಂದೂ, ಆ ಸ್ಥಿತಿ ಬಹಳ ದಿನ ಉಳಿಯಲಿಲ್ಲವೆಂದೂ ಅವನು ಸೂಚಿಸಿದನು. ಅಲ್ಲಿಂದ ಒಳಂಗಳದಲ್ಲಿ ಹೋಗಿ ಚಂದ್ರನನ್ನೇ ಕರೆಯುತ್ತಿರುವವನಂತೆ ಮುಖ ಮೇಲಕ್ಕೆ ಮಾಡಿ ಗಟ್ಟಿಯಾಗಿ ಕೂಗಿದ. ಅದಕ್ಕೆ ಅವನ (ಸೀಯಾನು) ಓ ಕೊಟ್ಟ. ಅವನ ಕಡೆಗೆ ಮುಖ ತಿರುಗಿಸದೇ ತನ್ನ ಬಲಿಯನ್ನು ತರಲು ಅವನಿಗೆ ಅಪ್ಪಣೆ ಕೊಟ್ಟ.

ಇತ್ತ ಇಲ್ಲಿಯ ಕ್ಲಬ್ಬಿನಿಂದ ದಂಗುಬಡಿದು ಹೋಗಿದ್ದ ಮೂರಳು ಅಲ್ಲಿಂದ ಹೊರಬಿದ್ದ ಮೇಲೆ ಸ್ವಲ್ಪ ಎಚ್ಚತ್ತಳು. ಚಂದ್ರನನ್ನೇ ಸ್ವಲ್ಪ ಹೊತ್ತು ದಿಟ್ಟಿಸುತ್ತ ನಿಂತಳು. ಕೆಂಬಣ್ಣದ ಆಕಾಶಕ್ಕೆ ಚಂದ್ರನ ಪೀತ ಕಾಂತಿಯು ಒಪ್ಪ ಹಾಕಿತ್ತು. ಬೆಳದಿಂಗಳ ಈ ರಮಣೀಯತೆಯನ್ನು ನೋಡಿ ಅವಳಿಗೆ ತನ್ನ ಇಂಗ್ಲಂಡದಲ್ಲಿಯ ಚಂದ್ರನು ಮುಗಿಲಲ್ಲಿ ತೇಲುವ ಸತ್ತ ಹೆಣದಂತೆ ಎಂದು ಭಾಸವಾಯಿತು. ಇಲ್ಲಿಯ ಈ ಅನಂತ ನಕ್ಷತ್ರಗಳು, ಈ ಚಂದಿರ, ಈ ಭೂಮಿ ಎಲ್ಲವೂ ಒಂದಾಗಿ ರಾತ್ರಿಯ ಶಾಲಿನ ಮೇಲೆ ಕುಸುರಿಟ್ಟಂತಿದ್ದುದನ್ನು ನೋಡಿ ಕೆರೆಯಲ್ಲಿ ಹೊಸ ನೀರು ನುಗ್ಗಿ ಬಂದಂತೆ ಆ ಮುದುಕಿಯ ಹೃದಯದಲ್ಲಿ ಹೊಸ ಭಾವ ನುಗ್ಗಿ ಬಂದು ತುಂಬಿತು. ತಾನೂ ಆಕಾಶದಲ್ಲಿಯ ನಕ್ಷತ್ರಗಳೊಡನೆ ಒಂದಾದಳು. ಕ್ಲಬ್ಬಿನಲ್ಲಿಯ ಆ ನಾಟಕ, ಆ ರಾಷ್ಟ್ರಗೀತೆ—ಎಷ್ಟೇ ಅವಳ ಮನಸ್ಸಿಗೆ ಬಂದಿದ್ದರೂ—ಎಲ್ಲವೂ ಅವಳ ಮನಸ್ಸಿನಿಂದ ಮರೆಯಾದವು; ಆ ಪೇಯಗಳು— ಆ ಸಿಗರೇಟು ಎಲ್ಲವೂ

ಎಲ್ಲಿಯೊ ಮಾಯವಾಗಿ ಬೇರೊಂದು ಸಂಗೀತವೇ ಅವಳಿಗೆ ಕೇಳಹತ್ತಿತು. ಇಷ್ಟೊತ್ತಿಗೆ ಅವರು ದಾರಿಯ ಒಂದು ಮುರಿಗೆ ಬಂದು ಹೊರಳಿದರು. ಕೂಡಲೆ ಎದುರಿಗೇ ಮಸೀದೆಯು ಥಳಥಳಿಸಿತು. 'ಆ! ಇಲ್ಲಿಗೇ ನಾನು ಒಂದದ್ದು! ಮತ್ತೆ ಇಲ್ಲಿಗೇ ಒಂದೆ!'' ಎಂದು ಕೂಗಿದಳು. ಹಿಂದಿನ ನೆನಪು ನುಗ್ಗಿ ಬಂತು.

'ಇಲ್ಲಿಗೆ! ಯಾವಾಗ?' ಎಂದು ಮಗನು ಕೇಳಿದನು.

ಒಂದಂಕು ಇನ್ನೊಂದಂಕಿನ ನಡುವೆ.'

'ತಾಯಿ ಇಲ್ಲಿ ನೀನು ಹೀಗೆಲ್ಲ ಹೋಗಬಾರದು.'

'ತಾಯಿಯಾದವಳೂ?!'

'ಹೌದು. ಈ ದೇಶದಲ್ಲಿ ತಾಯಿಯಾದವರೂ ಹೋಗಬಾರದು. ಇಲ್ಲಿದ್ದ ನಮ್ಮವರು ಯಾರೂ ಹಾಗೆ ಮಾಡುವುದಿಲ್ಲ ಅಲ್ಲದೆ ಇಲ್ಲಿ ಹಾವುಗಳೂ ಒಹಳ. ಸಂಜೆಯ ಹೊತ್ತಿನಲ್ಲಿ ಹೊರಗೆ ಒಂದಿರುತ್ತವೆ.'

'ಆಹಾ! ಅಲ್ಲಿದ್ದ ಯುವಕನೂ ಇದನ್ನೇ ಹೇಳಿದ.'

'ಇದೇನೋ ಒಳ್ಳೇ ಅದ್ಭುತರಮ್ಯವಾಗಿ ತೋರುತ್ತದಲ್ಲ.' ಎಂದು ಮಿಸ್ ಕ್ವೆಸ್ಟೆಡ್‌ಳು ಉದ್ಗಾರ ತೆಗೆದಳು. ಮೂರಳ ಮೇಲೆ ಅವಳ ಆದರ, ಪ್ರೀತಿ ಬಹಳ. ಮೂರಳು ಹೀಗೆ ತಪ್ಪಿಸಿ ಹೋಗಿಬಂದುದಕ್ಕಾಗಿ ಅವಳು ಸಂತೋಷಪಟ್ಟಳು. 'ಅಲ್ಲಾ, ಮಸೀದೆಯಲ್ಲಿ ಯುವಕನೊಬ್ಬನ ಭೆಟ್ಟಿ ಆದದ್ದನ್ನು ನನಗೆ ಹೇಳಬಾರದೇನು?' ಎಂದು ಕೆಣಕಿ ಕೇಳಿದಳು.

'ಹೇಳಬಾರದೆಂದು ಬಿಡಲಿಲ್ಲ ಅಡೀಲಾ; ಹೇಳುತ್ತಿದ್ದೆ. ಆದರೆ ಯಾತರಿಂದಲೋ ಮಾತು ಬದಲಾಯಿತು. ಅದರಿಂದ ಮರೆತೇ ಹೋಯಿತು. ನನ್ನ ನೆನಪಿನ ಶಕ್ತಿಯೂ ಈಗ ಬಹಳ ಕುಂದಿದೆ.'

'ನಾಜೂಕ ಇದ್ದನೇನು?'

ಮೂರಳು ಸ್ವಲ್ಪ ಹೊತ್ತು ನಿಂತು, ಆಮೇಲೆ, 'ಬಹಳ ನಾಜೂಕು, ಸೂಕ್ಷ್ಮ, ಪ್ರೋಕ್ತ ಎಲ್ಲಾ ಇದ್ದ.' ಎಂದು ಜೋರುಕೊಟ್ಟು ಹೇಳಿದಳು.

'ಯಾರು ಅವನು?' ರೋನಿಯು ಕುತೂಹಲದಿಂದ ಕೇಳಿದನು.

'ಒಬ್ಬ ಡಾಕ್ಟರ, ಹೆಸರು ನನಗೆ ಗೊತ್ತಿಲ್ಲ.'

'ಡಾಕ್ಟರ? ಚಂದ್ರಪುರದಲ್ಲಿ ತರುಣ ಡಾಕ್ಟರ ಯಾರೂ ಇದ್ದಂತೆ ನನಗೆ ತೋರುವುದಿಲ್ಲ. ಎಂಥ ವಿಚಿತ್ರವಿದು! ಇರಲಿ, ಅವನು ಹೇಗಿದ್ದ?'

'ಆಳು ಸ್ವಲ್ಪ ಕುಳ್ಳ; ವಿಶಾಲ ಕಡಿನೆ; ತೀಕ್ಷ್ಣ ಕಣ್ಣು. ಕತ್ತಲೆಯಲ್ಲಿ ನಾನು ನನ್ನ ಕಾಲೊಳಗಿನವನ್ನು ಹುಡುಕುತ್ತಿದ್ದಾಗ ಅವನು ನನ್ನನ್ನು ಕೂಗಿದನು. ಇದರಿಂದಲೇ ನನ್ನು ಅವರ ಮಾತಿಗೆ ಪ್ರಾರಂಭವಾಯಿತು. ನಾನೆಲ್ಲಿ ಕಾಲಲ್ಲ ಹಾಕಿಕೊಂಡೇ ಒಳಗೆ ಬಂದಿದ್ದೇನೋ ಎಂದು ಅವನಿಗೆ ಸಂಶಯ ಬಂದಿತ್ತು. ಸುದೈವದಿಂದ ಹಾಗೆ ಹೋಗಬಾರದೆಂಬುದು ನನಗೆ ಮೊದಲೇ ನೆನಪಿಗೆ ಬಂದಿತ್ತು. ಎಷ್ಟೋ ಮಾತಾಡಿದೆವು. ಅವನು ತನ್ನ ಹೆಂಡರು ಮಕ್ಕಳ ವಿಷಯ ಎಲ್ಲ ಹೇಳಿದ. ಕ್ಲಬ್ಬಿನ ವರೆಗೆ ನನ್ನನ್ನು ಕಳಿಸ ಲಿಕ್ಕೆ ಬಂದ. ನಿಮ್ಮೆಲ್ಲರ ಗುರುತೂ ಅವನಿಗಿದೆ.'

'ನೀನು ಅಲ್ಲಿಯೆ ಅವನನ್ನು ತೋರಿಸಬೇಕಾಗಿತ್ತು. ಅವನಾರೆಂಬುದು ನನಗೀಗ ಗೊತ್ತಾಗಲೊಲ್ಲದು.'

'ಅವನು ಕ್ಲಬ್ಬಿನ ಒಳಿಕ್ಕೆ ಬರಲಿಲ್ಲ. ತಾನು ಹಾಗೆ ಬರಲು ಅಪ್ಪಣೆ ಇಲ್ಲವೆಂದೂ ಹೇಳಿದ.'

ಈ ಕೊನೆಯ ಮಾತಿನಿಂದ ರೋನಿಗೆ ಒಮ್ಮೆಲೆ ಸತ್ಯ ಹೊಳೆಯಿತು. 'ಎಲಾ ದೈವವೇ! ಮಹಮ್ಮದೀಯನಲ್ಲವೇ? ದೇಶೀ ಮನುಷ್ಯನೊಡನೆ ಮಾತನಾಡುತ್ತಿದ್ದೆನೆಂದು ಹೇಳಬಾರದೇ? ಸುಳ್ಳೆ ನಾನು ತಪ್ಪು ಹಾದಿ ಯನ್ನು ಹಿಡಿದಿದ್ದೆ.'

'ಮಹಮ್ಮದೀಯ! ಅತ್ಯುತ್ತಮವಾದ ಕೆಲಸ! ರೋನಿ, ನಾವಿನ್ನೂ ನಿಜವಾದ ಹಿಂದುಸ್ತಾನವನ್ನು ನೋಡಬೇಕೆಂದು ಮಾತನಾಡುತ್ತಿರು ವಾಗಲೆ ಅವಳು ಹೋಗಿ ಅದನ್ನು ನೋಡಿಯೆ ಬಿಟ್ಟಿದ್ದಾಳೆ! ಅಲ್ಲದೆ ನೋಡಿ ದ್ದನ್ನು ಮರೆತೂ ಬಿಟ್ಟಿದ್ದಾಳೆ! ಇದೇ ನಿಮ್ಮ ತಾಯಿಯ ಲಕ್ಷಣ; ಅಲ್ಲವೆ?'

ರೋನಿಯ ಮನಸ್ಸು ವಿಹ್ವಲವಾಯಿತು. ತನ್ನ ತಾಯಿಯು ಹೇಳಿದ ಚಹರೆಪಟ್ಟಿಯಿಂದ ಆ ಡಾಕ್ಟರನು ಗಂಗಾನದಿಯ ಕಡೆಯಿಂದ ಬಂದ 'ಮುಗಿನ್ಸ' ಇರಬೇಕೆಂದು ಅವನ ಕಲ್ಪನೆಯಾಗಿತ್ತು. ಅಂತೆಯೆ ಅವನಿಂದ ಎಲ್ಲ ಭ್ರಾತೃಭಾವನೆಗಳು ಹೊರಬಿದ್ದಿದ್ದವು. ಎಂಥ ಗೊಂದಲಬಡಕತನವಿದು!

ತಾನೊಬ್ಬ ಹಿಂದೀಯನ ವಿಷಯವಾಗಿ ಮಾತನಾಡುತ್ತಿರುವೆನೆಂದು ಅವಳು ತನ್ನ ದನಿಯಿಂದಾದರೂ ಏಕೆ ತಿಳಿಸಬಾರದಾಗಿತ್ತು? ರೋನಿಯು ಸ್ವಲ್ಪ ರಂಗಿಗೆದ್ದು ಅಧಿಕಾರವಾಣಿಯಿಂದ ಅವಳನ್ನು ಕೇಳಹತ್ತಿದನು; 'ಅವನು ಮಸೀದೆಯಲ್ಲಿ ನಿನ್ನನ್ನು ಕೂಗಿದನಲ್ಲವೆ? ಹೇಗೆ? ಉದ್ಧಟ ರೀತಿಯಿಂದಲ್ಲವೆ? ಅಷ್ಟು ರಾತ್ರಿಯಲ್ಲಿ ಅವನಾದರೂ ಅಲ್ಲಿ ಏನು ಮಾಡುತ್ತಿದ್ದ? ಅದೇನು ಅವರ ಪ್ರಾರ್ಥನೆಯ ಹೊತ್ತೂ ಅಲ್ಲ!' ಇದೆಲ್ಲ ಮಿಸ್ ಕ್ವೆಸ್ಟೆಡ್‌ಳು ಸೂಚಿಸಿದ ಒಂದು ಮಾತಿಗೂ ಮತ್ತು ಅವಳು ತೋರಿಸುತ್ತಿರುವ ಆತುರತೆಗೂ ಉತ್ತರರೂಪವಾಗಿ ಹೊರಬಿತ್ತು. 'ಅಲ್ಲಿಂದ ಅವನು ನಿನ್ನ ಕಾಲಲ್ಲಿಯ ಜೋಡಿನ ವಿಷಯವಾಗಿ ಮಾತೆತ್ತಿದನಲ್ಲವೆ? ಅದೂ ಉದ್ಧಟತನವೇ. ಇದೊಂದು ಅವರು ನಡೆಯಿಸಿದ ಬಹು ದಿವಸದ ಕುಯುಕ್ತಿ. ನೀನು ಜೋಡುಗಳನ್ನು ಹಾಕಿಕೊಂಡೇ ಹೋಗಬೇಕಿತ್ತು.'

'ಅದು ಉದ್ಧಟರೀತಿಯೆಂದೇನೊ ನನಗನಿಸುತ್ತದೆ. ಆದರೆ ಅದು ಕುಯುಕ್ತಿಯೆಂಬುದು ಮಾತ್ರ ನನಗೆ ಗೊತ್ತಿಲ್ಲ. ಅವನು ನನ್ನನ್ನು ಮೊದಲ ಸಲ ಕೂಗಿದಾಗ ಅವನು ಉದ್ರಿಕ್ತನಾಗಿದ್ದನೆಂಬುದು ಅವನ ದನಿಯಿಂದ ನನಗೆ ತಿಳಿಯಿತು. ನಾನು ಉತ್ತರಕೊಟ್ಟಕೂಡಲೆ ಆ ದನಿ ಬದಲಾಯಿತು.'

'ನೀನು ಉತ್ತರವನ್ನೇ ಕೊಡಬಾರದಾಗಿತ್ತು.'

'ಇಲ್ಲಿ ನೋಡಿರಿ, ನಿಮ್ಮ 'ಚರ್ಚ'ದಲ್ಲಿ ನೀವು ಒಬ್ಬ ಮುಸಲ್ಮಾನನಿಗೆ ಅವನ ತಲೆಯ ಮೇಲಿನ ಟೊಪ್ಪಿಗೆಯನ್ನು ತೆಗೆಯಲು ಹೇಳಿಗರೆ ಅವನು ನಿಮ್ಮ ಮಾತಿಗೆ ಒಪ್ಪಬೇಕೆಂದು ನಿಮ್ಮ ಆಶೆಯಿರುವುದಿಲ್ಲವೋ?' ಎಂದು ಆ ತರ್ಕಟ ಹುಡುಗಿಯು ಕೇಳಿಯೆ ಬಿಟ್ಟಳು.

'ಅದು ಬೇರೆ, ಅದು ಬೇರೆ. ನಿನಗೆ ತಿಳಿಯುವದಿಲ್ಲ.'

'ನನಗೆ ತಿಳಿಯುವುದಿಲ್ಲೆಂಬದು ಗೊತ್ತಿದೆ. ಆದರೆ ನನಗೆ ತಿಳಿದುಕೊಳ್ಳುವುದು ಬೇಕಾಗಿದೆ. ಆ ಬೇರೆ ಎಂಬದು ಎಲ್ಲಿದೆ, ಏನಿದೆ, ದಯವಿಟ್ಟು ಹೇಳುತ್ತೀರಾ?'

ರೋನಿಯು ಅವಳು ಹೀಗೆಲ್ಲ ಕೆದಕಿ ನುಡಿಯಬಾರದೆಂದು ಆಶಿಸಿದನು. ತನ್ನ ತಾಯಿಯದೇನು ಅಷ್ಟು ಮಹತ್ವವೆನಿಸಲಿಲ್ಲ ಅವನಿಗೆ. ಯಾಕಂದರೆ ಅವಳು ಹೊರಟಿದ್ದು ಸುಮ್ಮಗೆ ಭೂಪ್ರದಿಕ್ಷಿಣೆಗಾಗಿ; ಅದಾದ ಮೇಲೆ

ತಿರುಗಿ ಇಂಗ್ಲೆಂಡಕ್ಕೆ ಹೋಗುವವಳು. ಅವಳು ಯಾವ ಅಭಿಪ್ರಾಯ ಮಾಡಿಕೊಂಡರೂ ಅಷ್ಟೆ. ಆದರೆ ಅಡಿಲಾಳು—ಇದೇ ದೇಶದಲ್ಲಿಯೆ ತನ್ನ ಆಯುಷ್ಯವನ್ನೆ ಕಳೆಯಬೇಕೆಂದು ಬಗೆದವಳು—ಈ ದೇಶೀ ಜನರ ವಿಷಯದಲ್ಲಿ ಹೀಗೆಲ್ಲ ಇಲ್ಲದ್ದೊಂದು ಇದ್ದದ್ದೊಂದು ಅಭಿಪ್ರಾಯ ಮಾಡಿಕೊಂಡರೆ ಬಹಳ ಕಠಿಣವಾದೀತು. ಕುದುರೆಯ ಕಡಿವಾಣವನ್ನು ಜಗ್ಗಿ ಹಿಡಿದು 'ಆಗೋ! ಅಲ್ಲಿ ನೋಡು, ನಿಮ್ಮ ಗಂಗಾನದಿ!' ಎಂದು ರೋಸಿ ನುಡಿದ.

ಇದರಿಂದ ಅವರ ಲಕ್ಷ್ಯವು ಬೇರೆ ಕಡೆಗೆ ಹೊರಳಿತು. ಒಮ್ಮಿಂದೊಮ್ಮೆ ಅವರ ಕೆಳಗೇ ಪ್ರಕಾಶವು ಹೊರಚಿಮ್ಮಿ ಬಂದಿತು. ಅದು ಚಂದ್ರನದೂ ಅಲ್ಲ; ನೀರಿನದೂ ಅಲ್ಲ. ಕತ್ತಲೆಯ ಹೊಲದಲ್ಲಿ ಬೆಳಕಿನ ಪೆಂಡಿಯಂತೆ ಅದು ಎದ್ದು ಕಂಡಿತು. 'ಅಲ್ಲಿ ಕಪ್ಪು ಉಸುಬಿನ ದಿನ್ನೆಯೊಂದು ಈ ಸಲ ತಯಾರಾಗಹತ್ತಿದೆ. ಅಗೊ, ಅಲ್ಲಿ ಕಪ್ಪು ತುಣಿಕಿನಂತೆ ಕಾಣುವುದೇ ಈ ಉಸುಗು. ಕಾಶಿಯಿಂದ ಹೆಣಗಳು ಆ ದಾರಿಯಿಂದಲೇ ತೇಲಿ ಬರುತ್ತವೆ— ಮೊಸಳೆಗಳು ಬಿಟ್ಟರೆ ಮಾತ್ರ ಈ ಚಂದ್ರಪುರಕ್ಕೇನು ಹೆಣಗಳು ಅಷ್ಟು ಬರುವುದಿಲ್ಲ.' ಎಂದು ರೋಸಿಯು ಹೇಳಿದನು.

'ಕೆಳಗೆ, ಅಲ್ಲಿ ಮೊಸಳೆಗಳು ಇವೆಯೇ? ಏನು ಭಯಂಕರ!' ಎಂದು ಅವನ ತಾಯಿಯು ಭಯದಿಂದ ಗೊಣಗುಟ್ಟಿದಳು. ಅವಳ ಆ ಭಯವನ್ನು ಕಂಡು ಆ ತರುಣರು ಒಬ್ಬರನ್ನೊಬ್ಬರು ನೋಡಿ ನಕ್ಕರು. ಅವಳ ಭಯ ಅವರಿಗೆ ಆಟವಾಗಿತ್ತು. ಅವರ ನಗೆಯು ಬಿರುಗಾಳಿಯು ಹಾಯ್ದು ಹೋದ ಮೇಲೆ ವಾತಾವರಣವು ಮತ್ತೆ ಶಾಂತವಾಯಿತು. 'ಎಂಥ ಭಯಂಕರ ನದಿಯಿದು! ಅದ್ಭುತ! ಅದ್ಭುತ ನದಿಯಿದು!' ಎಂದು ಮೂರಳು ಮತ್ತೆ ಮತ್ತೆ ಅದನ್ನೇ ನುಡಿದು ಉಸಿರುಗರೆದಳು. ಆ ಪ್ರಕಾಶವು ಚಂದ್ರನ ಚಲನದಿಂದಲೊ ಉಸುಬಿನ ದಿನ್ನೆ ಮಾಯವಾದದ್ದರಿಂದಲೊ ಆಗಲೆ ಬದಲಾಗುತ್ತ ನಡೆದಿತ್ತು. ಬೆಳಕಿನ ಪೆಂಡಿಯು ಕಾಣದಾಗಿ ಒಂದು ಚಿಕ್ಕ ವರ್ತುಲವು—ಅದೂ ಕೂಡ ಬದಲಾಗಿ—ಕೊನೆಗೆ ಥಳಕ್ಕೆಂದು ಹೊಳೆದು, ಹರಿದು ಹೋಗುತ್ತಿರುವ ಶೂನ್ಯದಲ್ಲಿ ಮಾಯವಾಯಿತು. ಹೆಣ್ಣುಮಕ್ಕಳೆಲ್ಲ ಮತ್ತೆ ಇದು ಬದಲಾಗುವ ವರೆಗೆ ನಿಲ್ಲಬೇಕೇನೆಂದು ವಿಚಾರಿಸಿದರು. ಅಷ್ಟರಲ್ಲಿ

ಅಲ್ಲಿಯ ಮೌನವು, ಅಪಮಾರ್ಗದ ಕಿರಿಕಿರಿಯಿಂದ ಭಂಗವಾಯಿತು. ಮತ್ತು ಕುದುರೆಯೂ ನಡುಗಿತು. ಆದರ ಸಲುವಾಗಿ ಅವರೇನು ತಡೆಯಲಿಲ್ಲ. ನೇರವಾಗಿ ಸಿಟಿ ಮ್ಯಾಜಿಸ್ಟ್ರೇಟನ ಮನೆಗೆ ಗಾಡಿ ಹೊಡೆದುಕೊಂಡು ಹೋದರು. ಮಿಸ್ ಕ್ವೆಸ್ಟೆಡ್‌ಳು ಮಲಗುವುದಕ್ಕಾಗಿ ಹೊರಟು ಹೋದ ಮೇಲೆ ಮೂರಳು ತನ್ನ ಮಗನೊಂದಿಗೆ ಮಾತನಾಡುತ್ತ ಕುಳಿತಳು.

ರೋನಿಗೆ ಮಸೀದೆಯಲ್ಲಿಯ ಆ ಮುಸಲ್ಮಾನ ಡಾಕ್ಟರನು ಯಾರೆಂಬುದನ್ನು ಗೊತ್ತುಹಚ್ಚಬೇಕಾಗಿತ್ತು. ಸಂಶಯಾರ್ಹ ಜನರ ವಿಷಯವಾಗಿ ರಿಪೋರ್ಟು ಮಾಡುವುದೂ ಅವನದೊಂದು ಕರ್ತವ್ಯವಾಗಿತ್ತು. ಬಹುಶಃ ರಾತ್ರಿಯಲ್ಲಿ ಬಜಾರದಿಂದ ತಪ್ಪಿಸಿ ಹೊರಬಿದ್ದ ಆ ಹಲಕಟ್ ಹಕೀಮನೇ ಇವನಾಗಿರಬೇಕೆಂದು ಅವನ ಊಹೆ.

'ಮಿಂಟೋ ಆಸ್ಪತ್ರೆಗೆ ಸಂಬಂಧಪಟ್ಟವನಂತೆ!' ಎಂದು ಮೂರಳು ಹೇಳಿದೊಡನೆಯೆ ಅವನು ತನ್ನ ಸಂಶಯ ಪರಿಹಾರವಾಗಿ 'ಅವನು ಅಝೀಜನೇ ಇರಲಿಕ್ಕೆ ಬೇಕು ಅಡ್ಡೀ ಇಲ್ಲ; ಒಳ್ಳೆಯ ಮನುಷ್ಯ. ಅವನ ವಿರುದ್ಧ ಏನೂ ಇಲ್ಲ.' ಎಂದು ನುಡಿದನು.

'ಅಝೀಜ! ಎಂಥ ಮನೋಹರವಾದ ಹೆಸರು!'

'ಹಾಗಾದರೆ ನಿನಗೂ ಅವನಿಗೂ ಮಾತಾಯಿತು! ಅವನ ನಡತೆ ಚೆನ್ನಾಗಿತ್ತೆಂದು ನಿನಗನಿಸಿತೇ?'

ಈ ಪ್ರಶ್ನೆಯ ಮರ್ಮವನ್ನರಿಯದೆ 'ಬಹಳ ಚೆನ್ನಾಗಿತ್ತು, ಮೊದಲಿನ ಕಾವು ಇಳಿದ ಮೇಲೆ. ಎಂದು ಉತ್ತರ ಕೊಟ್ಟಳು.'

'ನನ್ನರ್ಥ, ಒಟ್ಟಿನಲ್ಲಿ ಹೇಗೆ ಎಂದಿತ್ತು. ನಮ್ಮನ್ನವನು ಸಹನೆಯಿಂದ ನೋಡುತ್ತಾನೋ? ಅಥವಾ ಗೆದ್ದ ಪಶುಗಳು—ಬಿಸಿಲುಂಡ ನಿರಂಕುಶರು—ಇತ್ಯಾದಿ ಇವೇ ಮೊದಲಾದವೇನಾದರೂ....?'

'ಹೌದು, ಸಹನೆಯಿಂದ ನೋಡುತ್ತಾನೆ. ಆದರೆ ಕ್ಯಾಲೆಂಡರ ಮನೆತನದವರನ್ನು ಬಿಟ್ಟು ಮಾತ್ರ. ಅವರನ್ನು ಅವನು ಏನೂ ಲೆಕ್ಕಿಸುವುದಿಲ್ಲ.'

'ಓಹೋ! ಅದನ್ನವನು ನಿನಗೆ ಹೇಳಿದನೇನು? ಮೇಜರರಿಗೆ ಇದು ಬೇಕಾದ ಸುದ್ದಿ. ಅವನಾಡಿದ ಮಾತಿನ ಗುರಿಯೇನಿತ್ತೆಂಬುದು ನನಗೆ ತಿಳಿಯದು.'

'ರೋಸಿ! ರೋಸಿ! ಈ ಸುದ್ದಿಯನ್ನು ಮೇಜರ ಕ್ಯಾಲೆಂಡರನ ಕಿವಿಗೆ ನೀನು ಮುಟ್ಟಿಸುವುದಿಲ್ಲವಷ್ಟೇ?'

'ಹೌದು, ಹಾಗೆ ನೋಡಿದರೆ ಮುಟ್ಟಿಸಲೇಬೇಕು.'

'ಆದರೆ ನನ್ನ ಮುಂದಿನ ಚಿನ್ಹಾ....

'ನನ್ನನ್ನು ನನ್ನ ಕೈಕೆಳಗಿನವರು ದ್ವೇಷಿಸುತ್ತಾರೆಂದು ಮೇಜರ ಕ್ಯಾಲೆಂಡರರಿಗೆ ತಿಳಿದರೆ ಅವರು ನನಗೆ ಅದನ್ನು ತಿಳಿಸಬೇಕೆಂದು ನನ್ನ ಅಪೇಕ್ಷೆಯಿದೆ.'

'ಆದರೆ ಮಗೂ, ಅದು ನಮ್ಮನಮ್ಮೊಳಗಿನ ಖಾಸಗೀ ಮಾತು.'

'ಹಿಂದುಸ್ತಾನದಲ್ಲಿ ಖಾಸಗೀ ಒಂದುಂ ಯಾವುದೂ ಇಲ್ಲ. ಆಯ್ಬೋ ಜನಿಗೂ ಈ ಮಾತು ಗೊತ್ತಿಲ್ಲದೆ ಇಲ್ಲ. ಗೊತ್ತಿದ್ದೇ ನಿನ್ನಲ್ಲಿ ಹೇಳಿದ್ದಾನೆ. ನೀನೇನು ಅಷ್ಟು ತೊಂದರೆಪಟ್ಟುಕೊಳ್ಳುವ ಕಾರಣವಿಲ್ಲ. ಏನೋ ಒಂದು ಉದ್ದೇಶವನ್ನಿಟ್ಟುಕೊಂಡೇ ಅವನು ಹಾಗೆ ಮಾತಾಡಿದ್ದಾನೆ. ಅವನಾಡಿದ ಮಾತು ಸತ್ಯವಲ್ಲವೆಂದು ನನ್ನ ಆತ್ಮವಿಶ್ವಾಸವಿದೆ.'

'ಅದು ಹೇಗೆ ಸತ್ಯವಲ್ಲ?'

'ನಿನ್ನ ಮೇಲೆ ಪರಿಣಾಮವಾಗಬೇಕೆಂದೇ ಅವನು ಮೇಜರನನ್ನು ಬೈದಿದ್ದಾನೆ.'

'ನನಗೆ ನಿನ್ನ ಮಾತಿನ ಅರ್ಥವೇ ಆಗಲೊಲ್ಲದು.'

'ಇದೊಂದು ಈ ಸುಶಿಕ್ಷಿತ ದೇಶೀ ಜನರ ಇತ್ತೀಚಿನ ಯುಕ್ತಿ; ಹಿಡಿ ತಕ್ಕೆ ಹಿಡಿತ. ಮೊದಲಿನವರು ಜೀಜೀ ಮಾಡುತ್ತಿದ್ದರು. ಆದರೆ ಈಗಿನ ಈ ತರುಣ ವರ್ಗವು ಗಂಡುತನದ ಸ್ವಾತಂತ್ರ್ಯದ ತೋರಿಕೆಯಲ್ಲಿ ನಂಬುತ್ತಿದೆ. ಈ ದೇಶೀಯರು ಬಾಗಿ ನಡೆಯಲಿ, ನೆಟೆದು ನಡೆಯಲಿ ಹೇಗೇ ಇದ್ದರೂ ಅವರ ಮಾತಿನಲ್ಲಿ ಹಿಂದೆ ಒಂದು ಉದ್ದೇಶವಿದ್ದೇ ಇರುತ್ತದೆ. ಏನಿಲ್ಲೆಂದರೂ ಕೊನೆಗೆ—ಬಿಚ್ಚುಮಾತಿನಲ್ಲ ಹೇಳುವದಾದರೆ—ತನ್ನ ಪ್ರತಿಷ್ಠೆ ಬೆಳೆಯಿಸಿ ಕೊಳ್ಳುವುದಾದರೂ ಇರುತ್ತದೆ. ಇದಕ್ಕೆ ಅಪವಾದಗಳೂ ಇವೆ'

'ನೀನು ನಿನ್ನ ದೇಶದಲ್ಲಿ ಎಂದೂ ಜನರ ನಡತೆಯ ಬೆಲೆಯನ್ನು ಹೀಗೆ ಕಟ್ಟುತ್ತಿರಲಿಲ್ಲ?'

'ಹಿಂದುಸ್ತಾನ ನನ್ನ ದೇಶವಲ್ಲ' ಎಂದು ಸ್ವಲ್ಪ ಮೊಂಡುತನದಿಂದ ಉತ್ತರ ಕೊಟ್ಟನು. ತನ್ನ ತಾಯಿಯ ಬಾಯಿ ಕಟ್ಟುವುದಕ್ಕಾಗಿ ಅವನು ತನ್ನ ಮಾತಿನಲ್ಲಿ ತನಕಿಂತ ಈ ದೇಶದಲ್ಲಿ ಹಿಂದಿದ್ದ ಅಧಿಕಾರಸ್ಥರ ಮಾತುಗಳನ್ನು ವಿಚಾರಗಳನ್ನು ಬೆರೆಸಿಕೊಂಡಿದ್ದನು. ಅಂತೆಯೆ ಮಾತನಾಡುವುದರಲ್ಲಿ ತನಗೇ ವಿಶ್ವಾಸವಿದಿಲ್ಲ. 'ಇದಕ್ಕೆ ಅಪವಾದಗಳೂ ಇವೆ.' ಇದು ಟರ್ಟನ್ನನ ಮಾತು,—'ಪ್ರತಿಷ್ಠೆ ಹೆಚ್ಚಿಸಿಕೊಳ್ಳುವುದು' ಇದು ಮೇಜರ ಕ್ಯಾಲೆಂಡರ ನದು. ಈ ಮಾತುಗಳು ಕ್ಲಬ್ಬಿನಲ್ಲಿ ಬಳಕೆಯಲ್ಲಿದ್ದವು. ಮೂರಳು ಇನ್ನೊಬ್ಬರ ಮಾತು, ಅವನ ಮಾತು ಯಾವು ಎಂಬುದನ್ನು ಕಂಡುಹಿಡಿಯುವಷ್ಟು ಚತುರಳಿದ್ದಳು. ಅಂತೇ ಅವಕ್ಕಾಗಿ ಪ್ರತ್ಯಕ್ಷ ಉದಾಹರಣೆಗಳನ್ನು ಕೊಡ ಬೇಕೆಂದು ಕೇಳಬಹುದಾಗಿತ್ತು. ಅವಳಿಷ್ಟೇ ಎಂದಳು. 'ನೀನನ್ನುವುದು ಯೋಗ್ಯವೆಂಬುದನ್ನು ನಾನು ಅಲ್ಲಗಳೆಯಲಾರೆ. ಆದರೆ ಡಾಕ್ಟರ ಅಝೀಜನ ವಿಷಯದಲ್ಲಿ ನಾನು ತಿಳಿಸಿದ್ದನ್ನು ನೀನು ಮೇಜರ ಕ್ಯಾಲೆಂಡರರಿಗೆ ಹೇಳ ಬಾರದು.'

ಇದಕ್ಕೆ ಒಪ್ಪುವುದರಿಂದ ತನ್ನವರಿಗೇ ತಾನು ಅನ್ಯಾಯ ಮಾಡಿದಂತಾಗುತ್ತದೆಂದು ಅವನಿಗನಿಸಿದರೂ 'ಹಾಗಾದರೆ ಅದಕ್ಕೆ ಪ್ರತಿಯಾಗಿ ನೀನು ಅಡೀಲಾಳೆದುರಿಗೆ ಅಝೀಜನ ವಿಷಯವನ್ನು ಹೇಳಬಾರದು?' ಎಂದು ಪ್ರತಿಯಾಗಿ ಕೇಳಿದನು.

'ಅಡೀಲಾಳೆದುರಿಗೆ ಅವನ ವಿಷಯ ಹೇಳಬಾರದು? ಯಾಕೆ?'

'ನೋಡಿದೆಯಾ, ಮತ್ತೆ ನೀನು ಹಾದೀ ಹಿಡಿದೆ. ಎಲ್ಲವನ್ನೂ ನಿನಗೆ ಬಿಚ್ಚಿ ಹೇಳಲಿಕ್ಕೆ ನನಗೆ ಬರುವುದಿಲ್ಲ ಅಡೀಲಾಳಿಗೆ ತೊಂದರೆಯಾಗಬಾರದೆಂಬುದೇ ನನ್ನ ಆಶೆ; ಯಾಕಂದರೆ, ನಾವು ದೇಶೀ ಜನರನ್ನು ಒಳ್ಳೆಯ ರೀತಿಯಿಂದ ನಡೆಯಿಸಿಕೊಳ್ಳುವೆವೋ ಇಲ್ಲವೋ? ಇವೇ ಮೊದಲಾದ ಸಲ್ಲದ ಪ್ರಶ್ನೆಗಳನ್ನು ತಲೆಯಲ್ಲಿ ಹಾಕಿಕೊಂಡು ಸುಮ್ಮನೆ ತಲೆ ಕೆಡಿಸಿಕೊಳ್ಳುವಳು.'

'ಅಡೀಲಾ ಆ ತೊಂದರೆ ತೆಗೆದುಕೊಳ್ಳಬೇಕೆಂದೇ ಇಲ್ಲಿಗೆ ಬಂದಿದ್ದಾಳೆ. ಹಡಗದಲ್ಲಿದ್ದಾಗಲೆ ನನ್ನೊಡನೆ ಎಲ್ಲವನ್ನೂ ಚರ್ಚಿಸಿದ್ದಾಳೆ. ಅವಳು ಹೇಳಿದ್ದೇನಂದರೆ—ನೀನು ಆಟದಲ್ಲಿರುವಾಗ ಅವಳು ನಿನ್ನನ್ನು ಪೂರ್ಣ ಬಲ್ಲಳಂತೆ;

ಆದರೆ ಕೆಲಸದಲ್ಲಿರುವಾಗ ಹೇಗೆ ? ಎಂಬುದನ್ನು ಅವಳರಿಯಳಂತೆ. ಅಂತೆಯೆ ಮದುವೆಯ ಬಗ್ಗೆ ತಾನಾಗಲಿ, ನೀನಾಗಲಿ, ನಿಶ್ಚಯಕ್ಕೆ ಬರುವ ಮೊದಲೆ ಒಮ್ಮೆ ಬಂದು ನೋಡಿಕೊಂಡು ತಿಳಿದುಕೊಳ್ಳಬೇಕೆಂದೆನಿಸಿತಂತೆ—ಬಂದಿದ್ದಾಳೆ. ಮುಚ್ಚುಮರೆಯಿಲ್ಲದ ಬಹಳ ಸರಳ ಸ್ವಭಾವ ಹುಡುಗಿಯದು !

'ಗೊತ್ತಿದೆ.' ಉದಾಸೀನತೆಯಿಂದ ನುಡಿದನು.

ಅವನ ದನಿಯಲ್ಲಿಯ ಚಿಂತೆಯನ್ನು ಗುರುತಿಸಿ ಮೂರಳು ಅವನಿನ್ನೂ ಚಿಕ್ಕ ಹುಡುಗನೆಂದೇ ಭಾವಿಸಿ, ಅವನು ಒಯಸಿದ್ದನ್ನು ಒದಗಿಸಿಕೊಡಬೇಕೆಂದು, ಅವನ ಮಾತಿಗೆ ಒಪ್ಪಿ, ಅವನನ್ನು ಮುದ್ದಿಟ್ಟು ಮಲಗಲಿಕ್ಕೆ ಹೊರಟು ಬಂದಳು.

ಅಝೀಜನ ವಿಷಯಕ್ಕೆ ತಾನೇನು ವಿಚಾರಿಸಕೂಡದೆಂದು ಅವನು ನಿರ್ಬಂಧ ಹಾಕಿರದ್ದರಿಂದ ಕೋಣೆಗೆ ಬಂದೊಡನೆಯೆ ಅದನ್ನೇ ವಿಚಾರಿಸ ಹತ್ತಿದಳು. ತನ್ನ ಮಗನು ಟೀಕೆಮಾಡಿ ತೋರಿಸಿಕೊಟ್ಟ ಹಾದಿಯಿಂದ ಮತ್ತೊಮ್ಮೆ ಆ ಮಸೀದೆಯೊಳಗಿನ ದೃಶ್ಯವನ್ನೆಲ್ಲ ನೆನೆದಳು. ಯಾರ ಮಾತು ಸರಿಯೆಂದು ತೂಗಿ ನೋಡಿದಳು. ಆಗ ಅದೇ ದೃಶ್ಯವೇ ಅಸಮಾಧಾನವನ್ನು ಕೊಡುವಂತಹದೂ ಆಗಬಹುದೆಂದೆನಿಸಿತು. ಡಾಕ್ಟರನು ಮೊದಲು ಅವಳನ್ನು ಬೆದರಿಸಿದ್ದು—ಮೊದಲು ಮಿಸೆಸ್ ಕ್ಯಾಲೆಂಡರಳು ಒಳ್ಳೆಯವಳೆಂದದ್ದು—ಎಲ್ಲವೂ ಸರಿಯೆಂದು ಗೊತ್ತಾದ ಮೇಲೆ ಆ ಮಾತು ಹೊರಳಿಸಿದ್ದು—ಒಮ್ಮೆ ತನ್ನ ದುಃಖಗಳನ್ನೆಲ್ಲ ತೋಡಿಕೊಂಡು ನರಳಿದ್ದು—ಇನ್ನೊಮ್ಮೆ ತನ್ನ ಬೆನ್ನು ಕಟ್ಟಿ ಮಾತನಾಡಿದ್ದು—ಒಂದೇ ವಾಕ್ಯದಲ್ಲಿ ಹನ್ನೆರಡು ತರಹದ ಮಾತಾಡಿದ್ದು-ಒಮ್ಮೆ ಅವಿಶ್ವಾಸಿಕನಂತೆಯೂ, ಇನ್ನೊಮ್ಮೆ ಗುಟ್ಟುಗಳ್ಳನಂತೆಯೂ, ಮತ್ತೊಮ್ಮೆ ಇಲ್ಲದ ದೊಡ್ಡಿಸ್ತಿಕೆಯುಳ್ಳವನಂತೆಯೂ ತೋರಿದ್ದು—ಎಲ್ಲವೂ ಅವಳ ಕಣ್ಣೆದುರಿಗೆ ಹಾಯ್ದುಹೋಯಿತು. 'ಇದೆಲ್ಲ ಸರಿಯೇ. ಆದರೆ ಇಷ್ಟರ ಮೇಲಿಂದಲೇ ಒಬ್ಬ ಮನುಷ್ಯನ ಪೂರ್ಣ ಬೆಲೆ ಕಟ್ಟುವುದು ಎಷ್ಟು ತಪ್ಪಾಗುವುದು ? ಅವನ ತಿರುಳುಜೀವನದ ಕೊಲೆ ಮಾಡಿದಂತೆಯೇ ಇದು !' ಎಂದುಕೊಂಡಳು.

ಮೈಮೇಲಿನ ಅರಿವೆಗಳನ್ನು ತೆಗೆದು ಗೂಟಕ್ಕೆ ಹಾಕಲಿಕ್ಕೆ ಹೋದಾಗ ಆ ಗೂಟದ ಮೇಲೆ ಒಂದು ಕಡಿಜೇರಿಗೆ ಹುಳು ಕೂತದ್ದನ್ನು ನೋಡಿದಳು.

ಹಗಲುಹೊತ್ತಿನಲ್ಲಿ ಈ ಹುಳುವನ್ನೂ ಇದರ ಬಳಗವನ್ನೂ ಅವಳು ಚೆನ್ನಾಗಿ ನೋಡಿದ್ದಳು. ಅವು ಇಂಗ್ಲೀಷು ಕಡಿಜೀರಿಗೆಯಂತೆ ಇದ್ದಿದ್ದಿಲ್ಲ. ಇವಕ್ಕೆ ಉದ್ದನ್ನ ಹಳದೀ ಕಾಲುಗಳಿದ್ದುವು; ಹಾರುವಾಗ ಅವು ಹಿಂದೆ ಜೋತು ಬೀಳುತ್ತಿದ್ದುವು. 'ಈ ಹುಳುವು ಈ ಗೂಟವನ್ನು ಒಂದು ಗಿಡದ ಟೊಂಗೆಯೆಂದೇ ತಿಳಿದಿರಬಹುದಲ್ಲವೇ? ಹಿಂದುಸ್ತಾನದ ಯಾವ ಪ್ರಾಣಿಗೂ ಹೀಗೆಯೇ—ಇದ್ದದ್ದೊಂದು, ತಿಳಿದುಕೊಳ್ಳುವದಿನ್ನೊಂದು. ತೊಗಲಬಾವಲಿಗಳು, ಹೆಗ್ಗಣಗಳು, ಪಕ್ಷಿಗಳು, ಕೀಟಕಗಳು ಎಲ್ಲಾ ಹೊರಗೆ ಮನೆಮಾಡುವಂತೆ ಮನೆಯಲ್ಲಿಯು ಮನೆಮಾಡುತ್ತವೆ. ಅವುಗಳಿಗೆ ಮನೆಯೆಂದರೆ ಆ ಅನಂತ ಅರಣ್ಯದ ಸ್ವಾಭಾವಿಕ ಪರಿಣಾಮದ ಒಂದು ರೂಪವೇ ಎಂದು ಕಲ್ಪನೆ! ಆ ಹುಳು ಅಲ್ಲಿಯೇ ಗಟ್ಟಿಯಾಗಿ ಹಿಡಿದುಕೊಂಡು ನಿದ್ರೆಹೋಗಿತ್ತು. ಇತ್ತಕಡೆ ಹೊರಗೆ ಬೈಲಲ್ಲಿ ಕೂಗುತ್ತಿದ್ದ ನರಿಗಳ ಕೂಗು ನಗಾರಿಗಳ ಸಪ್ಪಳದೊಂದಿಗೆ ಕೇಳಬರುತ್ತಿತ್ತು.

'ಅಯಾ! ನನ್ನ ಮುದ್ದೇ!' ಎಂದು ಮೂರಳು ಕಡಿಜೀರಿಗೆಗೆ ನುಡಿದಳು. ಅದಕ್ಕೇನು ಎಚ್ಚರಿಕೆಯಾಗಲಿಲ್ಲ. ಆದರೆ ಅವಳ ದನಿಯು ಹೊರಗೆ ತೇಲಿಹೋಗಿ ರಾತ್ರಿಯ ಅಸಮಾಧಾನವನ್ನು ಮಾತ್ರ ಹೆಚ್ಚಿಸಿತು.

—

## ಪ್ರಕರಣ ೪

ಕಲೆಕ್ಟರನು ತನ್ನ ಮಾತಿನಂತೆ ನಡೆದನು. ಮರುದಿವಸ ನೆರೆಹೊರೆಯ ಅನೇಕ ಹಿಂದೀ ಗೃಹಸ್ಥರಿಗೆಲ್ಲ ಆಮಂತ್ರಣ ಪತ್ರಗಳನ್ನು ಕಳಿಸಿದನು. ಅದರಲ್ಲಿ, ತಾನು ಕ್ಲಬ್ಬಿನ ತೋಟದಲ್ಲಿ ಮಂಗಳವಾರ ಸಂಜೆಯ ಐದರಿಂದ ಏಳರ ನಡುವೆ ಸಂತೋಷಕೂಟವನ್ನು ಏರ್ಪಾಡು ಮಾಡಿರುವನೆಂದೂ ಹೆಣ್ಣುಮಕ್ಕಳನ್ನೆಲ್ಲ—ಪರದಾಪದ್ಧತಿಯಿಲ್ಲದವರ—ಸ್ವಾಗತಿಸಲು ಮಿಸೆಸ್ ಟರ್ಟನ್ನಳು ಸಿದ್ಧಳಿರುವಳೆಂದೂ ತಿಳಿಸಿದ್ದನು. ಅವನ ಈ ಆಮಂತ್ರಣವು ಬಹಳ ಗಡಿಬಿಡಿಯನ್ನೆಬ್ಬಿಸಿತು. ಎಲ್ಲೆಲ್ಲಿಯೂ ಅದರ ಮೇಲೆ ಊಹಾಪೋಹಗಳು ನಡೆಯಹತ್ತಿದವು.

'ಇದು ಲೆಫ್ಟನೆಂಟ ಗವ್ಹರ್ನರರ ಆಜ್ಞೆಯಿಂದಲೇ ಆಗಿದೆ' ಎಂದು ಮುಹಮ್ಮದಲಿ ಅದರ ಕಾರಣಮೀಮಾಂಸೆಯನ್ನು ಮಾಡಿ 'ಟರ್ಟನ್ನನು ಮೇಲಿನವರಿಂದ ಒದಿಕೆ ಬರದಿದ್ದರೆ, ಂದೂ ಹೀಗೆ ಮಾಡುವ ಮನುಷ್ಯನಲ್ಲ. ಏನೇ ಅನ್ನಿರಿ, ಆ ಮೇಲಿನ ಅಧಿಕಾರಿಗಳ ಮಾತೇ ಬೇರೆ. ಅವರು ಸಹಾನುಭೂತಿಯನ್ನು ತೋರಿಸುವರು; ವೈಸರಾಯರೂ ತೋರಿಸುವರು. ನಮ್ಮನ್ನು ಸರಿಯಾಗಿ, ಮಾನಕ್ಕೆ ತಕ್ಕಂತೆ ನಡೆಸಿಕೊಳ್ಳಬೇಕೆಂದು ಅವರ ಆಶೆಯಿದೆ. ಆದರೆ ಅವರಿತ್ತ ಒರುವುದೇ ಆಸಿಗ್ಗೊಮ್ಮೆ ಬೇಸಿಗ್ಗೊಮ್ಮೆ; ಇರುವುದೂ ಬಹಳ ದೂರದಲ್ಲಿ. ಅದರೊಳಗೂ....' ಎಂದು ಮಾತು ಹರಿಬಿಟ್ಟನು.

'ದೂರದಿಂದ ಸಹಾನುಭೂತಿ ತೋರಿಸುವುದು ಬಹಳ ಸುಲಭ. ನನ್ನ ಕಿವಿಯ ಹತ್ತಿರ ಮಾತಾಡದ ಅಂತಃಕರಣದ ಮಾತಿಗೇ ನಾನು ಹೆಚ್ಚು ಬೆಲೆ ಕೊಡುತ್ತೇನೆ. ಕಾರಣವೇನೇ ಇರಲಿ. ಮಿಸ್ಟರ ಟರ್ಟನ್ನರು ಅಂಥ ಮಾತನ್ನಿಲ್ಲಿ ಆಡಿದ್ದಾರೆ. ಅವರು ಆಡಿದ್ದಾರೆ, ನಾವು ಕೇಳಿದ್ದೇವೆ ಮುಂದೆ ಅದನ್ನು ಯಾಕೆ ಹೆಚ್ಚು ಚರ್ಚಿಸಬೇಕು, ನನಗೆ ತಿಳಿಯಲೊಲ್ಲದು' ಎಂದು ಗಡ್ಡಬಿಟ್ಟ ಒಬ್ಬ ಮುದುಕ ಗೃಹಸ್ಥನು ಪಡಿನುಡಿದನು. ಅಲ್ಲದೆ ಮುಂದೆ ಕುರಾನದೊಳಗಿನ ವಾಕ್ಯಗಳನ್ನು ಸಾಕ್ಷಿಗೆ ತಂದನು.

'ನವಾಬ ಬಹದ್ದೂರ ಸಾಹೇಬ! ತಮ್ಮ ಈ ಮೃದುಮಧುರ ಸ್ವಭಾವ ಮತ್ತು ಪಾಂಡಿತ್ಯ ಯಾವುದೂ ನಮ್ಮಲ್ಲಿಲ್ಲ?'

'ಲೆಫ್ಟನೆಂಟ ಗವ್ಹರ್ನರರು ನನ್ನ ಕೇವಲ ಮಿತ್ರರಿರಬಹುದು. ಆದರೂ ನಾನೇನು ಅವರಿಗೆ ತೊಂದರೆ ಕೊಡುವುದಿಲ್ಲ. 'ನವಾಬ ಬಹದ್ದೂರರೇ! ಚೆನ್ನಾಗಿದ್ದೀರಾ?' ಎಂಗರೆ 'ಚೆನಾ ಗಿದ್ದೇನ, ನಿಮ್ಮ ದಯೆಯಿಂದ ಸರ್ ಗಿಲ್ಬರ್ಟರೇ. ನೀವೂ ಚೆನ್ನಾಗಿದ್ದೀರಾ?' ಎಂದು ಉತ್ತರ; ಎಲ್ಲವೂ ಮುಗಿಯಿತು. ಆದರೆ ಇಲ್ಲಿ ನಾನು ಮೈಯಲ್ಲಿ ನೆಟ್ಟ ಮುಳ್ಳಿನಂತೆ ಟರ್ಟನ್ನನಿಗೆ ಇರಬಹುದು. ಅಂತೆಯೆ ಅವನು ಆಮಂತ್ರಿಸಿದರೆ ಮರುಮಾತಿಲ್ಲದೆ ಸ್ವೀಕರಿಸುತ್ತೇನೆ ನಾನು 'ದಿಲ್‌ಖುಶ್'ದಿಂದ ಮುದ್ದಾಂ ಬರುತ್ತೇನೆ,–ಎಷ್ಟೋ ಕೆಲಸಗಳನ್ನು ಮುಂದೆ ಹಾಕಬೇಕಾದರೂ ಚಿಂತೆಯಿಲ್ಲ.'

'ಹೀಗೆ ಮಾಡುವುದರಿಂದ ನೀವು ಬಹಳ ಅಗ್ಗವಾಗುವಿರಿ' ಎಂದು ಒಮ್ಮಿಂದೊಮ್ಮೆ ಒಬ್ಬ ಗಿಡ್ಡ ಕಪ್ಪು ಮನುಷ್ಯನು ನುಡಿದುಬಿಟ್ಟನು.

ಎಲ್ಲ ಕಡೆಗೂ ಇದಕ್ಕೆ ವಿರೋಧವು ಕಂಡುಬಂದಿತು. 'ಇವನಾರು ಈ ಅಶಿಕ್ಷಿತ ಆಗಂತುಕನು? ನಮ್ಮ ಇಡಿ ಜಿಲ್ಲೆಯಲ್ಲಿ ಪ್ರಸಿದ್ಧನಿದ್ದ ಮುಂಸಲ್ಮಾನ ಜಮಾನದಾರನನ್ನು ಟೀಕೆ ಮಾಡುತ್ತಾನೆ?' ಮಹಮ್ಮದಲಿಯ ಅಭಿಪ್ರಾಯವು ಆ ಗಿಡ್ಡ ಮನುಷ್ಯನಂತೆ ಇದ್ದರೂ ಅವನೂ ಅದಕ್ಕೆ ವಿರೋಧಿಸಬೇಕಾಯಿತು. 'ಏನು ಮಿಸ್ಟರ ರಾಮಚಂದ!' ಎಂದು ಅವನು ಟೊಂಕದ ಮೇಲೆ ಕೈಯಿಟ್ಟುಕೊಂಡು ಸೆಟೆದು ಮುಂದಕ್ಕೆ ಒಂದು ನುಡಿದನು.

'ಏನು ಮಿಸ್ಟರ ಮಹಮ್ಮದಲಿ!'

'ಮಿಸ್ಟರ ರಾಮಚಂದ, ನವಾಬ ಬಹದ್ದೂರರು ನಮ್ಮ ಅಭಿಪ್ರಾಯ ತಕ್ಕೊಳ್ಳದೇ ಅಗ್ರ ಯಾವುದೆಂಬುದನ್ನು ನಿರ್ಣಯಿಸಬಲ್ಲರೆಂದು ನನಗನಿಸುತ್ತದೆ!'

'ಆದರಿಂದ ನಾನೇನು ಅಗ್ರವಾಗಲಿಕ್ಕಿಲ್ಲೆಂದು ನನಗೆ ತೋರುತ್ತದೆ' ಎಂದು ನವಾಬ ಬಹದ್ದೂರರು ತಮಗೆ ರಾಮಚಂದನು ಅಸಭ್ಯತನದಿಂದ ಮಾತನಾಡಿದನೆಂದು ಗೊತ್ತಿದ್ದರೂ ಅದರ ಪರಿಣಾಮವು ವಿಕೋಪಕ್ಕೆ ಹೋಗಬಾರದೆಂದು ಅವರು ಆಶಿಸುತ್ತಿದ್ದುದರಿಂದ ರಾಮಚಂದನಿಗೆ ಒಳ್ಳೆ ಸೌಮ್ಯವಾಗಿ ಉತ್ತರ ಕೊಟ್ಟರು. ಆದರೆ ಅವರ ಮನಸ್ಸಿನಲ್ಲ, 'ನಾನು ಆದರಿಂದ ಅಗ್ರವಾಗುವೆನೆಂದು ನನಗೆ ಅನಿಸುತ್ತದೆ' ಎಂದೇ ಉತ್ತರ ಕೊಡಬೇಕೆಂದಿತ್ತು. ಆದರೆ ಅದೂ ಸ್ವಲ್ಪ ಅಸಭ್ಯತನದ ಉತ್ತರವಾಗಬಹುದೆಂದು ತಿಳಿದು ಬಿಟ್ಟುಬಿಟ್ಟರು. 'ನಮ್ಮನ್ನು ನಾವೇ ಯಾಕೆ ಅಗ್ರಮಾಡಿಕೊಳ್ಳಬೇಕು ನನಗೆ ತಿಳಿಯುವದಿಲ್ಲ! ಆಮಂತ್ರಣವನ್ನಂತೂ ಒಳ್ಳೆ ಮರ್ಯಾದೆಯಿಂದ ಬರೆದಿದ್ದಾರೆ!' ಎಂದು ತನ್ನ ಮತ್ತು ಅವರ ನಡುವೆ ಸಮಾಜದೊಳಗೆ ಇವನು ಹೆಚ್ಚು ಅಥವಾ ಕಡಿಮೆ ಎಂಬ ದೃಷ್ಟಿಯಿಂದ—ಬೆಳೆದು ಬಂದ ಅಂತರವನ್ನು ಇದಕ್ಕೂ ಕಡಮೆ ಮಾಡಲು ಸಾಧ್ಯವಿಲ್ಲೆಂದೆನಿಸಿ ತನ್ನೊಡನೆ ಬಂದ ತನ್ನ ಮುದ್ದು ಮೊಮ್ಮಗನನ್ನು ಕರೆದು ಮೋಟರ ಗಾಡಿಯನ್ನು ತರಲಿಕ್ಕೆ ಕಳುಹಿದನು. ಮೋಟರು ಬಂದ ಮೇಲೆ ತಾನು ಇಲ್ಲಿಯ ವರೆಗೆ ಅಂದದ್ದನ್ನೆಲ್ಲ ಮತ್ತೊಮ್ಮೆ ಅಂದು ಕೊನೆಗೆ 'ಹಾಗಾದರೆ ಮಂಗಳವಾರದ ವರೆಗೆ— ಎಲ್ಲ ಸಭ್ಯಗೃಹಸ್ಥರಿಗೂ ನಮಸ್ಕಾರ! ಆ ಕ್ಲಬ್ಬಿನ ಹೂದೋಟದಲ್ಲಿ

ಮತ್ತೆ ನಾವೆಲ್ಲರೂ ಭೆಟ್ಟಿಯಾಗುವೆವೆಂದು ನಾನು ಅಪೇಕ್ಷಿಸುತ್ತೇನೆ' ಎಂದು ಮುಗಿಸಿದನು.

ನವಾಬರ ಈ ಅಭಿಪ್ರಾಯಕ್ಕೆ ಬಹಳ ಮಹತ್ವ ಬಂತು. ಯಾಕಂದರೆ ಒಹದ್ದೂರರು ಒಳ್ಳೆ ಆಸ್ತಿವಂತರು; ದಾನಶೀಲರು; ಪರೋಪಕಾರಿಗಳು; ದಯಾವಂತರು; ಮತ್ತು ಗಟ್ಟಿಮನಸ್ಸಿನವರು. ಆ ಪ್ರಾಂತದ ಎಲ್ಲ ಸಮಾಜಗಳಲ್ಲೂ ಅವರು ಗುಣಾಢ್ಯರೆಂದು ಖ್ಯಾತಿಗೊಂಡಿದ್ದರು. ಧೈರ್ಯದಿಂದ ಮುಚ್ಚುಮರೆಯಿಲ್ಲದೆ ಶತ್ರುವಾಗಿ ಎದುರು ನಿಲ್ಲುವ ಗಟ್ಟಿಗರವರು; ಅಷ್ಟೇ ಗೆಳೆತನದಲ್ಲಿಯೂ ಅಚಲವಾದ ವಿಶ್ವಾಸಿಕರು. ಅವರ ಆದರಾತಿಥ್ಯವಂತೂ ಗಾದೆಯ ಮಾತಿಗೆ ಇಳಿದುಬಿಟ್ಟಿತ್ತು. "ಕೊಟ್ಟರೆ ಅತ್ತವೇ ಕೊಡಿರಿ; ಕಡವಾಗಿ ಕೊಡಬೇಡಿರಿ. ಸತ್ತಮೇಲೆ ನಿಮ್ಮನ್ನು ಯಾರು ನೆನೆಸುವರು?" ಇದು ಅವರ ಪ್ರೀತಿಯ ಸೂತ್ರ. ಶ್ರೀಮಂತನಾಗಿ ಸಾಯುವುದು ನಿರ್ಲಜ್ಜತನವೆಂದು ಅವನ ಅಭಿಪ್ರಾಯ. ಇಂಥ ಮನುಷ್ಯನು ಇಪ್ಪತ್ತೆರಡು ಮೈಲು ತನ್ನ ಮೋಟಾರಿನಲ್ಲಿ ಹೋಗಿ, ಕಲೆಕ್ಟರನ ಕೈಕುಲುಕುತ್ತಾನೆಂದ ಮೇಲೆ ಆ ಸಮಾರಂಭಕ್ಕೆ ಬೇರೆ ಕಳೆಯೇ ಬಂದಿತು. ಇವರು ಕೆಲ ದೊಡ್ಡ ಮನುಷ್ಯರಂತೆ ಮೊದಲು ಬರುತ್ತೇನೆಂದು ಹೇಳಿ ಕೊನೆಗೆ ತಪ್ಪಿಸಿಬಿಟ್ಟು ಸಣ್ಣಪುಟ್ಟ ಜನರನ್ನು ಕೆಸರಲ್ಲಿ ಒದ್ದಾಡಲಿಕ್ಕೆ ಹಚ್ಚುವವರಲ್ಲ. ಬರುವೆನೆಂದು ಹೇಳಿದ ಮೇಲೆ ಬಂದೇತೀರುವವರು. ತಮಗೆ ಬೆಂಬಲ ಕೊಡುವವರನ್ನು ಎಂದೂ ಮೋಸಗೊಳಿಸುವುದಿಲ್ಲ. ಇವರ ಮಾತಿನ ಪ್ರಭಾವದಿಂದ ಅಲ್ಲಿ ಕೂಡಿದವರು ಒಬ್ಬರನ್ನೊಬ್ಬರು ಸಂತೋಷಕೂಟಕ್ಕೆ ಬರಲು ಒತ್ತಾಯಪಡಿಸಹತ್ತಿದರು. ಆದರೆ ಒಳಗೊಳಗೆ ಮಾತ್ರ ಪ್ರತಿಯೊಬ್ಬನಿಗೂ ಅವರ ಮಾತು ಸರಿಯಲ್ಲವೆಂದು ಗೊತ್ತಿತ್ತು.

ನವಾಬರು ಇಷ್ಟೆಲ್ಲ ಮಾತನಾಡಿದ್ದು ಕೋರ್ಟಿನ ಹತ್ತಿರವಿದ್ದ, ಪಕ್ಷಗಾರರಿಗಾಗಿ ವಕೀಲರು ಕಾಯುತ್ತ ಕೂಡುವ ಒಂದು ಸಣ್ಣ ಕೊಠಡಿಯಲ್ಲಿ. ವಕೀಲರಿಗಾಗಿ ಕಾಯುತ್ತಿದ್ದ ಪಕ್ಷಗಾರರು ಹೊರಗೆ ಅಂಗಳದಲ್ಲಿ ಮಣ್ಣಿನ ಮೇಲೆ ಕುಳಿತಿದ್ದರು. ಅವರಿಗೇನು ಟರ್ಟನ್ನರ ಕಡೆಯಿಂದ ಆಮಂತ್ರಣ ಬಿದ್ದಿಲ್ಲ. ಈ ಪಕ್ಷಗಾರರ ಗುಂಪನ್ನು ದಾಟಿ ಇನ್ನೂ ಎಷ್ಟೋ ಗುಂಪುಗಳಿವೆ—ಲಂಗೋಟಿಯ ಹೊರತು ಹೊದಿಯಲಿಕ್ಕೆ ಅರಿವೆ ಇಲ್ಲದವರ ಗುಂಪು

ಒಂದು—ಅದೂ ಕೂಡ ಇಲ್ಲದವರ ಗುಂಪಿನೊಂದು— ಹೀಗೆ ಮಾನವ ಜನಾಂಗವು ದೂರದೂರ ಕಲಿತವರ ದೃಷ್ಟಿಯಿಂದಾಚೆಗೆ ಮರೆಯಲ್ಲಿ ಹೋಗುತ್ತಿದೆ. ಇದಕ್ಕೆ ಭೂಮಿಯ ಮೇಲಿನ ಯಾವ ಆಮಂತ್ರಣವೂ ಮುಟ್ಟುವುದಿಲ್ಲ!

'ಎಲ್ಲ ಆಮಂತ್ರಣಗಳೂ ಸ್ವರ್ಗದಿಂದಲೇ ಬರಬೇಕು. ಮನುಷ್ಯನು ಮನುಷ್ಯ-ಮನುಷ್ಯರಲ್ಲಿ ಐಕ್ಯ ಸಾಧಿಸಲು ವ್ಯರ್ಥಪ್ರಯತ್ನಮಾಡುತ್ತಾನೆ. ಮಾಡಿದ ಪ್ರಯತ್ನಗಳೆಲ್ಲ ಅವರನ್ನು ಇನ್ನಷ್ಟು ದೂರದೂರ ಒಡೆದು ನಿಲ್ಲಿಸಲು ಹವಣಿಸುತ್ತಿವೆ' ಹೀಗೆಂದು ಯಾವಾಗಲೂ ತಿಳಿದುಕೊಂಡಿದ್ದ, ಕಟಗರ ಮನೆಯ ಆಚೆಗಿದ್ದ ಮುಪ್ಪಿನ ಗ್ರೇಜಫೋರ್ಡ ಮತ್ತು ತರುಣ ಸೋರ್ಲೆ ಎಂಬ ಸದಭಿಮಾನಿ ಮಿಶನರಿಗಳು ಎಂಥ ಪ್ರಸಂಗ ಬಂದರೂ ಮೂರನೆಯ ಕ್ಲಾಸಿನ ಡಬ್ಬಿಯಲ್ಲಿ ಪ್ರವಾಸ ಮಾಡುತ್ತಿದ್ದರು; ಮತ್ತು ಕ್ಲಬ್ಬಿಗೆ ಎಂದೂ ಬರುತ್ತಿದ್ದಿಲ್ಲ. ಅವರ ಉಪದೇಶ ಹೀಗೆ: "ನಮ್ಮ ಆ ಮಹಾತಂದೆಯ ಅರಮನೆಯಲ್ಲಿ ಬೇಕಾದಷ್ಟು ಮಂದಿರಗಳಿವೆ. ಅಲ್ಲಿ ಈ ತಾಳಮೇಳವಿಲ್ಲದ ಮನುಷ್ಯವರ್ಗಕ್ಕೆ ಯಾವಾಗಲೂ ಸ್ವಾಗತವೂ ಶಾಂತಿಯೂ ದೊರೆಯುವವು. ಅಲ್ಲಿಗೆ ಬಂದವರನ್ನು—ಅವನು ಕಪ್ಪುಮನುಷ್ಯನಿರಲಿ ಬಿಳಿಮನುಷ್ಯನಿರಲಿ— ಯಾವ ಸೇವಕನೂ ಹೊರನೂಕುವುದಿಲ್ಲ. ಪ್ರೇಮಪೂರಿತ ಹೃದಯದಿಂದ ಬಂದರೆ ಸಾಕು." ಈ ಸ್ವರ್ಗೀಯ ಆತಿಥ್ಯವು ಇಲ್ಲಿ ಏಕೆ ಇರಬಾರದು? ಮಂಗಗಳ ವಿಷಯವನ್ನೇ ತೆಗೆದುಕೊಳ್ಳೋಣ; ಅವಕ್ಕೂ ಮಂದಿರಗಳೇಕೆ ಇರಬಾರದು? ಇದಕ್ಕೆ ಮುಪ್ಪಿನ ಗ್ರೇಜಫೋರ್ಡನು 'ಇರಬಾರದು' ಎಂದನು. ಸ್ವಲ್ಪ ಸುಧಾರಿಸಿದ ಸೋರ್ಲೆಯು 'ಇರಬೇಕು' ಎಂದನು. ಮಂಗಗಳಿಗೂ ಈ ಭಾಗಾದಿಗಳ ಸುಖದ ಭಾಗವನ್ನು ಯಾಕೆ ಕೊಡಬಾರದೆಂಬುದರ ಕಾರಣವು ಅವನಿಗೆ ಗೊತ್ತಾಗಲಿಲ್ಲ. ಅವನು ಈ ವಿಷಯವನ್ನು ತನ್ನ ಹಿಂದೂ ಮಿತ್ರರೊಂದಿಗೆ ಸಹೃದಯತೆಯಿಂದ ಎಷ್ಟೋ ಸಲ ಚರ್ಚಿಸಿದ್ದನು. ಹಾಗಾದರೆ ನರಿಗಳು? ಸೋರ್ಲೆಯ ಬುದ್ಧಿಗೆ ನರಿಗಳೇನು ಅಷ್ಟು ಮಹತ್ವದವಾಗಿ ತೋರಲಿಲ್ಲ. ಆದರೆ ದೇವರ ದಯೆಯು ಅನಂತವಾದುದರಿಂದ ಎಲ್ಲ ಸ್ತನ್ಯಜೀವಿಗಳೂ ಅವಕ್ಕೆ ಪಾತ್ರವಿವೆ ಎಂದು ಒಪ್ಪಿದನು. ಮತ್ತೆ ಕಡಿಜೀರಿಗೆ ಹುಳುಗಳು? ಈ ಹುಳುಗಳ ಮಾತು ಹೊರಟ ಕೂಡಲೆ ಅವನು

ಕಕ್ಕಾವಿಕ್ಕಿಯಾದನು. ಆ ವಿಷಯವನ್ನೇ ಬದಲುಮಾಡಬೇಕೆಂದು ಹವಣಿಸಿದನು. 'ಕಿತ್ತಳೆ? ಡಬಗಳ್ಳಿ? ಸ್ಫಟಿಕ? ಕೆಸರು? ಸೋರ್ಲೆಯ ಮೈಯೊಳಗಿನ ಜೀವಾಣುಗಳು? ಛೀ! ಛೀ! ಇದು ಅತಿಯಾಯಿತು. ಕೊನೆಗೆ ನಾವು ಈ ರಾಶಿಯೊಳಗಿಂದ ಯಾವುದನ್ನಾದರೂ ಹಿಡಲಿಕ್ಕೇ ಬೇಕಾಗುವುದು. ಇಲ್ಲವಾದರೆ ನಮ್ಮ ಜೊತೆಗೇ ಯಾರೂ ಇಲ್ಲದಂತಾಗಬಹುದು!

—

## ಪ್ರಕರಣ ೫

ಬ್ರಿಜ್ ಪಾರ್ಟಿಯು ಅಷ್ಟೇನು ಯಶಸ್ವಿಯಾಗಲಿಲ್ಲ,—ಅಂದರೆ ಮಿಸೆಸ್ ಮೂರ ಮತ್ತು ಮಿಸ್ ಕ್ವೆಸ್ಟೆಡ್ ಇವರ ಕಲ್ಪನೆಯ ಪ್ರಕಾರ ಅದು ಯಶಸ್ವಿಯಾಗಲಿಲ್ಲ ಅಷ್ಟೆ. ಈ ಸಂತೋಷಕೂಟವು ಅವರಿಬ್ಬರ ಸನ್ಮಾನಾರ್ಥವಾಗಿ ಏರ್ಪಟ್ಟಿದ್ದರಿಂದ ಅವರು ಅಲ್ಲಿಗೆ ಬೇಗನೆ ಬಂದರು. ಆದರೆ ಹಿಂದೀ ಅತಿಥಿಗಳೆಲ್ಲ ಬಹುಶಃ ಇವರಿಗೂ ಮೊದಲೇ ಬಂದು ಟೆನಿಸ್ ಕೋರ್ಟದ ಅಂಗಳದ ಅತ್ತಕಡೆಗೆ ಗುಂಪುಗಟ್ಟಿ ಸುಮ್ಮನೆ ನಿಂತಿದ್ದರು.

"ಈಗಿನ್ನೂ ಐದು ಹೊಡೆದಿದೆ! ನನ್ನ ಗಂಡನು ಈಗ ಕಚೇರಿಯಿಂದ ಬಂದು ಈ ಸಮಾರಂಭವನ್ನು ಸುರುವು ಮಾಡುವನು. ಏನೇನು ಮಾಡಬೇಕೆನ್ನುವ ಕಲ್ಪನೆಯೇ ನನಗಿಲ್ಲ. ಕ್ಲಬ್ಬಿನಲ್ಲಿ ಈ ಮಾದರಿಯ ಪಾರ್ಟಿ ಕೊಟ್ಟದ್ದು ಇದೇ ಮೊದಲು. ಅಲ್ಲ, ಮಿ. ಹೆಸ್ಲೋಪರೇ! ನಾನು ಸತ್ತು ಹೋದ ಮೇಲೆ ಇಂಥ ಪಾರ್ಟಿಗಳನ್ನು ಕೊಡುತ್ತೀರಾ? ಹಳೆ ಮಾದರಿಯ ಈ ಬಡಾಸಾಹೇಬನನ್ನು ಗೋರಿಯೊಳಗಿಂದ ತಿರುಗಿ ಎಬ್ಬಿಸುವುದು ಬೇಡ. ಸಾಕಿನ್ನು ಇದು' ಎಂದು ಮಿಸೆಸ್ ಟರ್ಟನ್ನಳು ನುಡಿದಳು.

ರೋನಿಯು ಮಿಸೆಸ್ ಮೂರ ಮತ್ತು ಮಿಸ್ ಕ್ವೆಸ್ಟೆಡ್‌ಳ ಕಡೆಗೆ ಗೌರವದಿಂದ ನೋಡಿ ನಕ್ಕು 'ನಿಮಗೆ ಒಣ ಆಡಂಬರವಿಲ್ಲದ್ದು ಬೇಕಿತ್ತು. ಅದನ್ನೇ ನಾವೀಗ ಒದಗಿಸಿದ್ದೇವೆ' ಎಂದನು. 'ಈ ಟೊಪ್ಪಿಗೆ, ಚಣ್ಣ ಹಾಕಿದ ನಿಮ್ಮ ಈ ಆರ್ಯಬಂಧುಗಳು ನಿಮಗೆ ಹೇಗೆ ಕಾಣುತ್ತಾರೆ?'

ಇದಕ್ಕೆ ಮಿಸ್ ಕ್ವೆಸ್ಟೆಡ್‌ಳೂ ಉತ್ತರ ಕೊಡಲಿಲ್ಲ; ಮಿಸೆಸ್ ಮೂರಳೂ ಉತ್ತರ ಕೊಡಲಿಲ್ಲ. ಅವರು ಅತ್ತಕಡೆಗೆ ಟೆನಿಸ್ ಅಂಗಳವನ್ನು ವಿಷಾದ ತುಂಬಿದ ಕಣ್ಣುಗಳಿಂದ ನೋಡುತ್ತಿದ್ದರು. ಅಲ್ಲಿ ಅಂತಹ ಚಿತ್ರವಿಚಿತ್ರವೇನೂ ಇದ್ದಿಲ್ಲ. ಅವರಿಗೆ ಪೂರ್ವದೇಶವು ತನ್ನ ಅಲೌಕಿಕ ಐಶ್ವರ್ಯವನ್ನು ಬಿಟ್ಟು ಒಂದು ದರಿಯಲ್ಲಿ ಕೆಳಕ್ಕಿಳಿಯುಹತ್ತಿದಂತೆನಿಸಿತು. ಅದರ ಆಚೆಯು ದಂಡೆಯು ಯಾರಿಗೂ ಕಾಣಿಸದಂತಿತ್ತು.

'ಒಂದು ವಿಷಯು ನನಗೆ ಇಲ್ಲಿ ತೋಚುತ್ತಿದೆ. ಇಲ್ಲಿ ಬಂದವರಲ್ಲಿ ಒಬ್ಬನೂ ಮಹಾತ್ಮನಿಲ್ಲ; ಮಹಾತ್ಮನಿದ್ದವನು ಇಲ್ಲಿಗೆ ಬರುವುದೂ ಇಲ್ಲ ಅಲ್ಲವೆ ಮಿಸೆಸ್ ಟರ್ಟನ್?' ಎಂದು ಮಿಸ್ ಕ್ವೆಸ್ಟೆಡಾಳು ಪ್ರಶ್ನೆ ಹಾಕಿದಳು.

'ನಿಸ್ಸಂಶಯವಾಗಿ' ಎಂದು ಮಿಸೆಸ್ ಟರ್ಟನ್ನಳು ಹಿಂದೆ ಆತುಕೊಂಡು ಉತ್ತರ ಕೊಟ್ಟಳು. ಅವಳ ಮಾತಿನಲ್ಲಿಯೇ ಹೇಳುವುದೆಂದರೆ ಅವಳು ತನ್ನ ಮೈ ಉಳಿಸಿಕೊಳ್ಳುತ್ತಿದ್ದಳು; ಅದೇನು ಈ ಹೊತ್ತಿನ ಪ್ರಸಂಗಕ್ಕಾಗಿಯೂ ಅಲ್ಲ, ಆ ವಾರದಲ್ಲಿ ಮುಂದೆ ಬರಬಹುದಾದ ಪ್ರಸಂಗಕ್ಕೂ ಅಲ್ಲ, ಆದರೆ ಮುಂದೆ ಬರಬಹುದಾದ ಯಾವುದೋ ಒಂದು ಅನಿಶ್ಚಿತ ಪ್ರಸಂಗಕ್ಕಾಗಿ. ಆ ಪ್ರಸಂಗನೆಂದರೆ ಒಬ್ಬ ದೊಡ್ಡ ಅಧಿಕಾರಿಯು ಅಕಸ್ಮಾತ್ ತನ್ನಲ್ಲಿಗೆ ಬರುವುದು ಮತ್ತು ತನ್ನ ರಸಿಕತೆಯನ್ನು ಪರೀಕ್ಷಿಸುವುದು. ಇದಕ್ಕಾಗಿಯೆ ಅವಳು ಯಾವಾಗಲೂ ಇಂತಹ ಸಾರ್ವಜನಿಕ ಪ್ರಸಂಗಗಳಲ್ಲಿ ತನ್ನ ಮುಖದ ಮೇಲೆ ಈ ತರಹದ ಅಲಿಪ್ತಭಾವವನ್ನು ತಳೆದಿರುತ್ತಿದ್ದಳು.

ಅವಳ ಒಪ್ಪಿಗೆಯ ಭರವಸೆಯಿಂದ ರೋನಿಯು ಮತ್ತೆ ಮಾತು ಮುಂದರಿಸಿದನು. 'ಒಂದು ವೇಳೆ ನಮ್ಮ ದೇಶದಲ್ಲಿಯೆ ಆಗಲಿ, ಇಲ್ಲಿಯೆ ಆಗಲಿ, ಗೊಂದಲಗಿಂದಲವೆದ್ದರೆ ಈ ಕಲಿತ ಹಿಂದೀ ಜನರು ನಮಗೆ ಏನೂ ಉಪಯೋಗಕ್ಕೆ ಬರುವುದಿಲ್ಲ. ಅಂತೇ ಅವರನ್ನು ಸಮಾಧಾನದಿಂದಿಡಲು ಪ್ರಯತ್ನಿಸುವದರಲ್ಲಿ ಏನೂ ಅರ್ಥವಿಲ್ಲ. ಅವರು ಇದ್ದರೂ ಅಷ್ಟೆ, ಇಲ್ಲದಿದ್ದರೂ ಅಷ್ಟೇ! ಅವರಲ್ಲಿ ಎಷ್ಟೋ ಜನ ಒಳಗೊಳಗೆ ರಾಜದ್ರೋಹಿಗಳಿದ್ದಾರೆ; ಇನ್ನೆಷ್ಟೋ ಜನ ಪ್ರಸಂಗ ಬಂದರೆ ಪಲಾಯನಸೂತ್ರಪಠಿಸುವವರಿದ್ದಾರೆ. ಇನ್ನು ಒಕ್ಕಲಿಗರು—ರೈತರು? ಅವರ ಕಥೆಯೆ ಬೇರೆ. ಪಠಾಣರು? ಬೇಕಾದರೆ ಅವರಿಗೂ ಮನುಷ್ಯರೆಂದು ಒಪ್ಪಬಹುದು. ಆದರೆ ಈ ಎಲ್ಲ

ಜನ ತಾವೆಂದರೆ ಹಿಂದುಸ್ತಾನವೆಂದು ತಿಳಿದುಕೊಂಡಿಲ್ಲ' ಎಂದು ನುಡಿದು ಟೆನಿಸ್ ಕೋರ್ಟಿನ ಆಚೆಗೆ ನಿಂತಿರುವ ಕಪ್ಪು ಸಾಲನ್ನು ತೋರಿಸಿದನು. ಅದರಲ್ಲಿ ಒಂದು ಚುಂಗಿಗೆ ಚಷ್ಮೆಗಳು ಚಮಕಿಸುತ್ತಿದ್ದವು; ಇನ್ನೊಂದಂಚಿಗೆ ಬೂಟುಗಳು ಎಳೆದಾಡುತ್ತಿದ್ದವು. ರೋನಿ ಹೀಗೆ ತುಚ್ಛಮಾಡುತ್ತಾನೆಂಬು ದನ್ನು ತಿಳಿದೇ ಹಾಗೆ ಮಾಡುತ್ತಿದ್ದವೊ ಏನೋ! ಯುರೋಪಿಯನ್ ವೇಷವು ಬಿಳುಪಿನಂತೆ ಒಡೆದು ಕಾಣುತ್ತಿತ್ತು. ಪೂರ್ತಿಯಾಗಿ ಈ ವೇಷಕ್ಕೆ ಮನಸ್ಸಿನಿಂದ ಮೈಹೊಕ್ಕವರು ಅಲ್ಲಿ ಯಾರೂ ಇರಲಿಲ್ಲ. ಆದರೆ ಎಲ್ಲರ ವೇಷದಲ್ಲಿಯೂ ಎಲ್ಲಿಯಾದರೂ ಒತ್ತಟ್ಟಿಗೆ ಅದರ ಸ್ಪರ್ಶವಿದ್ದೇ ಇರುತ್ತಿತ್ತು. ಟೆನಿಸ್ ಕೋರ್ಟಿನ ಎರಡೂ ಮಗ್ಗುಲಿಗೂ ಮೌನವು ನೆಲೆಯೂರಿತ್ತು. ರೋನಿಯು ಮಾತಾಡುವುದನ್ನು ಮುಗಿಸಿದಾಗ ಅಲ್ಲಿಯ ಹೆಣ್ಣುಮಕ್ಕಳ ನೌಕರು ಇಂಗ್ಲಿಷ್ ಗುಂಪಿನಲ್ಲಿ ಸೇರಿಕೊಂಡಿದ್ದರು. ಅವರಾಡುತ್ತಿದ್ದ ಮಾತುಗಳು ಆಡಆಡುವಷ್ಟರಲ್ಲಿಯೇ ಅಡಗಿಹೋಗುತ್ತಿದ್ದವು. ತಲೆಯ ಮೇಲೆ ಆಕಾಶದಲ್ಲಿ ಕೆಲ ಗಿಡಗಗಳು ಯಾವ ಪಕ್ಷಪಾತವೂ ಇಲ್ಲದೆ ಸುತ್ತಾ ಡುತ್ತಿದ್ದವು. ಇವಕ್ಕೂ ಮೇಲೆ ಇವಕ್ಕಿಂತ ಹೆಚ್ಚು ನಿಷ್ಪಕ್ಷಪಾತದಿಂದ ದಪ್ಪ ಬಣ್ಣಗಳಿಲ್ಲದ ಆಕಾಶವು ಎಲ್ಲ ಕಡೆಯಿಂದಲೂ ತೆಳ್ಳಗೆ ಬೆಳಕನ್ನು ಸುರಿ ಯುತ್ತಿತ್ತು. ಈ ಕ್ರಮವು ಇಲ್ಲಿಗೇ ಮುಗಿಯುವುದು ಶಕ್ಯವಿಲ್ಲ. ಆ ಆಕಾಶದ ಆಚೆಗೆ ಎಲ್ಲ ಆಕಾಶಗಳ ಮೇಲೆ ಕಮಾನು ತಿರುವಿ ಇವೆಲ್ಲವುಗಳಿ ಗಿಂತ ಹೆಚ್ಚು ನಿಷ್ಪಕ್ಷಪಾತವಾಗಿದ್ದುದು ಇನ್ನೊಂದೇನಾದರೂ ಏಕೆ ಇರ ಬಾರದು?.... ಮತ್ತೆ ಅದರಾಚೆ....?

* * * *

ಅಲ್ಲಿಂದ 'ಕಝಿನ್ ಕೇಟ' ನಾಟಕದ ವಿಷಯವಾಗಿ ಮಾತು ಹೊರಟಿತು.

ನಟರು ತಮ್ಮ ಜೀವನದ ಧ್ಯೇಯವನ್ನೇ ರಂಗಭೂಮಿಯ ಮೇಲೆ ತೋರಿಸಬೇಕೆಂದು ಹವಣಿಸುತ್ತಿದ್ದುದು—ಮತ್ತು ಇಂಗ್ಲೀಷ ಮಧ್ಯಮ ತರಗತಿಯ ಜನರಂತೆ—ತಾವು ಇದ್ದುದೂ ಅದೇ—ವೇಷ ಹಾಕಲಿಕ್ಕೆ ಅವರು ಯತ್ನಿಸಿದ್ದುದು—ಮುಂದಿನ ವರ್ಷ 'ಕ್ವಾಲಿಟೀ ಸ್ಟ್ರೀಟ' ಆಗಲಿ, 'ದ ಯೋಮೆನ್ ಆಫ್ ದಿ ಗಾರ್ಡ' ಆಗಲಿ ಆಡಬೇಕೆಂದು ಅವರು ಗೊತ್ತು ಮಾಡಿದ್ದುದು— ಇವೇ ಮೊದಲಾದ ಮಾತುಗಳು ನಡೆದವು. ಇಡಿ ವರ್ಷ

ದಲ್ಲಿ ಒಮ್ಮೆ ಹೂಡುವ ಈ ದಾಳಿಯನ್ನು ಬಿಟ್ಟರೆ ಅವರು ಉಳಿದ ಹೊತ್ತಿನಲ್ಲಿ ಸಾಹಿತ್ಯದ ಉಸಾಬರಿಯನ್ನೇ ಮಾಡುತ್ತಿದ್ದಿಲ್ಲ. ಗಂಡಸರಿಗೂ ಹೊತ್ತೇ ಕೂಡುತ್ತಿದ್ದಿಲ್ಲ; ಹೆಂಗಸರೂ ಗಂಡಸರಿಲ್ಲದೆ ಯಾವ ಕೆಲಸವನ್ನೂ ಮಾಡು ತ್ತಿದ್ದಿಲ್ಲ. ಇದೆಲ್ಲಕ್ಕೂ ಮಿಗಿಲಾಗಿ ಅವರ ಕಲೆಯ ಅಜ್ಞಾನವಂತೂ ಸರ್ವ ಶ್ರುತವಿತ್ತು. ಪ್ರಸಂಗ ಬಂದಾಗಲೆಲ್ಲ ಅವರು ತಮ್ಮ ಈ ಅಜ್ಞಾನವನ್ನೇನು ಮುಚ್ಚಿಡುತ್ತಿದ್ದಿಲ್ಲ. ಒಬ್ಬರಿಗೊಬ್ಬರು ಮಾತಿನಲ್ಲಿ ಪ್ರದರ್ಶಿಸುತ್ತಿದ್ದರು. ಇದು ಇಂಗ್ಲೆಂಡದೊಳಗಿನ 'ಪಬ್ಲಿಕ್ ಸ್ಕೂಲಿನ' ಮಾದರಿಯ ಮೇಲೆ—ಅಲ್ಲಿಯಕಿಂತಲೂ ಹೆಚ್ಚಾಗಿ—ನಡೆದಿತ್ತು. ಈ ಹಿಂದೀಯರು ಒಂದು ಅಂಗಡಿ ಯೆಂದು ತಿಳಿದರೆ ಇವರ ಈ ಕಲೆಗಳು ಅವರಲ್ಲಿಯ ಮಾರಲಿಕ್ಕೆ ಬಾರದ, ಕೆಟ್ಟುಹೋದ ಸರಕುಗಳಿದ್ದಂತೆ! ಇದನ್ನು ತಿಳಿದೇ ರೋನಿಯು ವ್ಹಾಯ್ ವೊಲನ್ನಿಗಾಗಿ ಕೇಳುತ್ತಿದ್ದ ತನ್ನ ತಾಯಿಯನ್ನು ತಡೆದನು. ಆ ವ್ಹಾಯ್ ವೊಲಿನ್ನು ಕೇಳುವದೆಂದರೆ ಅದೊಂದು ಅವಗುಣವೇ ಆಗಿಬಿಟ್ಟಿತ್ತು. ಹೊರಗೆ ನಾಲ್ಕು ಜನರಲ್ಲಿ ಅದರ ಹೆಸರನ್ನು ಯಾರೂ ಎತ್ತುತ್ತಿದ್ದಿಲ್ಲ. ಮೂರಳಿಗೆ ತನ್ನ ಮಗನ ಈ ರೀತಿಯನ್ನು ನೋಡಿ ಅವನಲ್ಲಿ ಎಷ್ಟು ತಾಳ್ಮೆಯೂ, ವಿನ ಯವೂ, ರೂಢಿಯೂ ಬಂದಿದೆಯೆಂದು ಈಗ ತಿಳಿದು ಬಂತು. ಲಂಡನ್ನದಲ್ಲಿ ತಾವಿಬ್ಬರೂ ಕೂಡಿಯೆ ಇದೇ 'ಕಝಿನ್‌ಕೇಟ'ವನ್ನು ನೋಡಿದಾಗ ರೋನಿಯೆ ಅದನ್ನು ಹೀಯಾಳಿಸಿದ್ದನು. ಈಗ ಅದೇ ನಾಟಕವನ್ನೇ—ಮಂದಿಯ ಮನಸ್ಸು ನೋಯಿಸಬಾರದೆಂದು—ಒಳ್ಳೆಯದೆಂದು ಹೇಳುತ್ತಿದ್ದನು. ಒಂದು ಸ್ಥಳಿಕ ವೃತ್ತಪತ್ರದಲ್ಲಿಯಂತೂ ಕ್ಲಬ್ಬಿನಲ್ಲಿ ಆಡಿದ 'ಕಝಿನ್‌ಕೇಟ'ದ ವಿಷಯ ವಾಗಿ, ಯಾವ ಬಿಳಿಮನುಷ್ಯನೂ ಎಂದೂ ಬರೆಯದಂತಹ ನಿರ್ದಯವಾದ ವಿಮರ್ಶೆಯು ಬಂದಿತ್ತು. ನಾಟಕವನ್ನೇನೊ ಬಾಯಿತುಂಬ ಹೊಗಳಿದ್ದರು ಆದರಂತೆ ರಂಗಭೂಮಿಯ ವ್ಯವಸ್ಥೆಯನ್ನೂ ಒಟ್ಟಿನಮೇಲೆ ಅಭಿನಯವನ್ನೂ ಸ್ತುತಿಮಾಡಿದ್ದರು. ಆದರೆ ಅದೇ ವಿಮರ್ಶೆಯಲ್ಲಿ ಈ ಕೆಳಗಿನ ವಾಕ್ಯವೂ ಒಂದು ನುಸುಳಿ ಬಂದಿತ್ತು. 'ಮಿಸ್ ಡೆರೆಕ್ಕಳು ತನ್ನ ಪಾತ್ರಕ್ಕೆ ಚೆನ್ನಾಗಿ ಒಪ್ಪಿದರೂ ಅಭಿನಯಕ್ಕೆ ಬೇಕಾದ ಅನುಭವವು ಅವಳಿಗಿದ್ದಿಲ್ಲ. ಒಮ್ಮೊಮ್ಮೆ ಯಂತೂ ಮಾತನ್ನೇ ಮರೆಯುತ್ತಿದ್ದಳು.' ವಾಸ್ತವಿಕವಾಗಿದ್ದ ವಿಮರ್ಶೆಯ ಈ ಒಂದು ತುಣುಕು ಬಹಳ ದೊಡ್ಡ ಅಪರಾಧವನ್ನು ಮಾಡಿತ್ತು. ಮಿಸ್

ಡೆರೆಕ್ಕಳಿಗೇನು ಅದು ಅಷ್ಟು ಹತ್ತಿದ್ದಿಲ್ಲ; ಅವಳು ಇಂಥದಕ್ಕೆಲ್ಲ ಕಲ್ಲಿನಕಿಂತ ಕಲ್ಲಾಗಿದ್ದಳು. ಆದರೆ ಅವಳ ಗೆಳತಿಯರಿಗೆ ಮಾತ್ರ ಅದು ನಟ್ಟಿತ್ತು. ಮಿಸ್ ಡೆರಕ್ಕಳು ಚಂದ್ರಪುರದವಳೇ ಅಲ್ಲ. ಮ್ಯಾಕ್‌ಬ್ರಾಯಿಡರನ ಮನೆಯಲ್ಲಿ ಒಂದು ಹದಿನೈದು ದಿವಸ ಇದ್ದುಹೋಗಬೇಕೆಂದು ಬಂದಿದ್ದವಳು. ನಾಟಕದ ಹೊತ್ತಿಗೆ ಪಾರ್ಟ ಮಾಡುವವರು ಹರಕತ್ತಾಗಿದ್ದರಿಂದ ಆ ಹರಕತ್ತಾದ ಪಾತ್ರವನ್ನು ವಹಿಸಿ ತನ್ನ ಸುಸ್ವಭಾವವನ್ನು ವ್ಯಕ್ತಗೊಳಿಸಿದ್ದಳು.

'ಮೇರಿ, ಕೆಲಸಕ್ಕೆ! ಕೆಲಸಕ್ಕೆ!' ಎಂದು ಕಲೆಕ್ಟರನು ತಟ್ಟನೆ ತನ್ನ ಹೆಂಡತಿಯ ಭುಜ ತಟ್ಟಿ ಕರೆದನು.

ಮಿಸೆಸ್ ಟರ್ಟನ್ನಳು ಸ್ವಲ್ಪ ಗಾಬರಿಯಾಗಿ ಎದ್ದು 'ನಾನೇನು ಮಾಡಬೇಕೆನ್ನುತ್ತೀರಿ? ಓಹೋ! ಆ ಘೋಷಾ ಹೆಣ್ಣುಮಕ್ಕಳಲ್ಲವೆ? ಅವರಲ್ಲಿ ಒಬ್ಬರೂ ಬರಲಿಕ್ಕಿಲ್ಲೆಂದು ನಾನು ಭಾವಿಸಿದ್ದೆ.'

ಆ ಟೆನಿಸ್‌ಕೋರ್ಟಿನ ಮೂರನೆಯ ಭಾಗದಲ್ಲಿ ಒಂದು ಚಿಕ್ಕ ಮನೆಯ ಹತ್ತಿರ ಹಿಂದೀ ಸ್ತ್ರೀಯರ ಸಣ್ಣದೊಂದು ಗುಂಪು ಕೂಡಹತ್ತಿತ್ತು. ಅವರೊಳಗಿನ ಅಂಜುಬುರಕ ಹೆಣ್ಣುಮಕ್ಕಳೆಲ್ಲ ಆ ಚಿಕ್ಕ ಮನೆಯಲ್ಲಿ ಆಗಲೆ ಹೊಕ್ಕಿದ್ದರು. ಉಳಿದವರು ಜನರ ಕಡೆಗೆ ತಮ್ಮ ಬೆನ್ನು ತಿರುಗಿಸಿ, ತಮ್ಮ ಮುಖಗಳನ್ನು ಅಲ್ಲಿ ಬೆಳೆದ ಕಂಟಿ-ಪೊದೆಗಳಲ್ಲಿ ಸೇರಿಸಿ ನಿಂತುಕೊಂಡಿದ್ದರು. ಸಮೀಪದಲ್ಲಿಯೆ ಅವರ ಗಂಡಸರು ಅವರ ಈ ಸಾಹಸವನ್ನು ನಿರೀಕ್ಷಿಸುತ್ತ ನಿಂತಿದ್ದರು. ಈ ನೋಟವು 'ಸಮುದ್ರದ ಇಳಿತದಿಂದ ತೆರೆದುಕೊಂಡು ಹೋಗಿದ್ದ ಒಂದು ನಡುಗಡ್ಡೆಯು ತಿರುಗಿ ಕೂಡಿ ಬೆಳೆಯಲೇಬೇಕು' ಎಂಬ ಕಲ್ಪನೆಯನ್ನು ಹುಟ್ಟಿಸುತ್ತಿತ್ತು.

'ಅವರೇ ನನ್ನೆಡೆಗೆ ಬರಬೇಕೆಂದು ನನಗನಿಸುತ್ತದೆ' ಮಿಸೆಸ್ ಟರ್ಟನ್ನಳು ಎಂದಳು.

'ಆ ಭಾವವನ್ನೀಗ ನೀನು ಗೆದೆಯಬೇಕು. ಬಾ, ಮೇರಿ' ಎಂದು ಟರ್ಟನ್ನನು ತಿಳಿಹೇಳಿದ.

'ನಾನು ನವಾಬ ಬಹದ್ದೂರನೊಬ್ಬನನ್ನುಳಿದು ಯಾವ ಗಂಡಸರೊಡನೆಯೂ ಕೈಕುಲುಕುವವಳಲ್ಲ.'

'ಇಲ್ಲಿಯ ವರೆಗೆಂದರೆ ಯಾರು ಯಾರು ಬಂದಿದ್ದಾರೆ?' ಎಂದು ಅತ್ತ

ಲಕ್ಷ್ಯಕೊಡದೆ ಟರ್ಟನ್ನನು ಸಿಂತ ಸಾಲಿನಗುಂಟ ನೋಡಿ 'ಹಂ! ಹಂ! ಅಪೇಕ್ಷಿಸಿದಕಿಂತ ಹೆಚ್ಚೇ ಬಂದಿದ್ದಾರೆ! ಇವರೆಲ್ಲ ಇಲ್ಲಿ ಯಾಕೆ ಬಂದಿದ್ದಾರೆಂಬುದು ನಿನಗೆ ಗೊತ್ತೇ ಇದೆ? ಅಹಾ! ಅವನು ಆ ಕಂಟ್ರ್ಯಾಕ್ಟದ ಸಲುವಾಗಿ—ಅವನು ಮೊಹರಮ್ಮಕ್ಕೆ ನನ್ನ ಬೆಂಬಲ ಬೇಡುವುದಕ್ಕಾಗಿ—ಅವನು ಮುನಸೀಪಾಲ್ಟಿಯು ಮನೆಕಟ್ಟುವ ನಿಯಮಗಳನ್ನೇ ಹಾರಿಹೊಡೆಯಬೇಕೆಂದಿರುವ ಜ್ಯೋತಿಷಿ!–ಅವನೊಬ್ಬ ಪಾರ್ಸಿ–ಅವನು–ಅಗೋ ಅಲ್ಲಿ ಹೋಗುತ್ತಾನಲ್ಲ–ನಮ್ಮ ದೊಡ್ಡ ಬಿಂದಿಗೆ ಗಿಡಗಳಲ್ಲಿ ನುಗ್ಗಬೇಕೆನ್ನುತ್ತಾನೆ–ಬಲ ಲಗಾಮೆಂದು ತಿಳಿದು ಎಡ ಲಗಾಮನ್ನು ಜಗ್ಗಿದನು! ಉಳಿದವರೆಲ್ಲ ಗೊತ್ತೇ ಇದೆ' ಎಂದನು.

'ಅವರನ್ನು ಒಳಗೆ ಗಾಡಿ ಸಹಿತ ಬರಗೊಡುವುದು ಸರಿಯಲ್ಲ. ಅದು ಅವರಿಗೇ ಬಹಳ ಕೆಡಕು' ಎಂದು ಮಿಸೆಸ್ ಟರ್ಟನ್ನಳು ನುಡಿದು ಮಿಸೆಸ್ ಮೂರ, ಮಿಸ್ ಕ್ವೆಸ್ಟೆಡ್ ಮತ್ತು ಒಂದು ನಾಯಿ ಇವರೊಡನೆ ಆ ಚಿಕ್ಕ ಮನೆಯ ಕಡೆಗೆ ಮೆಲ್ಲನೆ ಸಾಗಹತ್ತಿದಳು.

'ಇವರು ಈ ಫೋಷಾ ಜನರು ಯಾಕಾದರೂ ಬರುತ್ತಾರೊ ನನಗೆ ತಿಳಿಯದಾಗಿದೆ! ಇಂಥ ಪಾರ್ಟಿಯನ್ನು ನಮ್ಮಷ್ಟೇ ಅವರೂ ದ್ವೇಷಿಸುತ್ತಾರೆ. ಮಿಸೆಸ್ ಮ್ಯಾಕ್‌ಬ್ರಾಯಿಡಳನ್ನಷ್ಟು ಮಾತಾಡಿಸು. ಅವಳ ಗಂಡನು ಫೋಷಾ ಜನರಿಗೆ ಎಷ್ಟೋ ಸಲ ಪಾರ್ಟಿ ಕೊಟ್ಟಿದ್ದಾನೆ. ಆದರೆ ಕೊನೆಗೆ ಅವಳು ಹಟಹಿಡಿದ ಮೇಲೆ 'ಕೊಡುವುದನ್ನು ಬಿಟ್ಟಿದ್ದಾನೆ' ಎಂದು ಮಿಸೆಸ್ ಟರ್ಟನ್ನಳು ಮಾತನಾಡಿದಳು.

'ಇದು ಫೋಷಾ ಜನರಿಗೆ ಕೊಡುವ ಪಾರ್ಟಿಯಲ್ಲ?' ಎಂದು ಮಿಸ್ ಕ್ವೆಸ್ಟೆಡ್‌ಳು ಅವಳನ್ನು ತಿದ್ದಿದಳು.

'ಹೌದು! ನಿಜವಾಗಿಯೂ' ಎಂದೊಂದು ದರ್ಪದ ಉತ್ತರ ಬಂತು.

'ದಯಮಾಡಿ ಈ ಸ್ತ್ರೀಯರು ಯಾರೆಂಬುದನ್ನು ಹೇಳಬೇಕು' ಎಂದು ಮಿಸೆಸ್ ಮೂರಳು ಕೇಳಿದಳು.

'ಏನೇ ಆದರೂ ನೀವು ಅವರಿಗಿಂತ ಶ್ರೇಷ್ಠರು, ಇದನ್ನು ಮರೆಯಬಾರದು. ನೀವು ಹಿಂದುಸ್ತಾನದಲ್ಲಿ ಪ್ರತಿಯೊಬ್ಬರಕಿಂತಲೂ—ಒಬ್ಬಿಬ್ಬ ರಾಣಿಯರನ್ನು ಬಿಟ್ಟು–ಶ್ರೇಷ್ಠರು. ಆ ರಾಣಿಯರಾದರೂ ನಮಗೆ ಸಮಾನ

ರಾಗಬಹುದು' ಎಂದು ಮುಂದೆ ಸಾಗಿ ಆ ಗುಂಪಿನಲ್ಲಿರುವವರೊಡನೆ ಕೈ ಕುಲುಕಿ ಅವರಿಗೆ ಉರ್ದೂದಲ್ಲಿ ಸ್ವಾಗತ ಒಯುಸುವ ಒಂದೆರಡು ಮಾತು ಗಳನ್ನಾಡಿದಳು. ಅವಳು ಪರಭಾಷೆಯನ್ನಾಡಲಿಕ್ಕೇನೊ ಕಲಿತಿದ್ದಳು; ಆದರೆ ತನ್ನ ಸೇವಕರೊಡನೆ ಮಾತನಾಡುವಷ್ಟು. ಆದುದರಿಂದ ಅವಳಿಗೆ ಆ ವಿನಯದ ದೊಡ್ಡಿಸ್ತಿಕೆಯ ಮಾತುಗಳು ಗೊತ್ತೇ ಇದ್ದಿಲ್ಲ. ಕ್ರಿಯಾಪದಗಳು ಯಾವಾಗಲೂ ವಿಧ್ಯರ್ಥದಲ್ಲಿಯೆ ಉಪಯೋಗಿಸಲ್ಪಡುತ್ತಿದ್ದವು. ಅವರೊಡನೆ ತನ್ನ ಮಾತು ಮುಗಿದ ಕೂಡಲೆ ತನ್ನ ಜೊತೆಗಿದ್ದವರನ್ನು 'ನಿಮಗೆ ಬೇಕಾದದ್ದು ಇದೇ ತಾನೆ?' ಎಂದು ಕೇಳಿದಳು.

'ಅವರ ಭಾಷೆಯಲ್ಲಿಯೆ ಮಾತನಾಡಲಿಕ್ಕೆ ನಮಗೆ ಬಹಳ ಆಶೆಯಿದೆ ಯೆಂದೂ ಆದರೆ ಇದೇ ಹೊಸದಾಗಿ ಈ ದೇಶಕ್ಕೆ ಬಂದಿದ್ದೇವೆಂಗೂ ದಯ ಮಾಡಿ ಈ ಸ್ತ್ರೀಯರಿಗೆ ನೀವು ತಿಳಿಸಬೇಕು' ಎಂದು ಮಿಸ್ ಕ್ವೆಸ್ಟೆಡ್‌ಳು ಟರ್ಟನ್ನಳಿಗೆ ಕೇಳಿಕೊಂಡಳು.

'ನಿಮ್ಮ ಮಾತೇ ನಮಗೆ ಸ್ವಲ್ಪ ಸ್ವಲ್ಪ ಬರುತ್ತದೆ' ಎಂದು ಒಬ್ಬ ಸ್ತ್ರೀಯು ನುಡಿದಳು.

'ಯಾಕೆ? ಬರುತ್ತದೆಂದೇ ತಿಳಿದುಕೊಂಡರಾಯಿತು' ಎಂದು ಮಿಸೆಸ್ ಟರ್ಟನ್ನಳೆಂದಳು.

'ಈಸ್ಟಬೋರ್ನ್, ಪಿಕ್ಯಾಡಿಲಿ, ಹಾಯಿಡ ಪಾರ್ಕ' ಎಂದು ಇನ್ನೊಬ್ಬಳೆಂದಳು.

'ಓ! ಹೌದು, ಅವರು ಇಂಗ್ಲೀಷನ್ನು ಮಾತಾಡುತ್ತಿದ್ದಾರೆ!'

'ನಾವೀಗ ಅವರೊಡನೆ ಮಾತಾಡಬಲ್ಲೆವಲ್ಲ! ಏನು ಸಂತೋಷವಿದು!' ಎಂದು ನಗೆಮುಖದಿಂದ ಅಡೀಲಾ ನುಡಿದಳು.

'ಅವಳಿಗೆ ಪ್ಯಾರಿಸ್ ಪಟ್ಟಣವೂ ಗೊತ್ತಿದೆ' ಎಂದು ನೋಡುತ್ತ ನಿಂತ ಇನ್ನೊಬ್ಬಳು ಹೇಳಿದಳು.

'ಇಂಗ್ಲೆಂಡಕ್ಕೆ ಹೋಗಬೇಕಾದರೆ ಅವರು ಪ್ಯಾರಿಸ್‌ದ ಮೇಲೇ ನಿಸ್ಸಂಶಯವಾಗಿ ಹಾಯ್ದುಹೋಗುತ್ತಾರೆ!' ಎಂದು ಮಿಸೆಸ್ ಟರ್ಟನ್ನಳು ದೇಶಾಂತರಕ್ಕೆ ಗುಳೆಕಟ್ಟಿ ಹಾರಿಹೋಗುವ ಪಕ್ಷಿಗಳನ್ನು ವರ್ಣಿಸಿದಂತೆ ನುಡಿದಳು. ಮತ್ತು ಆ ಗುಂಪಿನಲ್ಲಿ ಪಶ್ಚಿಮದೇಶವನ್ನು ನೋಡಿ ಆ ಪದ್ಧತಿ

ಯನ್ನು ಸಂಪೂರ್ಣವಾಗಿ ಅನುಕರಿಸಿದವರೂ ಇದ್ದಾರೆಂಬುದು ಅವಳಿಗೆ ಕಂಡುಬಂದ ಕ್ಷಣದಿಂದ ತನ್ನನ್ನು ತನ್ನ ಅಳತೆಯಿಂದಲೇ ಅಳೆದು, ತನ್ನ ಮಂತ್ರ ತನಗೇ ತಿರುಗೀತೆಂಬ ಭಯದಿಂದ ಅವಳ ಮೊದಲಿನ ವಿನಯದ ರೀತಿ ನಡತೆಗಳು ದೂರ ದೂರ ಹೋಗಹತ್ತಿದವು.

'ಗಿಡ್ಡಾಗಿದ್ದವಳು ನನ್ನ ಹೆಂಡತಿ ಶ್ರೀಮತಿ ಭಟ್ಟಾಚಾರ್ಯ; ಎತ್ತರಾಗಿದ್ದವಳು ನನ್ನ ತಂಗಿ ಶ್ರೀಮತಿ ದಾಸ' ಎಂದು ನಿಂತು ನೋಡುತ್ತಿರುವವನೊಬ್ಬನು ನುಡಿದನು.

ಆ ಗಿಡ್ಡ ಮತ್ತು ಎತ್ತರ ಸ್ತ್ರೀಯರಿಬ್ಬರೂ ತಮ್ಮ ಸೀರೆಯನ್ನು ಸರಿಪಡಿಸಿಕೊಂಡು ಮುಗುಳುನಗೆ ನಕ್ಕರು. ಅವರ ಹಾವಭಾವಗಳಲ್ಲಿ ಒಂದು ವಿಚಿತ್ರವಾದ ಅನಿಶ್ಚಿತತೆಯು ಕಂಡುಬಂದಿತು. ಅವರೇನೊ ಪಶ್ಚಿಮ ಪೂರ್ವಗಳೆರಡೂ ತೋರದ ಒಂದು ಹೊಸ ಹಾದಿಯನ್ನು ಹುಡುಕುತ್ತಿರುವಂತೆ ಕಂಡಿತು. ಶ್ರೀಮತಿ ಭಟ್ಟಾಚಾರ್ಯಳ ಗಂಡನು ಮಾತನಾಡಿದಾಗ ಅವಳು ಅವನಿಂದ ದೂರ ಸರಿದಳು. ಆದರೆ ಉಳಿದ ಗಂಡಸರನ್ನು ನೋಡಿ ಅವಳೇನೂ ಹಾಗೆ ಮಾಡಲಿಲ್ಲ. ನಿಜವಾಗಿ ಅಲ್ಲಿಯ ಎಲ್ಲ ಸ್ತ್ರೀಯರೂ ಅನಿಶ್ಚಯದಲ್ಲಿಯೇ ಹೊರಳಾಡುತ್ತಿದ್ದರು. ಒಮ್ಮೆ ಹುದುಗಿಕೊಳ್ಳುವರು ಮತ್ತೆ ಸರಿಯಾಗುವರು; ಮತ್ತೊಮ್ಮೆ 'ಖೊಕ್ ಖೊಕ್' ಎಂದು ನಗುವರು. ಮಾತಾಡಿದ್ದಕ್ಕೆಲ್ಲ ಅಲ್ಪ ಸ್ವಲ್ಪ ಅವಯವಗಳನ್ನು ಚಲಿಸಿಯಾದರೂ ಅವರು ತಮ್ಮಲ್ಲಿಯ ಕೊರತೆಯನ್ನು ತುಂಬಿಕೊಳ್ಳುತ್ತಿದ್ದರು; ಇಲ್ಲವೆ ನಿರಾಶೆಯಿಂದ ಸುಮ್ಮನೆ ನಿಲ್ಲುವರು. ಒಮ್ಮೆ ಆ ನಾಯಿಯನ್ನು ರಮಿಸುವರು; ಮತ್ತೊಮ್ಮೆ ಅದರಿಂದ ದೂರ ಸರಿದು ನಿಲ್ಲುವರು. ಅಡೀಲಾಳಿಗೆ ಈಗ ಅನುಕೂಲ ಪ್ರಸಂಗವು ದೊರೆಯಿತು. ಅವಳೆದುರಿಗೆ ಸಹೃದಯಿ ಹಿಂದೀ ಜನರು ನಿಂತಿದ್ದರು. ಅವರನ್ನು ಮಾತನಾಡಿಸಬೇಕೆಂದು ಅವಳು ಬೇಕಾದಷ್ಟು ಪ್ರಯತ್ನಮಾಡಿದಳು. ಆದರೆ ಕೊನೆಗೆ ಅವಳೇ ಸೋತಳು. ಅವಳೆಷ್ಟು ಪ್ರಯತ್ನಬಟ್ಟರೂ ಅವರ ಸದಾಚಾರವನ್ನು ಪ್ರತಿಧ್ವನಿಗೊಳಿಸುವ ಆ ಗೋಡೆಗಳ ಮೇಲೆ ಏನೂ ಪರಿಣಾಮವಾಗಲಿಲ್ಲ. ಅವಳು ಏನು ಮಾತಾಡಿದರೂ ಅದನ್ನು ತುಚ್ಛ ಮಾಡುವಂತೆ ಗುಂಯಾ ಗುಂಯ್ ಎಲ್ಲ ಕಡೆಯಿಂದಲೂ ಕೇಳಬರುತ್ತಿತ್ತು. ಅವಳು ಕೈವಸ್ತ್ರವನ್ನು ಕೆಳಗೆ ಒಗೆದಾಗ ಮಾತ್ರ ಏನೋ ಬೇರೆ ರೀತಿಯನ್ನು

ತೋರಿಸುವರು. ಹಾಗಾದರೆ ಏನೂ ಮಾಡದೆ ಸುಮ್ಮನೆ ಕುಳಿತರೆ ಏನಾಗು ವದೆಂದು ನೋಡಲು ಸುಮ್ಮನೆ ಕುಳಿತಳು. ಆಗ ಅವರೂ ಸುಮ್ಮನೇ ಇದ್ದರು. ಮಿಸೆಸ್ ಮೂರಳ ಹಣೆಯುಬರೆಹವೂ ಹೀಗೆಯೇ ಆಯಿತು. ಮಿಸೆಸ್ ಟರ್ಟನ್ನಳು ಇದಾವುದನ್ನೂ ಹಚ್ಚಿಕೊಳ್ಳದೆ ಅವರು ಹೊರಡುವ ಪ್ರತೀಕ್ಷೆಯನ್ನೇ ಮಾಡುತ್ತಿದ್ದಳು. ಅವಳಿಗೆ ಮೊದಲಿನಿಂದಲೂ ಇದೆಷ್ಟು ಹುಚ್ಚುತನವೆಂಬುದು ಗೊತ್ತಿತ್ತು.

ಎಲ್ಲರೂ ಒಬ್ಬರೊಬ್ಬರ ಅಪ್ಪಣೆ ತೆಗೆದುಕೊಳ್ಳುವಾಗ ಮಿಸೆಸ್ ಮೂರ ಳಿಗೆ ಒಮ್ಮಿಂದೊಮ್ಮೆ ಸ್ಫೂರ್ತಿ ಬಂದು 'ಒಂದು ದಿವಸ ನಿಮ್ಮ ಮನೆಗೆ ನಾವು ಬರಬಹುದೇ?' ಎಂದು ತಾನು ಮೆಚ್ಚಿದ ಶ್ರೀಮತಿ ಭಟ್ಟಾಚಾರ್ಯ ಳನ್ನು ಕೇಳಿಬಿಟ್ಟಳು.

'ಯಾವಾಗ?' ಎಂದು ಮುಗ್ಧತೆಯಿಂದ ಬಾಗಿ ಕೇಳಿದಳು.

'ನಿಮಗೆ ಅನುಕೂಲವಿದ್ದಾಗ.'

'ನಮಗೆ ಎಲ್ಲ ದಿನಗಳೂ ಅನುಕೂಲವೇ?'

'ಗುರುವಾರ....?'

'ಅಗತ್ಯವಾಗಿ.'

'ಹಾಗಾದರೆ ಆ ದಿನ ಸುಖಸೂಸುವ ದಿನ! ನಿಜವಾಗಿಯೂ ನಮಗೆ ಬಹಳ ಸಂತೋಷವಾಯಿತು. ಎಷ್ಟು ಹೊತ್ತಿಗೆ?'

'ಅದರಲ್ಲಿಯೆ ನಿಮಗೆ ಹೆಚ್ಚು ಅನುಕೂಲವಾದ ಹೊತ್ತು ಹೇಳಿರಿ. ನಿಮ್ಮ ದೇಶಕ್ಕೆ ನಾವು ಇದೆ ಹೊಸದಾಗಿ ಬಂದವರು. ನೀವು ಯಾವಾಗ ಮನೆಯಲ್ಲಿರುವಿರೆಂಬುದು ನಮಗೆ ಗೊತ್ತಿಲ್ಲ.'

ಶ್ರೀಮತಿ ಭಟ್ಟಾಚಾರ್ಯಳಿಗೆ ಎರಡೂ ಗೊತ್ತಿರಲಿಲ್ಲ. ಗುರುವಾರ ಗಳು ಸುರುವಾದಂದಿನಿಂದ ಇಂಗ್ಲೀಷ ಸ್ತ್ರೀಯರು ಅವಳ ಭೆಟ್ಟಿಗೆ ಅವು ಗಳೊಂದರಲ್ಲಿ ದಿನ ಬರುತ್ತಾರೆಂದು ಅವಳಿಗೆ ಗೊತ್ತಿತ್ತು ಅಷ್ಟೆ. ಅಂತೇ ಆ ಹೊತ್ತು ಅವಳು ಮನೆಯಲ್ಲಿರುತ್ತಿದ್ದಳು. ಅವಳಿಗೆ ಎಲ್ಲದರಿಂದಲೂ ಸಂತೋ ಷವೇ. ಯಾವುದರಿಂದಲೂ ಚಕಿತಳಾಗುತ್ತಿದ್ದಿಲ್ಲ. 'ಈಹೊತ್ತು ನಾವು ಕಲಕತ್ತೆಗೆ ಹೊರಡುತ್ತೇವೆ' ಎಂದು ಸಹಜವಾಗಿ ತಿಳಿಸಿದಳು.

'ಓಹೋ! ಹೀಗೇನು?' ಎಂದು ಅಡೀಲಾ ಅದರ ಗರ್ಭಿತವನ್ನು

ತಿಳಿಯದೆ ನುಡಿದಳು. ಆಮೇಲೆ 'ಹಾಗಾದರೆ ನಾವು ನಿಮ್ಮಲ್ಲಿಗೆ ಬಂದಾಗ ನೀವು ಊರಿಗೆ ಹೋಗಿರುತ್ತೀರಿ?' ಎಂದು ಕೇಳಿದಳು.

ಶ್ರೀಮತಿ ಭಟ್ಟಾಚಾರ್ಯರು ಅದನ್ನೇನು ಅಲ್ಲಗಳೆಯಲಿಲ್ಲ. ಆದರೆ ಅವಳ ಗಂಡನು ದೂರದಿಂದಲೇ 'ಹೌದು, ಹೌದು, ನೀವು ನಮ್ಮ ಕಡೆಗೆ ಗುರುವಾರ ಬರಬೇಕು' ಎಂದನು.

'ಆದರೆ ನೀವು ಕಲಕತ್ತೆಯಲ್ಲಿರುವಿರಲ್ಲ?'

'ಇಲ್ಲ, ಇಲ್ಲ, ನಾವು ಹೋಗುವುದಿಲ್ಲ' ಎಂದು ಹೇಳಿ ಅತ್ತ ತನ್ನ ಹೆಂಡತಿಗೆ ಬಂಗಾಲಿ ಭಾಷೆಯಲ್ಲಿ ಏನೋ ಹೇಳಿದನು. 'ಗುರುವಾರ ನಿಮ್ಮ ದಾರೀ ನೋಡುತ್ತೇವೆ?'

'ಗುರುವಾರ....' ಎಂದು ಆ ಸ್ತ್ರೀಯೂ ಪಡಿನುಡಿದಳು.

'ನಮ್ಮ ಸಲುವಾಗಿ ನೀವು ಊರಿಗೆ ಹೋಗುವುದನ್ನು ಮುಂದೆ ಹಾಕುವ ಭಯಂಕರ ಕೆಲಸವನ್ನು ಮಾಡಲಿಕ್ಕಿಲ್ಲೆಂದು ನಂಬಿದ್ದೇವೆ' ಎಂದು ಮಿಸೆಸ್ ಮೂರಳು ಆಶ್ಚರ್ಯದಿಂದ ನುಡಿದಳು.

'ಇಲ್ಲ, ನಿಜವಾಗಿ ಇಲ್ಲ. ನಾವು ಅಂಥ ಜನರಲ್ಲ' ಎಂದು ಅವನು ನಗುತ್ತ ಹೇಳಿದನು.

'ಇಲ್ಲ, ನೀವು ಹಾಗೇ ಮಾಡುತ್ತೀರೆಂದು ನನ್ನ ಭಾವನೆ. ಹಾಗೆ ದಯವಿಟ್ಟು....ನನಗೆ ಬಹಳ ಕೆಡಕೆನಿಸುತ್ತದೆ.'

ಪ್ರತಿಯೊಬ್ಬರೂ ನಗಹತ್ತಿದರು. ಆ ನಗೆಯಲ್ಲಿ ತಪ್ಪು ತಿಳುವಳಿಕೆಯ ಸುಳಿವೇ ಇದ್ದಿಲ್ಲ. ಮತ್ತೆ ಏನೋ ಒಂದು ನಿರಾಕಾರವಾದ ಚರ್ಚೆಯು ನಡೆಯಿತು. ಅದರಲ್ಲಿ ಮಿಸೆಸ್ ಟರ್ಟನ್ನಳು ದೂರೇ ಉಳಿದಳು. ಅವರೊಡನಾದ ಮಾತಿನೆಲ್ಲದರ ಮಥಿತಾರ್ಥವಿಷ್ಟೆ: ಗುರುವಾರ ಭಟ್ಟಾಚಾರ್ಯರ ಮನೆಗೆ ಹೋಗಬೇಕು; ಆದರೆ ಭಟ್ಟಾಚಾರ್ಯರ ಕೆಲಸಕ್ಕೆ ಆದಷ್ಟು ತೊಂದರೆಯಾಗದಂತೆ ಬೆಳಿಗ್ಗೇನೇ ಹೋಗಬೇಕು; ಇವರನ್ನು ಕರೆತರಲು ತನ್ನ ಗಾಡಿಯನ್ನು ಕಳಿಸಬೇಕು. ಅಲ್ಲಿಂದ ಮತ್ತೆ ಎಲ್ಲರೂ ನಕ್ಕರು. ಆ ನಗೆಯು, ನಲುಮೆಯು, ಆದರಪ್ರತ್ಯಾದರದ ಗಲಿಬಿಲಿಯಲ್ಲಿಯೆ ಅವರು ಹೊರಟಾಗ ಇಷ್ಟು ಹೊತ್ತಿನ ವರೆಗೆ ಈ ಸ್ವಾಗತದಲ್ಲಿ ಸೇರದೆ ಇದ್ದ ಮೂವರು

ಸ್ತ್ರೀಯರು ಒಮ್ಮೆಲೆ ವಿಹಾರವುಂಟಪದಿಂದ ಚಿತ್ರವಿಚಿತ್ರ ವರ್ಣದ ಚಕೋರ ಪಕ್ಷಿಗಳಂತೆ ಹೊರಸುಗ್ಗಿ ಬಂದು ಸಲಾಮು ಮಾಡಿದರು.

ಇತ್ತ ಕಲೆಕ್ಟರರು ಎಲ್ಲ ಕಡೆಗೂ ಸುತ್ತುಹಾಕುತ್ತಿದ್ದರು. ಮಧ್ಯೆ ಮಧ್ಯೆ ಕೆಲ ಹಿಗ್ಗಿನ ಮಾತುಗಳನ್ನೂ ಕೆಲ ನಗೆಮಾತುಗಳನ್ನೂ ಆಡುತ್ತಿದ್ದರು. ಅವಕ್ಕೆ ಎಲ್ಲರೂ ಹುರುಪಿನಿಂದ ಚಪ್ಪಾಳಿಕ್ಕುತ್ತಿದ್ದರು. ಆದರೆ ಪ್ರತಿಯೊಬ್ಬ ಅತಿಥಿಯ ಮೇಲೂ ಸ್ವಲ್ಪ ತಪ್ಪಿಸ ಹೊರೆಯಿದೆಯೆಂದು ಅವನಿಗನಿಸಿ ಅವನು ಸುಮ್ಮನೆ ಬರಿ ಉಪಚಾರವನ್ನಷ್ಟೆ ತೋರಿಸುತ್ತಿದ್ದನು. ಅವರು ಮೋಸ ಹಾಕುವುದಿಲ್ಲದಾಗ ಭಾಂಗು, ಹೆಂಗಸು, ಇಲ್ಲವೇ ಅದಕ್ಕೂ ಏನಾದರೂ ಕೆಟ್ಟದ್ದರಲ್ಲಿ ಹೊತ್ತುಗಳೆಯುವಂಥವರು! ಅವರಲ್ಲಿ ಒಳ್ಳೆ ಯೋಗ್ಯತೆಯಿದ್ದ ವರು ಸಹ ಅವನಿಂದ ಏನಾದರೂ ಎತ್ತಬೇಕೆಂದೇ ಹವಣಿಸುವವರು! ಈ ಬ್ರಿಜ್ ಪಾರ್ಟಿಯು ಕೆಡಕಿನಕಿಂತ ಒಳಿತನ್ನೇ ಮಾಡುವುದೆಂದು ಅವನ ವಿಶ್ವಾಸ. ಹಾಗಿಲ್ಲದಿದ್ದರೆ ಇದನ್ನು ಅವನು ಕೊಡುತ್ತಿರಲೇ ಇಲ್ಲ. ಆದರೆ ಅವನು ಅವರ ಮಾಯಾಬಲಿಗೆ ಮಾತ್ರ ಬಿದ್ದಿರಲಿಲ್ಲ. ಅವನು ಸಮಯೋಚಿತ ವಾಗಿ ಟೆನಿಸ್ ಕೋರ್ಟಿನಲ್ಲಿ ತನ್ನ ಜನರು ಕುಳಿತ ಭಾಗದ ಕಡೆಗೆ ತಿರುಗಿ ದನು. ಇದರಿಂದ ಜನರಲ್ಲಿ ಅನೇಕ ವಿಧವಾದ ಪರಿಣಾಮುಗಳಾದವು. ಕಡಿಮೆ ತರಗತಿಯ ಮತ್ತು ಇನ್ನೂ ಸಾಹೇಬರಾಗದ ಜನರಲ್ಲಿ ಬಹು ಜನರು ಮನಃ ಪೂರ್ವಕವಾಗಿ ಅವನಿಗೆ ಕೃತಜ್ಞರಾಗಿದ್ದರು. ಇಂಥ ದೊಡ್ಡ ಅಧಿಕಾರಿಯು ತಮ್ಮನ್ನು ಮಾತನಾಡಿಸಿದನೆಂದ ಮೇಲೆ ಅದೊಂದು ಅವರಿಗೆ ಅಚಲವಾದ ಆಸ್ತಿಯೇ! ಎಷ್ಟೊ ಹೊತ್ತು ನಿಂತರೂ ಅವರಿಗೇನೂ ಅನಿಸಲಿಲ್ಲ. ಅಥವಾ ಏನೂ ಅಲ್ಲಿ ಜರುಗದಿದ್ದರೂ ಕೆಡಕೆನಿಸಲಿಲ್ಲ. ಏಳು ಗಂಟೆಯಾದೊಡನೆ ಹೊರಗೆ ಹಾಕಿದ್ದನ್ನೂ ಅವರು ಹಚ್ಚಿಕೊಳ್ಳಲಿಲ್ಲ. ಉಳಿದವರು ಇನ್ನು ತಿಳುವಳಿಕೆಯಿಂದ ಕೃತಜ್ಞರಾಗಿದ್ದರು. ನವಾಬ ಬಹದ್ದೂರರು ತನ್ನನ್ನು ಮತ್ತು ತನಗಿತ್ತ ವಿಲ ಕ್ಷಣ ಸ್ವಾಗತವನ್ನೂ ಲೆಕ್ಕಿಸದೆ, ತನಗೆ ಆಮಂತ್ರಣ ಕಳಿಸಲು ಹಚ್ಚಿದ ಅವನ ಅಂತಃಕರಣಕ್ಕೆ ಮುಗ್ಧರಾದರು. ಅವನಿಗೆ ಅವರ ತೊಂದರೆಗಳೆಲ್ಲ ಗೊತ್ತಿ ದ್ದವು. ಹಮೀದುಲ್ಲಾನು ಸಹ ಕಲೆಕ್ಟರರು ಆ ಹೊತ್ತು ತಮ್ಮ ಕೆಲಸವನ್ನು ಚೆನ್ನಾಗಿ ಮಾಡಿದರೆಂದೇ ಅಭಿಪ್ರಾಯಬಟ್ಟನು. ಆದರೆ ಉಳಿದ ಮಹಮ್ಮದಲಿ ಮೊದಲಾದವರಿಗೆ ಅದರಲ್ಲೇನೂ ವಿಶ್ವಾಸವೆನಿಸಲಿಲ್ಲ. ಟರ್ಟನ್ನನನ್ನು ಮೇಲ

ಧಿಕಾರಿಗಳು ಒತ್ತಾಯದಿಂದ ಈ ಪಾರ್ಟಿ ಕೊಡಲಿಕ್ಕೆ ಹಚ್ಚಿದ್ದಾರೆಂದು ಅವರ ಮನಸ್ಸಿನಲ್ಲಿ ಗಟ್ಟಿಯಾಗಿತ್ತು; ಮತ್ತು ಏನೂ ಮಾಡಲಿಕ್ಕೆ ಬಾರದೆ ಒಳಗಿಂದೊಳಗೆ ಸಿಟ್ಟಿನಿಂದ ಕುದಿಯುತ್ತಿದ್ದರು. ಕೆಲವು ಒಳ್ಳೆಯ ಅಭಿಪ್ರಾಯದವರಿಗೂ ತಮ್ಮ ಈ ಸುಂಕವನ್ನು ಹಚ್ಚಿದ್ದರು. ಆದರೂ ಮುಹಮ್ಮದಲಿಗೆ ತಾನಿಲ್ಲಿ ಬಂದದ್ದಕ್ಕೆ ಸಂತೋಷವೇ ಆಯಿತು. ಗುಡಿಗಳ ಮಹತ್ವ ಮುಚ್ಚಿದರೆ ಹೆಚ್ಚು. ಇಂಗ್ಲೀಷ ಕ್ಲಬ್ಬಿನ ಪೂಜಾಪದ್ಧತಿಯನ್ನು ನೋಡಿ ಅವನಿಗೆ ಮೋಜೆನಿಸಿತು. ಮುಂದೆ ತನ್ನ ಗೆಳೆಯರಲ್ಲಿ ಅವರ ಚೇಷ್ಟೆ ಮಾಡಲಿಕ್ಕೆ ಅವನಿಗೆ ಅನುಕೂಲವೂ ಆಯಿತು.

ಟರ್ಟನ್ನನನ್ನು ಬಿಟ್ಟರೆ ಆಗ ಚೆನ್ನಾಗಿ ಕೆಲಸ ಮಾಡಿದ ಅಧಿಕಾರಿಯೆಂದರೆ, ಸಣ್ಣ ಸರಕಾರೀ ಕಾಲೇಜದ ಮುಖ್ಯಾಧ್ಯಾಪಕನಾದ ಮಿ. ಫೀಲ್ಡಿಂಗನು. ಅವನಿಗೆ ಈ ಜಿಲ್ಹೆಯ ಪರಿಚಯವೇನೂ ಇದ್ದಿಲ್ಲ. ಅಲ್ಲಿಯ ಜನರ ಗುಣದೋಷಗಳಂತೂ ಮೊದಲೇ ಗೊತ್ತಿದ್ದಿಲ್ಲ. ಆದುದರಿಂದಲೇ ಅವನು ಅಷ್ಟೇನು ನಿರ್ದಯನಾಗಿರಲಿಲ್ಲ. ವ್ಯಾಯಾಮಪಟುವೂ ಉಲ್ಹಾಸಿಯೂ ಆದ ಅವನು ಕುಸ್ತಿಗೆ ಎದ್ದವರ ಹಾಗೆ ಓಡಾಡುತ್ತ ಮಾತಿನಲ್ಲಿ ಎಷ್ಟೋ ತಪ್ಪುಗಳನ್ನು ಮಾಡುತ್ತಿದ್ದನು. ಆದರೆ ಅವನು ಜನರಿಗೆ ಬೇಕಾದವನಾಗಿದ್ದುದರಿಂದ ಅವನ ಶಿಷ್ಯರ ತಂದೆ-ತಾಯಿಗಳು ಅವನ ಈ ತಪ್ಪುಗಳನ್ನು ಹೊರಗೆಡವಿರಲಿಲ್ಲ. ಫಲಾಹಾರದ ಹೊತ್ತು ಬಂದ ಕೂಡಲೆ ಇವನು ಇಂಗ್ಲೀಷ ಸಾಹೇಬರ ಕಡೆಗೆ ಹೋಗಲಿಲ್ಲ. ಆದರೆ ಬಿಸಿ ಕಡಲೆ ತಿಂದು ಬಾಯಿ ಸುಟ್ಟುಕೊಂಡನು. ಇವನು ಬೇಕಾದವರ ಜೊತೆಗೆ ಮಾತಾಡುವನು, ಬೇಕಾದ್ದನ್ನು ತಿನ್ನುವನು. ಆ ಪಾರ್ಟಿಯಲ್ಲಿ ನಡೆದದ್ದೆಲ್ಲವೂ ವಿಕ್ಷಿಪ್ತವಾಗಿ ವಿಚಿತ್ರವಾಗಿದ್ದರೂ ಇಂಗ್ಲೆಂಡದಿಂದ ಹೊಸದಾಗಿ ಬಂದ ಇಬ್ಬರು ಸ್ತ್ರೀಯರ ನಡತೆ ರೀತಿಗಳು ಮಾತ್ರ ನೋಡುವ ಹಾಗಿದ್ದವು. ಅವರು ಶ್ರೀಮತಿ ಭಟ್ಟಾಚಾರ್ಯರ ಮನೆಗೆ ಅತಿಥಿಗಳಾಗುವ ಇಚ್ಛೆಯನ್ನು ತಾವೇ ತೋರಿಸಿ ತಮ್ಮ ವಿನಯಶೀಲತೆಯನ್ನು ವ್ಯಕ್ತಗೊಳಿಸಿದ್ದರಿಂದ—ಅವಳಿಗಷ್ಟೇ ಅಲ್ಲ-ಎಲ್ಲ ಹಿಂದೂ ಜನರಿಗೂ ಸಂತೋಷವಾಯಿತು. ಫೀಲ್ಡಿಂಗನಿಗೂ ಅದರಿಂದ ಸಂತೋಷವಾಯಿತು. ಅವನಿಗಿನ್ನೂ ಅವರ ಪರಿಚಯವು ಅಷ್ಟಾಗಿದ್ದಿಲ್ಲ; ಆದರೂ

ಅವರಿಬ್ಬರೂ ತಮ್ಮ ಸಖ್ಯಸ್ವಭಾವವನ್ನು ತೋರಿಸಿದ್ದರಿಂದ ' ಬಹಳ ಸಂತೋಷವಾಯಿತು ' ಎಂದು ಅವರಿಗೆ ಹೇಳಿ ಬರಬೇಕೆಂದು ನಿಶ್ಚಯಿಸಿದನು.

ಅವರಿಬ್ಬರಲ್ಲಿ ಚಿಕ್ಕವಳು ಒಬ್ಬಳೇ ನಿಂತದ್ದನ್ನು ನೋಡಿದನು. ಅವಳು ಡಬಗಳ್ಳಿ ಬೇಲಿಯ ಸಂದಿಯೊಳಗಿಂದ ದೂರದ ಮಾರವಾಡ ದಿನ್ನಿಗಳನ್ನು ನೋಡುತ್ತಿದ್ದಳು. ಮೂರುಸಂಜೆಯು ಮುಂದೆ ರೂಢಿಯಂತೆ ಅವು ಸ್ವಲ್ಪ ಸಮೀಪಕ್ಕೆ ಸರಿದುಬಂದಿದ್ದವು; ಸಂಜೆಯು ಇನ್ನೂ ಹೆಚ್ಚು ಹೊತ್ತು ತಡೆದಿದ್ದರೆ ಅವು ಊರನ್ನೇ ಮುಟ್ಟುತ್ತಿದ್ದವು! ಆದರೆ ಉಷ್ಣಕಟಿಬಂಧದಲ್ಲಿರುವುದರಿಂದ ಮೂರುಸಂಜೆಯು ವೇಗದಿಂದ ಓಡಿಹೋಯಿತು. ಫೀಲ್ಡಿಂಗನು ಅವಳ ಹತ್ತಿರ ಹೋಗಿ ತನ್ನ ವೃತ್ತಾಂತವನ್ನು ಹೇಳಿದನು. ಅದನ್ನು ಕೇಳಿ ಅವಳಿಗೂ ಬಹಳ ಸಂತೋಷವಾಗಿ ಅವನ ಉಪಕಾರವನ್ನು ಮನಃಪೂರ್ವಕ ಸ್ಮರಿಸಿದಳು. ಕೊನೆಗೆ ಫೀಲ್ಡಿಂಗನು ಅವರಿಬ್ಬರನ್ನೂ ತನ್ನಲ್ಲಿಗೆ ಚಹಕ್ಕೆ ಬರಬೇಕೆಂದು ಬಿನ್ನವಿಸಿದನು.

' ನನಗಂತೂ ಬರಬೇಕೆಂದು ಬಹಳ ಮನಸ್ಸಿದೆ! ಅದರಂತೆ ಮಿಸೆಸ್ ಮೂರಳಿಗೂ ಇದೆಯೆಂದು ನನಗೆ ಗೊತ್ತಿದೆ. '

' ನಾನೊಬ್ಬ ಆಶ್ರಮವಾಸಿ ಸನ್ಯಾಸಿಯ ಹಾಗೆ ಇದ್ದೇನೆ ಮತ್ತೆ? '

' ಈ ಸ್ಥಳದಲ್ಲಿ ಹಾಗಿರುವುದೇ ಮೇಲು. '

' ನನಗೆ ಬಹಳ ಕೆಲಸದ ನಿಮಿತ್ತ ಕ್ಲಬ್ಬಿನ ಕಡೆಗೇ ಬರುವುದಾಗುವುದಿಲ್ಲ. '

' ಗೊತ್ತಿದೆ, ಗೊತ್ತಿದೆ. ನಾವು ಅದನ್ನು ಬಿಟ್ಟು ಕೆಳಗೆ ಎಂದೂ ಇಳಿಯುವುದೇ ಇಲ್ಲ. ನೀವು ಹಿಂದೂ ಜನರೊಡನೆ ಬೆರೆತಿರುವುದನ್ನು ನೋಡಿ ನನ್ನ ಆಶೆಯ ಗರಿಬಿಚ್ಚಿದಂತಾಗುತ್ತದೆ. ನನಗೇಕಿಲ್ಲ? ಎಂದು ಅಸೂಯೆ ಕೂಡ ಹುಟ್ಟುತ್ತದೆ. '

' ಯಾಕೆ ನಿಮಗೆ ಒಬ್ಬಿಬ್ಬರನ್ನು ಭೆಟ್ಟಿಯಾಗಬೇಕಾಗಿದೆಯೇನು? '

' ಅಗತ್ಯ, ಅವಶ್ಯ. ಅದನ್ನೇ ನಾನು ಬಯಸುತ್ತಿದ್ದೆ. ಈ ಹೊತ್ತಿನ ಈ ಪಾರ್ಟಿ ನೋಡಿ ನನ್ನಲ್ಲಿ ರೊಚ್ಚು ಎದ್ದಿದೆ; ಮತ್ತೆ ಕೆಡಕೂ ಎನಿಸಿದೆ! ಈ ದೇಶಕ್ಕೆ ಬಂದ ನಮ್ಮವರಿಗೆ ಹುಚ್ಚುಹಿಡಿದಿರಲಿಕ್ಕೆಬೇಕೆಂದೆನಿಸುತ್ತದೆ. ಅತಿಥಿಗಳನ್ನಾಗಿ ಆಮಂತ್ರಿಸಿ ಅವರನ್ನು ಆದರಿಸುವ ಇವರ ವಿಧಾನವನ್ನು

ನೋಡಿದಿರಾ? ನೀವು, ಟರ್ಟನ್ ಮತ್ತು ಬೇಕಾದರೆ ಮ್ಯಾಕ್‌ಬ್ರಾಯಿಡ, ಇವರಿಷ್ಟೇ ಏನೊ ಸಾಮಾನ್ಯ ಸೌಜನ್ಯವನ್ನು ತೋರಿಸಿದವರು. ಉಳಿದವರನ್ನು ನೋಡಿ ನನಗೆ ನಾಚಿಕೆ ಬಂತು. ಇಲ್ಲಿ ಇದು ಹೀಗೇ ಹೆಚ್ಚು ಹೆಚ್ಚು ಕೆಡುತ್ತ ನಡೆದಿದೆ!'

'ಹೌದು, ಕೆಟ್ಟುಹೋಗಿದೆ! ಇಲ್ಲಿಗೆ ಬರುವಾಗೇನೊ ಆಂಗ್ಲ ಪುರುಷರಿಗೆ ತಾವು ಒಳ್ಳೆಯ ರೀತಿಯಿಂದಿರಬೇಕೆಂದೇ ಇಚ್ಛೆ ಇರುತ್ತದೆ. ಆದರೆ ಇಲ್ಲಿಗೆ ಬಂದ ಮೇಲೆ ಅವರ ಸ್ತ್ರೀಯರೇ ಅವರಿಗೆ ಅಡ್ಡಬರುತ್ತಾರೆ. ಅವರು ತಮ್ಮ ಸ್ತ್ರೀಯರ ಕಾಳಜಿಯನ್ನು ತಾವೇ ತೆಗೆದುಕೊಳ್ಳಬೇಕಾಯಿತಲ್ಲದೆ ಅವರಿಗೆ ಜಹ ಕೊಡುವುದನ್ನೂ ಮಾಡಬೇಕಾಗಿ ಬಂತು. ನಾಯಿಗಳ ವಿಷಯವನ್ನೂ ತಿಳಿಸಿ ಹೇಳಬೇಕಾಗಿ ಬಂತು. ಈ ಟೆನಿಸ್ ಆಟ ಸುರುವು ಆದ ಮೇಲಂತೂ ಪೂರ್ವ ಪಶ್ಚಿಮಗಳ ಅಂತರವು ಇನ್ನೂ ಹೆಚ್ಚಾಯಿತು. ಮೊದಲು ಅವರ ನಡುವೆ ಕೆಲವಾದರೂ ಸೆಟ್ಟು ಆಟವಾಗುವುದೆಂಬ ಆಶೆಯಿತ್ತು. ಆದರೆ ಅದೀಗ ಹೋಯಿತು. ಟೆನಿಸ್ ಕೋರ್ಟುಗಳನ್ನು ಪ್ರತಿ ದಿವಸ ಆ ಕ್ಲಬ್ಬಿನ ಜೋಡುಗಳೇ ಹಿಡಿದುಕೊಂಡುಬಿಟ್ಟವು!' ಎಂದು ಹೇಳುವಾಗ ಫೀಲ್ಡಿಂಗನಿಗೂ ಬಂದು ಸ್ವಲ್ಪ ಸಿಟ್ಟು ಬಂದಿತ್ತು. ಆದರೆ ಅವನು ಅದನ್ನು ಅವಳೆದುರಿಗೆ ತೋರಗೊಡಲಿಲ್ಲ. ಅವನಿಗೆ ಗೊತ್ತು, ಅವಳ ಈ ಆರ್ಭಟದಲ್ಲಿ ಬರಿ ತಾತ್ವಿಕತೆಯಿದೆಯೆಂದು. ಅಲ್ಲಿಯೆ ಕೆಳಗಡೆಗೆ ಕಾಲೇಜದಲ್ಲಿ ಒಬ್ಬ ಪ್ರೊಫೆಸರನು ಹಾಡುತ್ತಿದ್ದುದನ್ನು ಕೇಳಿ 'ನಿಮಗೆ ಹಿಂದೀ ಸಂಗೀತ ಸೇರುತ್ತದೆಯೆ?' ಎಂದು ಅವಳನ್ನು ಕೇಳಿದನು.

'ಓಹೋ! ನನಗೂ ಅದನ್ನು ಕೇಳಬೇಕಾಗಿದೆ. ನಿಮಗೆ ಡಾಕ್ಟರ ಅಝೀಜರ ಪರಿಚಯವಿದೆಯೇನು?'

'ಅವನ ಬಗ್ಗೆ ನನಗೆಲ್ಲ ಗೊತ್ತಿದೆ. ಆದರೆ ಅವನದೇ ಗೊತ್ತಿಲ್ಲ. ನಿಮಗೆ ಅವನನ್ನು ಕಾಣಬೇಕಾಗಿದೆಯೇನು?'

'ಅವನು ಬಹಳ ಚೆನ್ನಾಗಿದ್ದಾನೆಂದು ಮಿಸೆಸ್ ಮೂರಳು ಹೇಳುತ್ತಾಳೆ.'

'ಒಳ್ಳೆಯದು, ಮಿಸ್ ಕ್ವೆಸ್ಟೆಡ್! ನಿಮಗೆ ಗುರುವಾರ ಸರಿ ಹೋಗುತ್ತದೆಯೇ?'

'ಹುಂ, ಸರಿಹೋಗುತ್ತದೆ. ಆ ಹೊತ್ತು ಮುಂಜಾನೆ ಆ ಹಿಂದೂ ಸ್ತ್ರೀಯರ ಮನೆಗೆ ಹೋಗುತ್ತೇವೆ. ಚಲೋದೆಲ್ಲ ಗುರುವಾರವೇ ಬರುತ್ತದೆ!'

'ಸಿಟಿ ಮ್ಯಾಜಿಸ್ಟ್ರೇಟರೇ ನಿಮ್ಮನ್ನು ಕರೆದುಕೊಂಡು ಬರಬೇಕೆಂದು ನಾನನ್ನುವುದಿಲ್ಲ. ಯಾಕಂದರೆ ಅವರಿಗೆ ಆ ಹೊತ್ತಿಗೆ ಕೆಲಸ ಬಹಳನೆಂದು ನನಗೆ ಗೊತ್ತಿದೆ'

'ಹೌದು. ರೋನಿಗೆ ಯಾವಾಗಲೂ ಕೆಲಸ ಬಹಳ' ಎಂದು ಆ ಮೂರವಾರ ದಿನ್ನೆಗಳನ್ನೇ ಧ್ಯಾನಿಸುತ್ತ ಅವಳು ಉತ್ತರ ಕೊಟ್ಟಳು. ಅವು ಈಗ ಒಮ್ಮಿಂದೊಮ್ಮೆ ಎಷ್ಟು ಮನೋಹರವಾಗಿ ಕಂಡವು! ಆದರೆ ಅವಳಿಗೆ ಅವನ್ನು ಮುಟ್ಟುವುದಾಗಲಿಲ್ಲ. ಅವಳ ವಿವಾಹ ಜೀವನದ ಕನಸು ಅವುಗಳ ಮುಂದುಗಡೆ ಪರದೆಯಂತೆ ಬಿದ್ದು ಅವನ್ನು ಮರೆಮಾಡಿತು. ತಾನು ಮತ್ತು ರೋನಿ ಈ ಹೊತ್ತಿನಂತೆಯೆ ಪ್ರತಿ ಸಾಯಂಕಾಲ ಕ್ಲಬ್ಬಿಗೆ ಬಂದು ಹೊತ್ತುಗಳೆಯುವುದು—ವೇಷ ಬದಲಾಯಿಸಲಿಕ್ಕೆ ಮನೆಗೆ ಗಾಡಿಯಲ್ಲಿ ಕುಳಿತು ಹೋಗುವುದು-ಲೆಸ್ಲಿ ಕ್ಯಾಲೆಂಡರ ಮತ್ತು ಟರ್ಟನ್ ಬರ್ಟನ್ ಮನೆತನಗಳಿಗೆ ಭೆಟ್ಟಿ ಕೊಡುವುದು—ಅವರಿಗೆ ಆಮಂತ್ರಣ ಕೊಡುವುದು, ಅವರಿಂದ ಆಮಂತ್ರಣ ಸ್ವೀಕರಿಸುವುದು-ಇದೇ ತನ್ನ ನಿತ್ಯಜೀವನವಾದರೆ ತಾನು ನೋಡಬೇಕೆಂದು ಹಾರೈಸುತ್ತಿದ್ದ ನಿಜವಾದ ಭಾರತವು ಕಣ್ಣಿಗೆ ಬೀಳದೆ ಜಾರಿ ಹೋಗುವುದು! ಆಕಾಶದ ಬಣ್ಣವೇನೊ ಅದೇ ಉಳಿಯುವುದು; ಮುಂಜಾವಿನ ಪಕ್ಷಿಗಳು, ಕಂದೀ ಬಣ್ಣದ ದೇಹಗಳು, ಬಿಳಿ ರುಮಾಲುಗಳು, ಎಲ್ಲ ಅವೇ! ನೋಡುವವಳು ತಾನು ಮಾತ್ರ ನಾಯಿ–ಗಾಡಿಯ ಮೇಲೆ ಕುಳಿತಿದ್ದಾಳೆ. ರೂಪಗಳೇನೊ ಕಾಣುತ್ತಿವೆ; ಆದರೆ ರೂಪಕ್ರಿಯೆಗಳ ಹಿಂದಿನ ಶಕ್ತಿಯು ಮಾತ್ರ ಕಾಣದಾಗಿದೆ. ತಾನು ಯಾವಾಗಲೂ ನೋಡಿದರೆ ಭಾರತದ ಹೊರಮೈಯನ್ನೇ ನೋಡುವಳೇ ಹೊರತು ಅದರ ಒಳಮೈಯನ್ನು, ಅಂತಃಶಕ್ತಿಯನ್ನು ನೋಡಲಾರಳು! ಎಂದವಳಿಗೆ ಹೊಳೆಯಿತು. ಮಿಸೆಸ್ ಮೂರಳಿಗೆ ಮಾತ್ರ ಆ ಅಂತಃಶಕ್ತಿಯ ಚಮಕು ಸ್ವಲ್ಪ ಕಂಡಿರಬೇಕೆಂದು ಅವಳು ತಿಳಿದುಕೊಂಡಿದ್ದಳು.

ಅಡೀಲಾ ಕಂಡ ಕನಸಿನಂತೆಯೆ ಸ್ವಲ್ಪ ಹೊತ್ತಿನಲ್ಲಿ ಅವರು ಕ್ಲಬ್ಬಿ

ನಿಂದ ಗಾಡಿಯಲ್ಲಿ ಕುಳಿತು ಹೋದರು; ಪೋಷಾಕು ಬದಲು ಮಾಡಿದರು; ಊಟಕ್ಕೆ ಮಿಸ್ ಡೆರಕ್ಕ್, ಮ್ಯಾಕ್‌ಬ್ರಾಯಿಡರೆಲ್ಲರೂ ಬಂದರು. ನಾನಾ ತರಹದ ಪಕ್ವಾನ್ನಗಳ ಊಟ ನಡೆಯಿತು. ಆಗ ' ಪಿ ಎಂಡ್ ಓ ' ಕಂಪನಿಯ ಹಡಗಗಳು ತುಂಬಿ ತುಂಬಿ ತನ್ನಕಿಂತ ಮೊದಲು ಇಲ್ಲಿಗೆ ತಂದುಬಿಟ್ಟ ತರುಣ ಸ್ತ್ರೀಪುರುಷರ ವಿಷಯವಾಗಿ ಅಡೀಲಾ ವಿಚಾರಮಾಡಹತ್ತಿದಳು. ' ಅಲ್ಲಿಂದ ಬಂದವರೆಲ್ಲ ಇದೇ ಊಟ, ಇದೇ ಆಚಾರ, ಇದೇ ವಿಚಾರಕ್ಕೆ ಆಳಾಗಿ ಹೋಗುತ್ತಾರೆ! ಹೊಸದಾಗಿ ಬಂದಾಗ ಒಳ್ಳೆ ಆಸ್ಥೆಯಿಂದ ಎಲ್ಲದಕ್ಕೂ ಮೂಗುಮುರಿದು ಕೊನೆಗೆ ಇದೇ ಊಟ, ಇದೇ ಆಚಾರ ವಿಚಾರಗಳಿಗೆ ಒಪ್ಪಿ ತಾವೇ ಆಮೇಲೆ ಮೂಗುಮುರಿಸಿಕೊಳ್ಳುತ್ತಾರೆ. ಇವರಂತೆ ನಾನೆಂದಿಗೂ ಆಗಬಾರದು ' ಎಂದು ಕೊನೆಗೆ ತನ್ನ ಕನಸಿನ ನಿಶ್ಚಯ ಮಾಡಿ ದಳು. ಅವಳಿನ್ನೂ ಚಿಕ್ಕ ವಯಸ್ಸಿನವಳೇನೊ ಹೌದು. ಆದರೂ ಒಳಗಿಂ ದೊಳಗೇ ನಡೆದ ಈ ಪ್ರವಾಹದ ವಿರುದ್ಧ ಹೆಣಗಾಡಲಿಕ್ಕೆ ತಾನು ಬಂದಿದ್ದೇ ನೆಂದು ಹೆಮ್ಮೆಪಟ್ಟುಕೊಂಡಳು. ಅದಕ್ಕಾಗಿ ತನಗೆ ಸಹಾಯಕರಿಲ್ಲದೆ ನಡೆಯದೆಂಬ ವಿವೇಕವೂ ಅವಳಲ್ಲಿತ್ತು. ಚಂದ್ರಪುರದಲ್ಲಿ ಮೊದಲು ತಾನು ತನ್ನ ಜೊತೆಗೆ ತನ್ನಂತೆ ಬಗೆಯುವ ಕೆಲ ಜನರನ್ನು ಕೂಡಿಹಾಕಬೇಕೆಂದು ಅವಳು ಯೋಚಿಸಿದಳು. ಆಗ ಅವಳ ಕಣ್ಣೆದುರಿಗೆ ಫೀಲ್ಡಿಂಗನ ಮತ್ತು ಉಚ್ಚರಿಸಲಿಕ್ಕೆ ಬಾರದ ಹೆಸರುಳ್ಳ ಆ ಹಿಂದೀ ಸ್ತ್ರೀಯ ಚಿತ್ರಗಳು ಬಂದು ನಿಂತವು. ಇವರ ಗುರುತಾದುದಕ್ಕೆ ಒಳಗೇ ಸಂತೋಷಬಟ್ಟಳು. ಈಗಂತೂ ಹೇಗಾದರೂ ತನ್ನ ಕಾರ್ಯದ ಬೀಜವು ದೊರೆಯಿತು; ಇನ್ನು ಅದರ ಮುಂದಿನ ಬೆಳೆಯು ತನಗೆ ತಾನೇ ತಿಳಿಯುವುದೆಂದು ಭಾವಿಸಿದಳು.

ಮಿಸ್ ಡೆರೆಕ್ಕಳು ದೂರದಲ್ಲಿದ್ದ ಒಂದು ದೇಶೀ ಸಂಸ್ಥಾನದಲ್ಲಿ ಮಹಾ ರಾಣಿಯವರಿಗೆ ಸಂಗಡಿಗಳಾಗಿದ್ದಳು. ಅವಳು ಬಹಳ ಉಲ್ಹಾಸಿ; ವಿನೋದಿ. ತನ್ನ ರಜೆಯ ವಿಷಯವನ್ನು ಹೇಳಿ ಹೇಳಿ ಎಲ್ಲರನ್ನೂ ನಗಿಸಿದ್ದಳು. ತಾನು ರಜೆ ಪಡೆದದ್ದು ಮಹಾರಾಣಿಯವರು ಕೊಟ್ಟರೆಂದಲ್ಲ; ತನ್ನಲ್ಲಿ ಪಡೆಯುವ ಯೋಗ್ಯತೆಯಿತ್ತೆಂದು. ಈಗ ಆ ಮಹಾರಾಜರ ಮೋಟರ ಕಾರನ್ನೇ ಎಬ್ಬಿಸ ಬೇಕೆಂದು ಅವಳ ಹೊಂಚು. ಆ ಕಾರು ಈಗ ದಿಲ್ಲಿಯಲ್ಲಿಯ ನರೇಂದ್ರ ಸಭೆಗೆ ಹೋಗಿತ್ತು. ತಿರುಗಿ ಅದು ರೈಲಿನಲ್ಲಿ ಬರುವಂತೆ ಮಾಡಿ, ಹಾಗೆ ಬರುವಾಗ

ಜಂಕ್ಸೆನ್ನಿನಲ್ಲಿ ಕಳವು ಮಾಡಿಸಬೇಕೆಂದು ಅವಳ ಲೆಕ್ಕ. ಈ ಬ್ರಿಜ್‌ಪಾರ್ಟಿ ವಿಷಯದಲ್ಲಿಯೂ ಅವಳು ಒಳ್ಳೆ ವಿನೋದಭಾವವನ್ನು ತಾಳಿದ್ದಳು—ನಿಜ ವಾಗಿ ನೋಡಿದರೆ ಇಡಿ ಈ ದ್ವೀಪಕಲ್ಪವೇ ಹಾಸ್ಯದ ರಂಗಭೂಮಿ ಯೆಂದು ಅವಳು ಭಾವಿಸಿದ್ದಳು. 'ಈ ಜನರ ಹಾಸ್ಯಭಾಗವನ್ನ ಕಾಣದಿದ್ದರೆ ಎಲ್ಲವೂ ವ್ಯರ್ಥವೆಂದೇ ತಿಳಿಯಬೇಕು' ಇದು ಅವಳ ಬಾಯಲ್ಲಿ ಯಾವಾಗಲೂ ಇದ್ದ ಮಾತು. ಇನ್ನು ಮಿಸೆಸ್ ಮ್ಯಾಕ್‌ಬ್ರಾಯಿಡಳ ವಿಷಯ. ಅವಳು ಹಿಂದಕ್ಕೆ ನರ್ಸ ಇದ್ದಳು. ಮಾತುಮಾತಿಗೆ 'ಆ ಕೂಸು ಹೇಗೆ ತುಂಬಿಕೊಂ ಡಿದೆ! ಅಯ್ಯೋ, ಆ ಕೂಸು ಹೇಗೆ ಸಾಯಲಾಗಿದೆ!' ಎನ್ನದೆ ಸುಮ್ಮನಿರು ವುದಾಗುತ್ತಿರಲಿಲ್ಲ. ಅವಳು ಜಗತ್ತನ್ನು ಕಂಡದ್ದೇ ಹಾಗೆ. ಹಾಗೆ ಕಾಣ ಬೇಕೆಂಬುದೇ ಅವಳ ಆಶೆ. ಮಿಸ್ಟರ ಮ್ಯಾಕ್‌ಬ್ರಾಯಿಡನೂ ಬಹಳ ಮಾತೇ ಆಡುತ್ತಿರಲಿಲ್ಲ. ಬಹಳ ಪೋಕ್ತ ಮನುಷ್ಯ.

ಬಂದ ಅತಿಥಿಗಳೆಲ್ಲ ಹೋದ ಮೇಲೆ ಅಡೀಲಾ ಮಲಗಲಿಕ್ಕೆ ಹೋದಳು. ಇತ್ತ ತಾಯಿ ಮಕ್ಕಳಿಬ್ಬರೂ ಮತ್ತೆ ಮಾತನಾಡುತ್ತ ಕುಳಿತರು. ರೋನಿಗೆ ತನ್ನ ತಾಯಿಯ ಮಾತೂ ಸಹಾನುಭೂತಿಯೂ ಬೇಕಿತ್ತು. ಆದರೆ ಅವಳು ಮಾತಿನಲ್ಲಿ ಅಡ್ಡಅಡ್ಡ ಬರುವುದು ಮಾತ್ರ ಅವನಿಗೆ ಸೇರುತ್ತಿರಲಿಲ್ಲ. 'ನಿನ್ನೊಡನೆ ಅಡೀಲಾ ಬಹಳ ಮಾತಾಡುತ್ತಾಳೇನು?' ಎಂದು ಸುರುವು ಮಾಡಿ 'ನನಗೆ ಕೆಲಸ ವೈತುಂಬ ಬಿದ್ದಿದೆ; ಆದ್ದರಿಂದ ಅವಳನ್ನು ಅಷ್ಟು ಕಾಣುವುದೇ ನನ್ನಿಂದಾಗಿಲ್ಲ. ಆದರೂ ಇಲ್ಲೆಲ್ಲ ಅವಳಿಗೆ ಸುಖವಾಗಿದೆಯೆಂದು ತಿಳಿದುಕೊಂಡಿದ್ದೇನೆ' ಎಂದನು.

'ನಾನೂ ಅವಳೂ ಬಹಳವಾಗಿ ಹಿಂದುಸ್ತಾನದ ವಿಷಯಕ್ಕೇ ಮಾತಾ ಡುತ್ತೇವೆ. ನೀನೀಗ ಅವಳ ಮಾತು ಎತ್ತಿದೆಯೆಂದು ಹೇಳುತ್ತೇನೆ, ಕೇಳು. ನೀನು ಇನ್ನು ಅವಳೊಡನೇ ಹೆಚ್ಚು ಹೊತ್ತನ್ನು ಕಳೆಯಬೇಕು?'

'ಹೌದು; ಆದರೆ ಜನರು ಗುಜುಗುಜು ಮಾತಾಡುತ್ತಾರೆ!'

'ಯಾವಾಗಾದರೂ ಒಮ್ಮೆ ಜನರು ಗುಜುಗುಜು ಮಾತಾಡುವವರೇ; ಮಾತಾಡಲಿ.'

'ಇಲ್ಲಿಯ ಜನರು ಬಹಳ ವಿಚಿತ್ರವಾಗಿರುವರು. ನಮ್ಮ ದೇಶದಂತೆ ಅಲ್ಲ. ನಮ್ಮ ಬಡಾಸಾಹೇಬರು ಹೇಳುವಂತೆ ಎಲ್ಲರೂ ಇಲ್ಲಿ ಬೆಳಕಿನೆದುರಿ

ಸಲ್ಲಿಯೇ ಇರಬೇಕಾಗುವದು. ನಿನಗೊಂದು ತೀರ ಸಣ್ಣ ಸಂಗತಿಯ ಉದಾಹರಣೆ ಕೊಡುತ್ತೇನೆ; ಅಡೀಲಾ ಕ್ಲಬ್ ಕಾಂಪೌಂಡಿನ ತುದಿಗೆ ಹೋದೊಡನೆ ಫೀಲ್ಡಿಂಗನು ಅವಳ ಹಿಂದೆ ಹೋದನು. ಮಿಸೆಸ್ ಕ್ಯಾಲೆಂಡರಳ ಲಕ್ಷ್ಯವೆಲ್ಲ ಅತ್ತಕಡೆಗೇ ಇದ್ದುದನ್ನು ನಾನು ನೋಡಿದೆನು. ಪೂರ್ಣವಾಗಿ ನೀವೂ ಅವರಂತೆಯಾದಿರೆಂದು ಅವರಿಗೆ ನಿಶ್ಚಯವಾಗುವ ವರೆಗೆ ಅವರು ಹೀಗೇ ಮಾಡುವವರೇ. '

' ಅಡೀಲಾಳೆಂದಿಗೂ ಅವಳಂತೆ ಆಗುವುದು ಸಾಧ್ಯವಿಲ್ಲೆಂದು ನನಗನಿಸುತ್ತದೆ. ಅದು ಬಹಳ ವಿಲಕ್ಷಣ ಹುಡಿಗಿ. '

' ಹೌದು. ಅದು ಅವಳಲ್ಲಿ ಒಡೆದು ಕಾಣುವ ಗುಣವೆಂಬುದು ನನಗೂ ಗೊತ್ತಿದೆ ' ಎಂದು ರೋನಿ ವಿಚಾರದ ತೂಕದಿಂದ ಮಾತನಾಡಿದನು. ಮಿಸೆಸ್ ಮೂರಳು ಅವನೀಗ ಹೀಗೆ ಮಾತನಾಡುವುದು ಅಸಂಬದ್ಧವೆಂದು ಭಾವಿಸಿದಳು. ಲಂಡನ್ನದಲ್ಲಿ ಒಂಟಿಗ ಜೀವನದಿಂದ ಪ್ರೈಯುಂಡ ಅವಳು ತೋರಲಿಕ್ಕೆ ರಹಸ್ಯಮಯವಾಗಿದ್ದ ಈ ಹಿಂದುಸ್ತಾನದಲ್ಲಿ ಅಂತಹ ರಹಸ್ಯವೇನೂ ಇಲ್ಲೆಂಬುದನ್ನೂ ಮತ್ತು ಆ ಕಾರಣದಿಂದ ರೂಢಿಗಳೇ ಹೆಚ್ಚು ಬಲವತ್ತರವಾಗಿವೆಯೆಂಬದನ್ನೂ ತಿಳಿಯದಾದಳು. ' ಅಡೀಲಾಳ ಮನಸ್ಸಿನಲ್ಲಿ ಈಗ ಸದ್ಯಕ್ಕೆ ಯಾವ ವಿಚಾರವೂ ಇಲ್ಲೆಂದು ಭಾವಿಸುತ್ತೇನೆ ? ' ಎಂದು ರೋನಿ ಮಾತನ್ನು ಮುಂದೆ ಸಾಗಿಸಿದನು.

' ನೀನೇ ಕೇಳು; ಕೇಳಿ ನೋಡು. '

' ಬಹುಶಃ ಅವಳು ಇಲ್ಲಿಯ ಬಿಸಿಲಿನ ಕಥೆಯನ್ನು ಕೇಳಿರಬಹುದು ? ಆದರೆ ನಾನು ಪ್ರತಿ ಎಪ್ರಿಲ್‌ದಲ್ಲಿ ಅವಳನ್ನು ಗುಡ್ಡಕ್ಕೆ ಕಳಿಸುವೆ. ಹೆಂಡತಿಯನ್ನು ಬೈಲುಸೀಮೆಯಲ್ಲಿಟ್ಟು ನಾನೇನು ಕುದಿಸುವವನಲ್ಲ. '

' ಉಹುಂ. ಅದು ಹವೆಯ ವಿಷಯವಷ್ಟೆ ಅಲ್ಲ. '

' ತಾಯಿ, ಆ ವಿಷಯದ ಹೊರತು ಹಿಂದುಸ್ತಾನದಲ್ಲಿ ಬೇರೆ ಯಾವುದೂ ಇಲ್ಲ. ಎಲ್ಲಕ್ಕೂ ಆದಿಯೂ ಅದೇ, ಅಂತವೂ ಅದೆ.

' ಹೌದು, ಮ್ಯಾಕ್‌ಬ್ರಾಯಿಡನೂ ಹೀಗೇ ಅನ್ನುತ್ತಿದ್ದನು. ಆದರೆ ಹಿಂದುಸ್ತಾನದಲ್ಲಿಯ ಆಂಗ್ಲೊ ಇಂಡಿಯನ್ನರೇ ಅವಳ ತಲೆ ಕೆಡಿಸುತ್ತಿದ್ದಾರೆ.

ಅವರು ಹಿಂದೀಜನರೊಡನೆ ಸರಿಯಾಗಿ ನಡೆದುಕೊಳ್ಳುತ್ತಾರೆಂದು ಅವಳಿಗನಿಸುವುದಿಲ್ಲ. '

' ನಾನು ನಿನಗೇನು ಹೇಳಿದೆ ? ' ಎಂದು ಸ್ವಲ್ಪ ರೀತಿಯನ್ನು ಬಿಟ್ಟೇ ಕೇಳಿದೆನು. ' ನನಗದು ಹೋದ ವಾರವೇ ಗೊತ್ತಾಯಿತು. ಮಾತು ಬಿಟ್ಟು ಮಾತಿಗೆ ಇಲ್ಲದ ಮಹತ್ವ ಕೊಡುವುದು ಈ ಹೆಣ್ಣುಮಕ್ಕಳ ಸ್ವಭಾವವೇ ಆಗಿದೆ ! '

' ಇದು ಮಾತು ಬಿಟ್ಟು ಮಾತೇ ? ಅದು ಹೇಗೆ ಆದೀತು ? ' ಎಂದು ಆಶ್ಚರ್ಯದ ಅತಿರೇಕದಲ್ಲಿ ಅಡೀಲಾಳ ವಿಷಯವನ್ನೇ ಮರೆತು ಕೇಳಿದಳು.

' ನಾವಿಲ್ಲಿ ದೇಶಬಿಟ್ಟು ದೇಶಕ್ಕೆ ಬಂದದ್ದು ಎಲ್ಲರಿಗೂ ಪ್ರಿಯವಾಗುವಂತೆ ನಡೆದುಕೊಳ್ಳಲಿಕ್ಕೆ ಬಂದಿಲ್ಲ ?

' ಏನು ! ಏನನ್ನುತ್ತೀ ? '

' ಅದೇ, ನಾವಿಲ್ಲಿ ನ್ಯಾಯ ಕೊಟ್ಟು ಶಾಂತತೆಯನ್ನು ಕಾಯಲಿಕ್ಕೆ ಬಂದಿದ್ದೇವೆ. ನ್ಯಾಯದೇವತೆಯೇ ನನ್ನ ಇಷ್ಟ ದೇವತೆಯು. ಹಿಂದುಸ್ತಾನವೇನು ವಿನಯದ ರೀತಿಭಾತಿಗಗನ್ನು ತೋರಿಸುವ ನಮ್ಮ ಮನೆಯ ಪಡಸಾಲೆಯಲ್ಲ '

' ಹಂ ! ನಿನ್ನ ಈ ಭಾವನೆಗಳು ದೇವರ ಭಾವನೆಗಳು ! ಅಲ್ಲವೆ ? ' ಎಂದು ಅವನ ರಭಸದ ಮಾತು ಕೇಳಿ ಏನೂ ತಿಳಿಯದವಳಾಗಿ ನುಡಿದಳು. ಅವನ ಭಾವನೆಗಳಕಿಂತಲೂ ಅವನು ಹೇಳುವ ಆ ರೀತಿಯಿಂದ ಅವಳು ಬಹಳ ಕಳವಳಗೊಂಡಳು.

ಸ್ವಲ್ಪ ಹೊತ್ತಿನ ಮೇಲೆ ಪ್ರಕ್ಷುಬ್ಧಗೊಂಡ ಮನಸ್ಸನ್ನು ಶಾಂತ ಮಾಡಿಕೊಂಡು ಗಂಭೀರವಾಗಿ 'ಹಿಂದುಸ್ತಾನಕ್ಕೆ ದೇವರೇ ಬೇಕು. ' ಎಂದು ನುಡಿದನು.

' ಇಂಗ್ಲೀಷರಿಗೆ ತಾವೇ ದೇವರೆಂದು ತೋರಿಸಿಕೊಳ್ಳುವುದು ಬೇಕು.'

' ಹೀಗೇ ಬೆಳಿಸುವುದರಲ್ಲೇನೂ ಅರ್ಥವಿಲ್ಲ. ಇಲ್ಲಿ ಈಗ ಇದ್ದವರು ನಾವು. ಇನ್ನು ಮುಂದೆ ಇರುಪವರೂ ನಾವು. ನಾವು ದೇವರಿರಲಿ, ಬಿಡಲಿ, ಈ ದೇಶವು ನಮ್ಮನ್ನು ಸಹಿಸಲಿಕ್ಕೇ ಬೇಕು. ' ಎಂದು ಸ್ಪಷ್ಟವಾಗಿ ಹೇಳಿ ಮತ್ತೆ ' ನಾನೇನು ಮಾಡಬೇಕೆಂದು ನಿಮಗನಿಸುತ್ತದೆ ? ನಾನೆ ಮರ್ಯಾದೆ

ಕೊಡುವ, ದೊಡ್ಡವರೆಂದು ಭಾವಿಸುವ ನನ್ನ ಜಾತಿಯ ಎಲ್ಲ ಜನರ ವಿರುದ್ಧ ವಾಗಿ ನಾನು ನಡೆಯಬೇಕೇ? ನನ್ನ ರೀತಿನಡತೆಗಳಷ್ಟೆ ಪ್ರಿಯವಾಗ ಬೇಕೆಂದು ಈ ದೇಶದ ಕಲ್ಯಾಣ ಮಾಡುವ ನನ್ನ ಸಾಮರ್ಥ್ಯವನ್ನು ಕಳೆದು ಕೊಳ್ಳಬೇಕೇ? ನಿಮಗೆ ಇಲ್ಲಿಯ ಕೆಲಸವೇ ಗೊತ್ತಿಲ್ಲ. ಗೊತ್ತಿದ್ದರೆ ಇಂಥ ಹುಚ್ಚು ಹುಚ್ಚು ಮಾತಾಡುತ್ತಿರಲಿಲ್ಲ. ನಿಮಗೆ ಹೀಗೆ ಜರುಸು ಮಾತಾ ಡುವುದು ನನಗೆ ಸರಿಯೆನಿಸುವುದಿಲ್ಲ; ಆದರೂ ಒಮ್ಮೊಮ್ಮೆ ಮಾತಾಡ ಬೇಕಾಗುತ್ತದೆ. ನೀನು, ಆಡೀಲಾ ಹೇಳುವಂತೆ ನಡೆದುಕೊಳ್ಳುವುದೆಂದರೆ ಮನಸಿಗೆ ರೋಗ ಹಚ್ಚಿಕೊಂಡಂತೆ. ಕಲೆಕ್ಟರರು ನಿಮ್ಮ ಮನರಂಜನೆ ಮಾಡಲಿಕ್ಕೆ ಎಲ್ಲ ರೀತಿಯಿಂದ ಪ್ರಯತ್ನ ಮಾಡುತ್ತಿದ್ದರೂ ನೀವಿಬ್ಬರೂ ಈ ಹೊತ್ತು ಕ್ಲಬ್ಬಿನಲ್ಲಿ ಏನೇನು ಮಾಡುತ್ತಿದ್ದಿರೆಂಬದನ್ನು ನಾನು ನೋಡಿ ದ್ದೇನೆ. ನಾನಿಲ್ಲಿ ಕೆಲಸ ಮಾಡಲಿಕ್ಕೆ ಬಂದಿದ್ದೇನೆ; ಈ ದರಿದ್ರ ದೇಶವನ್ನು ನಮ್ಮ ಶಕ್ತಿಯ ಬಲದಿಂದ ಆಳಲಿಕ್ಕೆ ಬಂದಿದ್ದೇನೆ. ಈ ಮಾತು ಲಕ್ಷ್ಯದಲ್ಲಿ ರಲಿ. ನಾನೇನು ಮಿಶನರಿಯಲ್ಲ; ಗೊತ್ತುಗುರಿಯಿಲ್ಲದ ಕೂಲಿಕಾರಸಂಘದ ಸದಸ್ಯನೂ ಅಲ್ಲ; ಕೇವಲ ಭಾವನೆಗಳಿಗೇ ಆಳಾದ ಸಹೃದಯ ಸಾಹಿತಿಯೂ ಅಲ್ಲ. ನಾನೊಬ್ಬ ಸರಕಾರದ ನೌಕರನು. ನೀನು ತೆಗೆದುಕೊಳ್ಳಲು ಹೇಳಿ ದ್ದರಿಂದಲೇ ತೆಗೆದುಕೊಂಡ ಉದ್ಯೋಗವಿದು. ನಾವು ಇಲ್ಲಿ ಪ್ರಿಯವಾಗಿ ನಡೆದುಕೊಂಡಿಲ್ಲ; ನಡೆದುಕೊಳ್ಳುವ ಇಚ್ಛೆಯೂ ಇಲ್ಲ. ನಮಗೆ ಅದಕ್ಕೂ ಹೆಚ್ಚು ಮಹತ್ವದ ಕಾರ್ಯವನ್ನು ಮಾಡಬೇಕಾಗಿದೆ.' ಎಂದು ನಿರ್ವಂಚನೆ ಯಿಂದ ತನ್ನ ಮನಸ್ಸನ್ನೇ ಬಿಚ್ಚಿಟ್ಟನು.

ರೋನಿ ಪ್ರತಿ ದಿವಸ ಕೋರ್ಟಿನಲ್ಲಿ ಬಹಳ ದುಡಿಯುತ್ತಿದ್ದನು. ಎರಡು ಸುಳ್ಳು ಲೆಕ್ಕಗಳಲ್ಲಿ ಕಡಿಮೆ ಸುಳ್ಳು ಯಾವುದೆಂಬದನ್ನು ನಿರ್ಣಯಿಸಲು ಹವಣಿಸುತ್ತಿದ್ದನು; ನ್ಯಾಯವನ್ನು ನಿರ್ಭಯವಾಗಿ ಕೊಡಲು ಪ್ರಯತ್ನಿಸು ತ್ತಿದ್ದನು; ಅಶಕ್ತನಿಂದ ಹೆಚ್ಚು ಅಶಕ್ತನನ್ನೂ ಅಸಂಬದ್ಧದಿಂದ ತೋರಿಕೆಯ ಸತ್ಯವನ್ನು ರಕ್ಷಿಸುತ್ತಿದ್ದನು; ಇಷ್ಟಾಗಿ ಮೇಲೆ ಸುಳ್ಳು, ಮುಖಸ್ತುತಿಯ ಆಗರದಲ್ಲಿಯೆ ಕಾಲಕಳೆಯುತ್ತಿದ್ದನು. ಆ ಹೊತ್ತು ಮುಂಜಾನೆ ಅವನು ಒಬ್ಬ ರೇಲ್ವೆ ಟಿಕೆಟ್ ಕ್ಲಾರ್ಕನಿಗೆ ಯಾತ್ರಿಕರಿಂದ ಟಿಕೆಟ್ಟಿಗೆ ಹೆಚ್ಚು ಚಾರ್ಜು ತೆಗೆದುಕೊಂಡದ್ದಕ್ಕೂ ಒಬ್ಬ ಪಠಾಣನಿಗೆ ಜಬರೀ ಮಾಡಲಿಕ್ಕೆ ಯತ್ನಿಸಿ

ದ್ದಕ್ಕೂ ಶಿಕ್ಷೆಯನ್ನು ವಿಧಿಸಿದ್ದನು. ಇದಕ್ಕೆ ಅವನು ಪ್ರತಿಯಾಗಿ ಕೃತಜ್ಞತೆಯನ್ನಾಗಲಿ ಕೀರ್ತಿಯನ್ನಾಗಲಿ ಅಪೇಕ್ಷಿಸುವ ಹಾಗಿಲ್ಲ. ಅವರಿಬ್ಬರೂ ಬೇಕಾದರೆ ಮುಂದೆ ಅಪೀಲು ಮಾಡಬಹುದು; ಆ ಅವಧಿಯಲ್ಲಿ ಸಾಕ್ಷೀದಾರರನ್ನು ಲಂಚಕೊಟ್ಟು ಒಡಕೊಳ್ಳಬಹುದು; ಕೊನೆಗೆ ಆ ಶಿಕ್ಷೆಯನ್ನೂ ರದ್ದುಮಾಡಿಸಿಕೊಳ್ಳಬಹುದು. ಆದರೆ ಅವನಿಗೇನು ? ಅವನು ಮಾಡಿದ್ದು ಕೇವಲ ತನ್ನ ಕರ್ತವ್ಯವೆಂದು. ತನ್ನವರಿಂದ ಮಾತ್ರ ಅವನು ಸಹಾನುಭೂತಿಯನ್ನು ಅಪೇಕ್ಷಿಸುತ್ತಿದ್ದನು. ಹೊಸದಾಗಿ ಬಂದವರನ್ನು ಬಿಟ್ಟು ಉಳಿದವರಿಂದ ಅದನ್ನು ಪಡೆಯುತ್ತಲೂ ಇದ್ದನು ಈ ಬ್ರಿಜ್ ಪಾರ್ಟಿಗಳನ್ನೂ ಹಚ್ಚಿಕೊಳ್ಳಬಾರದೆಂದು ಅವನೆಷ್ಟೋ ಸಲ ವಿಚಾರಿಸಿದ್ದನು. 'ಆಡಿದರೆ ತನ್ನ ಸರಿಜೋಡಿಯವರೊಡನೆ ಇಷ್ಟು ಟೆನಿಸ್ ಆಡಬೇಕು; ಇಲ್ಲದಿದ್ದರೆ ಸುಮ್ಮನೆ ಆರಾಮ ಕುರ್ಚಿಯ ಮೇಲೆ ಕಾಲು ಬಿಟ್ಟುಕೊಂಡು ಬಿದ್ದುಕೊಂಡಿರಬೇಕು' ಎಂದವನಿಗನಿಸಿತ್ತು.

'ಅವನು ನಿರ್ವಂಚನೆಯಿಂದೇನೊ ಮಾತನಾಡಿದನು. ಆದರೆ ಅವನು ಇದಕ್ಕೂ ಕಡಿಮೆ ಆವೇಶದಿಂದ ಮಾತಾಡಬಹುದಾಗಿತ್ತು' ಎಂದು ಮೂರಳು ಬಯಸಿದಳು. 'ರೋಸಿ ತನ್ನ ಪರಿಸ್ಥಿತಿಯ ಕುಂದುಕೊರತೆಗಳನ್ನಷ್ಟೆ ಹೇಗೆ ಹೆಚ್ಚುಮಾಡಿ ಹೇಳುತ್ತಾನೆ! ತಾನು ಹಿಂದುಸ್ತಾನಕ್ಕೆ ಪ್ರಿಯವಾಗಿ ನಡೆದುಕೊಳ್ಳಲಿಕ್ಕೇ ಬಂದಿಲ್ಲವೆಂದು ಹೇಗೆ ಅದಕ್ಕೆ ಸುಣುವು ಕೊಡುತ್ತಾನೆ! ಮತ್ತು ಇದರಿಂದಲೇ ಹೇಗೆ ತೃಪ್ತಿಹೊಂದಿದ್ದಾನೆ!' ಎಂಬದನ್ನು ಮತ್ತೆ ಮತ್ತೆ ಅವಳು ನೆನೆದುಕೊಂಡಳು. ಆಗ ಅವಳಿಗೆ ಶಾಲೆ ಓದುತ್ತಿದ್ದಾಗಿನ ತನ್ನ ಮಗನ ನೆನಪಾಯಿತು. ಆಗಿನ ಅವನ ಆ ಭೂತದಯೆಯೆಲ್ಲಿ? ಈಗಿನ ಈ ಅಹಂಮನ್ಯ ಅಭಿಮಾನವೆಲ್ಲಿ? ಭೂತದಯೆಯ ಚಿನ್ಹಗಳು ಹಾವಿನ ಪರೆಯಂತೆ ಕಳಚಿ ಹೋಗಿದ್ದವು. ಅವನ ಆಗಳಿನ ಮಾತುಗಳು, ಅವನ ಆ ಧ್ವನಿಯಿಲ್ಲದಿದ್ದರೆ ಅವಳ ಮನಸಿಗೆ ಹಿಡಿಯಬಹುದಾಗಿತ್ತು. ಆದರೆ ಅವನ ಸ್ವಸಂತುಷ್ಟ ಲಾಲಿಯನ್ನು ಕೇಳಿದೊಡನೆ, ಅಲ್ಲದೆ ಅವನ ಸಣ್ಣ ಕೆಂಪು ಮೂಗಿನ ಕೆಳಗೆ ಸುಖದಿಂದ ವಿಲಾಸವಾಗಿ ಸರಿದಾಡುವ ತುಟಿಗಳನ್ನು ನೋಡಿದೊಡನೆ ಅಹೇತುಕವಾಗಿ ಇಲ್ಲಿಯ ವರೆಗೆ ಅವನು ಮಾತನಾಡಿದ್ದು, ಹಿಂದುಸ್ತಾನದ ವಿಷಯಕ್ಕೆ ಕೊನೆಯ ಮಾತಲ್ಲವೆಂದು ಅವಳು ತಿಳಿದುಕೊಂಡಳು.

'ಅನುಕಂಪದ ಒಂದೇ ಒಂದು ಸ್ಪರ್ಶದಿಂದ—ಅದು ಕಳ್ಳತನದ ಪ್ರತೀಕವಿರದೆ ಅಂತಃಕರಣದ ನಿಜವಾದ ಅನುತಾಪವಿದ್ದರೆ—ಅವನು ಸಂಪೂರ್ಣವಾಗಿ ಬೇರೇ ಮನುಷ್ಯನೇ ಆಗಬಹುದಾಗಿತ್ತು! ಈ ಬ್ರಿಟಿಶ್ ಸಾಮ್ರಾಜ್ಯವೂ ಒಂದು ಬೇರೆ ಸ್ವರೂಪವನ್ನು ಹೊಂದಬಹುದಾಗಿತ್ತು.' ಎಂದು ಮನದಲ್ಲಿಯೆ ಅಂದುಕೊಂಡು 'ನಾನು ನಿನಗೆ ಪ್ರಮಾಣಗಳಿಂದ ಸಿದ್ಧಮಾಡಿಕೊಟ್ಟು ಈ ರೀತಿಯಾಗಿ ಸಾರಿ ಹೇಳುತ್ತೇನೆ; ಇಂಗ್ಲೀಷರು ಪ್ರಿಯ ನಡತೆಯುವರಾಗ ಲಿಕ್ಕೇ ಹೊರಗೆ ಬಂದಿದ್ದಾರೆ' ಎಂದು ಬೆರಳುಗಳಲ್ಲಿಯ ಉಂಗುರಗಳನ್ನು ಸಪ್ಪಳ ಮಾಡುತ್ತ ನುಡಿದಳು.

'ನೀನು ಅದನ್ನು ಹೇಗೆ ಸಿದ್ಧಮಾಡುವಿ ತಾಯಿ?' ಎಂದು ಸಿಟ್ಟಿಗೆದ್ದ ದ್ದಕ್ಕೆ ನಾಚಿ ಸ್ವಲ್ಪ ಮೃದುವಾಗಿ ಕೇಳಿದನು.

'ಯಾಕಂದರೆ ಹಿಂದುಸ್ಥಾನವು ಜಗತ್ತಿನ ಒಂದು ಭಾಗವು. ದೇವರು ನಮ್ಮನ್ನು ಒಬ್ಬರೊಬ್ಬರೊಡನೆ ಪ್ರೇಮದಿಂದ ಇರಲಿಕ್ಕೆ ಈ ಜಗತ್ತಿನಲ್ಲಿ ಇಟ್ಟಿದ್ದಾನೆ. ದೇವರೆಂದರೆ....ಪ್ರೇಮ!'— ರೋನಿ ಈ ವಿಚಾರವನ್ನು ಅಲ್ಲಗಳೆಯುತ್ತಾನೆಂದು ತಿಳಿದು ಅವಳು ಸ್ವಲ್ಪ ಮಾತು ಮುಂದರಿಸಲಿಕ್ಕೆ ಅನುಮಾನ ಮಾಡಿದಳು. ಆದರೆ ಯಾವುದೋ ಒಂದು ಶಕ್ತಿ ಅವಳನ್ನು ಮುಂದೆ ನೂಕಿತು. 'ನಮ್ಮ ನೆರೆಹೊರೆಯುವರನ್ನು ಪ್ರೀತಿಸಲಿಕ್ಕೆ ನಮ್ಮನ್ನು ದೇವರು ಜಗತ್ತಿನಲ್ಲಿಟ್ಟಿದ್ದಾನೆ. ಮತ್ತು ಸರ್ವಸಾಕ್ಷಿಯಾದ ಅವನು ಹಿಂದು ಸ್ಥಾನದಲ್ಲಿ ಸಹ ನಾವು ಹೇಗೆ ನಡೆದುಕೊಳ್ಳುತ್ತೇವೆಂದು ನೋಡುತ್ತಾನೆ.'

ರೋನಿ ಸ್ವಲ್ಪ ವಿಷಣ್ಣನಾಗಿಯೂ ಆದರೂ ಆತುರನಾಗಿಯೂ ತೋರಿ ದನು. ಅವಳಲ್ಲಿಯ ಧಾರ್ಮಿಕಭಾವನೆಯನ್ನು ಅವನರಿತಿದ್ದನು. ಅದು ಅನಾರೋಗ್ಯದ ಚಿನ್ಹವೆಂದೂ ಅವನು ತಿಳಿದಿದ್ದನು. ತನ್ನ ಮಲತಂದೆಯು ತೀರಿದಾಗ ಈ ಹುಚ್ಚು ಅವಳಲ್ಲಿ ಸ್ವಲ್ಪ ಹೆಚ್ಚಾಯಿತು. 'ಇವಳು ನಿಜವಾಗಿ ಮುದಿಕೆಯಾಗುತ್ತ ಬಂದಿದ್ದಾಳೆ. ಇವಳು ಏನೆಂದರೂ ನಾನೇಕೆ ಅದರಿಂದ ನೊಂದುಕೊಳ್ಳಬೇಕು?' ಎಂದು ಅವಳ ಗಂಡನು ಸಮಾಧಾನ ಮಾಡಿಕೊಂಡಿ ದ್ದನು.

'ಪ್ರಿಯವೃತ್ತಿಯಿಂದ ದೇವರು ಸಂತುಷ್ಟನಾಗುತ್ತಾನೆ. ನಿಜವಾದ ಇಚ್ಛೆಯು ಕ್ರಿಯೆಯಲ್ಲಿ ಪರಿಣಮಿಸದಿದ್ದರೂ ದೇವರ ಅನುಗ್ರಹಕ್ಕೆ ಕಾರಣ

ವಾಗುತ್ತದೆ. ಪ್ರತಿಯೊಬ್ಬನೂ ಕೊನೆ ಮುಟ್ಟುವುದಿಲ್ಲ; ಆದರೆ ಈ ಅಪಜಯ ಗಳು ಅನೇಕ ವಿಧವಾಗಿರುತ್ತವೆ. ಸದಿಚ್ಛೆಯು, ಹೆಚ್ಚು ಸದಿಚ್ಛೆ, ಇನ್ನೂ ಹೆಚ್ಚು ಸದಿಚ್ಛೆ—' ನಾನು....ನಾಲಿಗೆಗಳಿಂದ ಮಾತಾಡುತ್ತಿದ್ದರೂ..'

ಅವಳ ಮಾತು ಮುಗಿಯುವ ವರೆಗೆ ಅವನು ತಡೆದು ಆ ಮೇಲೆ ಮೆಲ್ಲನೆ ' ನನಗೆ ಅದು ಚೆನ್ನಾಗಿ ತಿಳಿದಿದೆ. ನಾನಿನ್ನು ನನ್ನ 'ಫಾಯಿಲು'ಗಳ ಕಡೆಗಷ್ಟು ಹೋಗುತ್ತೇನೆ ? ನೀನಿನ್ನು ಮಲಗಬಹುದು ' ಎಂದು ಹೇಳಿದನು.

' ನನಗೂ ಹಾಗೇ ಅನಿಸುತ್ತದೆ ' ಕೆಲ ನಿಮಿಷಗಳ ವರೆಗೆ ಯಾರೂ ಸರಿದಾಡಲಿಲ್ಲ.

ಈ ಸಂವಾದದಲ್ಲಿ ಧರ್ಮದ ಮಾತು ಸೇರಿಕೊಂಡಿದ್ದರಿಂದ ರೋನಿಗೆ ಅದು ಅಸ್ವಾಭಾವಿಕವೆನಿಸಿತು; ಆದರೂ ರಾಷ್ಟ್ರಗೀತೆಯನ್ನು ಪುಷ್ಟಗೊಳಿ ಸುವ ವರೆಗೆ ಅವನು ಧರ್ಮಕ್ಕೂ ಮನ್ನಣೆ ಕೊಡುತ್ತಿದ್ದನು. ಒಂದು ವೇಳೆ ಆ ಧರ್ಮವು ಅವನ ಜೀವನವನ್ನೇ ಮುತ್ತಬೇಕೆಂದು ಬಂದರೆ ಆಗ ಅವನು ' ಈ ಮಾತುಗಳನ್ನಾಡಿ ಏನೂ ಪ್ರಯೋಜನವಿಲ್ಲ. ಪ್ರತಿಯೊಬ್ಬನೂ ತನ್ನ ಧರ್ಮವನ್ನು ತಾನೇ ಕಂಡುಹಿಡಿಯಬೇಕಾಗುತ್ತದೆ ' ಎಂದು ಅದನ್ನು ಪ್ರತಿಭಟಿಸಿ ನಿಲ್ಲುತ್ತಿದ್ದನು.

ತಾನು ದೇವರ ಮಾತನ್ನು ಎತ್ತಿದ್ದು ತಪ್ಪಾಯಿತೆಂದು ಮೂರಳಿಗೆ ಅನಿಸಿತು. ಆದರೆ ಮುಪ್ಪು ಬಂದಂತೆ ಅದನ್ನು ತಪ್ಪಿಸುವುದು ಅವಳಿಗೆ ಹೆಚ್ಚು ಹೆಚ್ಚು ಕಠಿಣವಾಗಹತ್ತಿತ್ತು. ಹಿಂದುಸ್ತಾನದಲ್ಲಿ ಪ್ರವೇಶ ಮಾಡಿದಂದಿ ನಿಂದಂತೂ ಆತನು ಅವಳ ವಿಚಾರವನ್ನೇ ಆಕ್ರಮಿಸಿದ್ದನು. ಅವಳು ಅವನ ನಾಮೋಚ್ಚಾರಣವನ್ನು ಮೇಲಿಂದ ಮೇಲೆ ಮಾಡುತ್ತಿದ್ದಳು. ಆದರೂ ಅವಳ ಜೀವಕ್ಕೆ ತೃಪ್ತಿಯಿದ್ದಿಲ್ಲ. ಒಂದು ಆಕಾಶದ ಕಮಾನಿನ ಮೇಲೆ ಇನ್ನೊಂದು, ಇನ್ನೊಂದರ ಮೇಲೆ ಮತ್ತೊಂದು, ಹೀಗೆ ಅನಂತದ ವರೆಗೂ ಇವೆಯೆಂದು ಅವಳಿಗೆ ತೋರಿತು. ದೂರದ ಪ್ರತಿಧ್ವನಿಯು ಹಿಂದೆ ಒಂದು ನಿಶ್ಶಬ್ದತೆಯೂ ಅವಳ ಅನುಭವಕ್ಕೆ ಬಂತು. ಅಲ್ಲಿಂದ ಮುಖ್ಯವಾಗಿ ರೋನಿ ಮತ್ತು ಅಡೀಲಾ ಇವರ ಸಂಬಂಧ ಬೆಳೆಸುವುದಕ್ಕಾಗಿಯೆ ಇಂಗ್ಲೆಂಡದಿಂದ ತಾನು ಬಂದದ್ದು ನೆನಪಾಗಿ, ಆ ವಿಷಯ ತಾನೇಕೆ ಮುಂದರಿಸಲಿಲ್ಲೆಂದು ಅವಳು ಬಹಳ ಚಡಪಡಿಸಿದಳು. ತನ್ನ ಆಶೆಯು ಗಿಡ ಫಲ ಬಿಡುವುದೋ

ಇಲ್ಲವೊ? ಇವರು ಮದುವೆಯಾಗುವರೋ ಇಲ್ಲವೊ? ಎಂಬ ಅನಿಶ್ಚಯದ ಕಳವಳದಲ್ಲಿ ಅವಳು ಕುಗ್ಗಿದಳು.

—

## ಪ್ರಕರಣ ೬

ಅಝೀಜನು ಬ್ರಿಜ್‌ಪಾರ್ಟಿಗೆ ಹೋಗಿರಲಿಲ್ಲ. ಮಿಸೆಸ್ ಮೂರಳ ಭೆಟ್ಟಿಯಾಗಿ ಬಂದೊಡನೆಯೆ ಅವನು ಬೇರೆ ಕೆಲಸಗಳಲ್ಲಿ ತೊಡಗಿಬಿಟ್ಟನು. ಎಷ್ಟೋ ಶಸ್ತ್ರಕ್ರಿಯೆಯ ಕೇಸುಗಳು ಬಂದು ಅವನನ್ನು ಬಿಡುವಿಲ್ಲದಂತೆ ಮಾಡಿದವು. ತಮ್ಮ ಜಾತಿಯಿಂದ ಬಹಿಷ್ಕೃತನಂತೆ ಇಲ್ಲವೆ ಒಬ್ಬ ಕವಿಯಂತೆ ಇದ್ದ ಅವನು ಅದನ್ನೆಲ್ಲಾ ಬಿಟ್ಟು ಕೇವಲ ಒಬ್ಬ ಉಲ್ಹಾಸಿಯಾದ ವೈದ್ಯಕೀಯ ವಿದ್ಯಾರ್ಥಿಯಂತಾಗಿ ಶಸ್ತ್ರಕ್ರಿಯೆಯ ವಿವರಗಳನ್ನೆಲ್ಲ ತಾನು ತುಂಬಿಕೊಂಡು ತನ್ನ ಗೆಳೆಯರ ಒಲ್ಲೆಒಲ್ಲೆನ್ನುವ ಕಿವಿಗಳಲ್ಲಿಯೂ ತುಂಬಿದನು. ಅವನ ಈ ಉದ್ಯೋಗ ಒಮ್ಮೊಮ್ಮೆ ಅವನ ಮನಸ್ಸನ್ನು ಬಹಳ ಸೆಳೆಯುತ್ತಿತ್ತು—ಅದರಲ್ಲಿ ಅವನನ್ನು ಉದ್ರೇಕಿಸುವುದೇನಾದರೂ ಇರಬೇಕು ಮಾತ್ರ. ಆಗ ಅವನ ಮನಸಿನ ಗುಣದಕಿಂತ ಅವನ ಕೈಗುಣವೇ ಕಾಯುತ್ತಿತ್ತು. ಒಟ್ಟಿನಲ್ಲಿ ಶಸ್ತ್ರದ ಮೇಲೆ ಪ್ರೀತಿ ಬಹಳ; ಆದರೆ ಅದರ ಶಾಸ್ತ್ರ ಅವನ ಕೈಗೇ ಹೆಚ್ಚಾಗಿ ಗೊತ್ತು; ಅಷ್ಟು ನುರಿತ ಕೈ ಅವನದು. ಆದರೂ ಹೊಸ ನಮೂನೆಯ ರಸಿಕೆಯನ್ನು ಚುಚ್ಚಿಯೂ ಹಾಕುವನು. ರಗಳೆಗಿಟ್ಟ ಅಲ್ಲಿಯ ಆಡಳಿತದಿಂದ ಮತ್ತು ರೋಗನಿದಾನ ಮಾಡಿಮಾಡಿ ಅವನು ರೋಸಿಗೊಂಡಿದ್ದನು. ಕರುಳುಬೇನೆಗೆ ಚುಚ್ಚಿ ಹಾಕಿ ಅದೇ ಕೈಲೆ ಹಾಗೆ ಹೋಗಿ ಸೋಸದೆ ಇದ್ದ ನೀರನ್ನು ಕುಡಿಯುವನು. ಇಷ್ಟಿದ್ದೂ ಮೇಲೆ 'ಇವನಿಂದ ಏನಾಗುತ್ತದೆ ಮಣ್ಣು? ಒಂದು ಹಿಡಿತ ಇಲ್ಲ; ಒಂದು ಬಿಗಿ ಇಲ್ಲ' ಎಂದು ಮೇಜರ ಕ್ಯಾಲೆಂಡರನ ವಾಗ್ಬಾಣಕ್ಕೆ ಗುರಿಯಾಗುತ್ತಿದ್ದನು. ಆದರೆ ಕ್ಯಾಲೆಂಡರನಿಗೆ ಒಳಗೆ ಗೊತ್ತು, ಹೋದ ವರ್ಷ ಮಿಸೆಸ್ ಗ್ರೇಫೋರ್ಡಳ 'ಆಪೆಂಡಿಕ್ಸ'ದ ಶಸ್ತ್ರಕ್ರಿಯೆಯನ್ನು ತಾನು ಮಾಡದೆ ಅಝೀಜನು ಮಾಡಿದ್ದರೆ ಅವಳು ಬದುಕಬಹುದಾಗಿತ್ತೆಂದು. ಹೀಗಿದ್ದೂ ತನ್ನ ಕೈಕೆಳಗಿನವನೊಡನೆ ಕ್ಯಾಲೆಂಡರನ ನಡತೆಯೇನು ಸುಧಾರಿಸಲಿಲ್ಲ.

ಮಸೀದೆಯಲ್ಲಿಯ ಘಟನೆಯಾದ ಮರುದಿನ ಮುಂಜಾನೆ ಸ್ವಲ್ಪ ಗೊಂದಲವೆದ್ದಿತು; ಯಾವಾಗಲೂ ಗೊಂದಲವೆಬ್ಬಿಸುವುದೇ ಆ ಮೇಲಧಿಕಾರಿಗಳದೊಂದು ಉದ್ಯೋಗವಾಗಿತ್ತು. ಅರ್ಧರಾತ್ರಿಯ ವರೆಗೆ ಮೇಲ್ಗಡೆ ಎಲ್ಲಿಯೊ ಹೋಗಿದ್ದ ಮೇಜರನಿಗೆ ಅಝೀಜನು ತಾನು ಕರೆಯಿಸಿದಾಗ ಯಾಕೆ ಬೇಗನೆ ಬರಲಿಲ್ಲವೆಂಬುದನ್ನು ಈಗ ತಿಳಿದುಕೊಳ್ಳಬೇಕಾಗಿತ್ತು.

'ಕ್ಷಮಿಸಬೇಕು; ನಾನು ಒಂದಿದ್ದೆ. ಆದರೆ ಸಾಯಕಲ್ಲು ಹತ್ತಿ ಬರುವಾಗ ದನದ ಆಸ್ಪತ್ರಿಯ ಹತ್ತಿರ ಅದರ ಗಾಲಿಯು ಠಬ್ಬೆಂದಿತು. ಆದುದರಿಂದ ನಾನು ಟಾಂಗಾ ಹುಡುಕಬೇಕಾಯಿತು.'

'ದನದ ದವಾಖಾನೆಯ ಎದುರಿಗೆ ಠಬ್ಬೆಂದಿತಲ್ಲವೆ? ನೀನು ಅತ್ತ ಹೇಗೆ ಬಂದೆ?'

'ಕ್ಷಮಿಸಬೇಕು; ಏನೆಂದರಿ?'

'ಅಯ್ಯೋ ಮಹಾತ್ಮಾ! ನಾನು ಇಲ್ಲಿ ಇದ್ದೇನೆ, ನೀನೂ ಇಲ್ಲೇ ನನ್ನಿಂದ ಹತ್ತು ನಿಮಿಷದ ದಾರಿ ಸಹ ಇಲ್ಲ ಅಷ್ಟು ಸಮೀಪದಲ್ಲಿದ್ದೀದಿ; ಆ ದನದ ಆಸ್ಪತ್ರಿಯೊ ನಿನ್ನ ಮತ್ತೊಂದು ಮಗ್ಗುಲಿಗೆ ಆಚೆಗೆಲ್ಲೊ ದೂರದಲ್ಲಿದೆ! ಹೀಗಿದ್ದು ನೀನು ನನ್ನ ಕಡೆಗೆ ಬರುವಾಗ ದನದ ಆಸ್ಪತ್ರಿಯನ್ನು ಹೇಗೆ ದಾಟಿದಿ?' ಎಂದು ಹರಳುನೆಲವನ್ನು ಕಾಲಿಂದ ಒದ್ದು ಕೇಳಿ 'ಆಯಿತು, ಅದರ ಬದಲಾಗಿ ಕೆಲಸ ಮಾಡು' ಎಂದು ಹೇಳಿ ಸಿಟ್ಟಿನಿಂದ ಜೀಪುಗಾಲಿಡುತ್ತ ಅಝೀಜನ ನೆವವನ್ನು ನಿಜವಿದ್ದರೂ ಅದನ್ನು ಕೇಳಲಿಕ್ಕೆ ನಿಲ್ಲದೆ ಮುಂದೆ ಸಾಗಿದನು. ದನದ ಆಸ್ಪತ್ರಿಯ್ಯೇನೊ ಹಮೀದುಲ್ಲಾನ ಮನೆಗೂ ತನ್ನ ಮನೆಗೂ ಒಂದು ಸರಳರೇಖೆಯಲ್ಲಿದ್ದುದರಿಂದ ಅಝೀಜನು ಅದನ್ನು ಸ್ವಾಭಾವಿಕವಾಗಿ ದಾಟಿ ಬರಬೇಕಾಯಿತು. ಸುಶಿಕ್ಷಿತ ಹಿಂದೀ ಜನರು ಯಾವಾಗಲೂ ಒಬ್ಬರನ್ನೊಬ್ಬರು ಭೆಟ್ಟಿಯಾಗಿ, ಎಷ್ಟೇ ಪ್ರಯಾಸವಾದರೂ ಹೊಸದೊಂದು ಸಮಾಜಪಟವನ್ನು ಹೆಣೆಯುತ್ತಿದ್ದಾರೆಂದೂ ಜಾತಿಯು ಅಥವಾ 'ಅಂಥದೊಂದು ಯಾವುದೊ' ಅವರಿಗೆ ಅಡ್ಡಬರುತ್ತಿದೆಯೆಂದೂ ಅವನಿಗೆ ತಿಳಿದಿರಲಿಲ್ಲ. ಅವನಿಗೆ ತಿಳಿದಿದ್ದೆಂದರೆ ತಾನು ಇಲ್ಲಿ ಇಪ್ಪತ್ತು ವರುಷವಿದ್ದರೂ ತನಗೆ ಯಾರೂ ಈ ಸತ್ಯವನ್ನು ಎಂದೂ ಹೇಳಲಿಲ್ಲೆಂಬುದು.

ಕ್ಯಾಲೆಂಡರನು ಈ ರೀತಿಯಾಗಿ ರಭಸದಿಂದ ಹೊರಟುಹೋಗುವು ದನ್ನು ವಿನೋದದಿಂದ ನೋಡುತ್ತ ನಿಂತನು. ಅವನು ಖುಷಿಯಲ್ಲಿದ್ದಾಗ ಈ ಇಂಗ್ಲೀಷ ಜನ ಎಂದರೆ ನಗಿಸುವ ಒಂದು ವಿಚಿತ್ರ ರೀತಿಯವರು ಮತ್ತು ಇವರು ನಮ್ಮನ್ನು ತಪ್ಪು ತಿಳಿದುಕೊಂಡರೆ ತಿಳಿದುಕೊಳ್ಳಲಿ, ಅದೂ ಒಂದು ನಮಗೆ ಸಂತೋಷವೆ! ಎಂದು ಭಾವಿಸುತ್ತಿದ್ದನು. ಆದರೆ ಅವನ ಈ ವಿನೋದಭಾವವು ಮನಸಿನ ಉದ್ರೇಕದಿಂದ ನರಗಳ ಕಂಪನದಿಂದ ಹುಟ್ಟಿದ್ದು. ಅದು ಕಾಲಗತಿಯಿಂದಾಗಲಿ ಒಂದು ಆಕಸ್ಮಿಕ ಘಟನೆಯಿಂದಾಗಲಿ ಬಹು ಬೇಗ ಅಳಿದು ಹೋಗಬಹುದು. ತನ್ನ ವಿಶ್ವಾಸಿಗರ ಹತ್ತಿರವಿರುವಾಗ ಅವನು ಪಡೆಯುತ್ತಿದ್ದ ನೈಸರ್ಗಿಕ ಉಲ್ಹಾಸ ವಿನೋದ ಭಾವಕ್ಕಿಂತ ಅದು ತೀರ ಭಿನ್ನವಾಗಿತ್ತು. ಮಿಸೆಸ್ ಕ್ಯಾಲೆಂಡರಳ ಪ್ರಸಂಗ ನೆನಪಾಗಿ ಒಂದು ಕುಚೋದ್ಯ ಕಿರುನಗೆಯು ಅವನ ಕಲ್ಪನೆಯಲ್ಲಿ ಮೂಡಿತು. 'ಇದನ್ನು ನಾನು ಮಹಮ್ಮದಲ್ಲಿಗೆ ಹೇಳಲೆಬೇಕು! ಅದು ಅವನನ್ನು ನಗಿಸಿಯೇ ಬಿಡುವುದು' ಎಂದು ಯೋಚಿಸಿದನು. ಆ ಮೇಲೆ ತನ್ನ ಕೆಲಸಕ್ಕೆ ಸುರುವು ಮಾಡಿದನು. ತನ್ನ ಕೆಲಸದಲ್ಲಿ ಅವನ ಕೈ ಹಿಡಿದವರು ಯಾರೂ ಇರಲಿಲ್ಲ. ಒಳ್ಳೇ ಸಮರ್ಥ. ಅವನಿಲ್ಲದೆ ಅಲ್ಲಿಯ ಕೆಲಸವೆ ಸಾಗುತ್ತಿರಲಿಲ್ಲ. ಇದು ಅಝೀಜನಿಗೂ ತಿಳಿದಿತ್ತು. ಅವನು ಕೆಲಸಕ್ಕೆ ಹತ್ತಿದೊಡನೆ ಅವನ ಆ ಮುಗುಳು ನಗೆಯು ಮಾಯವಾಯಿತು.

ಈ ಸಂತೋಷದ ಮತ್ತು ಕೆಲಸದ ದಿವಸಗಳಲ್ಲಿಯೆ ಅಝೀಜನು ಕಲೆಕ್ಟರನು ಪಾರ್ಟಿ ಕೊಡತಕ್ಕವನಿದ್ದಾನೆಂಬ ಮತ್ತು ನವಾಬ ಬಹದ್ದೂರರು ಪ್ರತಿಯೊಬ್ಬನೂ ಅಲ್ಲಿಗೆ ಹೋಗಲೇಬೇಕೆಂದು ಹೇಳಿದರೆಂಬ ಹಾರಸುದ್ದಿ ಯನ್ನು ಕೇಳಿದನು. ಇವನ ಸಂಗಡ ಕೆಲಸ ಮಾಡುವ ಪನ್ನಾಲಾಲನು— ಇವನಕಿಂತ ಸ್ವಲ್ಪ ಹಿರಿಯನೂ ಹೌದು, ಅಂಜುಬುರುಕನೂ ಹೌದು—ಆಗಲೆ ಕುದುರೆ ಹೊಡೆಯುಲಿಕ್ಕೆ ಒಬ್ಬನನ್ನು ದೊರಕಿಸಿದ್ದನು. ತನಗೇ ಹೊಡೆಯು ಲಿಕ್ಕೆ ಬರುತ್ತಿದ್ದರೂ ಹಾಯ್ದಾಡುವ ಮೋಟರುಗಳ ಹೆದರಿಕೆ ಅವನಿಗೆ ಬಹಳ ಇದ್ದುದರಿಂದ ಹಾಗೆ ಮಾಡಿದ್ದನು. ಅಲ್ಲದೆ ಕ್ಲಬ್ಬಿನಲ್ಲಿ ಎಲ್ಲೆಲ್ಲಿ ಹೇಗೆ ಹೇಗೆ ಹೊರಳಬೇಕೆಂಬುದು ಅವನಿಗೆ ಗೊತ್ತಿದ್ದಿಲ್ಲ. "ಹಾದಿಯಲ್ಲಿ ಏನಾದರೂ ವಿಪತ್ತು ಒದಗಬಹುದು! ಆದರೂ ನಾವು ಹಿಂತಿರುಗಿ ಬರದಿದ್ದರೂ ಅಲ್ಲಿ

ಗಾದರೂ ಸುರಕ್ಷಿತ ಮುಟ್ಟಿಯೇ ಮುಟ್ಟುವೆವು' ಎಂದು ಪ್ರೋಕ್ತತನದಿಂದ ನುಡಿದನು. ಅಲ್ಲಿಂದ ಸ್ವಲ್ಪ ಹೆಚ್ಚು ವಿಚಾರಮಾಡಿ 'ಇಬ್ಬರು ಡಾಕ್ಟರು ಒಮ್ಮೆಲೆ ಒಂದೇ ಹೊತ್ತಿಗೆ ಅಲ್ಲಿಗೆ ಹೋದರೆ ಎಲ್ಲರ ಮೇಲೂ ಎಂಥ ಛಾಪು ಬೀಳುತ್ತದೆಂದೀ! ಛೆ! ಹೇಳತೀರದು' ಎಂದನು.

ಹೋಗುವ ಹೊತ್ತು ಬಂದ ಕೂಡಲೆ ಅಝೀಜನಿಗೆ ವಿಪರೀತ ಬುದ್ಧಿ ಹುಟ್ಟಿತು; ಅಲ್ಲಿಗೆ ಹೋಗಬಾರದೆಂದು ನಿಶ್ಚಯಿಸಿದನು. ಇದಕ್ಕೆ ಕಾರಣ ವೆಂದರೆ ಮೊದಲನೆಯದು, ಅವನ ಪಾಳಿಯ ಕೆಲಸ ಹೊತ್ತಾಗಿ ಮುಗಿದದ್ದ ರಿಂದ ಅವನ ಮನಸ್ಸಿಗೆ ತಾನೊಮ್ಮೆ ಈ ದಿಗ್ಬಂಧನದಿಂದ ಪಾರಾದೆನಲ್ಲ ಎಂಬ ಹಗುರು ಹುಟ್ಟಿತ್ತು; ಎರಡನೆಯದು, ಆ ದಿನ ಅವನ ಹೆಂಡತಿಯ ಮೃತತಿಥಿಯಾಗಿತ್ತು. ಅಝೀಜನು ಅವಳನ್ನು ನಿಜವಾಗಿ ಪ್ರೀತಿಸಲಿಕ್ಕೆ ಹತ್ತಿದೊಡನೆ ಅವಳು ಸತ್ತಳು. ಮದುವೆಯಾಗಿ ಹೊಸದಾಗಿ ಅವನು ಅವಳನ್ನು ಪ್ರೀತಿಸುತ್ತಲೆ ಇರಲಿಲ್ಲ. ಪಾಶ್ಚಾತ್ಯ ಭಾವನೆಯ ಸ್ಪರ್ಶದಿಂದ ತಾನೆಂದೂ ನೋಡದ ಹೆಣ್ಣಿನೊಡನೆ ತಾನು ಮದುವೆಯಾಗುವುದು ಅವನಿಗೆ ಸರಿದೋರಿರಲಿಲ್ಲ. ಅವಳನ್ನು ಮೊದಲಸಲ ಕಂಡಾಗ ಅವನಿಗೆ ಬಹಳ ನಿರಾಶೆಯಾಗಿತ್ತು. ಇಷ್ಟೇ ಏಕೆ, ಅವನ ಮೊದಲಿನ ಕೂಸು ಕೇವಲ ಪಶು ತೃಪ್ತಿಯಿಂದಲೆ ಹುಟ್ಟಿತು. ಆದರೆ ಅದು ಹುಟ್ಟಿದ ಮೇಲೆ ಮಾತ್ರ ಅವನಲ್ಲಿ ಬದಲಾಯಿತು. ತನ್ನಲ್ಲಿರುವ ಅವಳ ಅಚಲವಾದ ಪ್ರೇಮಕ್ಕೆ—ಕೇವಲ ವಶ ವರ್ತಿಯಗಿಂತಲೂ ಹೆಚ್ಚಿನದಾದ ಅವಳ ಪತಿಭಕ್ತಿಗೆ—ಈ ಪೀಳಿಗೆಗಲ್ಲದಿದ್ದರೂ ಮುಂದಿನ ಪೀಳಿಗೆಗಾದರೂ ತೊಡೆದು ಹೋಗುವ ಘೋಷಾಪದ್ಧತಿಯನ್ನು ಪಾರ ನಿಲ್ಲುವುದಕ್ಕಾಗಿ ಅವಳು ತನ್ನನ್ನೂ ತನ್ನ ಮನಸ್ಸನ್ನೂ ತಿದ್ದಿಕೊಳ್ಳುವು ದನ್ನು ನೋಡಿ ಅವನು ಮನಸೋತನು. ಅವಳು ಕುಶಾಗ್ರಬುದ್ಧಿಯವಳೇನೊ ಹೌದು; ಆದರೆ ಹಳೆಯ ಪದ್ಧತಿಯ ಸೊಬಗೇ ಅವಳಲ್ಲಿ ಮೈವೆತ್ತು ನಿಂತಿತ್ತು. ಅಝೀಜನು ತನ್ನ ಆಪ್ತರು ತನ್ನ ಸಲುವಾಗಿ ತನಗೆ ಒಪ್ಪದ ಒಗ್ಗದ ಕನ್ಯೆ ಯನ್ನು ಹುಡುಕಿ ತಂದರೆಂದು ಗೊಣಗುಟ್ಟಿದ್ದನ್ನು ಮೆಲ್ಲನೆ ಮರೆಯತೊಡ ಗಿದನು. ತನಗೊಬ್ಬ ರೂಪವತಿ ರಂಭೆ ದೊರೆತಿದ್ದಳೆಂದು ತಿಳಿದರೂ—ಆ ವಿಷ ಯೋಪಭೋಗದ ಲಾಲಸೆ ಒಂದು ವರ್ಷದಲ್ಲಿಯೆ ಸ್ವಾರಸ್ಯಹೀನವಾಗಬಹು ದಾಗಿತ್ತೆಂದು ಅವನಿಗನಿಸಿತು. ಈಗ ಅದರಕಿಂತ ತಾನೇನೂ ಹೆಚ್ಚಿಗೆ ಪಡೆ

ದಿದ್ದೇನೆಂದು ಅವನ ಭಾವನೆ. ಅವಳು ಒಂದು ಮಗುವಿನ ತಾಯಿಯಾಗಿ ಇನ್ನೊಂದು ಮಗುವನ್ನು ಹೆರುವಾಗಲೆ ಮರಣಹೊಂದಿದಳು. ಆಗ ಮಾತ್ರ ಆಫ್ಘೀಜನಿಗೆ ಯಾರೂ ತುಂಬಿಕೊಡಲಾರದ ಒಂದು ಅಮೂಲ್ಯ ವಸ್ತುವನ್ನು ತಾನು ಕಳೆದುಕೊಂಡಿದ್ದೇನೆಂದು ಮನವರಿಕೆಯಾಯಿತು. 'ಇನ್ನೊಬ್ಬಳೇಕೆ? ಇನ್ನೊಬ್ಬಳಕಿಂತ ಗೆಳೆಯನೇನು ಕಡಿಮೆ? ಅವನೇ ಅನುಕೂಲವಾಗ ಬಹುದು! ಇವಳಂತೂ ಹೊರಟುಹೋದಳು; ಇವಳಂತೆ ಇನ್ನು ಯಾರೂ ಇಲ್ಲ. ಹೀಗಾಗುವದೆಂದರೇ ಪ್ರೇಮದ ವೈಶಿಷ್ಟ್ಯವಲ್ಲದೆ ಮತ್ತಿನ್ನೇನು?' ಹೀಗೆಂದು ಎಷ್ಟೋ ಸಲ ತನ್ನಷ್ಟಕ್ಕೆ ತಾನೆ ಮನಸರಂಜನೆ ಮಾಡಿಕೊಳ್ಳುವನು; ಕೆಲವು ಸಲ ಅವಳನ್ನು ಮರೆತೇ ಬಿಡುವನು; ಮತ್ತೆ ಕೆಲವು ಸಲ ಅವಳು ಎಲ್ಲ ಸೌಂದರ್ಯವನ್ನೂ ಸುಖವನ್ನೂ ಸ್ವರ್ಗಕ್ಕೆ ಕಳಿಸಿರುವಳೆಂದು ಬಗೆದು ಆತ್ಮಹತ್ಯೆ ಮಾಡಿಕೊಳ್ಳಲು ಹವಣಿಸುವನು. ಹಾಗೆ ಮಾಡಿದರೆ ಅವಳನ್ನು ಮತ್ತೆ ಕಾಣಬಹುದೇ? ಮತ್ತೆ ಕೂಡಬಹುದೇ? ಅಂಥ ಸ್ಥಳವೇನಾದರೂ ಇದೆಯೇ? ಎಂದು ಹಂಬಲಿಸುವನು. ಅವನು ಧರ್ಮಾನುರಕ್ತನಿದ್ದರೂ ಇದೆಲ್ಲ ಅವನಿಗೆ ಗೊತ್ತಿರಲಿಲ್ಲ. ದೇವರ ಐಕ್ಯವು ಅಸಂದಿಗ್ಧವಾಗಿದ್ದು, ಅಸಂದಿಗ್ಧವಾಗಿ ಹೇಳಲ್ಪಟ್ಟಿದ್ದರೂ ಅವನು ಸಾಮಾನ್ಯ ಕ್ರಿಶ್ಚನ್ನರಂತೆ ಅದನ್ನು ಬಿಟ್ಟು ಉಳಿದ ವಿಷಯಗಳಲ್ಲಿ ಹೊಯ್ದಾಡುತ್ತಿದ್ದನು. ಮುಂದೆ ಜನ್ಮವಿದೆ ಯೆಂಬುದರಲ್ಲಿಯ ಅವನ ವಿಶ್ವಾಸವು ಒಮ್ಮೆ ಕರಗಿ ಕರಗಿ ಬರಿ ಆಶೆಯಾಗು ವುದು; ಒಮ್ಮೆ ಸಂಪೂರ್ಣ ಮಾಯವಾಗುವುದು; ಮತ್ತೆ ಕಾಣಿಸಿಕೊಳ್ಳು ವುದು. ಇಷ್ಟೆಲ್ಲ ಆಗುವುದು ಒಂದೆ ವಾಕ್ಯದಲ್ಲಿ; ಅಥವಾ ಏಳೆಂಟು ಉಸಿ ರಾಟಗಳಲ್ಲಿ. ಹೀಗಿರುವುದರಿಂದ ಇವನು ಯಾವ ಅಭಿಪ್ರಾಯವನ್ನು ಎಷ್ಟು ಹೊತ್ತಿನ ವರೆಗೆ ಸ್ವೀಕರಿಸಬೇಕೆಂಬುದನ್ನು-ಇವನಲ್ಲ—ಇವನ ರಕ್ತದಲ್ಲಿಯ ಜೀವಬಿಂದುಗಳೇ ನಿರ್ಣಯಿಸುವವು. ಅವನು ಮಾಡಿಕೊಂಡ ಎಲ್ಲ ಅಭಿ ಪ್ರಾಯಗಳ ರೀತಿಯೂ ಹೀಗೇ. ತಿರುಗಿ ಬಾರದೆ ಇದ್ದದ್ದು ಯಾವುದೂ ಅವನಲ್ಲಿ ನಿಲ್ಲಲೂ ಇಲ್ಲ, ಹೋಗಲೂ ಇಲ್ಲ. ಈ ಚಕ್ರವು ಅವನಲ್ಲಿ ಅಖಂಡ ವಾಗಿ ನಡೆದಿತ್ತು. ಇದರಿಂದಲೇ ಅವನ ತಾರುಣ್ಯ ಇನ್ನೂ ಉಳಿದಿತ್ತು. ತನ್ನ ಹೆಂಡತಿಯನ್ನು ನೆನೆಸುವುದೇ ಕಡಿಮೆ; ಆದರೆ ನೆನೆಸಿದಾಗ ಮಾತ್ರ ಅತ್ಯಂತ ಕಳವಳದಿಂದ ಮರುಗುತ್ತಿದ್ದನು.

ಡಾಕ್ಟರ ಲಾಲನಿಗೆ ಅಯ್ಥೀಜನು ತಾನೀಗ ಪಾರ್ಟಿಗೆ ಹೋಗುವ ವಿಷಯವಾಗಿ ಮನಸ್ಸು ಬದಲು ಮಾಡಿದ್ದೇನೆಂದು ಸ್ಪಷ್ಟವಾಗಿ ಹೇಳಿದ್ದರೆ ಹೆಚ್ಚು ಸುಲಭವಾಗುತ್ತಿತ್ತು. ಆದರೆ ಅಯ್ಥೀಜನಿಗೇ ಕೊನೆಯ ಕ್ಷಣದ ವರೆಗೂ ತನ್ನ ಮನಸ್ಸು ಬದಲಾಗಿದೆಯೆಂದು ಗೊತ್ತಾಗಿರಲಿಲ್ಲ. ನಿಜವಾಗಿ ನೋಡಿದರೆ ಅವನೇ ಬದಲುಮಾಡಲಿಲ್ಲ; ಅದೇ ಬದಲಾಯಿತು. ಅಜ್ಞೇಯ ವಾದ ತಿರಸ್ಕಾರಭಾವವೊಂದು ಆ ಹೊತ್ತಿಗೆ ಅವನನ್ನು ಆವರಿಸಿಬಿಟ್ಟಿತು. ಮಿಸೆಸ್ ಕ್ಯಾಲೆಂಡರ್, ಮಿಸೆಸ್ ಲೆಸ್ಲೀಯವರ ಎದುರಿಗೆ ತನ್ನ ಈ ಸ್ಥಿತಿ ಯಲ್ಲಿ ಹೋಗಿ ನಿಲ್ಲುವುದೆಂದರೆ ಅವನಿಂದಾಗದಾಯಿತು. ಆ ಧೂರ್ತ ಹೆಣ್ಣು ಮಕ್ಕಳು ತನ್ನ ಈ ವಿಷಣ್ಣಭಾವವನ್ನು ಕೂಡಲೆ ಕಂಡುಹಿಡಿಯಬಹುದು- ಆ ಮೇಲೆ ಅವರು ತನ್ನನ್ನು ಪೀಡಿಸಿ ಸಂತೋಷಪಡಬಹುದು- ತಮ್ಮ ಗಂಡಂದಿರೆದುರಿಗೆ ತನ್ನನ್ನು ಅಣಕಿಸಬಹುದು- ಎಂದು ತನ್ನ ಮನಸ್ಸಿನಲ್ಲಿಯೆ ಏನೇನೊ ಕಲ್ಪಿಸಿಕೊಂಡು, ಹೊರಡಲು ಸಿದ್ಧವಿರಬೇಕಾದ ಹೊತ್ತಿಗೇ ಪೋಸ್ಟ ಆಫೀಸಿಗೆ ಹೋಗಿ ತನ್ನ ಮಕ್ಕಳಿಗೆ ಬರೆದನು. ಅಲ್ಲಿಂದ ತಿರುಗಿ ಬಂದು ನೋಡುವಷ್ಟರಲ್ಲಿ ಡಾ. ಲಾಲನು ಬಂದು ಹೋಗಿದ್ದನು. 'ಹೋದರೆ ಹೋಗಲಿ; ಅವನ ಒರಟು ಸ್ವಭಾವಕ್ಕೆ ಅದೇ ಸರಿ' ಎಂದುಕೊಂಡು ತನ್ನ ಷ್ಟಕ್ಕೆ ತಾನು ಮತ್ತೆ ಆ ಸತ್ತವಳೊಡನೆ ಸಲ್ಲಾಪ ಸುರುವುಮಾಡಿದನು.

ಒಂದು ಡ್ರಾಅರನ್ನು ತೆರೆದು ತನ್ನ ಹೆಂಡತಿಯ ಭಾವಚಿತ್ರವನ್ನು ಹೊರಗೆ ತೆಗೆದು ನೆಟ್ಟ ನೋಟದಿಂದ ಅದನ್ನು ನೋಡಿದನು. ನೋಡಿನೋಡಿ ದಂತೆ ಕಣ್ಣಿಂದ ಕಂಬನಿಗಳುರುಳಿದವು. 'ಎಂಥ ದುರ್ದೈವಿ ನಾನು!' ಎಂದು ತನ್ನನ್ನೇ ತಾನು ಹಳಿದುಕೊಂಡನು. ಹೌದು, ಅವನು ದುರ್ದೈವಿ. ಅಂತೇ ಅವನ ಈ ಕರುಣೆಯಲ್ಲಿ ಮತ್ತೊಂದು ಭಾವವು ಆಗಲೆ ಬೆರೆತುಕೊಂಡಿತು. ತನ್ನ ಹೆಂಡತಿಯ ಪೂರ್ಣ ರೂಪವನ್ನು ನೆನಪಿಗೆ ತಂದುಕೊಳ್ಳಬೇಕೆಂದು ಅದೆಷ್ಟೊ ಹವಣಿಸಿದನು; ಅದೆಲ್ಲ ವ್ಯರ್ಥವಾಯಿತು. ಅವನು ಪ್ರೀತಿಸದ ಜನರು ಮಾತ್ರ ಸ್ಪಷ್ಟವಾಗಿ ಅವನ ಮನದ ಕಣ್ಣೆದುರಿಗೆ ಬಂದು ನಿಲ್ಲುತ್ತಿ ದ್ದರು. ಅವರನ್ನು ತಪ್ಪಿಸುವುದಕ್ಕಾಗಿ ಈ ಭಾವಚಿತ್ರದ ಕಡೆಗೆ ಅವನು ನೋಡಿದಷ್ಟೂ ಅವಳು ಕಾಣುತ್ತಿರಲಿಲ್ಲ. ಜನರು ಅವಳನ್ನು ಗೋರಿಗೆ ತೆಗೆದುಕೊಂಡುಹೋದಂದಿನಿಂದ ಅವಳು ಅವನನ್ನು ಹೀಗೆಯೆ ತಪ್ಪಿಸಾಡು

ತ್ತಿದ್ದಳು. ಅವಳು ಒಂದಿಲ್ಲೊಂದು ದಿನ ತನ್ನ ಕೈಬಿಟ್ಟು ಕಣ್ಣಿಗೆ ಮರೆಯಾಗಿ ಹೋಗುವಳೆಂದು ಅವನಿಗೆ ಗೊತ್ತಿತ್ತು; ಆದರೆ ಅವಳು ತನ್ನ ಹೃದಯದಿಂದ ಕೂಡ ಮರೆಯಾಗುವಳೆಂದು ಅವನಿಗನಿಸಿರಲಿಲ್ಲ. ಸತ್ತವರನ್ನು ಪ್ರೀತಿಸುವುದರಿಂದ ಅವರು ಮತ್ತಷ್ಟು ಅಸತ್ಯರಾಗುವರು; ಹೆಚ್ಚು ಹೆಚ್ಚು ಆರ್ತರಾಗಿ ಅವರನ್ನು ಕೂಗಿದಂತೆ ಅವರು ಹೆಚ್ಚೆಚ್ಚು ಹಿಂದಕ್ಕೆ ಸರಿಯುವರೆಂದು ಅವನಿಗೆ ತಿಳಿದಿರಲಿಲ್ಲ. ತನ್ನ ಹೆಂಡತಿಯದೆಂದು ಇಲ್ಲಿ ಉಳಿದದ್ದೆಂದರೆ ಇಷ್ಟೆ: ಒಂದು ಕಂದಿಬಣ್ಣದ ರಟ್ಟು, ಮತ್ತು ಈ ಮೂರು ಮಕ್ಕಳು. ಈಗ ಮಾತ್ರ ಅವನಿಂದ ತನ್ನ ಭಾವದ ಆವೇಗವನ್ನು ತಡೆಯುವುದಾಗಲಿಲ್ಲ; ಮತ್ತೆ 'ಅಯ್ಯೋ! ನಾನೆಂಥ ದುರ್ದೈವಿ!' ಎಂದುಕೊಂಡು ಸಮಚಿತ್ತನಾದನು. ಒಂದು ಕ್ಷಣ, ಅವನು ಪೌರ್ವಾತ್ಯರ ಮತ್ತು ಎಲ್ಲ ಜನರ ಸುತ್ತಲೂ ಸುಳಿದಾಡುವ ಸಾವಿನ ಗಾಳಿಯನ್ನು ಉಸಿರಾಡಿಸುವಾಗ 'ನಾನು ತರುಣ; ಇನ್ನೂ ನಾನು ಬದುಕಬೇಕು' ಎಂಬಾಶೆಯಿದ್ದುದರಿಂದ ಉಸಿರುಗಟ್ಟಿದಂತಾಗಿ ಹಿಂದಕ್ಕೆ ಸರಿದನು. 'ಇದರಿಂದ ನಾನೆಂದೂ ಪಾರಾಗುವುದಿಲ್ಲ! ನನ್ನ ಜೀವನವೆಲ್ಲ ನಿಶ್ಚಯವಾಗಿ ವ್ಯರ್ಥವಾಯಿತು! ನನ್ನ ಮಕ್ಕಳ ಜೋಪಾನ ಈಗ ಚೆನ್ನಾಗಿ ಆಗಲಾರದು!' ಎಂದು ತನ್ನಷ್ಟಕ್ಕೆ ತಾನೇ ನುಡಿದನು. ಈ ಜಂಜಾಟವನ್ನೆಲ್ಲ ತಪ್ಪಿಸಬೇಕೆಂದು ಆಸ್ಪತ್ರೆಯಲ್ಲಿಯ ಒಬ್ಬ ರೋಗಿಯ ವಿಷಯದಲ್ಲಿ ತಾನೇ ಬರೆದಿಟ್ಟ ಟಿಪ್ಪಣೆಗಳನ್ನು ನೋಡಹತ್ತಿದನು. ಆಗ 'ಒಂದು ವೇಳೆ ಒಬ್ಬ ಶ್ರೀಮಂತ ಮನುಷ್ಯನಿಗೆ ಇದೇ ಶಸ್ತ್ರಕ್ರಿಯೆಯೇ ಬೇಕಾಗಬಹುದು. ನನಗಾಗ ಬಹಳ ಹಣ ದೊರೆಯಬಹುದು' ಎಂಬ ವಿಚಾರವು ಅವನ ತಲೆಯಲ್ಲಿ ಸುಳಿದು ಹೋಯಿತು. ಆ ಟಿಪ್ಪಣೆಗಳೇ ಅಷ್ಟು ಮಹತ್ವದವಿದ್ದುದರಿಂದ ಅವುಗಳನ್ನು ನೋಡುವುದರಲ್ಲಿಯೆ ಆಸಕ್ತಿಯುಳ್ಳವನಾಗಿ ಆ ಭಾವಚಿತ್ರವನ್ನು ಪೆಟ್ಟಿಗೆಯಲ್ಲಿ ಹಾಕಿ ಕೀಲಿ ಹಾಕಿದನು. ಮುಗಿಯಿತು; ಆ ಕ್ಷಣ ದಾಟಿತು. ಅಲ್ಲಿಂದ ಅವನು ತನ್ನ ಹೆಂಡತಿಯ ವಿಷಯ ಏನನ್ನೂ ವಿಚಾರಿಸಲಿಲ್ಲ.

ಚಹಾ ಆದ ಮೇಲೆ ಅವನ ಮನೋವೃತ್ತಿಯು ಸುಧಾರಿಸಿತು. ಹಮಿದುಲ್ಲಾನನ್ನು ಕಾಣಬೇಕೆಂದು ಹೊರಟನು. ಹಮಿದುಲ್ಲಾನು ಪಾರ್ಟಿಗೆ ಹೋಗಿದ್ದನು. ಅವನ ಪೋನಿ ಮಾತ್ರ ಹೋಗಿದ್ದಿಲ್ಲ. ಅಝೀಜನು ಆ ಪೋನಿಯನ್ನು ತೆಗೆದುಕೊಂಡು, ತನ್ನ ಗೆಳೆಯನ ಕುದುರೆ-ಪೋಷಾಕವನ್ನು

ಪೋಲೋ ಆಟದ ದಂಡವನ್ನು ಇಸಕೊಂಡು ಮೈದಾನಕ್ಕೆ ಹೊರಟನು. ಮೈದಾನದ ಆ ತುದಿಗೆ ಬಿಟ್ಟು ಉಳಿದಾವ ಕಡೆಗೂ ಯಾರೂ ಇದ್ದಿಲ್ಲ. ಆ ತುದಿಗೆ ಮಾತ್ರ ಪೇಟೆಯೊಳಗಿನ ಕೆಲ ಹುಡುಗರು ಕಲಿಯುತ್ತಿದ್ದರು, ಕಲಿಸುತ್ತಿದ್ದರು. ಏತಕ್ಕಾಗಿ? ಅವರಿಗೇ ಅದನ್ನು ಹೇಳುವುದು ಕಠಿಣವಾಗಿತ್ತು. ಆದರೂ ಹಾಗನ್ನುವುದು ರೂಢಿಯಲ್ಲಿ ಬಂದುಬಿಟ್ಟಿತ್ತು. ಸೊಳಕರು, ಮುಂಕಣಿಗಾಲಿನವರು–ಒಟ್ಟಿನಲ್ಲಿ ಇಲ್ಲಿಯವರ ದೇಹಸ್ಥಿತಿಯೇ ಬಹಳ ಹೀನ–ಸುತ್ತಲೂ ಓಡುತ್ತಿದ್ದರು. ಅವರ ಮುಖದ ಮೇಲೆ ನಿರ್ಧಾರದ ಚಿನ್ಹೆಗಿಂತಲೂ ನಿರ್ಧಾರ ಮಾಡಬೇಕೆಂಬ ನಿರ್ಧಾರದ ಚಿನ್ಹೆಗಳು ಇದ್ದವು. ಅವರನ್ನು ನೋಡಿ 'ಮಹಾರಾಜ, ಸಲಾಮ್' ಎಂದು ಚೇಷ್ಟೆಯಿಂದ ಅಝೀಜನು ಕೂಗಿದನು. ಆ ತರುಣರು ನಿಂತು ನಕ್ಕರು. ಬಹಳ ಶ್ರಮ ತೆಗೆದುಕೊಳ್ಳಬಾರದೆಂದು ಅವರಿಗೆ ಅಝೀಜನು ಉಪದೇಶ ಮಾಡಿದನು. 'ಆಗಲಿ' ಎಂದು ಅವರು ವಚನ ಕೊಟ್ಟು ಓಡಿಹೋದರು.

ತನ್ನ ಕುದುರೆಯನ್ನು ನಡುವೆ ಸಾಗಿಸಿ ಅಝೀಜನು ಚಂಡನ್ನು ಅತ್ತಿತ್ತ ಹೊಡೆಯಹತ್ತಿದನು. ಅವನಿಗೆ ಆಟ ಬರುತ್ತಿರಲಿಲ್ಲ; ಅವನ ಪೋನಿಗೆ ಮಾತ್ರ ಬರುತ್ತಿತ್ತು. ಮೈದಾನದ ಹರವಾದ ಪಾತ್ರದಲ್ಲಿ ಲುಟು ಲುಟು ಓಡಾಡುವಾಗ ಸಂಜೆಯ ತಂಗಾಳಿಯು ಅವನ ಹಣೆಗೆ ಬೀಸುತ್ತಿತ್ತು; ಸುತ್ತಲಿನ ಗಿಡಗಳು ಅವನ ಕಣ್ಣಿಗೆ ತೃಪ್ತಿಯನ್ನು ಕೊಡುತ್ತಿದ್ದವು. ಅಝೀಜನು ತನ್ನ ಬಾಳುವೆಯ ಹಾಳು ಕೆಲಸವನ್ನೆಲ್ಲ ಪೂರಾ ಮರೆತುಬಿಟ್ಟನು. ಈ ಮೈಮರೆವಿನಲ್ಲಿದ್ದಾಗ ಅವನು ಹೊಡೆದ ಚಂಡು ಒಮ್ಮೆಲೆ ಅಪರಿಚಿತ ಒಬ್ಬ ಸಣ್ಣ ಸೈನ್ಯಾಧಿಕಾರಿಯ ಕಡೆಗೆ ಸಿಡಿದು ಹೋಯಿತು. ಅವನೂ ಅಲ್ಲಿ ಕಲಿಯುತ್ತಿದ್ದನು. ಸಿಡಿದು ಬಂದ ಚಂಡನ್ನು ಪುನಃ ಅಝೀಜನ ಕಡೆಗೆ ಹೊಡೆದು ಅವನು 'ಮತ್ತೆ ಇತ್ತ ಕಳಿಸು!' ಎಂದು ಕೂಗಿದನು.

'ಆಗಲಿ'.

ಈ ಹೊಸಬನಿಗೆ ತಕ್ಕಮಟ್ಟಿಗೆ ಆಟದ ಜ್ಞಾನವಿತ್ತು. ಆದರೆ ಅವನ ಕುದುರೆಗೆ ಏನೂ ಇದ್ದಿಲ್ಲ. ಹೀಗಾಗಿ ಅವರಿಬ್ಬರೂ ಸರಿಜೋಡಿ ಹುದ್ದರಿಗಳಾದರು. ಚಂಡಿನ ಮೇಲೇ ಲಕ್ಷ್ಯವಿಟ್ಟು ಅವರು ಹೇಗೋ ಒಬ್ಬರೊಬ್ಬರಲ್ಲಿ ಆಸಕ್ತರಾದರು. ವಿಶ್ರಾಂತಿಗೆಂದು ಕುದುರೆಗಳನ್ನು ನಿಲ್ಲಿಸಿದಾಗ ಒಬ್ಬ

ರೊಬ್ಬರನ್ನು ನೋಡಿ ಮುಗುಳು ನಗೆ ನಗುವರು. ಅಯ್ಗೀಜನಿಗೆ ದಂಪಾಳು ಗಳ ಮೇಲೆ ಪ್ರೀತಿ ಬಹಳ. ಯಾಕಂದರೆ ಅವರಿಗೆ ಎರಡೇ ಗೊತ್ತು: ಒಂದು, ನಿಮ್ಮ ಮಾತಿಗೆ ಒಮ್ಮೆಲೆ ಒಪ್ಪಿಬಿಡುವುದು; ಇಲ್ಲವೆ ನಿಮ್ಮನ್ನು ಬೈಗಳಲ್ಲಿ ಮುಚ್ಚಿಬಿಡುವುದು—ಹೀಗಿರುವುದು ಕೂಡ ಈ ಮೆತ್ತನ್ನ ಉನ್ಮತ್ತತೆಗಿಂತ ಎಷ್ಟೋ ಪಾಲಿಗೆ ಬೇಕೆಂದು ಅವನ ನಂಬಿಗೆಯಿತ್ತು. ಆ ಸಣ್ಣ ಸೈನ್ಯಾಧಿ ಕಾರಿಗೆ-ಅವರು ಯಾರು ಬೇಕಾದವರಿರಲಿ, ಕುದುರೆ ಹತ್ತುವವರಿದ್ದರೆ ಸಾಕು- ಅವರನ್ನು ಕಂಡರೆ ಪ್ರೀತಿ ಬಹಳ.

'ನೀವು ಮೇಲಿಂದ ಮೇಲೆ ಆಡುತ್ತೀರೇನು?' ಎಂದು ಆ ಅಧಿಕಾರಿ ಕೇಳಿದನು.

'ಎಂದೂ ಇಲ್ಲ.'

'ಹಾಗಾದರೆ ಇನ್ನೊಂದು ಚಕ್ಕರ ಹೊಡೆಯೋಣ?' ಎಂದು ಅವನು ಕುದುರೆಯನ್ನು ಹೊಡೆದ ಕೂಡಲೆ ಅದು ಜಿಗಿಯಿತು. ಅವನೂ ಜಿಗಿದು ಬಿದ್ದನು. 'ಅಯ್ಯೋ ದೇವರೇ!' ಎಂದು ಮತ್ತೆ ಅದರ ಮೇಲೆ ಜಿಗಿದು ಹತ್ತಿ 'ನೀನು ಎಂದೂ ಬೀಳುವುದಿಲ್ಲೇನು?' ಎಂದನು.

'ಬೇಕಾದಷ್ಟು.'

'ನಿಮಗಲ್ಲ.'

ಅವರಿಬ್ಬರೂ ಮತ್ತೆ ತಮ್ಮ ಕುದುರೆಗಳನ್ನು ನಿಲ್ಲಿಸಿದರು. ಅವರ ಕಣ್ಣುಗಳಲ್ಲಿ ಮೈತ್ರಿಭಾವವು ಮಿಣುಗಿತು. ದೇಹವು ತಂಪಾದಂತೆ ಆ ಭಾವವೂ ಕಡಿಮೆಯಾಯಿತು. ಯಾಕಂದರೆ 'ಗರಡಿಸಾಧಕ' ವ್ಯಕ್ತಿಗಳಲ್ಲಿ ಕಾವು ಏರುವುದು ತಾತ್ಪೂರ್ತಿಕವಾಗಿಯೇ! ಆಗಲೆ ದೇಶಭೇದದ ವಿಷ ವಾಯು ಅವರ ನಡುವೆ ಹಬ್ಬುವುದರಲ್ಲಿತ್ತು. ಆದರೆ ಅದು ಹಬ್ಬುವಷ್ಟ ರಲ್ಲಿಯೆ ಅವರು ಒಬ್ಬರಿಗೊಬ್ಬರು ನಮಸ್ಕಾರಮಾಡಿ ದೂರಾದರು. 'ತಾವು ಹೀಗೇ ಒಂದೆಯಾಗಿದ್ದರೆ..?' ಎಂಬ ವಿಚಾರವು ಇಬ್ಬರಲ್ಲಿಯೂ ಹೊಳೆದು ಹೋಯಿತು.

ಇಷ್ಟರೊಳಗಾಗಿ ಸಂಜೆಯಾಗಿತ್ತು. ಅಯ್ಗೀಜನ ಜಾತಿಬಾಂಧವರಲ್ಲಿ ಕೆಲರು ಆ ಮೈದಾನಕ್ಕೆ ಬಂದು ಮಕ್ಕಾದ ಕಡೆಗೆ ಮುಖಮಾಡಿ ನಮಾಜ್ ಪ್ರಾರಂಭ ಮಾಡಿದ್ದರು. ಆಗ ಅವರ ಕಡೆಗೆ ಒಂದು ಬ್ರಾಹ್ಮಣ ಗೂಳಿಯು

ಬಂದಿತು. ಅಝೀಜನಿಗೆ ನಮಾಜ್ ಮಾಡುವ ಮನಸ್ಸಿಲ್ಲದಿದ್ದರೂ, ಈ ಟೊಣಪ ಮೂರ್ತಿಪೂಜಕ ಪ್ರಾಣಿಯಿಂದ ಅವರಿಗೇಕೆ ತೊಂದರೆಯಾಗ ಬೇಕೆಂದು ತನ್ನಲ್ಲಿದ್ದ ಆ ಪೋಲೋ ದಾಡದಿಂದ ಅದಕ್ಕೆ ರಪ್ಪೆಂದು ಒಂದೇಟು ಕೊಟ್ಟನು. ಅದೇ ಹೊತ್ತಿಗೆ ದಾರಿಯ ಕಡೆಯಿಂದ ಒಂದು ದನಿ ಬಂತು: 'ಡಾಕ್ಟರ ಅಝೀಜ! ಡಾಕ್ಟರ ಅಝೀಜ! ನಾನು ಬಂದಾಗ ಎಲ್ಲಿ ಹೋಗಿದ್ದಿರಿ? ಹತ್ತು ಮಿನಿಟುಗಳ ವರೆಗೆ ನಿಮ್ಮ ದಾರಿಯನ್ನು ನೋಡಿ ಹೋದೆನು!' ಎಂದು. ಅದು ಇದೇ ಈಗ ಪಾರ್ಟಿಯಿಂದ ಮನನೊಂದು, ಕುಗ್ಗಿ ಬಂದ ಡಾಕ್ಟರ ಪನ್ನಾಲಾಲರದು.

'ನನಗೆ ಭಯಂಕರ ಕೆಡಕೆನಿಸುತ್ತದೆ. ನಾನು ಪೋಸ್ಟ ಆಫೀಸಿಗೆ ಹೋಗಲೇಬೇಕಾಗಿತ್ತು' ಎಂದು ಅಝೀಜನು ಉತ್ತರ ಕೊಟ್ಟ. ಈ ಉತ್ತರದ ಅರ್ಥವನ್ನು ಅವನ ಗುಂಪಿನವರಾರಾದರೂ ಆಗಿದ್ದರೆ, ಅವನು ಆಯುತ ಹೊತ್ತಿನಲ್ಲಿ ಮನಸು ಬದಲು ಮಾಡಿದನೆಂದೇ ತಿಳಿದುಕೊಂಡು, ಮತ್ತು ಇದು ತೀರ ಸಾಮಾನ್ಯವಾಗಿದ್ದರಿಂದ ಇದರಲ್ಲಿ ತಮ್ಮನ್ನು ಅಪಮಾನ ಮಾಡುವುದಕ್ಕೆ ಅವಕಾಶವಿಲ್ಲೆಂದು ಸಮಾಧಾನ ಹೊಂದುತ್ತಿದ್ದರು. ಆದರೆ ಡಾ. ಲಾಲನು ಕೀಳು ಮನೆತನದವನಾದುದರಿಂದ ಅಪಮಾನವು ಅದರಲ್ಲಿ ಅಡಕವಾಗಿಲ್ಲೆಂದು ಅವನಿಗೆ ನಿಶ್ಚಯವೆನಿಸಲಿಲ್ಲ; ಇದೂ ಅಲ್ಲದೆ ಆ ಬ್ರಾಹ್ಮಣ ಗೂಳಿಯನ್ನು ಬೇರೆ ಅವನು ಹೊಡೆದದ್ದರಿಂದ ಮತ್ತಿಷ್ಟು ಅವನ ಮನಸ್ಸು ರೇಗಿತ್ತು.

'ಪೋಸ್ಟ ಆಫೀಸಿಗೆ? ನೀವು ನಿಮ್ಮ ಚಾಕರನನ್ನು ಕಳಿಸುವುದಿಲ್ಲವೇ?' ಎಂದು ಡಾ. ಲಾಲನು ಕೇಳಿದನು.

'ನನಗೆ ಬಹಳ ಸ್ವಲ್ಪ ಜನರಿದ್ದಾರೆ- ನನ್ನ ಪಗಾರವೂ ಬಹಳ ಸಣ್ಣದು' ಎಂದು ಅಝೀಜನು ಹಾರಿಸಿ ಉತ್ತರ ಕೊಟ್ಟನು.

'ಹೌದು, ಹೌದು, ನಿಮ್ಮ ಚಾಕರ ಹೇಳಿದ; ಅವನನ್ನು ಕಂಡಿದ್ದೆ' ಎಂದು ಡಾ. ಲಾಲನು ಅರ್ಥವರಿಯದೆ ಮಾತನಾಡಿದನು.

'ಆದರೆ ಡಾಕ್ಟರ ಲಾಲರೇ! ವಿಚಾರ ಮಾಡಿರಿ. ನೀವು ಮನೆಗೆ ಬರುತ್ತಿರುವಾಗ ಚಾಕರನನ್ನಾದರೂ ಹೇಗೆ ಕಳಿಸಬೇಕು? ನೀವು ಬರುವವರು; ಅಲ್ಲಿಂದ ಇಬ್ಬರೂ ಕೂಡಿ ಹೊರಗೆ ಹೋಗುವವರು. ಮನೆಯಲ್ಲಿ ಯಾರೂ

ಇಲ್ಲದಂತಾಗುವರು. ಇದೇ ಹೊತ್ತನ್ನು ಸಾಧಿಸಿ ಯಾರಾದರೂ ತುಡುಗರು ಇದ್ದುಬಿದ್ದ, ಎತ್ತಲಿಕ್ಕೆ ಬರುವ ಸಾಮಾನುಗಳನ್ನೆಲ್ಲ ಹೊತ್ತುಕೊಂಡು ಹೋದರೆ....? ನಿಮಗೆ ಹೀಗಾಗಬೇಕೆಂದೇನೂ ಇಚ್ಛೆಯಿಲ್ಲವಷ್ಟೆ? ಅಡಿಗಿಯವನು ಕಿವುಡ, ಅವನ ಮೇಲೂ ಭರವಸೆಯಿಡುವಂತಿಲ್ಲ; ಹುಡುಗ, ಇನ್ನೂ ಚಿಕ್ಕವನು. ಅದಕ್ಕೇ ನಾನೂ ಹಸನನೂ ಇಬ್ಬರೂ ಒಮ್ಮೆಲೆ ಎಂದೂ ಮನೆ ಬಿಟ್ಟು ಹೋಗುವಂತಿಲ್ಲ, ಎಂದು ಗೊತ್ತುಮಾಡಿಬಿಟ್ಟಿದ್ದೇನೆ. ಆ ನಿಯಮವನ್ನು ಮುರಿಯುವಂತಿಲ್ಲ....' ಎಂದು ಇನ್ನೂ ಎಷ್ಟೋ ಮಾತುಗಳನ್ನು ಆಚಾರ-ಉಪಚಾರಕ್ಕಾಗಿ, ಇದ್ದದ್ದನ್ನು ಮುಚ್ಚಿಕೊಳ್ಳುವುದಕ್ಕಾಗಿ ಡಾ. ಲಾಲರ ಮರ್ಯಾದೆಯನ್ನು ಕಾಯಲಿಕ್ಕಾಗಿ ಆಡಿದನು. ಇಷ್ಟಾದರೂ ತನ್ನ ಮಾತು ಸತ್ಯವೆಂದು ಅವನೇನು ಹೇಳಲಿಲ್ಲ. ಅದನ್ನು ಹಾಗೆ ತಿಳಿದುಕೊಂಡು ಡಾ. ಲಾಲನು ಟೀಕಿಸುವ ಕಾರಣವೂ ಇದ್ದಿಲ್ಲ. ಅಂತೂ ಕೊನೆಗೆ ಡಾ. ಲಾಲನು ಆ ಮಾತನ್ನು ಬಿಡದೆ ತಿರುಗಿ ಅವನ ಮೇಲೆಯೆ ಹೊರಳಿಸಿದನು: 'ಅದು ಏನೇ ಇರಲಿ, ನೀನು ಹೋಗಿದ್ದನ್ನು ತಿಳಿಸಲಿಕ್ಕೆ ಒಂದು ಚೀಟಿಯನ್ನಾದರೂ ಇಟ್ಟು ಹೋಗಲು ಏನು ಅಡ್ಡಿಯಿತ್ತು?' ಅಯ್ಯೀಜನಿಗೆ ಈ ಮಾತನ್ನು ತಡೆದುಕೊಳ್ಳುವುದಾಗಲಿಲ್ಲ. ತನ್ನ ಪೋನಿಯನ್ನು ಮುಂದೆ ಜಿಗಿಸಿದನು. 'ಸ್ವಲ್ಪ ದೂರ! ಇಲ್ಲವಾದರೆ ನನ್ನದೂ ಅದನ್ನು ನೋಡಿ ಜಿಗಿಯಬಹುದು. ಅದರಲ್ಲಿ ಈ ಹೊತ್ತು ಅದು ಬಹಳ ಮಸ್ತಿಗೆ ಬೇರೆ ಬಂದು ಕೈಯಲ್ಲಿ ನಿಲ್ಲದಾಗಿದೆ. ಕ್ಲಬ್ಬಿನ ತೋಟದಲ್ಲಿ ಹೊಕ್ಕು ಹೂಗಳನ್ನೆಲ್ಲ ಹಾಳುಮಾಡಿತು. ಕೊನೆಗೆ ನಾಲ್ಕು ಜನರು ಕೂಡಿ ಇದನ್ನು ಜಗ್ಗಿಹಿಡಿಯಬೇಕಾಯಿತು. ಅಲ್ಲಿ ನೆರೆದ ಇಂಗ್ಲಿಷ ಸದ್ಗೃಹಸ್ಥರೂ, ಸ್ತ್ರೀಯರೂ ಎಲ್ಲರೂ ಈ ಗೊಂದಲವನ್ನು ನೋಡುತ್ತಲೇ ಇದ್ದರು. ಕಲೆಕ್ಟರ ಸಾಹೇಬರು ಕೂಡ ನೋಡಿಬಿಟ್ಟರು!.... ಆದರೆ ಅಯ್ಯೀಜರೇ! ನಿಮ್ಮ ಬೆಲೆಯುಳ್ಳ ಹೊತ್ತನ್ನು ನಾನಿನ್ನು ತೆಗೆದುಕೊಳ್ಳುವುದಿಲ್ಲ. ನಿಮಗೆ ಆ ಪಾರ್ಟಿಯಲ್ಲಿ ಆಸ್ಥೆಯಿದ್ದದ್ದೂ ಅಷ್ಟರಲ್ಲಿಯೆ ಅದೆ. ಯಾಕಂದರೆ ನಿಮಗೆ ಕೆಲಸಗಳು ಬಹಳ; ತಂತಿಗಳು ಬಹಳ; ನಾನೆಲ್ಲೋ ಒಬ್ಬ ಬಡ ಮುದುಕ ಡಾಕ್ಟರ; ಯಾವಾಗ ಕರೆದರೂ, ಎಲ್ಲಿಗೆ ಕರೆದರೂ ಹೋಗಿ ಅವರ ಮರ್ಯಾದೆಯನ್ನು ಮುಟ್ಟಿಸಿ ಬರುವವರು ನಾವು. ನೀವೇನು ನಮ್ಮ ಹಾಗೆ ಅಲ್ಲ; ಅಲ್ಲಿ ನಡೆದ

ಒಂದು ಮಾತು ಮಾತ್ರ—ನೀವು ಕೇಳದಿದ್ದರೂ ಅಡ್ಡಿಯಿಲ್ಲ— ನಾನು ಹೇಳುತ್ತೇನೆ: ನೀವು ಬಾರದಷ್ಟಕ್ಕೆ ಅಲ್ಲಿ ಅನೇಕ ಟೀಕೆ-ಟಿಪ್ಪಣೆಗಳಾದವು' ಎಂದು ತಾನು ಕೆರಳಿದ್ದರ ಒಡಪನ್ನು ತಾನೇ ಒಡೆದನು.

'ಮಾಡಲಿ ಮಕ್ಕಳು; ಬೇಕಾದಷ್ಟು ಟೀಕೆಗಳನ್ನು ಮಾಡಲಿ! ಹಾಳಾಗಿ ಹೋಗಲಿ!'

'ತರುಣನಾಗಿರುವುದು ಬಹಳ ಒಳ್ಳೇದು ಅಝೀಜ! ಹಾಳಾಗಿ ಹೋಗಲಿ? ಹೋದರೆಲ್ಲ ಒಳ್ಳೇದು ನಿಜ; ಆದರೆ ಯಾರು ಹಾಳಾಗಬೇಕು?'

'ನನ್ನ ಮನಸಿಗೆ ಬೇಕಾದರೆ ಆ ಪಾರ್ಟಿಗೆ ಹೋದೇನು; ಬೇಡಾದರೆ ಬಿಟ್ಟೇನು. ಹೋಗಲೇಬೇಕೆಂದು ನಿರ್ಬಂಧವೇನೂ ಇಲ್ಲವಲ್ಲ?'

'ಆದರೂ ಮೊದಲು ನನಗೆ ಬರುತ್ತೇನೆಂದು ವಚನ ಕೊಟ್ಟು ಆಮೇಲೆ ಈ ತಾರಿನ ಕಥೆಯನ್ನು ಕಟ್ಟುತ್ತೀಯಲ್ಲ! ಏನಿದು?.... ಡ್ಯಾಪಲ್ (ಕುದುರೆಯ ಹೆಸರು) ನಡೆ, ಮುಂದೆ'.

ಇಬ್ಬರೂ ಮುಂದೆ ಹೊರಟರು. ಅಝೀಜನಿಗೆ ಇವನ ಮಾತುಗಳನ್ನು ಕೇಳಿ ಇವನನ್ನು ಆಜನ್ಮ ವೈರಿಯನ್ನಾಗಿ ಮಾಡಿಕೊಳ್ಳಬೇಕೆನ್ನುವಷ್ಟು ತಲೆ ತಿರುಗಿ ಹೋಗಿತ್ತು. ತನ್ನ ಕುದುರೆಯನ್ನು ಅವನ ಸಮೀಪಕ್ಕೆ ಓಡಿಸಿ ಆ ಕೆಲಸವನ್ನು ಬಹು ಸುಲಭವಾಗಿ ಮಾಡಬಹುದೆಂದು ಅವನಿಗೆ ಹೊಳೆಯಿತು. ಹೊಳೆದಂತೆ ಮಾಡಿಯೂ ಬಿಟ್ಟನು. ಡಾ. ಲಾಲನ ಕುದುರೆ ಕಂಬಿ ಕಿತ್ತಿತು. ಅಝೀಜನು ಅಲ್ಲಿಂದ ಮತ್ತೆ ಮೈದಾನಕ್ಕೆ ಹೊರಟುಹೋದನು. ಆ ಸಣ್ಣ ಸೈನ್ಯಾಧಿಕಾರಿಯ ಜೊತೆಗೆ ಆಟದಲ್ಲಿ ದೊರೆತ ಜಯದ ಹುಮ್ಮು ಇನ್ನೂ ಮೈಯಲ್ಲಿ ತುಂಬಿತ್ತು. ಮೈದಾನದಲ್ಲಿ ತನ್ನ ಮನಬಂದಂತೆ ಕುದುರೆಯನ್ನು ಓಡಾಡಿಸಿದನು. ಒಮ್ಮೆ ಹಾರಿಗ್ಗಾಲು ಬಿಟ್ಟನು; ಒಮ್ಮೆ ನೆಲಸವರಿ ಸಾಗಿದನು; ಮೈಯೆಲ್ಲ ಬೆವರು ಸುರಿಯಹತ್ತಿತು. ಅಲ್ಲಿಂದ ತಿರುಗಿದನು. ಕುದುರೆಯ ಮೇಲೆ ಇದ್ದಾಗೆಲ್ಲ ಯಾರಿಗೂ ತಾನು ಕಡಿಮೆಯಿಲ್ಲೆಂದು ಹೆಮ್ಮೆಪಟ್ಟುಕೊಂಡನು. ಆದರೆ ಕುದುರೆ ಬಿಟ್ಟು ಕೆಳಗೆ ಇಳಿದ ಕೂಡಲೆ ಭಯಗಳು ಅವನನ್ನು ಮುತ್ತಿದವು. 'ತಾನು ಪಾರ್ಟಿಗೆ ಹೋಗದ್ದರಿಂದ ಅಧಿಕಾರಿಗಳೊಡನೆ ದ್ವೇಷ ಕಟ್ಟಿಕೊಂಡಂತಾಯಿತೇನು? ಕಲೆಕ್ಟರರಿಗೆ ಅವಮಾನ ಮಾಡಿದಂತಾಯಿತೇನು? ಡಾಕ್ಟರ ಪನ್ನಾಲಾಲನು ಅಷ್ಟೇನು ಮಹ

ತ್ಪದ ಮನುಷ್ಯನಲ್ಲದಿದ್ದರೂ ಅವನೊಡನೆ ಜಗಳಾಡಿದ್ದು ಜಾಣತನವೇ?' ಎಂದು ಅವನ ಮನಸ್ಸು ಇಲ್ಲಿಯ ವರೆಗೆ ಮಾನವಸದಭಿಮಾನದ ಮಟ್ಟಕ್ಕೇರಿದ್ದು ದಿನಬಳಕೆಯ ಕೀಳು ರಾಜಕಾರಣದ ತಗ್ಗಿಗಿಳಿಯಿತು. ಅವನು 'ನಾನು ಜನರೊಂದಿಗೆ ಕೆಲಸ ಸಾಗಿಸೇನೇ?' ಎಂಬ ವಿಚಾರವನ್ನೇ ಬಿಟ್ಟು 'ನನ್ನಕ್ಕಿಂತಲೂ ಅವರು ಬಲಿಷ್ಠರೇ?' ಎಂಬುದನ್ನು ಆಲೋಚಿಸಹತ್ತಿದನು.

ಅವನು ಮನೆಗೆ ಬರುವಷ್ಟರಲ್ಲಿ ಸರಕಾರಿ ಮುದ್ರೆಯುಳ್ಳ ಒಂದು ಮುಚ್ಚೋಲೆಯು ಅವನ ದಾರೀ ನೋಡುತ್ತಿತ್ತು. ಅದು ಅವನ ಮೇಜಿನ ಮೇಲೆ ಒಂದು ತೀಕ್ಷ್ಣವಾದ ಸ್ಫೋಟದ್ರವ್ಯದಂತೆ ಬಿದ್ದಿತ್ತು. ಒಂದು ಸ್ವಲ್ಪ ಸ್ಪರ್ಶವಾದರೆ ಸಾಕು, ಅವನ ದರಿದ್ರ ಬಂಗ್ಲೆಕ್ಕೆ ಬಂಗ್ಲೆಯನ್ನೇ ಚೂರು ಚೂರು ಮಾಡುವುದು! ತಾನು ಪಾರ್ಟಿಗೆ ಹೋಗದ್ದಕ್ಕಾಗಿ ತನ್ನನ್ನು ಕೆಲಸದಿಂದ ದೂರಮಾಡುವ ಪತ್ರವಿರಬಹುದೆಂದು ತಿಳಿದು ಅವನು ಗಾಭರಿಗೊಂಡಿದ್ದನು. ಆದರೆ ಪತ್ರ ತೆರೆದೊಡನೆಯೆ ಅದು ಬೇರೆಯಾಯಿತು. ಅದು ಸರಕಾರಿ ಕಾಲೇಜದ ಪ್ರಿನ್ಸಿಪಾಲರಾದ ಮಿ. ಫೀಲ್ಡಿಂಗರು ನಾಡಿದ್ದು ಚಹಕ್ಕೆ ಬರಬೇಕೆಂದು ಬರೆದು ಕಳುಹಿದ ಆಮಂತ್ರಣ ಪತ್ರ. ಅದನ್ನು ನೋಡಿ ಅವನ ಮನಸ್ಸು ಮತ್ತೆ ಕ್ಷೋಭೆಗೊಂಡು ಚೇತರಿಸಿತು. ಅವನ ಮನಸ್ಸಿನ ರೀತಿಯೇ ಹೀಗೆ. ಅವನ ಎದೆ ದುಃಖಕ್ಕೆ ಬಾಗುವುದರ ಬದಲು ಸೆಟೆದು ಉಬ್ಬಿ ನಿಲ್ಲುವದು. ಇದರಿಂದಲೇ ಅವನ ಜೀವನವು ವಿಕಾರಿಯಾಗಿದ್ದರೂ ಒಂದೇ ಸಮನೆ ಸಾಗಿತ್ತು. ಈ ಆಮಂತ್ರಣದಿಂದ ಅವನಿಗೆ ವಿಶೇಷ ಆನಂದವಾಯಿತು. ಇದಕ್ಕೆ ಕಾರಣವೆಂದರೆ, ಮಿ. ಫೀಲ್ಡಿಂಗನು ಒಂದು ತಿಂಗಳ ಹಿಂದೆಯೆ ಒಮ್ಮೆ ಅವನನ್ನು ಚಹಾಕ್ಕೆ ಕರೆದಿದ್ದನು. ಆದರೆ ಇವನು ಅದಕ್ಕೆ ಹೋಗುವುದನ್ನು ಮರೆತುಬಿಟ್ಟಿದ್ದನು—ಅದಕ್ಕೆ ಉತ್ತರವನ್ನೂ ಕೊಟ್ಟಿರಲಿಲ್ಲ; ಹೋಗಿರಲೂ ಇಲ್ಲ. ಆದರೂ ಮತ್ತೆ ಈಗ ಎರಡನೆಯ ಆಮಂತ್ರಣವು—ಹೋದ ಸಲ ತಪ್ಪಿಸಿದ್ದಕ್ಕೆ ಸಿಟ್ಟಿಲ್ಲದೆ, ಆ ಸಂಬಂಧವನ್ನೆ ಎತ್ತದೆ—ಬಂದಿತ್ತು. ಇದರಲ್ಲಿ ಅವನಿಗೆ ನಿಜವಾದ ಸೌಜನ್ಯವೂ ಶುದ್ಧ ಅಂತಃಕರಣವನ್ನು ತೋರಿಸುವ ನಮ್ರತೆಯೂ ಕಂಡಿತು. ಲೆಕ್ಕಣಿಕೆಯನ್ನು ತೆಗೆದುಕೊಂಡು ಸ್ನೇಹ ಪ್ರೇಮಾದರದಿಂದ ಉತ್ತರವನ್ನು ಬರೆದು ಕಳಿಸಿ, ಹಮಿದುಲ್ಲಾನ ಕಡೆಗೆ ಫೀಲ್ಡಿಂಗನ ಬಗ್ಗೆ ತಿಳಿದುಕೊಳ್ಳಬೇಕೆಂಬ ಕುತೂ

ಹಲದಿಂದ ಹೊರಟನು. ಅಝೀಜನು ಈ ಪ್ರಿನ್ಸಿಪಾಲನನ್ನು ಎಂದೂ ಕಂಡಿರಲಿಲ್ಲ. ಈ ಪ್ರಸಂಗದಿಂದ ಮಾತ್ರ ತನ್ನ ಜೀವನದಲ್ಲಿರುವ ದೊಡ್ಡ ಕೊರತೆಯೊಂದು ತುಂಬಿಬರುವುದೆಂದು ಅವನು ನಂಬಿದನು. ಈ ತೇಜಸ್ವಿ ಮನುಷ್ಯನ ಬಗ್ಗೆ ಎಲ್ಲವನ್ನೂ—ಅವನ ಸಂಬಳ, ಅವನ ಒಲವು-ನಿಲವುಗಳು, ಬೇಕು-ಬೇಡಗಳು, ಪೂರ್ವದ ಸಂಗತಿಗಳು, ಅವನನ್ನು ರಮಿಸುವ ವಿಷಯಗಳು,—ಮೊದಲಾದವನ್ನು ತಿಳಿದುಕೊಳ್ಳಬೇಕೆಂದು ಅವನ ಆಶೆ. ಆದರೆ ಹಮಿದುಲ್ಲಾನು ಹೊರಗೆ ಹೋಗಿದ್ದವನು ಇನ್ನೂ ತಿರುಗಿ ಬಂದಿರಲಿಲ್ಲ. ಒಳಗಿದ್ದ ಮಹಮ್ಮದಲಿಯಿಂ ಇವನಿಗೇನು ಉಪಯೋಗ? ಬರಿ ಆ ಪಾರ್ಟಿಯ ವಿಷಯದಲ್ಲಿ ಹುಚ್ಚು ಹುಚ್ಚು ಹುಂಬ ಚೇಷ್ಟೆಗಳನ್ನೇ ಮಾಡುವವನು !

—

## ಪ್ರಕರಣ ೭

ಹಿಂದುಸ್ಥಾನಕ್ಕೆ ಫೀಲ್ಡಿಂಗನು ಸಿಕ್ಕಿದ್ದು ತೀರ ಹೊಸದಾಗಿ ಮುಂಬೈಯ 'ವ್ಹಿಕ್ಟೋರಿಯಾ ಟರ್ಮಿನಸ್ಸ'ದ ವಿಚಿತ್ರ ದ್ವಾರವನ್ನು ಪ್ರವೇಶಿಸಿದಾಗ ಅವನು ನಲವತ್ತಕ್ಕೆ ಏಿಕ್ಕಿದ್ದನು. ಬಂದೊಡನೆ ಒಬ್ಬ ಯುರೋಪಿಯನ್ ಟಿಕೆಟ್ ಇನ್ಸಪೆಕ್ಟರನಿಗೆ ಲಂಚಕೊಟ್ಟು ತನ್ನ ಸಾಮಾನುಗಳನ್ನೆಲ್ಲ ಪಾರು ಮಾಡಿಕೊಂಡು ರೇಲ್ವೆ ಗಾಡಿಯಲ್ಲಿ ತಂದಿರಿಸಿಕೊಂಡನು. ಈ ಪ್ರವಾಸವು ಅವನ ಮನಸ್ಸಿನ ಮೇಲೆ ಹೆಚ್ಚಾಗಿ ಪರಿಣಾಮ ಮಾಡಿತ್ತು. ಅವನು ಕುಳಿತ ಡಬ್ಬಿಯಲ್ಲಿ ಇನ್ನೂ ಇಬ್ಬರಿದ್ದರು. ಅವರಲ್ಲಿ ಒಬ್ಬನು ತರುಣ, ಇವನಂತೆ ಈ ಪೂರ್ವದೇಶಕ್ಕೆ ಹೊಸಬ; ಇನ್ನೊಬ್ಬನು ಅಟ್ಟುಂಡ ಆ್ಯಂಗ್ಲೋ ಇಂಡಿಯನ್, ಇವನಷ್ಟೇ ವಯಸ್ಸಿನವ. ಫೀಲ್ಡಿಂಗನು ಬಹಳ ಪಟ್ಟಣಗಳನ್ನೂ ಜನರನ್ನೂ ನೋಡಿದ್ದರಿಂದ ಅವರಿಗೂ ಇವನಿಗೂ ಬಹಳ ಹೆಚ್ಚು ಕಡಿಮೆಯಿತ್ತು. ಹೊಸ ಹೊಸ ಅನುಭವಗಳು ಇವನ ಮನಸಿನ ಮೇಲೆ ಸಮುದ್ರದ ತೆರೆಗಳಂತೆ ಬಂದು ಧುಮುಕುತ್ತಿದ್ದವು. ಆದರೆ ಸಾಂಪ್ರದಾಯಿಕ ಹೊಸ ಅನುಭವಗಳೇನೂ ಅಲ್ಲ, ಹಳೆಯ ಅನುಭವದ ಪರಿಣಾಮವು ಅವುಗಳ ಮೇಲೆ ಚೆನ್ನಾಗಿ ಆಗಿತ್ತು. ಅಂತೇ ಅವುಗಳಲ್ಲಿ ಅವನ ದೋಷಗಳೂ

ಬೆರೆತಿದ್ದವು. ಉದಾಹರಣೆಗೆಂದರೆ, ಹಿಂದೀ ಸಿಪಾಸಿಯನ್ನು ಇಟ್ಯಾಲಿಯನ್ನನೆಂದು ತಿಳಿಯುವುದು ಸಾಮಾನ್ಯ ತಪ್ಪಲ್ಲ! ಅಥವಾ ಅಂಥ ಘಾತುಕ ತಪ್ಪೂ ಅಲ್ಲ. ಫೀಲ್ಡಿಂಗನು ಬಹಳ ಸಲ ಈ ದ್ವೀಪಕಲ್ಪಕ್ಕೂ, ಭೂಮಧ್ಯಸಮುದ್ರದ ಪುರಾಣಕಾಲದ ನೀರಿನಲ್ಲಿ ಹಬ್ಬಿಕೊಂಡ ಸುಂದರವಾದ ಆ ದ್ವೀಪಕಲ್ಪಕ್ಕೂ ಹೋಲಿಸಿಕೊಂಡು ನೋಡಲಿಕ್ಕೆ ಹವಣಿಸಿದನು.

ಅವನ ಜೀವನವೆಲ್ಲ ಅಭ್ಯಾಸದಲ್ಲಿಯೇ ಹೋಗಿದ್ದರೂ ಅದರಲ್ಲಿ ವೈವಿಧ್ಯವಿತ್ತು. ಪಾಪಗಳನ್ನು ಮಾಡಿ ಪಶ್ಚಾತ್ತಾಪಪಟ್ಟದ್ದೂ ಆ ಜೀವನದಲ್ಲಿ ಉಂಟು. ಹೀಗಾಗಿ ಅವನೀಗ ಯಾರಿಗೂ ಬಗ್ಗದ ಒಂಟನೂ ಶಾಂತ ಮನಸ್ಸಿನವನೂ ಮಧ್ಯಮ ವಯಸ್ಸಿಗೆ ಬಂದ ಬುದ್ಧಿವಂತನೂ ಶಿಕ್ಷಣದಲ್ಲಿ ಶ್ರದ್ಧೆಯಿದ್ದವನೂ ಆಗಿದ್ದನು. ಇಂಥವರಿಗೇ ವಿದ್ಯೆ ಕಲಿಸಬೇಕೆಂದು ಅವನು ನಿರ್ಬಂಧ ಇಟ್ಟುಕೊಂಡಿರಲಿಲ್ಲ. ಸಾರ್ವಜನಿಕ ಶಾಲೆಯ ಹುಡುಗರೂ ಬುದ್ಧಿ-ವಿಕಲಿತರೂ ಪೋಲೀಸರೂ ಇವನ ಕೈಯಲ್ಲಿ ಹಾಯ್ದು ಹೋಗಿದ್ದರು. ಈ ಹಿಂದೀ ಜನರನ್ನೂ ತನ್ನ ಆ ಪಟಾಲಂಪಿಗೆ ಜೋಡಿಸಲು ಅವನೇನು ಹಿಂದೆ ಮುಂದೆ ನೋಡಲಿಲ್ಲ. ತನ್ನ ಗೆಳೆಯರ ವಶೀಲಿಯಿಂದ ಅವನು ಚಂದ್ರಪುರದೊಳಗಿನ ಆ ಸಣ್ಣ ಕಾಲೇಜದ ಪ್ರಿನ್ಸಿಪಾಲನ ಕೆಲಸವನ್ನು ದೊರಕಿಸಿದನು. ಆ ಕೆಲಸ ಅವನ ಮನಸಿಗೂ ಬಂತು; ಮತ್ತು ಅದರಲ್ಲಿ ಅವನಿಗೆ ಯಶಸ್ಸೂ ದೊರೆಯಿತು. ಅವನು ತನ್ನ ವಿದ್ಯಾರ್ಥಿಗಳಲ್ಲೇನೊ ಗೆದ್ದರೂ ತಾನು ಬರುವಾಗ ರೇಲ್ವೆ ಗಾಡಿಯಲ್ಲಿ ಕಂಡಂತೆ ತನ್ನ ಮತ್ತು ತನ್ನ ದೇಶದವರ ನಡುವಿನ ಅಂತರವು ಮಾತ್ರ ಇನ್ನೂ ಹೆಚ್ಚೆಚ್ಚು ಬೆಳೆಯುತ್ತಲೇ ಇತ್ತು. ಹೀಗಾಗಲಿಕ್ಕೆ ತಪ್ಪಿದ್ದೆಲ್ಲಿ ಎಂಬುದೇ ಅವನಿಗೆ ಮೊದಲು ತಿಳಿಯದಾಯಿತು. ಅವನಿಗೆ ತನ್ನ ದೇಶದ ಮೇಲೆ ಪ್ರೇಮವಿದ್ದಿಲ್ಲೆಂದಲ್ಲ; ಇಂಗ್ಲೆಂಡದಲ್ಲಿ ಇಂಗ್ಲೀಷ ಜನರೊಡನೆ ಅವನೂ ಕೂಡಿ ನಡೆದಿದ್ದಿಲ್ಲವೆಂದಲ್ಲ; ಅವನಿಗೆ ಇಂಗ್ಲೀಷ ಗೆಳೆಯರಿದ್ದಿಲ್ಲವೆಂದಲ್ಲ; ಹೀಗಿದ್ದೂ ಇಲ್ಲಿ ಹೀಗೇಕೆ ಆಗಬೇಕು? ಅಲ್ಲಿಯಂತೇಕೆ ಆಗಬಾರದು? ಅವನಿಗೆ ಯಾವುದೂ ಹೊಳೆಯಲಿಲ್ಲ. ನೋಡಲಿಕ್ಕೆ ದೊಡ್ಡ ಉರುಟ ಆಳು; ಬೀಸಾಗಿದ್ದ ಕೈಕಾಲುಗಳು; ನೀಲಿಗಣ್ಣುಗಳು; ಮಾತಾಡುವವರೆಗೆ ವಿಶ್ವಾಸಾರ್ಹವಾದ ಆಕೃತಿ. ಹೀಗಿದ್ದೂ ಅವನ ರೀತಿಯಲ್ಲಿ ಯಾವುದರಿಂದಲೋ ಏನೊ ಜನರು ಗೊಂದಲದಲ್ಲಿ ಬಿದ್ದು, ಅವನ ಉದ್ಯೋಗದಿಂದ

ಸ್ವಾಭಾವಿಕವಾಗಿ ಹುಟ್ಟಿದ ಅವಿಶ್ವಾಸವನ್ನು ತೋರೆಯಲು ಅವರು ಅಸಮರ್ಥರಾಗುತ್ತಿದ್ದರು ಇದಕ್ಕೆ ಕಾರಣ, ಹಿಂದುಸ್ತಾನದಲ್ಲಿ ಬುದ್ಧಿ ದೋಷವಿದ್ದದ್ದೇ ಇರಬೇಕು. ಈ ದೋಷವನ್ನೇ ಬೆಳೆಯಿಸುವವರು ಕಣ್ಣು-ಮರೆಯಾಗಬೇಕು! ಫೀಲ್ಡಿಂಗನೆಂದರೆ ಒಂದು ಒಡಕು ಹುಟ್ಟಿಸುವ ಶಕ್ತಿ ಎಂಬ ಭಾವನೆಯು ಅವರಲ್ಲಿ ಹಬ್ಬಹತ್ತಿತು; ಮತ್ತು ಅದು ಸರಿಯೆ. ಯಾಕೆಂದರೆ ಸ್ವತಂತ್ರ ವಿಚಾರಗಳು ಜಾತಿಭಾವನೆಗೆ ಘಾತುಕವಾದವು. ಫೀಲ್ಡಿಂಗನು ತನ್ನ ಆ ಸ್ವತಂತ್ರ ವಿಚಾರಗಳನ್ನು ವಿಚಾರವಿನಿಮಯದ ಪ್ರಶಿಲ ರೀತಿಯಲ್ಲಿ ಸೂಕಿದನು. ಅವನೇನು ಇತ್ತ ಮಿಶನರಿಯೂ ಅಲ್ಲ; ಅತ್ತ ವಿದ್ಯಾರ್ಥಿಯೂ ಅಲ್ಲ; ಹೀಗಾಗಿ ತನ್ನ ಸಂಭಾಷಣೆಯಲ್ಲಿ ಈ ಕೊಟ್ಟು-ಪಡೆಯುವ ಪದ್ಧತಿಯನ್ನಿಟ್ಟುಕೊಂಡು ಬಳ್ಳೆ ಸುಖವಾಗಿದ್ದನು. ಜಗತ್ತೆಂದರೆ ಒಬ್ಬರನ್ನೊಬ್ಬರು ತಿಳಿದುಕೊಳ್ಳಲು ಹವಣಿಸುವ ಜನರಿಂದ ತುಂಬಿದ ಗೋಲವೆಂದೂ ಈ ತಿಳಿವಳಿಕೆಯನ್ನು ಅವರು ತಮ್ಮ ಸಂಸ್ಕೃತಿ, ಇಚ್ಛಾ ಬಲದಿಂದಲೇ ಪಡೆಯಬಹುದೆಂದೂ ಅವನ ನಂಬಿಕೆ. ಅವನ ಈ ನಂಬಿಕೆಯ ತತ್ವವೇ ಚಂದ್ರಪುರಕ್ಕೆ ಬರ್ಷಣವಾಗಿತ್ತು. ಫೀಲ್ಡಿಂಗನು ಇತ್ತೀಚೆ ಅಲ್ಲಿಗೆ ಬಂದುದರಿಂದ ತನ್ನ ನಂಬಿಕೆಯಲ್ಲಿ ನಿರಾಶಿತನಾಗಿದ್ದಿಲ್ಲ. ಸ್ವತಃ ಅವನಲ್ಲಿ ವರ್ಣಭೇದ ಭಾವನೆಯು ಇದ್ದಿಲ್ಲ. ಹೀಗಿದ್ದುದರಿಂದ ಅವನೇನು ಉಳಿದ ಮುಲ್ಕಿ ಅಧಿಕಾರಿಗಳಿಗಿಂತ ಹೆಚ್ಚಿನವನೆಂದಲ್ಲ; ಆದರೆ ಅವನು ಸಾಂಘಿಕ ಸಹಜಬುದ್ಧಿಯು ಬೆಳೆಯಲಿಕ್ಕೆ ಅನುಕೂಲವಾದ ವಾತಾವರಣದಲ್ಲಿಯೆ ಬೆಳೆದಿದ್ದನು. ಇವನೊಮ್ಮೆ ಕ್ಲಬ್ಬಿನಲ್ಲಿ ಆಡಿದ ಒಂದು ಮಾತು ಇವನಿಗೆ ಬಹಳ ಕೆಡಕು ಮಾಡಿತು. ಅದೂ ಕೂಡ ಸುಮ್ಮನೆ ಹರಟೆಯಲ್ಲಿ ಆಡಿದ ಹುಚ್ಚು ಮಾತು: 'ಈ ಬಿಳಿ ವರ್ಣದವರೆನ್ನುವವರೆಲ್ಲ ಒಮ್ಮೆ ಸ್ವಲ್ಪ ಕೆಂಪು ಕಚ್ಚಿದ ಬೂದಿ ಬಣ್ಣದವರೇ.' ಇದೇ ಆ ಮಾತು. ಸುಮ್ಮನೆ ವಿನೋದಕ್ಕಾಗಿ ಮಾತಾಡಿದ್ದು. 'ದೇವರು ನಮ್ಮ ಈ ಅರಸನನ್ನು ಕಾಯಲಿ' ಎನ್ನುವುದು ದೇವರಿಗೆ ಹೇಗೆ ಸಂಬಂಧವಿಲ್ಲವೋ ಹಾಗೆ ಬಿಳಿ ವರ್ಣವು ಬಣ್ಣಕ್ಕೆ ಸ್ವಲ್ಪ ಮಾತ್ರವೂ ಸಂಬಂಧಪಟ್ಟದ್ದಲ್ಲವೆಂದು ಅವನಿಗೇನು ಗೊತ್ತು? ಅಲ್ಲದೆ ಅದರ ಅರ್ಥವನ್ನು ಊಹಿಸುವುದಂತೂ ತೀರ ಅಯೋಗ್ಯವೆಂಬದನ್ನೂ ಅವನರಿಯನು. ಅವನು ಚೇಷ್ಟೆಯಿಂದ ಕರೆದ ಆ ಕೆಂಪು ಕಚ್ಚಿದ ಬೂದಿ ಬಣ್ಣದ

ಗಂಡಸಿಗೆ ಮುಸುಕಿನಲ್ಲಿಯೆ ಮುಚ್ಚಿಯು ಪೆಟ್ಟು ಬಿದ್ದಂತಾಯಿತು. ಆಗ ಅವನಲ್ಲಿ ತನ್ನ ಸುರಕ್ಷತೆ ಅಳಿದುಹೋದ ಭಾವನೆಯೂ ಜಾಗೃತವಾಯಿತು. ಅವನದನ್ನು ತನ್ನ ಗುಂಪಿನ ಉಳಿದವರಿಗೂ ತಿಳಿಸಿದನು.

ಆದರೂ ಫೀಲ್ಡಿಂಗನ ಸರಳ ಹೃದಯದ ಕಡೆಗೂ ಸದೃಢ ದೇಹದ ಕಡೆಗೂ ಲಕ್ಷ್ಯಕೊಟ್ಟು ಗಂಡಸರೆಲ್ಲರು ಅವನನ್ನು ಹೇಗೊ ತಾಳಿಕೊಂಡರು. ಆದರೆ ಅವರ ಹೆಂಡಂದಿರು ಮಾತ್ರ ಅವನು ನಿಜವಾದ ಸಾಹೇಬನೇ ಅಲ್ಲ ವೆಂದು ನಿರ್ಣಯಿಸಿದರು. ಅವರು ಅವನನ್ನು ನೋಡಿ ಜಿಗುಪ್ಸೆಪಟ್ಟು-ಕೊಳ್ಳುತ್ತಿದ್ದರು. ಫೀಲ್ಡಿಂಗನೂ ಅವರ ಕಡೆಗೆ ಕಣ್ಣುಹಾಕಲಿಲ್ಲ. ಹೀಗಿರು ವುದು ಹೆಣ್ಣಿಗೇ ಮರ್ಯಾದೆಯಿದ್ದ ಇಂಗ್ಲಂಡದಲ್ಲಿಯಾಗಿದ್ದರೆ ಯಾರ ಲಕ್ಷ್ಯಕ್ಕೂ ಬಾರದೆ ಸಾಗಬಹುದಾಗಿತ್ತು. ಆದರೆ ಇಲ್ಲಿ—ಈ ದೇಶದಲ್ಲಿ—ಅವರ ಸಮಾಜಕ್ಕೆ ಗಂಡಸರೇ ಜೀವದಂತಿದ್ದು ಸಹಾಯಕರಾಗಿದ್ದುದರಿಂದ ಅವನಿಗೆ ಬಹಳ ಹಿಡಿತಡಿಯಾಯಿತು. ಫೀಲ್ಡಿಂಗನು ಅವರ ಉಳಿದ ಗಂಡಸ ರಂತೆ ನಾಯಿಯ ಅಥವಾ ಕುದುರೆಯ ವಿಷಯದಲ್ಲಿ ತನ್ನ ಅಭಿಪ್ರಾಯವನ್ನು ಕೊಡುತ್ತಿರಲಿಲ್ಲ; ಮಧ್ಯಾಹ್ನದಲ್ಲಿ ಯಾರ ಮನೆಗೂ ಹೋಗುತ್ತಿರಲಿಲ್ಲ; ಕ್ರಿಸ್‌ಮಸ್ ಹಬ್ಬದಲ್ಲಿ ಹುಡುಗರ ಸಲುವಾಗಿ ಗಿಡಗಳನ್ನು ಸಿಂಗರಿಸುತ್ತಿ ದ್ದಿಲ್ಲ; ಕ್ಲಬ್ಬಿಗೆ ಹೋದರೂ ಟೇನಿಸ್ ಅಥವಾ ಬಿಲಿಯಾರ್ಡ್ ಆಡುವ ಮಟ್ಟಿಗೆ ಮಾತ್ರ; ಇನ್ನೂ ಒಂದು ಮಾತೆಂದರೆ ಒಬ್ಬನು ಇಂಗ್ಲಿಷ ಗಂಡಸ ರೊಡನೆಯೂ ಹಿಂದೀ ಜನರೊಡನೆಯೂ ಕೂಡಿಯೆ ಸ್ನೇಹಸಂಬಂಧ ಬೆಳೆಸ ಬಹುದಾದರೂ ಇಂಗ್ಲೀಷ ಸ್ತ್ರೀಯರೊಡನೆ ಸಂಬಂಧ ಬೆಳೆಸಿದವರು ಮಾತ್ರ ಹಿಂದೀ ಜನರ ಸಂಬಂಧವನ್ನು ಕಡಿದುಕೊಳ್ಳಲೇಬೆಕಾಗುವುದು. ಇವರಿಬ್ಬರೂ ಎಂದೂ ಕೂಡುವುದಿಲ್ಲ. ಅದಕ್ಕೆ ಇಬ್ಬರಲ್ಲಿಯೂ ಯಾರಿಗೂ ದೋಷ ಕೊಡುವಂತಿಲ್ಲ; ಒಬ್ಬರೊಬ್ಬರನ್ನು ಹೀಗೆ ಸೇರದಿರುವುದಕ್ಕೆ ದೋಷ ಕೊಡುವುದೂ ಸರಿಯಲ್ಲ. ಇದು ಹೀಗೆಯೇ ಇರಬೇಕಾದದ್ದು; ಇದೆ. ಬೇಕಾದವರು ತಮಗೆ ಇದರಲ್ಲಿ ಬೇಕಾದದ್ದನ್ನು ಆರಿಸಬೇಕು ಅಷ್ಟೆ. ಬಹು ತರ ಇಲ್ಲಿಗೆ ಬಂದ ಅನೇಕ ಇಂಗ್ಲಿಷ ಗಂಡಸರು ತಮ್ಮ ಹೆಂಗಸರನ್ನೇ ಆರಿಸಿ ಕೊಂಡದ್ದರಿಂದ ಹಿಂದೀ ಜನರನ್ನು ಬಿಡಬೇಕಾಯಿತೆಂಬುದು ಫೀಲ್ಡಿಂ ಗನು ಹುಡುಕಿ ತೆಗೆದ ಗುಟ್ಟು. ಅಲ್ಲದೆ ಆ ದೇಶದ ಹೆಣ್ಣುಮಕ್ಕಳೂ ವರ್ಷ

ವರ್ಷಕ್ಕೆ ಹೆಚ್ಚು ಹೆಚ್ಚಾಗಿ ಇಲ್ಲಿಗೆ ಬಂದು ತಮ್ಮ ದೇಶದಲ್ಲಿಯ ಮಾದರಿಯಂತೆಯೆ ಇಲ್ಲಿಯ ಜೀವನವೂ ಸುಖವಾಗಿ ಸಾಗುವಂತೆ ಮಾಡಿದರು. ಅಂತೇ ಫೀಲ್ಡಿಂಗನಿಗೆ ಅವರನ್ನು ಬಿಟ್ಟು ಹಿಂದೀ ಜನರೊಡನೆ ಕೂಡಿಕೊಂಡು ಇರುವುದು ಅನುಕೂಲವಾಗಿಯೂ ಪ್ರಿಯವಾಗಿಯೂ ತೋರಿತು. ಹಾಗೆ ಇರುವುದಕ್ಕಾಗಿ ಅವನು ಸಾಕಷ್ಟು ತಪ್ಪುದಂಡವನ್ನೂ ತನ್ನ ಜೀವನದಲ್ಲಿ ತೆತ್ತಬೇಕಾಯಿತು. ಸಾಮಾನ್ಯವಾಗಿ ಇಂಗ್ಲೀಷ ಸ್ತ್ರೀಯರಾರೂ ಎಂದೂ ಇವನ ಕಾಲೇಜಕ್ಕೆ ಕೆಲಸ ಬೀಳದ ಹೊರತು ಬರುತ್ತಿರಲಿಲ್ಲ. ಅವನು ಮಿಸೆಸ್ ಮೂರಳನ್ನು, ಮಿಸ್ ಕ್ವೆಸ್ಟೆಡಾಳನ್ನು ಚಹಾಕ್ಕೇನೊ ಕರೆದದ್ದು ನಿಜ; ಯಾಕೆಂದರೆ ಅವರಿನ್ನೂ ಇಲ್ಲಿಗೆ ಹೊಸದಾಗಿ ಬಂದಿದ್ದವರು; ಎಲ್ಲವನ್ನೂ ಸಮದೃಷ್ಟಿಯಿಂದ ನೋಡಬಹುದಾದವರು; ಇನ್ನೊಬ್ಬರ ಮನೆಗೆ ಹೋದಾಗ ಮನೆಯ ಯಜಮಾನನ್ನು ಬಿಟ್ಟು ಇನ್ನೊಬ್ಬರಾರಾದರೂ ತಮ್ಮನ್ನು ಮಾತಾಡಿಸಿದರೆ ಅಪಮಾನವಾಗುವಂತೆ ಅವರ ಕಡೆಗೆ ಬೆನ್ನು ತಿರುಗಿಸದವರು.

'P. W. D.'ದವರು ಸಪಾಟು ಮಾಡಿದ ಕಾಲೇಜದ ಒಂದು ಭಾಗದಲ್ಲಿಯ ಹಳೆಯ ತೋಟದ ಹಳೆಯ ಒಂದು ಬಂಗ್ಲೆಯಲ್ಲಿ ಫೀಲ್ಡಿಂಗನು ತನ್ನ ವರ್ಷದ ಬಹುಭಾಗವನ್ನೆಲ್ಲ ಕಳೆಯುತ್ತಿದ್ದನು. ಅವನು ಸ್ನಾನಮಾಡಿ ಬಟ್ಟೆ ಹಾಕಿಕೊಳ್ಳುತ್ತಿದ್ದಾಗ ಡಾ. ಅಝೀಜನು ಬಂದಿದ್ದಾನೆಂದು ತಿಳಿಸಿದರು. ಕೋಣೆಯೊಳಗಿಂದಲೇ ಅವನು ದೊಡ್ಡ ದನಿಯಲ್ಲಿ "ಬನ್ನಿ, ದಯವಿಟ್ಟು ಸಂಕೋಚಮಾಡಿಕೊಳ್ಳಬೇಡಿರಿ" ಎಂದು ಹೇಳಿದನು. ಅವನ ಎಲ್ಲ ಕೆಲಸಗಳಂತೆ ಈ ಮಾತೂ ಮುಂಗಡ ಆಲೋಚಿಸಿ ಬಂದದ್ದಲ್ಲ; ಆ ಹೊತ್ತಿಗೆ ಅನಿಸಿದ್ದನ್ನು ಅನಿಸಿದಂತೆ ನುಡಿದನು.

ಅಝೀಜನಿಗೆ ಈ ಮಾತಿನಿಂದ ಎಷ್ಟೋ ಧೈರ್ಯ ಬಂತು. ಅವನು 'ಸಂಕೋಚ ಬೇಡವೇ! ಆಗಲಿ, ಹೀಗನ್ನುವುದೇ ಬಹಳ ಒಳ್ಳೆಯದು; ಈ ಉಪಚಾರವೆಂದರೆ ನನಗೆ ತಲೆಶೂಲಿ!' ಎಂದು ಮಾರುತ್ತರ ಕೊಟ್ಟನು. ಅವನ ಹೃದಯವು ಉಲ್ಲಸಿತವಾಯಿತು. ಆ ಕೋಣೆಯ ಸುತ್ತಲೂ ನೋಡಿದನು. ಸ್ವಲ್ಪ ಶ್ರೀಮಂತಿಕೆಯ ಸಾಮಾನುಗಳೇನೊ ಅಲ್ಲಿ ಅವನ ಕಣ್ಣಿಗೆ ಬಿದ್ದವು; ಆದರೆ ವ್ಯವಸ್ಥೆಯಿದ್ದಿಲ್ಲ. ಈ ಹಿಂದೀ ಜನರನ್ನು ಗಾಬರಿಗೊಳಿಸುವಂಥದು ಯಾವುದೂ ಅಲ್ಲಿದ್ದಿಲ್ಲ. ಒಳ್ಳೆ ಸುಂದರವಾದ ಕೋಣೆ; ಆ

ಕೋಣೆಯ ಮೂರು ಕಟ್ಟಿಗೆಯ ಕಮಾನುಗಳೊಳಗಿಂದ ಹಾಯ್ದು ತೋಟಕ್ಕೆ ಹೋಗಲಿಕ್ಕೆ ಒಂದು ದ್ವಾರವಿತ್ತು. “ ನಿಮ್ಮನ್ನು ಕಾಣಬೇಕೆಂದು ಬಹಳ ದಿವಸಗಳಿಂದಿತ್ತು. ನವಾಬ ಬಹದ್ದೂರರಿಂದ ನಿಮ್ಮ ಬಗ್ಗೆ ಎಲ್ಲವನ್ನೂ ಕೇಳಿದ್ದೇನೆ. ಆದರೆ ಈ ಚಂದ್ರಪುರದ ದರಿದ್ರ ಹೊದರಿನಲ್ಲಿ ಒಬ್ಬರಿಗೊಬ್ಬರು ಭೆಟ್ಟಿಯಾಗುವದಾದರೂ ಎಲ್ಲಿ? ” ಎಂದು ಅಝೀಜನು ಸುರುವು ಮಾಡಿ ಬಾಗಿಲದ ಸಮೀಪಕ್ಕೆ ಬಂದು “ ಆದೇ ಹೊಸತಾಗಿ ನೀವು ಬಂದಾಗ ನೀವು ಪೋನೆ ಪೀಳಬೇಕೆಂದು ನಾನು ಬಯಸಿದ್ದೆನು. ಅಂದರೆ ಅದರಿಂದಾದರೂ ನಮ್ಮಿಬ್ಬರ ಭೆಟ್ಟಿಯಾಗುವದೆಂಬ ಆಶೆಯಿತ್ತು, ” ಎಂದು ಮಾತಿಗೆ ಕವಲೊಡಿಸಿದನು. ಇಬ್ಬರೂ ನಕ್ಕರು. ಇದನ್ನು ನೋಡಿಕೊಂಡು ಅಝೀಜನು ಮತ್ತಿಷ್ಟು ಹುರುಪಿಗೆದ್ದು ಹಿಂದು ಮುಂದಿನ ವಿಚಾರವಿಲ್ಲದೇ ಆಗಿಂದಾಗ ಕೈಗಂಟು ಹಾಕಿ “ ಫೀಲ್ಡಿಂಗನು ಈ ಹೊತ್ತು ಮುಂಜಾನೆ ಹೇಗೆ ಕಾಣಬಹುದು? ನಿಸ್ತೇಜವಾಗಿ ಕಾಣಬಹುದು; ನಮ್ಮ ಸಿವ್ಹಿಲ್ ಸರ್ಜನ್ನರೂ ನಿಸ್ತೇಜರಾಗಿರಬಹುದು. ಅವರಿಗೆ ನಡುಗು ಹಿಡಿಯಿತೆಂದರೆ ನೋಡುವುದೇ ಆಗುವುದಿಲ್ಲ; ಆಗ ಅವರ ಸ್ಥಳದಲ್ಲಿ ನನ್ನನ್ನು ಕರೆಯುವರು. ಆ ಮೇಲೆ ನಾವು ಇಬ್ಬರೂ ಉಲ್ಹಾಸದಿಂದ ಮಾತನಾಡಬಹುದು; ಯಾಕಂದರೆ ನೀವು ಪರ್ಸಿಯನ್ ಕಾವ್ಯವನ್ನು ಚೆನ್ನಾಗಿ ಅಭ್ಯಾಸ ಮಾಡಿದ್ದೀರಿ ಎಂದು ನಾನು ಏನೇನೋ ನೆನಿಸಿಕೊಂಡೆ. ” ಎಂದು ತನ್ನ ಮಾತು ಉದುರಿಸಹತ್ತಿದನು.

“ ಹಾಗಾದರೆ ನೀವು ನನ್ನನ್ನು ನೋಡಿದ್ದೀರೇನು? ”

“ ನಿಶ್ಚಯವಾಗಿ. ನೀವೂ ನನ್ನನ್ನು ನೋಡಿದ್ದೀರಾ? ”

“ ನಿಮ್ಮ ಹೆಸರು ಮಾತ್ರ ಚೆನ್ನಾಗಿ ಗೊತ್ತಿದೆ. ”

“ ನಾನಿಲ್ಲಿಗೆ ಬಂದು ತೀರ ಸ್ವಲ್ಪ ದಿವಸಗಳಾದವು. ಅಲ್ಲದೆ ಯಾವಾಗಲೂ ಭರಬಾಜಾರದಲ್ಲಿರುವವನು. ನೀವು ನನ್ನನ್ನು ನೋಡದೆ ಇದ್ದುದು ಆಶ್ಚರ್ಯವೇನೂ ಅಲ್ಲ. ಆದರೆ ನಿಮಗೆ ನನ್ನ ಹೆಸರು ತಿಳಿದದ್ದು ಮಾತ್ರ ಆಶ್ಚರ್ಯವೇ ! ಇದು ನೋಡಿರಿ ಮಿ. ಫೀಲ್ಡಿಂಗ ? '

‘ ಏನು? ’

‘ ನೀವು ಒಳಗಿದ್ದೇ ನಾನು ಹೇಗಿದ್ದೇನೆಂದು ಹೇಳುತ್ತೀರಾ ? ಇದು ಒಂದು ತರಹದ ಆಟ. ’

'ನೀವು ಐದು ಫೂಟು ಒಂಬತ್ತು ಇಂಚು ಎತ್ತರ ಇರುವಿರಿ.' ಎಂದು ಫೀಲ್ಡಿಂಗನು ಒಮ್ಮೆಲೆ ಹೇಳಿದನು. ಇದನ್ನು ಅವನು ಹುರಬರಕು ಗಾಜಿನಲ್ಲಿ ನೋಡಿ ಊಹಿಸಿದ್ದನು.

'ಹಂ! ವಾಹವ್ವಾ! ಮುಂದೆ? ನನಗೆ ಬಿಳಿಗಡ್ಡಗಳಿವೆಯಲ್ಲವೆ?

'ಥೂ! ಹಾಳಾಗಾ! ....'

'ಏನು? ಏನಾದರೂ ತಪ್ಪಿತೇ?'

'ಇಲ್ಲ, ನನ್ನ ಕಾಲರ ಗುಂಡಿಯನ್ನು ತುಳಿದುಬಿಟ್ಟೆ.'

'ಇಕಾ ನನ್ನದು ತಕ್ಕೊಳ್ಳಿ.'

'ನಿಮ್ಮ ಹತ್ತಿರ ಹೆಚ್ಚಿಗೆ ಇದೆಯೋ?'

'ಹೌದು, ಹೌದು. ಒಂದು ನಿಮಿಷ, ಕೊಟ್ಟೆ.'

'ನೀವು ಹಾಕಿಕೊಂಡದ್ದು ಇದ್ದರೆ ಬೇಡ.'

'ಅಲ್ಲ, ಅಲ್ಲ. ನನ್ನ ಜೇಬಿನಲ್ಲಿ ಒಂದಿದೆ.' ಎಂದು ತನ್ನ ನೆಳಲು ಅವನಿಗೆ ಕಾಣದಂತೆ ಮಗ್ಗುಲಿಗೆ ಸರಿದು ತನ್ನ ಕಾಲರನ್ನು ಕಿತ್ತಿ ತೆಗೆದು ಶರ್ಟಿನೊಳಗಿಂದ ಹಿಂದಿನ ಗುಂಡಿಯನ್ನು–ತನ್ನ ಬೀಗನು ಯುರೋಪದಿಂದ ತಂದ ಒಂದು ಸೆಟ್ಟಿನ ಪೈಕಿಯದು, ಅದೂ ಬಂಗಾರದ್ದು–ಕಡೆಗೆ ತೆಗೆದು 'ಇಗೋ ಇಲ್ಲಿ ಇದೆ.' ಎಂದು ಕೂಗಿದನು.

'ಈ ಉಪಚಾರಗಳನ್ನು ನೀವು ಲಕ್ಷ್ಯಕ್ಕೆ ತರದಿದ್ದರೆ, ನೀವೇ ಅದನ್ನು ತೆಗೆದುಕೊಂಡು ಒಳಕ್ಕೆ ಬನ್ನಿ.'

'ಇನ್ನೊಂದು ನಿಮಿಷ;' ಎಂದು ತನ್ನ ಕಾಲರನ್ನು ಸರಿಪಡಿಸಿಕೊಂಡು, ಚಹಾ ಕುಡಿಯುವಾಗ ಅದು ಹಿಂದೆ ಜಿಗಿಯಬಾರದೆಂದು ದೇವರಿಗೆ ಪ್ರಾರ್ಥಿಸಿದನು. ಇಷ್ಟರಲ್ಲಿಗೆ ಫೀಲ್ಡಿಂಗನಿಗೆ ಬಟ್ಟೆ ಹಾಕಿಕೊಳ್ಳಲಿಕ್ಕೆ ಸಹಾಯ ಮಾಡುತ್ತಿದ್ದ ಚಾಕರನು ಬಂದು ಬಾಗಿಲು ತೆರೆದನು.

'ಬಹಳ ಉಪಕಾರವಾಯಿತು.' ಎಂದು ಕಿರುನಗೆ ನಗುತ್ತ ಅವರಿಬ್ಬರೂ ಕೈಗಳನ್ನು ಕುಲುಕಿದರು. ತನ್ನೊಬ್ಬ ಹಳೇ ಗೆಳೆಯನ ಕೂಡ ನಡೆದುಕೊಳ್ಳುವಂತೆ ಸಲುಗೆಯಿಂದ ಅಝೀಜನು ಸುತ್ತಲೂ ನೋಡಹತ್ತಿದನು. ಇಷ್ಟು ಬೇಗನೆ ತಮ್ಮಿಬ್ಬರ ನಡುವೆ ಪರಿಚಯ ಬೆಳೆದದ್ದನ್ನು ನೋಡಿ ಫೀಲ್ಡಿಂಗನಿಗೆ ಆಶ್ಚರ್ಯವಾಗಲಿಲ್ಲ. ಇಂಥ ಭಾವಪರವಶರು ಆದರೆ ಕೂಡಲೆ

ಪರಿಚಿತರಾಗುವರು, ಇಲ್ಲದಿದ್ದರೆ ಎಂದೂ ಆಗುವದಿಲ್ಲೆಂಬದು ಅವನಿಗೆ ಮೊದಲಿಗೇ ಗೊತ್ತಿತ್ತು. ಅವರಿಬ್ಬರಿಗೂ ತಮ್ಮ ಪರಸ್ಪರ ಗುಣಗಳನ್ನು ಮೊದಲೇ ಕೇಳಿ ಬಿಟ್ಟದ್ದರಿಂದ, ಗೆಳೆತನದ ಪೂರ್ವರಂಗವಾದ ಪರಿಚಯ ವಿಧಾನವನ್ನು ಬಿಟ್ಟುಬಿಡಲು ಶಕ್ಯವಾಯಿತು.

' ಆದರೆ ಇಂಗ್ಲೀಷರು ತಮ್ಮ ಕೋಣೆಗಳನ್ನು ಎಷ್ಟೆಂದರೆ ಅಷ್ಟು ಟಾಪು ಟೀಪು ಇಡುತ್ತಾರೆಂದು ನನ್ನ ತಿಳಿವಳಿಕೆಯಾಗಿತ್ತು. ಅದು ತಪ್ಪೆಂದು ಈಗ ಅನಿಸುತ್ತಿದೆ. ಅದಕ್ಕೆ ನಾನೇನು ಅಷ್ಟು ನಾಚುವ ಕಾರಣವಿಲ್ಲ.' ಎಂದು ಅಝೀಜನು ನಗನಗುತ್ತ ಅವನ ಹಾಸಿಗೆಯ ಮೇಲೆಯೇ ಹೋಗಿ ಕುಳಿತನು. ಅಲ್ಲಿಂದ ಸಂಪೂರ್ಣವಾಗಿ ಮೈಮುರಿತು ಎರಡೂ ಕಾಲುಗಳನ್ನು ಮೇಲಕ್ಕೆ ತೆಗೆದುಕೊಂಡನು. ' ಎಲ್ಲವೂ ನಿರ್ದಾಕ್ಷಿಣ್ಯವಾಗಿ ಸೆಲ್ಫುಗಳ ಮೇಲೇ ಸಾಲು ಸಾಲಾಗಿ ಇಡಲ್ಪಟ್ಟಿರುತ್ತಿವೆಯೆಂದು ನನ್ನ ಕಲ್ಪನೆ. . ಇದು ನೋಡಿ ಮಿ. ಫೀಲ್ಡಿಂಗರೆ! ಆ ಗುಂಡಿಯು ತೂತಿನಲ್ಲಿ ಹಿಡಿಸುತ್ತದೆಯೇ? '

' ನನಗೂ. . ಸಂಶಯು. . ' ಎಂದು ಗೊಣಗುಟ್ಟಿದನು.

'ಏನು? ಏನು? ಆ ನಿಮ್ಮ ಕಡೆಯ ವಾಕ್ಯವೇನು? ನೀವು ನನಗೆ ಕೆಲವು ಹೊಸ ಶಬ್ದಗಳನ್ನು ಕಲಿಸಿ ನನ್ನ ಇಂಗ್ಲೀಷನ್ನು ಸುಧಾರಿಸುವಿರಾ?'

ಫೀಲ್ಡಿಂಗನು ಅವನ ಈಗ ಒಂದು ಕ್ಷಣದ ಹಿಂದೆ ಇಂಗ್ಲೀಷಿನಲ್ಲಿ ಮಾತನಾಡಿದ ' ಎಲ್ಲವೂ ನಿರ್ದಾಕ್ಷಿಣ್ಯವಾಗಿ ಸೆಲ್ಫುಗಳ. .' ಎಂಬ ವಾಕ್ಯವನ್ನೇ ಮೊದಲು ಇಂಗ್ಲೀಷಿನಲ್ಲಿ ಸುಧಾರಿಸಲು ಬರುತ್ತದೋ ಇಲ್ಲವೋ ಎಂದು ಅನುಮಾನಿಸಿದನು. ಈ ತರುಣ ಪೀಳಿಗೆಯು ಯಾವ ಪರಿವೆಯೂ ಇಲ್ಲದೆ ಹೇಗೆ ಪರಭಾಷೆಯನ್ನು ಉಪಯೋಗಿಸುತ್ತದೆಂಬದನ್ನು ನೋಡಿ ಅವನು ಅಚ್ಚರಿಗೊಂಡನು. ಇವರು ಬಹಳಾದರೆ ನಮ್ಮ ಇಂಗ್ಲೀಷಿನ ವಾಕ್ಯಸಂಪ್ರದಾಯವನ್ನು ಬದಲು ಮಾಡಿದರೂ ತಮಗೆ ಹೇಳಬೇಕಾದುದನ್ನೆಲ್ಲ ತಪ್ಪಿರಲಿ, ಒಪ್ಪಿರಲಿ–ಚಟ್ಟನೆ ಹೇಳಿಬಿಡುತ್ತಾರೆ. ನಮ್ಮ ಆಇಂಗ್ಲೀಷಿನ ಕ್ಲಬ್ಬು ಇವರ ಹಣೆಗೆ ಅಂಟಿಸುವ ' ಬಾಬೂ ಇಂಗ್ಲೀಷ ' ನ ದೋಷಗಳು ಇವರಲ್ಲಿ ಯಾರಲ್ಲಿಯೂ ಕಂಡುಬರಲಿಲ್ಲ. ಆದರೆ ಆ ಕ್ಲಬ್ಬು ಮಾತ್ರ ಇನ್ನೂ ಮಂದಗಾಮಿಯಾಗಿತ್ತು; ಅದು ಮುಹಮ್ಮದೀಯರಾಗಲಿ, ಹಿಂದುಗಳಾಗಲಿ ಯಾರೂ ಇಂಗ್ಲೀಷರೊಡನೆ ಮೇಜಿನ ಮೇಲೆ ಊಟ

ಮಾಡರೆಂದೂ ಎಲ್ಲ ಹಿಂದೀ ಸ್ತ್ರೀಯರು ಅಭೇದ್ಯವಾದ ಘೋಷಾದಲ್ಲಿರುವ ರೆಂದೂ ಸಾರುತ್ತಿತ್ತು; ಆದರೆ ತಾನು ಮಾತ್ರ ತನ್ನ ಅಭಿಪ್ರಾಯವನ್ನು ಬದಲಾಯಿಸಲಿಕ್ಕೆ ಒಪ್ಪುತ್ತಿರಲಿಲ್ಲ.

'ಓ! ನಿಲ್ಲಿರಿ, ನಾನೇ ನಿಮಗೆ ಆ ಗುಂಡಿಯನ್ನು ಹಾಕುತ್ತೇನೆ.... ಓಹೋ! ಶರ್ಟಿನ ಹಿಂದಿನ ತೂತು ಸ್ವಲ್ಪ ಸಣ್ಣದಿದೆ....ಪಾಪ! ಅದನ್ನು ದೊಡ್ಡದು ಮಾಡಿದರೆ....ಗೈರು.'

'ಸುಟ್ಟಿತು! ಯಾಕಾದರೂ ಈ ಕಾಲರು ಹಾಕಿಕೊಳ್ಳಬೇಕೋ?' ಎಂದು ಫೀಲ್ಡಿಂಗನು ತನ್ನ ಕುತ್ತಿಗೆಯನ್ನು ಮಣಿಸುತ್ತ ಗೊಣಗುಟ್ಟಿದನು.

'ನಾವಾದರೂ ಇವನ್ನೆಲ್ಲ ಧರಿಸುವುದು ಯಾತಕ್ಕೆ, ನಿಮಗೆ ಗೊತ್ತೇ? ಪೋಲೀಸರಿಂದ ಪಾರಾಗಲಿಕ್ಕೆ.'

'ಅದೇನು?'

'ನಾನು ಇಂಗ್ಲೀಷ್ ಡ್ರೆಸ್ಸು-ಸ್ಟಾರ್ಚ ಕಾಲರ, ಹ್ಯಾಟು, ಬೂಟು, ಸೂಟು-ಹಾಕಿಕೊಂಡು ಸೈಕಲ್ಲ ಮೇಲೆ ಹೋಗುತ್ತಿದ್ದರೆ ಆ ಪೋಲೀಸ ರಾರೂ ನನ್ನನ್ನು ಮಾತನಾಡಿಸುವದಿಲ್ಲ. ಆದರೆ ಅದೇ ನಾನು ಫೆಜ್ ಟೊಪ್ಪಿ ಗೆಯನ್ನು ಹಾಕಿ ಇಜಾರ ತೊಟ್ಟಿದ್ದರೆ ತೀರಿತು, 'ನಿನ್ನ ದೀಪ ಎಲ್ಲಿದೆ? ನೀನು ತಪ್ಪು ಹಾದಿಯಿಂದ ಬರುತ್ತಿದ್ದಿ.' ಎಂದು ಮುಂತಾಗಿ ಕಿರುಕುಳ ಕೊಡುತ್ತಾರೆ. ಲಾರ್ಡ ಕರ್ಝನ್ನರು 'ಈ ಹಿಂದೀ ಜನರು ತಮ್ಮ ಚಿತ್ರ ವಿಚಿತ್ರ ವೇಷವನ್ನೇ ಇಟ್ಟುಕೊಳ್ಳಬೇಕೆಂದು ಒತ್ತಾಯ ಪಡಿಸಿದಾಗ ಅವರು ಇದನ್ನು ವಿಚಾರ ಮಾಡಲಿಲ್ಲವೆಂದು ತೋರುತ್ತದೆ....ಬಪ್ಪರೆ! ಗುಂಡಿ ಒಳಗೆ ಹೋಯಿತು!....ಕಣ್ಣು ಮುಚ್ಚಿದಾಗ ಒಂದೊಂದು ಸಲ ನಾನು ಆ ಮೊದಲಿನ ಭವ್ಯ ವೇಷವನ್ನು ಹಾಕಿಕೊಂಡು ಅಲಂಗೀರನ ಹಿಂದೆ ಕುದುರೆ: ಸ್ವಾರನಾಗಿ ಯುದ್ಧಕ್ಕೆ ಹೋಗುತ್ತಿರುವೆನೆಂದು ಕನಸು ಕಾಣುತ್ತೇನೆ. ಫೀಲ್ಡಿಂಗರೆ, ಮೊಗಲ ಸಾಮ್ರಾಜ್ಯವು ಒಳ್ಳೇ ಘನತೆಗೇರಿ, ಅಲಂಗೀರನು ದಿಲ್ಲಿಯಲ್ಲಿ ಮಯೂರಾಸನದ ಮೇಲೆ ಕುಳಿತು ಆಳುತ್ತಿರುವಾಗ ಈ ಹಿಂದು ಸ್ಥಾನವು ಚೆಂದ ಕಾಣಿಸುತ್ತಿರಲಿಕ್ಕಿಲ್ಲವೇ?' ಎಂದು ಅಝೀಜನು ತನ್ನ ಅಸಂಬದ್ಧ ಪ್ರಲಾಪ ಬೆಳೆಸಿದನು.

'ಇಬ್ಬರು ಸ್ತ್ರೀಯರು ನಿಮ್ಮ ಭೆಟ್ಟಿಯ ಸಲುವಾಗಿ ಇಲ್ಲಿಗೆ ಚಹಕ್ಕೆ

ಬರುವವರಿದ್ದಾರೆ. ನಿಮಗೆ ಅವರ ಪರಿಚಯವಿದೆಯೆಂದು ತೋರುತ್ತದೆ?' ಎಂದು ಅಝೀಜನ ಯಾವ ಮಾತಿಗೂ ಉತ್ತರಕೊಡದೆ ಹೇಳಿದನು.

'ನನಗೆ ಭೆಟ್ಟಿಯಾಗಲಿಕ್ಕೆ? ನನಗೇನು ಯಾವ ಸ್ತ್ರೀಯರ ಗುರುತೂ ಇಲ್ಲ!'

'ಮಿಸೆಸ್ ಮೂರ್ ಮತ್ತು ಮಿಸ್ ಕ್ವೆಸ್ಟೆಡ್ ಇವರ ಗುರುತಿಲ್ಲವೇ?'

'ಹಂ, ಹಂ! ಹೌದು ನನಗೀಗ ನೆನಪಾಯಿತು.' ಎಂದು ತನ್ನ ಚಿತ್ತದೊಳಗಿಂದ ಮಾಯವಾಗಿ ಹೋಗಿದ್ದ ಆ ಮಸೀದೆಯ ಅದ್ಭುತ ರಮ್ಯ ಪ್ರಸಂಗವನ್ನು ಮತ್ತೆ ನೆನಪುಮಾಡಿಕೊಂಡು 'ಆಂ! ಬಹಳ ಮುದಿಕಿಯಾದ ಹೆಂಗಸು! ಅಲ್ಲ, ಅವಳ ಸಂಗಡಿಗಳ ಹೆಸರೇನೆಂದಿರಿ? ಇನ್ನೊಮ್ಮೆ ಹೇಳಿ?' ಎಂದು ದೈನಾಸಪಟ್ಟು ಕೇಳಿದನು.

'ಮಿಸ್ ಕ್ವೆಸ್ಟೆಡ್'

'ಸರಿ, ಸರಿ. ಆಗಲಿ, ನಿಮ್ಮ ಇಚ್ಛೆ' ಎಂದನು. ಹೀಗೆ ಬೇರೆ ಅತಿಥಿಗಳು ಬರುವದನ್ನು ಕೇಳಿ ಅವನಿಗೆ ಒಂದು ಬಗೆಯ ನಿರಾಶೆಯಾಯಿತು; ಯಾಕಂದರೆ ತನ್ನ ಹೊಸ ಗೆಳೆಯನ ಕೂಡ ತಾನೊಬ್ಬನೇ ಇದ್ದು ಮಾತನಾಡಬೇಕೆಂದು ಅವನ ಆಶೆಯಿತ್ತು.

'ನೀವು ಮಿಸ್ ಕ್ವೆಸ್ಟೆಡ್‌ಳೊಡನೆ ಬೇಕಾದರೆ ಆ ನಿಮ್ಮ ಮಯೂರಾಸನದ ವಿಷಯ ಮಾತನಾಡಬಹುದು; ಯಾಕಂದರೆ ಅವಳೂ ಕಲಾಪ್ರಿಯಳು ಇದ್ದಾಳೆಂದು ಕೇಳಿದ್ದೇನೆ.'

'ಹೀಗೇನು? ಹಾಗಾದರೆ ಅವಳು ಈ ಆಧುನಿಕ ಅವಾಸ್ತವ ವರ್ಣವೈಚಿತ್ರ್ಯವಾದಿಯಿರಬಹುದಲ್ಲ?'

'ಅವಾಸ್ತವ ವರ್ಣವೈಚಿತ್ರ್ಯವಾದ! ಹೂಂ, ಇದ್ದರೂ ಇರಬಹುದು. ಅದನ್ನು ನೀವು ತೆಗೆದುಕೊಂಡೇನು ಮಾಡುತ್ತೀರಿ? ಬನ್ನಿ, ಮೊದಲು ಚಹಾ ತೆಗೆದುಕೊಳ್ಳೋಣ. ಈ ಜಗತ್ತೇ ನನಗೇಕೋ ಸಾಕಾಗಿ ಹೋಗಿದೆ!'

ಈ ಮಾತಿನಿಂದ ಅಝೀಜನಿಗೆ ಸ್ವಲ್ಪ ಅಪಮಾನವೆನಿಸಿತು. ಆಳುವ ಕುಲದ ಜನರಿಗೇ ಮೀಸಲಾಗಿಟ್ಟ ಈ ಅವಾಸ್ತವ ವರ್ಣವೈಚಿತ್ರ್ಯವಾದವನ್ನು ಎಲ್ಲಿಯೋ ಮೂಲೆಯೊಳಗಿನ ಒಬ್ಬ ಈ ಹಿಂದೀ ಮನುಷ್ಯನಿಗೆ ತಿಳಿದುಕೊಳ್ಳಲು ಯಾವ ಅಧಿಕಾರವೂ ಇಲ್ಲವೆಂದು ಅವನಾಡಿದ ಆ ಮಾತಿನಿಂದ

ಅವನಿಗೆ ಧ್ವನಿತವಾಯಿತು. ಅವನೂ ಸ್ವಲ್ಪ ಬಿಗುವಿನಿಂದಲೆ ಮಾತನಾಡಿದ. ' ಮಿಸೆಸ್ ಮೂರಳು ನನಗೆ ಪರಿಚಿತಳೆಂದು ನಾನು ಈಗಾಗಲೆ ಭಾವಿಸ ಲಾರೆ; ಯಾಕಂದರೆ ನಾನು ಅವಳನ್ನು ಕಂಡದ್ದು ಅಕಸ್ಮಾತ್ತಾಗಿ, ಮಸೀ ದೆಯಲ್ಲಿ. ' ಎಂದು ಸ್ವಲ್ಪ ಹೊತ್ತು ನಿಂತು ' ಒಮ್ಮೆಯೆ ಭೆಟ್ಟಿಯಾದೊಡನೆ ಪರಿಚಯುವಾದರೂ ಹೇಗಾದೀತು? ' ಎಂಬ ಮಾತನ್ನೂ ಜೋಡಿಸತಕ್ಕ ವನಿದ್ದನು. ಆದರೆ ಈ ವಾಕ್ಯವು ಅವನ ಮುಖದಿಂದ ಹೊರಬೀಳುವದ ರೊಳಗಾಗಿ ಫೀಲ್ಡಿಂಗನ ಒಳ್ಳೆಯತನವು ನೆನಪಿಗೆ ಬಂದು ಅವನಲ್ಲಿಯ ಆ ಆವೇಗವೆ ಕಡಿಮೆಯಾಯಿತು. ಅವನಲ್ಲಿಯ ಒಳ್ಳೆಯತನವು ಫೀಲ್ಡಿಂಗನ ಒಳ್ಳೆಯತನಕ್ಕೆ ಕೂಡಿಕೊಂಡು ಅವನ ಭಾವನಾತರಂಗಗಳ ಬುಡದಲ್ಲಿ ನೆಲೆಯಾಗಿ ನಿಂತಿತು. ಇದೇ ಸ್ನೇಹಸಮುದ್ರ ದಾಟುವವನಿಗೆ ಸುರ ಕ್ಷಿತ ಸ್ಥಳವಾಗುವದು. ಆದರೆ ಇದನ್ನೂ ದಾಟಿದ ಮೇಲೆ ಬಂಡೆಗಲ್ಲುಗಳು ಬಂದು ನಿಲ್ಲಬಹುದು. ಅಝೀಜನು ಈ ಕಲ್ಪನೆ ಬಂದೊಡನೆ ತಾನು ದಂಡೆಯ ಮೇಲಿರುವವನೆಂದು ಭಾವಿಸಿ ಸುರಕ್ಷಿತನಾಗಬೇಕೆಂದನು. ಆದರೆ ದಂಡೆಯ ಮೇಲಿರುವವನಿಗೆ ಸುರಕ್ಷಿತತೆಯುಷ್ಟೆ ಗೊತ್ತು; ಅವನು ಪ್ರತಿ ಹಡಗವೂ ಒಡೆದು ಮುಳುಗುತ್ತದೆಂದೇ ತಿಳಿಯುತ್ತಾನೆ. ಅಝೀಜನು ತಾನು ದಂಡೆಯ ಮೇಲಿದ್ದೇನೆಂದು ಭಾವಿಸಿದ್ದರೂ ಈಸುಬಿದ್ದವರ, ಹಡಗದ ಮೇಲಿದ್ದವರ ಮನೋವೃತ್ತಿಗಳು ಅವನಲ್ಲಿ ಬಂದಿದ್ದವು. ಏನಾದರೊಂದು ತಿಳಿದುಕೊ ಳ್ಳುವುದಕ್ಕಾಗಿ ಅವನು ಹೊರಗಿನ ಪರಿಸ್ಥಿತಿಯ ಮೇಲೆ ಅವಲಂಬಿಸದೆ ಹೆಚ್ಚಾಗಿ ತನ್ನ ಮನಸ್ಸಿನ ಮೇಲೆಯೆ ನಂಬಿಗೆಯಿಡುವನು. ಪ್ರತಿಯೊಂದು ಮಾತಿನಲ್ಲಿ ಅವನಿಗೆ ಒಂದು ಹೊಸ ಅರ್ಥ ಹೊಳೆಯುತ್ತಿತ್ತು; ಆದರೆ ಆ ಅರ್ಥ ಯಾವಾಗಲೂ ಸರಿಯಿದ್ದೀತೆಂದಲ್ಲ. ಅವನ ಜೀವನವು ಇಷ್ಟು ಪರಿಸ್ಫುಟ ವಾಗಿದ್ದರೂ ಬಹು ಮಟ್ಟಿಗೆ ಅದೊಂದು ಕನಸೇ ಆಗಿತ್ತು. ಹಿಂದೀಜನರು ಮೂಲೆಯೊಳಗಿನವರೆಂದು ಫೀಲ್ಡಿಂಗನ ಅರ್ಥವಿದ್ದಿಲ್ಲ. ಆದರೆ ಆಧುನಿಕ ಅವಾಸ್ತವವರ್ಣವೈಚಿತ್ರವಾದವು ಮಾತ್ರ ಮೂಲೆಯೊಳಗಿನದೆಂದು ಅವನು ತಿಳಿಯುತ್ತಿದ್ದನು. ಇವನ ಮಾತಿಗೂ ಮಿಸೆಸ್ ಟರ್ಟನ್ನಳಾಡಿದ 'ಏನು! ಅವರೂ ಇಂಗ್ಲೀಷು ಮಾತನಾಡುತ್ತಾರೆ! ' ಎಂಬ ಮಾತಿಗೂ ಎಷ್ಟೋ ಅಂತರವಿದೆ. ಆದರೆ ಅಝೀಜನು ಇವೆರಡೂ ಮಾತುಗಳು ಒಂದೇ ಎಂದು

ತಿಳಿದನು. ಇದರಿಂದಲೇ ಫೀಲ್ಡಿಂಗನಿಗೆ ಇದೆಲ್ಲಿಯೊ ತಪ್ಪಿತೆಂದು ಮೊದಲಿ ಗನಿಸಿತು. ಮುಂದೆ ತಪ್ಪಿದ್ದು ಸರಿಯಾಯಿತೆಂದೂ ಗೊತ್ತಾಯಿತು. ಆದರೆ ಫೀಲ್ಡಿಂಗನು ಒಳಕೆಚ್ಚಿನಲ್ಲಿ ಆಶಾವಾದಿಯಿದ್ದುದರಿಂದ ಇದಾವುದಕ್ಕೂ ಚಡಪಡಿಸಲಿಲ್ಲ. ಅಂತೆಯೆ ಅವರ ಮಾತುಕತೆಯು ಯಾವ ಆತಂಕವೂ ಇಲ್ಲದೆ ಮೊದಲಿನಂತೆ ಮುಂದೆ ಸಾಗಿತು.

'ಆ ಸ್ತ್ರೀಯರಲ್ಲದೆ ನನ್ನ ಸಹೋಪಾಧ್ಯಯರ ಪೈಕಿ ಒಬ್ಬರಾದ ನಾರಾಯಣ ಗೋಡಬೊಲೆ ಎಂಬವರೂ ಬರತಕ್ಕವರಿದ್ದಾರೆ. ಅಂತೇ ದಾರೀನೋಡುತ್ತಿದ್ದೇನೆ.'

ಓಹೊ! ದಕ್ಷಿಣೀ ಬ್ರಾಹ್ಮಣರಲ್ಲವೆ!'

'ಅವನೂ ನಿಮ್ಮಂತೆಯೆ ತನ್ನ ಗತವೈಭವವನ್ನು ತಿರುಗಿ ಪಡೆಯಬೇಕೆನ್ನುತ್ತಾನೆ. ಆದರೆ ಅದರಲ್ಲಿ ಆ ಹಿಂದಿನ ಅಲಂಗೀರನು ಮಾತ್ರ ಇರ ಬಾರವಂತೆ.'

'ಆ ವಿಷಯ ನಾನು ಹೇಳಬಾರದು. ಈ ದಕ್ಷಿಣೀ ಬ್ರಾಹ್ಮಣರು ಏನೆನ್ನುತ್ತಾರೆ ನಿಮಗೆ ಗೊತ್ತಿದೆಯೇ? ಹಿಂದುಸ್ತಾನವನ್ನು ಇಂಗ್ಲಂಡವು ಅವರಿಂದ ಗೆದ್ದುಕೊಂಡಿತಂತೆ—**ಅವರಿಂದ!** ಲಕ್ಷ್ಯದಲ್ಲಿಡಿರಿ, ಮೊಗಲರಿಂದಲ್ಲ!—ಇದು ಅವರ ದುಡುಕುತನದ ಲಕ್ಷಣವಲ್ಲವೇ? ಇಷ್ಟೇ ಅಲ್ಲ, ಈ ಸಂಗತಿಯು ಕ್ರಮಿಕಪುಸ್ತಕಗಳಲ್ಲಿ ಕೂಡ ಪ್ರಕಟವಾಗುವಂತೆ ಲಂಚ ಕೊಟ್ಟಾದರೂ ಅವರು ಮಾಡಿದ್ದಾರೆ! ಅವರು ಅಂಥ ಕುತಂತ್ರಿಗಳೇ ಇದ್ದಾರೆ, ಅದರಲ್ಲಿ ಸಂಶಯವಿಲ್ಲ; ಅಲ್ಲದೆ ಬೇಕಾದಷ್ಟು ಶ್ರೀಮಂತರೂ ಇದ್ದಾರೆ. ಆದರೆ ನಾನು ಕೇಳಿದ್ದರ ಮೇಲಿಂದ ಪ್ರೊ. ಗೋಡಬೊಲೆಯವರು ಮಾತ್ರ ಈ ದಕ್ಷಿಣೀಬ್ರಾಹ್ಮಣರಂತೆ ಇರಲಿಕ್ಕಿಲ್ಲ; ಬಹಳ ಸರಳ ಮನುಷ್ಯ.'

'ಅಝೀಜ, ನೀವೆಲ್ಲ ಕೂಡಿ ಚಂದ್ರಪುರದಲ್ಲಿ ಒಂದು ಕ್ಲಬ್ಬನ್ನು ಏಕೆ ನಡೆಯಿಸಬಾರದು?'

'ಒಂದಿಲ್ಲೊಂದು ದಿನ ಅದೂ ಆಗಬಹುದು....ಆಹಾ ಮಿಸೆಸ್ ಮೂರ್ ಮತ್ತು....ಆ ಇನ್ನೊಬ್ಬರ ಹೆಸರೇನು?....ಅವರು ಬರುತ್ತಿದ್ದಾರೆ.'

ಅದೊಂದು ಸಂಪ್ರದಾಯನಿರ್ಬಂಧವಿಲ್ಲದ ಸಂತೋಷಕೂಟವಾಗಿ

ತ್ತೆಂಬದೊಂದು ಸುದೈವವೇ. ಅದರಲ್ಲಿ ಆಚಾರ-ಉಪಚಾರಗಳನ್ನೆಲ್ಲ ತೆಗೆದು ಹಾಕಿದ್ದರು. ಅಂತೆಯೆ ಅಝೀಜನಿಗೆ ಇಂಗ್ಲೀಷ ಸ್ತ್ರೀಯರೊಡನೆ ಮಾತನಾಡುವದು ಸುಲಭವಾಯಿತು. ಅವರೂ ಗಂಡಸರಂತೆಯೆ ಎಂದು ತಿಳಿದುಕೊಂಡು ಮೈಳಿ ಬಿಟ್ಟು ಅವರೊಡನೆ ಮಾತನಾಡಿದನು. ಇಷ್ಟಿದ್ದರೂ ರೂಪಸೌಂದರ್ಯವು ಅವನಿಗೆ ತೊಂದರೆ ಕೊಡಬಹುದಾಗಿತ್ತು. ಆದರೆ ಮಿಸೆಸ್ ಮೂರಳು ಮುಪ್ಪಿನವಳು; ಮಿಸ್ ಕ್ವೆಸ್ಟೆಡ್‌ಳು ಒಣ ಆಡಂಬರದ ಜಂಜಾಟವಿಲ್ಲದ ಸರಳ ಹುಡುಗಿ; ಇವೆರಡೂ ಅವನನ್ನು ಕಾಯ್ದವು. ಅಡೀಲಾಳ ತೆಳ್ಳನ್ನ ಕಟ್ಟಿಗೆಯಂಥ ಶರೀರವೂ ಮತ್ತು ಅವಳ ಮುಖದ ಮೇಲಿನ ಕಂದಿ ಚುಕ್ಕಿಗಳೂ ಅಝೀಜನ ಕಣ್ಣಿಗೆ ಭಯಂಕರ ದೋಷಗಳಾಗಿ ತೋರಿದವು. ದೇವರು—ಅದು ಯಾವುದೇ ಸ್ತ್ರೀರೂಪಪರಲಿ—ಅದರ ಮೇಲೆ ಇಷ್ಟು ನಿರ್ದಯನಾಗಬಾರದೆಂದು ಅವನು ಹಳಹಳಿಸಿದನು. ಇದರ ಪರಿಣಾಮದಿಂದ ಅವಳೊಡನೆ ಅವನ ನಡತೆಯು ಪೂರ್ಣವಾಗಿ ಸರಳವಾಗಿಯೆ ಉಳಿಯಿತು.

'ಡಾ. ಅಝೀಜ, ನಾನು ನಿಮ್ಮನ್ನು ಸ್ವಲ್ಪ ಕೇಳಬೇಕಾಗಿದೆ.' ಎಂದು ಯಾವ ತರಹದ ಆತಂಕವೂ ಇಲ್ಲದೆ ಅವಳೇ ಸುರುವುಮಾಡಿದಳು. 'ನಾನು ಮಿಸೆಸ್ ಮೂರಳಿಂದ ನೀವು ಅವರಿಗೆ ಮಸೀದೆಯಲ್ಲಿ ಬಹಳ ಸಹಾಯ ಮಾಡಿದಿರೆಂದೂ ಕೇಳಿದೆ. ಹಿಂದುಸ್ಥಾನದ ವಿಷಯಕ್ಕೆ ನಾವು ಹಡಗದಿಂದಿಳಿದ ಮೂರು ವಾರಗಳಲ್ಲಿ ತಿಳಿಕೊಳ್ಳದಷ್ಟನ್ನು ನಿಮ್ಮೊಡನಿದ್ದ ಮೂರು ನಿಮಿಷಗಳಲ್ಲಿ ಅವಳು ತಿಳಿದುಕೊಂಡಳಂತೆ.'

'ಓ! ಅಂಥ ಸಣ್ಣ ಮಾತನ್ನು ಇಷ್ಟು ದೊಡ್ಡದು ಮಾಡಿ ಹೇಳಬೇಕೆ! ನನ್ನ ದೇಶದ ವಿಷಯವಾಗಿ ನಾನು ಮತ್ತಿನ್ನೇನಾದರೂ ನಿಮಗೆ ಹೇಳಬೇಕಾದದ್ದು ಇದ್ದರೆ ಹೇಳಿ, ಅವಶ್ಯವಾಗಿ ಹೇಳುತ್ತೇನೆ.'

'ಈ ಹೊತ್ತು ಮುಂಜಾನೆ ನನಗೆ ಒಂದು ವಿಷಯದಲ್ಲಿ ನಿರಾಶೆಯಾಯಿತು; ಅದೇನೋ ಈ ಹಿಂದೀ ಜನರ ಆಚಾರಕ್ಕೇ ಸಂಬಂಧಪಟ್ಟದ್ದಿರಬೇಕು. ಅದರೂ ಅದನ್ನಷ್ಟು ತಿಳಿಸಿ ಹೇಳುವಿರಾ?'

'ನಿಜವಾಗಿ ನೋಡಿದರೆ, ನಿಮ್ಮನ್ನು ನಿರಾಶೆಗೊಳಿಸುವಂತಹ ಆಚಾರವಾವುದೂ ನಮ್ಮಲ್ಲಿ ಇಲ್ಲ. ನಾವು ಸ್ವಾಭಾವಿಕವಾಗಿ ನಿಯಮ ನಿರ್ಬಂ

ಧಗಳನ್ನು ಇಟ್ಟುಕೊಳ್ಳುವ ಜನವೇ ಅಲ್ಲ.'

'ಹಾಗಾದರೆ ನಾವೇ ಏನೋ ದೊಡ್ಡ ತಪ್ಪು ಮಾಡಿರಬೇಕು. ಅದರಿಂದ ಅವರ ಮನಸ್ಸು ನೊಂದಿರಬೇಕೆಂದು ನನಗೆ ಸಂಶಯಬರುತ್ತದೆ.' ಎಂದು ಮಿಸೆಸ್ ಮೂರಳು ಹೇಳಿದಳು.

'ಅದಂತೂ ತೀರ ಅಸಂಭವ. ಆದರೂ ನನಗೆ ಆದ ಸಂಗತಿಯನ್ನಷ್ಟು ತಿಳಿಸುವಿರಾ?'

'ಹಿಂದೂ ದಂಪತಿಯೊಂದು ನಮಗೆ ಔತಣ ಕೊಟ್ಟಿತ್ತು. ಮುಂಜಾನೆ ಒಂಬತ್ತು ಗಂಟೆಗೆ ನಮಗಾಗಿ ಒಂದು ಗಾಡಿಯನ್ನು ಕಳಿಸತಕ್ಕವರಿದ್ದರು. ಆದರೆ ಕಳಿಸಲೇ ಇಲ್ಲ. ನಾವು ದಾರೀ ನೋಡಿಯೆ ನೋಡಿದೆವು. ಏನಾಯಿತೆಂಬುದು ನಮಗೆ ಕೊನೆಗೂ ತಿಳಿಯದಾಗಿದೆ.'

'ಏನೋ ತಪ್ಪು ತಿಳಿವಳಿಕೆಯಾಗಿರಬೇಕು.' ಎಂದು ಫೀಲ್ಡಿಂಗನು ಅದು ಹೆಚ್ಚು ಸ್ಪಷ್ಟ ಮಾಡುವ ಮಾತೇ ಅಲ್ಲವೆಂದು ತಿಳಿದು ನುಡಿದನು.

'ಉಂಹೂಂ. ಅದು ಹಾಗಲ್ಲ' ಎಂದು ಮಿಸ್ ಕ್ವೆಸ್ಟೆಡ್‌ಳು ಆ ಮಾತಿನ ಎಳೆಯನ್ನೇ ಮುಂದೆ ಜಗ್ಗಿದಳು. 'ನಮ್ಮನ್ನು ಬರಮಾಡಿಕೊಳ್ಳಬೇಕೆಂದು ಅವರು ಕಲಕತ್ತೆಗೆ ಹೋಗುವದನ್ನು ರದ್ದುಮಾಡಿದ್ದರು ಕೂಡ. ನಾವೇ ಏನೋ ಒಂದು ಮಹಾ ಮೂರ್ಖತನ ಮಾಡಿರಬೇಕೆಂದು ನಮ್ಮಿಬ್ಬರಿಗೂ ಖಂಡಿತವಾಗಿ ಅನಿಸುತ್ತದೆ.'

'ನಾನು ಆ ವಿಷಯದ ಬಗ್ಗೆ ತೊಂದರೆಯನ್ನೇ ತಕ್ಕೊಳ್ಳುವದಿಲ್ಲ.'

'ಮಿ. ಹೆಸ್ಲೋಪರೂ ಹೀಗೆಯೆ ಹೇಳುತ್ತಾರೆ. ಆದರೆ ತೊಂದರೆ ತಕ್ಕೊಳ್ಳದಿದ್ದರೆ ತಿಳಿದುಕೊಳ್ಳುವದಾದರೂ ಹೇಗೆ?' ಎಂದು ಮುಖ ಸ್ವಲ್ಪ ಕೆಂಪಗೆ ಮಾಡಿ ಅಡೀಲಾ ತಿವಿದು ಮಾತನಾಡಿದಳು.

ಫೀಲ್ಡಿಂಗನು ಆ ವಿಷಯವನ್ನೇ ಬದಲು ಮಾಡಬೇಕೆಂದನು. ಆದರೆ ಅಝೀಜನು ಅದೇ ಮಾತನ್ನೆ ಉಮೇದಿಯಿಂದ ಮತ್ತೆ ಮುಂದುವರಿಸಿ ಮನೆಗೆ ಬರಲು ಔತಣ ಕೊಟ್ಟು, ಕರೆಯಲು ಮರೆತ ಅಪರಾಧಿಗಳ ಹೆಸರುಗಳನ್ನು ಅರ್ಧಮರ್ಧ ಅವರಿಂದಲೇ ಕೇಳಿಕೊಂಡು, ಅವರು ಹಿಂದುಗಳೇ ಇರಬೇಕೆಂದು ನಿರ್ಧರಿಸಿ 'ಈ ಸಡಿಲು-ಹಿಂದುಗಳಿಗೆ ಸಮಾಜದ ಕಲ್ಪನೆಯೇ ಇಲ್ಲ. ನಮ್ಮ ದವಾಖಾನೆಯಲ್ಲಿಯೆ ಒಬ್ಬ ಡಾಕ್ಟರರಿರುವದರಿಂದ ನಾನು

ಅವರನ್ನು ಚೆನ್ನಾಗಿ ಬಲ್ಲೆ. ಎಂಥ ಅಳಬಳಕ ಥೀಲಾ ಮನುಷ್ಯ ಅವನು! ಹೊತ್ತಿಗೆ ಬರುವದಂತೂ ಗೊತ್ತೇ ಇಲ್ಲ ಅವನಿಗೆ! ಆಯ್ತು, ನೀವು ಅವರ ಮನೆಗೆ ಹೋಗದೆ ಇದ್ದುದೇ ಒಳಿತಾಯಿತು. ಹೋಗಿದ್ದರೆ ನಿಮಗೆ ಹಿಂದುಸ್ತಾನದ ಬಗ್ಗೆ ವಿಪರೀತ ಕಲ್ಪನೆಯೇ ಆಗಬಹುದಾಗಿತ್ತು. ಅವರಲ್ಲಿ ಸ್ವಚ್ಛತೆಯಂತೂ ಎಷ್ಟೂ ಇಲ್ಲ. ಹಂ, ಅಂತೇ ನನಗೆ ಹೀಗನಿಸುತ್ತದೆ: ಅವರು ತಮ್ಮ ಮನೆಯ ಹೊಲಸನ್ನು ತಾವೇ ನೋಡಿ ನಾಚಿಕೊಂಡು ನಿಮ್ಮನ್ನು ಕರೆಕಳುಹಿರಲಿಕ್ಕಿಲ್ಲ.' ಎಂದು ತನ್ನ ಜಂಭ ಕೊಚ್ಚಿಕೊಂಡನು.

'ಹೌದು, ಅದೂ ಒಂದು ವಿಚಾರವಿರಬಹುದು.'

'ಹೀಗೆ ಮುಚ್ಚಿಟ್ಟುಕೊಳ್ಳುವದನ್ನು ಕಂಡರೆ ನನಗೆ ಆಗದು.' ಎಂದು ಅಡೀಲಾ ಉಸುರಿದಳು.

'ನಾವು ಇಂಗ್ಲೀಷರೂ ಅದನ್ನೇ ಮಾಡುತ್ತೇವೆ!'

'ನಾನು ಅವರು ಇವರು ಎಂದು ಭೇದಮಾಡಿ ಹಾಗೆನ್ನಲಿಲ್ಲ. ಅದು ಯಾರಲ್ಲಿಯೇ ಇರಲಿ, ನನ್ನ ಮಟ್ಟಿಗೆ ಅದು ಆಗದು.' ಎಂದು ಅವಳು ತಿದ್ದಿಕೊಂಡಳು.

'ನನಗೆ ಈ ಮುಚ್ಚಿಟ್ಟುಕೊಳ್ಳುವದು ಸೇರಿದರೂ ಗೊಂದಲಗೆಡುವದು ಮಾತ್ರ ಸೇರುವದಿಲ್ಲ.' ಎಂದು ಮಿಸೆಸ್ ಮೂರಳು ತನ್ನದನ್ನೂ ಹೇಳಿದಳು.

'ಈ ಮುಚ್ಚಿಟ್ಟುಕೊಳ್ಳುವದೇ ಒಂದು ಗೊಂದಲಗೆಟ್ಟ ರೀತಿಯ ಫಲ.'

'ಮಿ. ಫೀಲ್ಡಿಂಗ, ನೀವೂ ಹೀಗೇ ತಿಳಿಯುತ್ತೀರಾ?'

'ಮತ್ತೇನು? ಈ ಗೊಂದಲಬಡಕತನಕ್ಕೆ ಮೌನದ ಆವರ್ಣ ಬಂತೆಂದರೆ ಅದೇ ಮುಚ್ಚಿಟ್ಟುಕೊಳ್ಳುವ ಗುಣ. ಆ ಮಡುವನ್ನು ಕಲಕಾಡುವದರಲ್ಲಿ ಅರ್ಥವಿಲ್ಲ. ನನಗೂ ಅಝೀಜನಿಗೂ ಹಿಂದುಸ್ತಾನವೆಂದರೆ ಕಲಕುರಾಡಿ ಎಂಬುದು ಗೊತ್ತಿದೆ.'

'ಹಿಂದುಸ್ತಾನವು....ಏನು? ಎಂಥ ಭಯಂಕರ ಕಲ್ಪನೆಯಿದು!'

'ನೀವು ನನ್ನನ್ನು ಭೆಟ್ಟಿಯಾಗಲಿಕ್ಕೆ ಬಂದರೆ ಆ ಕಲಕು ರಾಡಿ ಯಾವುದೂ ಕಾಣಲಾರದು.' ಎಂದು ಅಝೀಜನು ಸ್ವಲ್ಪ ಅಭಿಮಾನದಿಂದ ನುಡಿದನು. 'ಮಿಸೆಸ್ ಮೂರ್,..ಅಲ್ಲ, ಪ್ರತಿಯೊಬ್ಬರನ್ನೂ..ಉಹೂಂ,

ಎಲ್ಲರನ್ನೂ ಆಮಂತ್ರಿಸುತ್ತೇನೆ, ದಯಮಾಡಿಸಬೇಕು. . .' ಎಂದು ಕೇಳಿಕೊಂಡನು. ಈ ತರುಣ ಡಾಕ್ಟರನು ಬಹಳ ಪ್ರೋಕ್ತ ಮನುಷ್ಯನೆದುಂ ಇನ್ನೂ ತಿಳಿದಿದ್ದ ಮುಪ್ಪಿನ ಮೂರಳು ಅವನ ಆಮಂತ್ರಣಕ್ಕೆ ಒಪ್ಪಿಕೊಂಡಳು. ಅವಳ ಮನಸ್ಸು ಅರ್ಧ ಅಜ್ಞಾನ ಅರ್ಧ ಉದ್ವೇಗದಿಂದ ಕೂಡಿಕೊಂಡು ಸಾಹಸದ ಹೊಸ ದಾರಿಯನ್ನು ತುಳಿಯಲಿಕ್ಕೆ ಹಿಂಜರಿಯುತ್ತಿತ್ತು. ಮಿಸ್ ಕ್ವೆಸ್ಟೆಡ್‌ಳು ಕೇವಲ ಸಾಹಸಪ್ರೇಮದಿಂದ ಆ ಔತಣಕ್ಕೆ ಒಪ್ಪಿಕೊಂಡಳು. ಅವಳಿಗೂ ಅಝೀಜನು ಮನಸಿಗೆ ಬಂದಿದ್ದನು. ಇನ್ನೂ ಪರಿಚಯವು ಹೆಚ್ಚಿದಂತೆ ಅವನು ಈ ಹಿಂದುಸ್ಥಾನವನ್ನು ತನಗೆ ಬಿಚ್ಚಿಬಿಡಿಸಿ ತೋರಿಸುವನೆಂಬ ನಂಬಿಗೆ ಹುಟ್ಟಿತ್ತವಳಿಗೆ. ಅವನ ಔತಣದಿಂದ ಅವಳಿಗೆ ಸಂತೋಷವೇ ಆಯಿತು. ಕೊನೆಗೆ ಅವನ ವಿಳಾಸ ಕೇಳಿಕೊಂಡಳು.

ಮಂದಿಯು ಮನೆ ಹೊಲಸೆಂದು ಹೇಳಿದ ಅಝೀಜನಿಗೆ ತನ್ನ ಮನೆಯ ನೆನಪು ಬಂದ ಕೂಡಲೆ ಎದೆಗೆ ಗುಂಡುಬಡಿದಂತಾಯಿತು. ಬಜಾರಕ್ಕೆ ತೀರ ಸಮೀಪದಲ್ಲಿ, ಹೇಸಿಗೆ ಬರುವಂತಹ ಒಂದು ತಗ್ಗಿನಲ್ಲಿ ಅವನು ಬಂಗ್ಲೆಯೆಂದು ಹೇಳಿಕೊಳ್ಳುತ್ತಿದ್ದ ಗುಡಿಸಲು ಇತ್ತು. ಈ ಗುಡಿಸಲಲ್ಲಿ ಬಂದವರು ಕೂಡಲಿಕ್ಕೆ ಯೋಗ್ಯವಾದದ್ದೆಂದರೆ ಒಂದೇ ಒಂದು ಕೋಣೆಯಿತ್ತು; ಅದರಲ್ಲಿಯೂ ಗುಂಗಾಡಿ, ನೊರಜು ತುಂಬಿದ್ದವು. ಇದೆಲ್ಲದರ ನೆನಪಾಗಿ ' ಈಗ ನಾವು ಬೇರೆ ವಿಷಯವನ್ನು ಮಾತಾಡೋಣ ' ಎಂದು ತಪ್ಪಿಸಿಕೊಳ್ಳುವದಕ್ಕಾಗಿ ಹೇಳಿದನು. ' ನನಗೇಕೋ ಇಲ್ಲಿಯೇ ಇರಬೇಕೆನಿಸುತ್ತಿದೆ. ಈ ಚೆಂದವಾದ ಕೋಣೆಯೇನು ! ಸ್ವಲ್ಪ ಹೊತ್ತು ಈ ಮಾತು ಬಿಟ್ಟು ನಾವೆಲ್ಲರೂ ಇದರ ಸೌಂದರ್ಯವನ್ನು ಸವಿಯೋಣ. ಅಹಾ, ಆ ಕಮಾನಿನ ಕೆಳಗಿದ್ದ ಸುಳಿಗಳೆಷ್ಟು ಸೂಕ್ಷ್ಮವಾಗಿವೆ ! ಎಷ್ಟು ಸುಂದರವಾಗಿವೆ ! ಚೇಷ್ಟೆ ಅಲ್ಲ ಮತ್ತೆ ! ಮಿಸೆಸ್ ಮೂರ್, ನೀವೀಗ ಹಿಂದುಸ್ಥಾನದಲ್ಲಿದ್ದೀರಿ ? ' ಎಂದು ಆ ಕೋಣೆಯನ್ನು ನೋಡಿ ಸ್ಫೂರ್ತಿಹೊಂದಿ ಮಾತನಾಡಿದನು.

ಆ ಕೋಣೆ ಎಂದರೆ ಒಬ್ಬ ದೊಡ್ಡ ಅಧಿಕಾರಿಯ ಸಲುವಾಗಿ ಹದಿನೆಂಟನೆಯ ಶತಮಾನದಲ್ಲಿ ಕಟ್ಟಲ್ಪಟ್ಟ ದಿವಾಣಖಾನೆಯು ಅದು ಕಟ್ಟಿಗೆಯಿಂದ ಕಟ್ಟಲ್ಪಟ್ಟಿದ್ದರೂ ಅದನ್ನು ನೋಡಿ ಫೀಲ್ಡಿಂಗನಿಗೆ ಫ್ಲೋರೆನ್ಸದಲ್ಲಿಯ ' ಲೋಗಿಯಾಡಿಲಾಂಝ್ 'ದ ನೆನಪಾಯಿತು. ಎರಡೂ ಮಗ್ಗಲಿಗೆ

ಯುರೋಪಿಯನ್ ಪದ್ಧತಿಗನುಸರಿಸಿ ಸಣ್ಣಕೊರಡಿಗಳು ಹತ್ತಿಕೊಂಡಿದ್ದವು. ಮಧ್ಯದ ಹಾಲಿನ ಕಿಡಿಕಿಗಳಿಗೆ ಕಾಗದವಾಗಲಿ, ಗ್ಲಾಸಾಗಲಿ ಯಾವುದೂ ಇದ್ದಿಲ್ಲ. ಅಂತೆಯೇ ತೋಟದಲ್ಲಿಯ ಗಾಳಿಯು ಅಬಾಧಿತವಾಗಿ ಒಳಗೆ ಹರಿದಾಡುತ್ತಿತ್ತು. ಆ ಸ್ಥಳದಲ್ಲಿ ಕುಳಿತರೆ ಸಾರ್ವಜನಿಕ ಪ್ರದರ್ಶನದಲ್ಲಿ ಕುಳಿತಂತೆಯೇ ಸರಿ; ಅದೂ ಹಕ್ಕಿಗಳನ್ನು ಹೊಡೆಯಲಿಕ್ಕೆ ಕಿರುಚುತ್ತಿರುವ ತೋಟಿಗರೆದುರಿಗೆ !

ಫೀಲ್ಡಿಂಗನು ಅದರಲ್ಲಿಯ ಮಾವಿನ ಗಿಡಗಳನ್ನೆಲ್ಲ ಇನ್ನೊಬ್ಬರಿಗೆ ಗುತ್ತಿಗೆ ಕೊಟ್ಟದ್ದರಿಂದ, ಯಾವಾಗ ಯಾರು ಬಂದಾರೆಂಬ ನಿಯಮವಿಲ್ಲ ದಾಗಿ ಆ ಗುತ್ತಿಗೆಯವನ ಚಾಕರರು ಹಗಲಿರುಳು ಕಾಯುವದಕ್ಕಾಗಿ ಇವನ ಪಾವಟಿಗೆಯ ಮೇಲೆಯೆ ಕೂಡುತ್ತಿದ್ದರು. ನಿಜವಾಗಿಯೂ ರಮ್ಯ ವಾದ ಕೋಣೆಯದು. ಈ ಇಂಗ್ಲಿಷ ಮನುಷ್ಯನು ಬಂದು ಅದನ್ನೇನೂ ಕೆಡಿಸಿದ್ದಿಲ್ಲ. ಆದರೆ ಅದೇ ಅಝೀಜನಾಗಿದ್ದರೆ ತನ್ನ ಪಾಶ್ಚಾತ್ಯಪ್ರೇಮದ ಭರದಲ್ಲಿ 'ಮಾಡ್ ಗುಡ್‌ಮನ್ಸ'ನ ಚಿತ್ರಗಳನ್ನು ಎಲ್ಲ ಕಡೆಗೂ ತೂಗು ಹಾಕದೆ ಬಿಡುತ್ತಿರಲಿಲ್ಲ. ಹಾಗಾಗಿದ್ದರೂ ಆ ಕೋಣೆಯು ಯಾರದೆನ್ನುವ ದರಲ್ಲಿ ಏನೂ ಸಂಶಯ ಉಳಿಯುತ್ತಿದ್ದಿಲ್ಲ. . . . .

'ನಾನುಸ್ಥಧರ್ಮವನ್ನೇ ಮಾಡುತ್ತಿದ್ದೇನೆ. ಎಲ್ಲವನ್ನೂ ಕಳಕೊಂಡ ಒಬ್ಬ ಬಡ ವಿಧವೆ ಬರುತ್ತಾಳೆ, ಅವಳಿಗೆ ನಾನು ಐವತ್ತು ರೂಪಾಯಿಗಳನ್ನು ಕೊಡುತ್ತೇನೆ; ಇನ್ನೊಬ್ಬಳಿಗೆ ಒಂದು ನೂರು ಕೊಡುತ್ತೇನೆ. ಹೀಗೆಯೇ ಏನೇನೋ ನನ್ನ ಹುಚ್ಚು ಹಂಬಲು. .' ಎಂದು ಅಝೀಜನು ತನ್ನ ಉದಾರ ತನವನ್ನು ಹೇಳಿಕೊಂಡನು.

ಮಿಸೆಸ್ ಮೂರಳು ತನ್ನ ಮಗನಲ್ಲಿಯೂ ಕಂಡು ಬಂದ ಈ ಹೊಸ ತರದ ಹುಚ್ಚನ್ನು ನೆನೆದು ನಕ್ಕು 'ರೂಪಾಯಿಗಳೇನು ಕೊನೆಯ ವರೆಗೆ ಉಳಿಯುವದಿಲ್ಲ.' ಎಂದು ಹೇಳಿದಳು.

'ನನ್ನವು ಮಾತ್ರ ಉಳಿಯುತ್ತವೆ. ನಾನು ಕೊಟ್ಟದ್ದನ್ನು ನೋಡಿ ದೇವರು ನನಗೆ ಹೆಚ್ಚು ಕೊಡುತ್ತಾನೆ. ನವಾಬ ಬಹದ್ದೂರರಂತೆ ಯಾವಾ ಗಲೂ ಕೊಡುತ್ತಿರಬೇಕು ! ನಮ್ಮ ತಂದೆಯವರೂ ಹೀಗೆಯೇ ಇದ್ದರು. ಅಂತೇ ಅವರು ಬಡವರಾಗಿಯೇ ಸತ್ತರು.' ಎಂದು ಆ ಕೋಣೆಯನ್ನು

ತೋರಿಸಿ ಅದನ್ನು ತನ್ನ ಕಲ್ಪನೆಯಲ್ಲಿಯ ಹಳೆಯ ಕಾರಕೂನರಿಂದಲೂ ಅಧಿಕಾರಿಗಳಿಂದಲೂ ತುಂಬಿಬಿಟ್ಟನು. ಅಲ್ಲದೆ ಅವರೆಲ್ಲರನ್ನೂ ಪರೋಪಕಾರಿಗಳನ್ನಾಗಿ ಮಾಡಿದನು. ಅವರು ಹಾಗಿರಲಿಕ್ಕೆ ಕಾರಣವೆಂದರೆ ಅವರು ಬಹಳ ಹಿಂದೆ ಬಾಳಿಹೋದದ್ದೇ. 'ಈಗಿನವರಾದ ನಾವೂ ಕೊನೆಯ ವರೆಗೂ ಹೀಗೇ ಕೊಡುತ್ತ ಕೂಡುವ ಜನ; ಜಮಖಾನೆಗಳ ಬದಲು ಕುರ್ಚಿಗಳ ಮೇಲೆ ಅಷ್ಟೆ. ಮತ್ತು ಆಗಿನ ಈಗಿನ ಕಾಲಕ್ಕೆ ಅಂತರವೆಂದರೂ ಅಷ್ಟೆ; ನಾವು ಎಂದೂ ಯಾರನ್ನೂ ದಂಡಿಸಿಲ್ಲವೆಂದು ತೋರುತ್ತದೆ.' ಎಂದು ಅಝೀಜನು ಹೇಳಿಕೊಂಡನು.

ಸ್ತ್ರೀಯರೆಲ್ಲ ಒಪ್ಪಿದರು.

'ಪಾಪ! ಅಪರಾಧಿಗೆ ಒಮ್ಮೆಗೇ ಜೇಲಿಗೆ ಹಾಕದೆ ಇನ್ನೊಮ್ಮೆ ಅವಕಾಶ ಕೊಟ್ಟು ನೋಡಬೇಕು. ಜೇಲಿಗೆ ಹೋಗಿ ಬರುವದರಿಂದ ಅವನು ಮತ್ತಿಷ್ಟು ಹೀನನಾಗುತ್ತಾನೆ, ಮತ್ತು ಸಂಪೂರ್ಣ ಕೆಟ್ಟು ಹೋಗುತ್ತಾನೆ.' ಎಂದು ಹೇಳುವಾಗ ಅವನ ಮುಖವು ಬಹಳ ಕೋಮಲವಾಯಿತು. ಅವನ ಆ ಕೋಮಲತೆಯು ಆಡಳಿತವನ್ನು ದರ್ಪದಿಂದ ನಡೆಸುವುದಕ್ಕೆ ಅಸಮರ್ಥವಾಗಿತ್ತಲ್ಲದೆ, ಆ ಅಪರಾಧಿಯನ್ನು ಬಿಟ್ಟು ಬಿಟ್ಟರೆ ಅವನು ಹೋಗಿ ಆ ಬಡ ವಿಧವೆಯನ್ನೇ ಸುಲಿಯುವನೆಂಬದನ್ನು ತಿಳಿದುಕೊಳ್ಳುವದಕ್ಕೂ ಅಶಕ್ತವಾಗಿತ್ತು.

ಅವನು ತನ್ನ ಮನೆತನದ ವೈರಿಗಳನ್ನು— ಅವರು ಮನುಷ್ಯರೇ ಅಲ್ಲವೆಂದು ಅವನ ಕಲ್ಪನೆ-ಬಿಟ್ಟು ಉಳಿದೆಲ್ಲರಿಗೂ ಬಹಳ ಮೃದುವಾಗಿದ್ದನು. ಇಂಗ್ಲೀಷರಂಥ ಇಂಗ್ಲೀಷ ಜನರಿಗೆ ಸಹ ಅವನು ದಯೆಯನ್ನು ತೋರಿಸುವನು; ಆದರೆ ಆ ಮನೆತನದ ವೈರಿಗಳ ಮೇಲೆ ಮಾತ್ರ ಸೇಡು ತೀರಿಸಿಕೊಳ್ಳದೆ ಬಿಡಬಾರದೆನ್ನುವನು. ಪಾಪ! ಇಂಗ್ಲೀಷರು ಇಷ್ಟು ಬಿಗುವಿನವರೂ ಟಬರಿನವರೂ ಆಗದಿದ್ದರೆ ಅವರಿಗೆ ನಿರ್ವಾಹವಿಲ್ಲವೆಂದು ತನ್ನ ಮನದಲ್ಲಿಯೆ ಅವರ ಸಲುವಾಗಿ ಕನಿಕರಪಡುವನು. 'ನಾವು ಯಾರನ್ನೂ ದಂಡಿಸುವದಿಲ್ಲ, ಯಾರನ್ನೂ ಇಲ್ಲ.' ಎಂದು ತಿರುತಿರುಗಿ ಹೇಳಿ 'ನಾವು ಸಾಯಂಕಾಲ ಒಂದು ದೊಡ್ಡ ಮೇಜವಾನಿಯನ್ನು ಕೊಟ್ಟು ನಾಚನ್ನು ಏರ್ಪಡಿಸುವೆವು; ಮತ್ತು ಕೆರೆಯ ಎಲ್ಲ ಮಗ್ಗಲಿಗಳಿಗೂ ಕೈಯಲ್ಲಿ ಮದ್ದು ಬಿರುಸು

ಗಳನ್ನು ಹಿಡಿದುಕೊಂಡ ಚೆಲುವೆ ಹೆಣ್ಣುಹುಡುಗಿಯರು ಥಳಥಳಿಸುವದನ್ನು ನೋಡಿ ನಲಿಯುವೆವು; ಎಲ್ಲರೂ ಕೂಡಿ ಊಟ ಮಾಡುವೆವು;—ಮರುದಿವಸದ ವರೆಗೆ ಸುಖಬಡುವೆವು; ಅಲ್ಲಿಂದ ಮತ್ತೆ ದಾನಧರ್ಮದ ಮಾತು—ಐವತ್ತು ರೂಪಾಯಿ–ನೂರು ರೂಪಾಯಿ–ಸಾವಿರ ರೂಪಾಯಿ–ಮನಶ್ಶಾಂತಿಯು ದೊರೆಯುವ ವರೆಗೆ ಕೊಟ್ಟೇ ಕೊಡುವೆವು. . . . ನಾವೂ ಆ ದಿವಸಗಳಲ್ಲಿ ಯಾಕೆ ಹುಟ್ಟಲಿಲ್ಲವೋ ಎನಿಸುತ್ತದೆ!... ನಿಮಗೆ ಈ ಫೀಲ್ಡಿಂಗರ ಮನೆ ನೋಡಿ ಕೌತುಕವೆನಿಸುತ್ತದೋ ?. . ನೋಡಿರಿ, ಆ ಕಂಭಗಳಿಗೆ ನೀಲೀ ಬಣ್ಣಗಳನ್ನು ಹೇಗೆ ಕೊಟ್ಟಿದ್ದಾರೆ!. . ಮತ್ತು ಅಂಗಳದೊಳಗಿನ ಮಂಟಪಗಳನ್ನು––ನೀವು ಅವಕ್ಕೇನನ್ನುತ್ತೀರಿ ?—ನೋಡಿರಿ! ಅವುಗಳ ಒಳಗೂ ಬಣ್ಣಕೊಟ್ಟಿದ್ದಾರೆ. ಆ ಮಂಟಪಗಳ ಮೇಲಿನ ಕೆತ್ತಿಗೆಯನ್ನು ನೋಡಿರಿ!. . ಅದಕ್ಕೆ ಎಷ್ಟುಕಾಲ ಹಿಡಿದಿರಬಹುದು, ವಿಚಾರಿಸಿರಿ? ಅವುಗಳ ಒಳಮಾಳಿಗೆಗಳು ಬಂಬುಗಳಂತೆ ಬಾಗಿಸಲ್ಪಟ್ಟಿವೆ. ಎಷ್ಟು ಚೆಂದ!..ಹೊರಗೆ ಕೆರೆಯ ಹತ್ತಿರ ಬಿದಿರುಗಳು ಹೇಗೆ ಹೊಯ್ದಾಡುತ್ತಿವೆ!.. ಮಿಸೆಸ್ ಮೂರ್, ಮಿಸೆಸ್ ಮೂರ್! ' ಎಂದು ಹುಚ್ಚು ಹರಟೆಕೊಚ್ಚಿ ಕೊನೆಗೆ ಕೂಗಿದನು.

' ಏನು? ' ಎಂದು ಅವಳು ನಗುತ್ತ ಕೇಳಿದಳು.

' ನಮ್ಮ ಮಸೀದೆಯ ಹತ್ತರಿರುವ ನೀರು ನಿಮಗೆ ನೆನಪಿದೆಯಲ್ಲವೆ? ಆ ನೀರೇ ಕೆಳಗೆ ಬಂದು ಈ ಕೆರೆಯನ್ನು ತುಂಬುತ್ತದೆ. ಅಲಂಗೀರರ ಚತುರ ರಚನೆಯದು. ಅವರು ಬಂಗಾಲಕ್ಕೆ ಹೋಗುವಾಗ ಇಲ್ಲಿ ಇಳಿಯುತ್ತಿದ್ದರು. ಅವರಿಗೆ ನೀರಿನ ಮೇಲೆ ಬಹಳ ಪ್ರೇಮ. ಹೋದ ಹೋದಲ್ಲೆಲ್ಲ ಕಾರಂಜಿಗಳನ್ನೂ, ಸ್ನಾನಗೃಹಗಳನ್ನೂ ಅವರು ಕಟ್ಟಿಸುತ್ತಿದ್ದರು. ಅವರ ಸೇವೆ ಮಾಡುವುದಕ್ಕಾಗಿ ನಾನು ಏನು ಬೇಕಾದ್ದನ್ನು ಅರ್ಪಿಸುತ್ತೇನೆ. ಮಿ. ಫೀಲ್ಡಿಂಗರಿಗೂ ಇದನ್ನೇ ಹೇಳುತ್ತಿರುತ್ತೇನೆ. '

ಅವನು ಹೇಳಿದ ನೀರಿನ ವಿಷಯ ಶುದ್ಧ ತಪ್ಪಿತ್ತು. ಯಾಕಂದರೆ ಯಾವ ಸಾರ್ವಭೌಮನೂ ಎಷ್ಟು ಚತುರನಿದ್ದರೂ ನೀರನ್ನು ಮೇಲಕ್ಕೆ ಹರಿಯುವಂತೆ ಮಾಡಲಾರನು. ಆ ಮಸೀದೆಗೂ ಫೀಲ್ಡಿಂಗನ ಮನೆಗೂ ಏನೇ ಆದರೂ ಇಳಿವು ಇರಲೇಬೇಕು. ರೋನಿಯಾಗಿದ್ದರೆ ಅವನ ಈ

ಆಪದ್ಧ ಮಾತಿಗೆ ಅವನನ್ನು ಅಲ್ಲಿಯೆ ತಡೆಹಿಡಿಯಬಹುದಾಗಿತ್ತು. ಟರ್ಟನ್ನ ನಾಗಿದ್ದರೂ ಅವನನ್ನು ತಡೆಹಿಡಿಯಬೇಕೆಂದು ಪ್ರಯತ್ನಿಸಬಹುದಾಗಿತ್ತು. ಆದರೆ ಫೀಲ್ಡಿಂಗನಿಗೆ ಮಾತ್ರ ಅವನನ್ನು ತಡಹುವದು; ತಡೆಹಿಡಿಯುವದು ಯಾವುದೂ ಬೇಕಿದ್ದಿಲ್ಲ. ಈ ಶಬ್ದಗಳ ಸತ್ಯತೆಗೆ ಅವನು ತನ್ನ ಮನಸ್ಸನ್ನೇ ಕಲ್ಲುಮಾಡಿದ್ದನು. ಅವನು ಕೇವಲ ಮಾನಸಿಕ ಸತ್ಯತೆಗೆ ಮುಖ್ಯವಾಗಿ ಲಕ್ಷ್ಯಗೊಡುತ್ತಿದ್ದನು. ಇನ್ನು ಮಿಸ್ ಕ್ವೆಸ್ಟೆಡ್‌ಳು ಅಝೀಜನು ಹೇಳಿದ್ದನ್ನೆಲ್ಲ ಸತ್ಯವೆಂದು ಗ್ರಹಿಸುತ್ತಿದ್ದಳು. ಅವಳು ಹಿಂದುಸ್ತಾನದ ಬಗ್ಗೆ ತನಗಿದ್ದ ಅಜ್ಞಾನದ ಮೂಲಕ ಅಝೀಜನೆಂದರೇ ಭಾರತದೇಶವೆಂದು ತಿಳಿದು ಬಿಟ್ಟಿದ್ದಳು. ಅವನ ದೃಷ್ಟಿಯೂ ಸಂಕುಚಿತವಿತ್ತೆಂಬುದೂ ಅವನು ನೋಡುವ ಪದ್ಧತಿಯಲ್ಲಿಯೂ ತಪ್ಪಿತ್ತೆಂಬುದೂ ಯಾವನೇ ಆಗಲಿ, ಒಬ್ಬನೇ ಎಂದೂ ಭಾರತದೇಶವಾಗಲಾರನೆಂಬುದೂ ಅವಳ ತಿಳಿವಿನ ಹೊರಗಿನ ಮಾತಾಗಿತ್ತು.

ಅಝೀಜನೀಗ ಉದ್ರೇಕಗೊಂಡಿದ್ದನು. ಸಿಕ್ಕಾಪಟ್ಟೆಯಾಗಿ ಗಳಹುತ್ತಿರುವಾಗ ತನ್ನ ವಾಕ್ಯಗಳಲ್ಲಿಯೇ ತಾನು ಸಿಕ್ಕಿಕೊಂಡು 'ಹಾಳಾಯಿತು.' ಎಂದು ನಡುನಡುವೆ ಕೂಗಾಡುವನು. ಅವರಿಗೆಲ್ಲ ತನ್ನ ಉದ್ಯೋಗದ ವಿಷಯ ಹೇಳಿದನು; ತಾನು ಮಾಡಿದ, ನೋಡಿದ ಶಸ್ತ್ರಕ್ರಿಯೆಗಳ ವಿಷಯ ಹೇಳಿದನು.; ಇಷ್ಟೇ ಅಲ್ಲದೆ ಆ ಶಸ್ತ್ರಕ್ರಿಯೆಯ ಎಲ್ಲ ವಿವರಗಳನ್ನೂ ವರ್ಣಿಸಿದನು. ಇದನ್ನು ಕೇಳಿ ಮಿಸೆಸ್ ಮೂರಳು ಬೆದರಿದಳು. ಮಿಸ್ ಕ್ವೆಸ್ಟೆಡ್‌ಳು ಇದೆಲ್ಲ ಅವನ ವಿಶಾಲಹೃದಯದ ಕುರುಹೆಂದು ತಪ್ಪು ತಿಳಿದುಕೊಂಡಳು. ಅವಳು ತನ್ನ ದೇಶದಲ್ಲಿ ಪಂಡಿತರ ಗುಂಪುಗಳಲ್ಲಿ ಈ ತರಹದ ಮಾತುಗಳು ಸ್ವೇಚ್ಛೆಯಾಗಿ ನಡೆದದ್ದನ್ನು ಕೇಳಿದ್ದಳು. ಅಝೀಜನು ಇಲ್ಲದ ಸಂಶಯಕ್ಕೆ ಆಸ್ಪದನಲ್ಲವೆಂದೂ ವಿಶ್ವಾಸಕ್ಕೇ ಪಾತ್ರನಿರುವನೆಂದೂ ತಿಳಿದು ಅವನನ್ನು ಒಂದು ಶಿಖರದ ಮೇಲೆ ಏರಿಸಿ ಕೂಡಿಸಿದ್ದಳು. ಅವನಿಗೆ ಮಾತ್ರ ಆ ಸ್ಥಾನವನ್ನು ಕಾಯ್ದುಕೊಳ್ಳುವದಾಗಲಿಲ್ಲ. ಆ ಕ್ಷಣದಲ್ಲಿ ಮಾತ್ರ ಅವನಿಗೆ ತಾನು ಸ್ವಲ್ಪ ಎತ್ತರದಲ್ಲಿದ್ದಂತೆನಿಸಿತು. ಆದರೆ ಮರುಕ್ಷಣದಲ್ಲಿ ತನ್ನನ್ನು ಮೇಲಕ್ಕೆ, ಶಿಖರದ ಮೇಲೆತ್ತಿದ ರೆಕ್ಕೆಗಳು ಸಡಿಲಾದೊಡನೆ ಕೆಳಕ್ಕೆ ಕುಕ್ಕರಿಸುವನು.

ಪ್ರೊ. ಗೋಡಬೋಲೆಯವರ ಆಗಮನವು ಅವನನ್ನು ಸ್ವಲ್ಪ ಸುಮ್ಮನಾಗಿಸಿತು. ಆದರೂ ಆ ಸಾಯಂಕಾಲ ಅವನದೇ ಸ್ವಲ್ಪ ಮೇಲುಗೈ. ಆ ಬ್ರಾಹ್ಮಣನು ನಮ್ರ ಮತ್ತು ಗುಂಭಸ್ವಭಾವದವನು. ಅಂತೇ ಅಝೀಜನ ವಾಕ್ಪ್ರವಾಹವನ್ನು ತಡೆಯಲಿಲ್ಲ. ಇಷ್ಟೇ ಅಲ್ಲ, ಅವನ ಸ್ತುತಿಯನ್ನು ಸಹ ಸ್ವಲ್ಪ ಮಾಡಿದನು. ಅವನು ಅಸ್ಪೃಶ್ಯರಾದ ಅವರಿಂದ ಸ್ವಲ್ಪ ದೂರದಲ್ಲಿ ಕೆಳಗಬಿಟ್ಟ ಒಂದು ಸಣ್ಣ ಮೇಜಿನ ಹತ್ತರ ಕುಳಿತು ಚಹ ತೆಗೆದುಕೊಂಡನು. ಉಳಿದೆಲ್ಲರೂ ಗೋಡಬೊಲೆಯವರ ಚಹಾದ ವಿಷಯದಲ್ಲಿ ಉದಾಸೀನತೆಯನ್ನು ತೋರಿಸಿದರು. ಅಲ್ಲಿದ್ದವರಲ್ಲಿ ಇವನೇ ಹಿರಿಯ; ಮುಖ ಸಿರಿಗೆಗಟ್ಟಿದವ. ಬಿಳಿಮೀಸೆ, ಬೆಕ್ಕಣ್ಣು; ಮೈಬಣ್ಣ ಯುರೋಪಿಯನ್ನರಂತೆ ಬೆಳ್ಳಗೆ; ತಲೆಯ ಮೇಲೆ ಒಂದು ನೀರಗೆಂಪುಬಣ್ಣದ ಪಗಡಿ; ಮೈಮೇಲೆ ಕೋಟು, ವಾಸ್ಕೋಟು, ಧೋತರ, ರೇಶ್ಮಿ ಶೆಲ್ಲೆ; ಕಾಲಲ್ಲಿ ಕಾಲ ಚೀಲ, ಬೂಟು; ಹೊಸ ಶೆಲ್ಲೆ ತಲೆಯ ಮೇಲಿನ ಪಗಡಿಗೆ ಒಪ್ಪುತ್ತಿತ್ತು. ಅವನ ದೇಹದಲ್ಲಿಯ ಅಂಗಾಂಗಗಳೂ ಒಂದಕ್ಕೊಂದು ಹೋದಿಕೆಯಾಗಿ ಒಪ್ಪುತ್ತಿದ್ದವು. ಅವನು ಪೂರ್ವ-ಪಶ್ಚಿಮದ ಸಂಸ್ಕೃತಿಗಳನ್ನು ಸಂಪೂರ್ಣವಾಗಿ ತನ್ನಲ್ಲಿ ಅರಗಿಸಿಕೊಂಡಿದ್ದನು. ಇದರಲ್ಲಿ ಮಾನಸಿಕವೂ ಒಂತು, ಪ್ರಾಕೃತವೂ ಒಂತು. ಅವನಲ್ಲಿ ವಿಸಂಗತಿಯೆಂಬುದು ಹುಟ್ಟುವಂತೆಯೇ ಇರಲಿಲ್ಲ. ಅಲ್ಲಿಯ ಸ್ತ್ರೀಯರಿಗೆ ಅವನ ವಿಷಯವಾಗಿ ಕುತೂಹಲ ಹುಟ್ಟಿತು. ಅವನೂ ಧರ್ಮದ ವಿಷಯವಾಗಿ ಏನನ್ನಾದರೂ ಕೇಳಿ ಡಾ. ಅಝೀಜನು ಈಗಾಗಲೆ ಹೇಳಿದ್ದನ್ನು ಎತ್ತಿ ಹಿಡಿಯುವನೆಂದು ಅವರು ಆಶಿಸಿದ್ದರು. ಆದರೆ ಅವನು ಮುಗುಳುನಗೆ ನಗುತ್ತ ಬರಿ ತಿನ್ನುವದರಲ್ಲಿಯೆ ಮಗ್ನನಾಗಿದ್ದನು. ಕಣ್ಣುಗಳು ಎತ್ತೋ ನೋಡುತ್ತಿದ್ದವು; ಕೈಗಳು ಮಾತ್ರ ತಮ್ಮ ಕೆಲಸವನ್ನು ಒಳ್ಳೆ ದಕ್ಷತೆಯಿಂದ ಸಾಗಿಸಿದ್ದವು.

ಮೊಗಲ ಸಾಮ್ರಾಟರನ್ನು ಬಿಟ್ಟು ಅಝೀಜನು ಯಾರಿಗೂ ತೊಂದರೆಯಾಗದ ವಿಷಯಗಳನ್ನು ತೆಗೆದನು. ಮಾವಿನ ಕಾಯಿಗಳು ಹಣ್ಣಾಗುವದನ್ನು ವರ್ಣಿಸಿದನು; ತಾನು ಸಣ್ಣವನಿದ್ದಾಗ ತಮ್ಮ ಕಕ್ಕನ ಒಂದು ದೊಡ್ಡ ಮಾವಿನ ತೋಪಿಗೆ ಮಳೆ ಬರುತ್ತಿದ್ದರೂ ಹೇಗೆ ಓಡಿಹೋಗಿ ಅಲ್ಲಿಯ ಕಸುಕಾಯಿಗಳನ್ನೇ ತಿನ್ನುತ್ತಿದ್ದೆನೆಂಬುದನ್ನು ವರ್ಣಿಸಿ ಹೇಳಿದನು.

' ಆ ಮೇಲೆ ಮೈಮೇಲೆ ನೀರು ಸುರಿಯುತ್ತ, ಹೊಟ್ಟೆಯಲ್ಲಿ ನೋವಿಟ್ಟು ಕೊಂಡು ಓಡಿಬಂದೆನು. ಆದರೆ ಅದಾವುದನ್ನೂ ನಾನು ಲಕ್ಷ್ಯಕ್ಕೆ ತರ ಲಿಲ್ಲ. ಯಾಕಂದರೆ ನನ್ನೊಡನೆ ನನ್ನ ಗೆಳೆಯರೂ ಗೋಳಾಡುತ್ತಿದ್ದರು. ಉರ್ದು ಭಾಷೆಯಲ್ಲಿ ಒಂದು ಗಾದೆಯ ಮಾತುಂಟು. ' ಎಲ್ಲರಿಗೂ ದುಃಖ ವಾದರೆ ಅದೇನು ದುಃಖದಲ್ಲಿ ಎಣಿಕೆಯೇ ? ' ಈ ದುಃಖದ ಬೇನೆಯು ಮಾವಿನ ಕಾಯಿಗಳನ್ನು ತಿಂದೊಡನೆ ತಪ್ಪದೆ ಬಂದುಬಿಡುತ್ತದೆ. ಮಿಸ್ ಕ್ವೆಸ್ಟೆಡ್, ನೀವು ಮಾವಿನ ಹಣ್ಣಿನ ಸುಗ್ಗಿಯ ವರೆಗಿಲ್ಲಿರಲೇಬೇಕು. ಅಥವಾ ನೀವು ಹಿಂದುಸ್ತಾನದಲ್ಲಿಯೆ ಕೊನೆಯವರೆಗೇಕೆ ಇದ್ದುಬಿಡಬಾರದು ? '

' ಹಾಗೆ ಮಾಡುವುದು ಶಕ್ಯವಿಲ್ಲೆಂದು ನನಗನಿಸುತ್ತಿದೆ. ' ಎಂದು ಅಡೀಲಾ ಉತ್ತರಕೊಟ್ಟಳು. ಆದರೆ ತನ್ನ ಮಾತಿನ ಅರ್ಥವನ್ನು ತಾನೇ ಅರಿಯದಾದಳು. ಅವಳಿಗೆ—ಅದರಂತೆ ಉಳಿದ ಮೂವರಿಗೂ—ಮೊದಲು ಈ ಮಾತು ಉಳಿದ ಮಾತಿನೊಡನೆ ಹೊಂದಿಕೆಯಾಗಿಯೇ ತೋರಿತು; ಮತ್ತು ಎಷ್ಟೋ ನಿಮಿಷಗಳ ವರೆಗೆ—ಏಕೆ, ಅರ್ಧಗಂಟೆಯ ವರೆಗೆ—ಅವ ಳಿಗೆ ಅದೊಂದು ಮಹತ್ವದ ಮಾತೆಂದೇ ಅನಿಸಲಿಲ್ಲ. ಅಲ್ಲದೆ ಅದನ್ನು ಮೊದಲು ರೋನಿಯ ಎದುರಿಗೆ ತೆಗೆಯಬೇಕಾಗಿತ್ತೆಂದೂ ತಿಳಿಯಲಿಲ್ಲ.

' ನಿಮ್ಮಂಥ ದರ್ಶನಾರ್ಥಿಗಳು ತೀರ ವಿರಳ. '

' ಹೌದು. ಇದು ಸತ್ಯವಾದ ಮಾತು. ಈ ತರಹದ ವಿಸಯವು ಅಪರೂಪವಾಗಿಯೆ ಕಣ್ಣಿಗೆ ಬೀಳುತ್ತದೆ. ಆದರೆ ಅವರನ್ನು ನಿಲ್ಲಿಸಿಕೊಳ್ಳ ಬೇಕೆಂದರೆ ನಾವೇನು ಕೊಡಬಲ್ಲೆವು ಅವರಿಗೆ ? ' ಎಂದು ಪ್ರೊ ಗೋಡ ಬೊಲೆಯುವರು ಬಾಯಿಬಿಚ್ಚಿದರು.

' ಮಾವಿನ ಹಣ್ಣು ! ಮಾವಿನ ಹಣ್ಣುಗಳನ್ನು ! ' ಅಝೀಜನೆಂದನು. ಎಲ್ಲರೂ ನಕ್ಕರು.

' ಮಾವಿನ ಹಣ್ಣುಗಳು ಇಂಗ್ಲೆಂಡದಲ್ಲಿ ಸಹ ದೊರೆಯುತ್ತವೆ. ಹಡಗ ಗಳಲ್ಲಿ ಬರ್ಫಿನ ಕೋಣೆಗಳಲ್ಲಿಟ್ಟು ಅವುಗಳನ್ನು ಕಳಿಸುತ್ತಾರೆ. ನಾವು ಹಿಂದು ಸ್ತಾನದಲ್ಲಿ ನಮ್ಮ ಇಂಗ್ಲೆಂಡನ್ನು ತಂದಿಟ್ಟುಕೊಂಡಂತೆ ಇಂಗ್ಲೆಂಡಿನಲ್ಲಿ ಹಿಂದುಸ್ತಾನವನ್ನು ಒಯ್ದಿಟ್ಟುಕೊಳ್ಳಬಹುದು. ' ಎಂದು ಫೀಲ್ಡಿಂಗನು ಅವರ ಮಾತಿನ ಮಾಲೆಗೆ ತನ್ನದೊಂದು ಮಾತನ್ನು ಪವಣಿಸಿದನು.

'ಇದರಲ್ಲಿ ಯಾವುದೇ ಆದರೂ ಭಯಂಕರ ಖರ್ಚಿನ ಮಾತೇ.' ಅಡೀಲಾ ನುಡಿದಳು.

'ನನಗೂ ಹಾಗೇ ಅನಿಸುತ್ತದೆ.'

'ಮತ್ತು ಅದು ಹೇಸಿತನ.'

ಈ ಮಾತುಗಳು ತೀರ ಜಡವಾಗುತ್ತಿರುವದು ಫೀಲ್ಡಿಂಗನಿಗೆ ಸೇರಲಿಲ್ಲ. ಅವನು ಆ ಮೂರಳ ಕಡೆಗೆ ತಿರುಗಿ, ಅವಳ ಮುಂದಿನ ಕಾರ್ಯಕ್ರಮವೇನೆಂದು ಕೇಳಿದನು. ಅವಳು ಇದರಿಂದ ಸ್ವಲ್ಪ ಗೊಂದಲದಲ್ಲಿ ಬಿದ್ದಂತೆಯೂ ಸ್ವಲ್ಪ ಸಂಕೋಚಪಟ್ಟುಕೊಂಡಂತೆಯೂ ತೋರಿತು. ಆದರೂ ಅವಳು ಕಾಲೇಜು ನೋಡಬೇಕಾಗಿದೆಯೆಂದು ತಿಳಿಸಿದಳು. ಕೂಡಲೆ ಪ್ರತಿಯೊಬ್ಬರೂ ಎದ್ದರು. ಗೋಡಬೋಲೆಯವರು ಮಾತ್ರ ಇನ್ನೂ ಬಾಳೀ ಹಣ್ಣು ತಿನ್ನುತ್ತಿದ್ದರು, ಏಳಲಿಲ್ಲ.

'ಅಡೀಲಾ, ನೀನೂ ಬರುವದಿಲ್ಲೇನು? ನಿನಗೆ ಸಂಸ್ಥೆಗಳೆಂದರೇ ಬೇಜಾರ.' ಎಂದು ಮಿಸೆಸ್ ಮೂರಳು ಕೇಳಿದಳು.

'ಹೌದು; ಅದೂ ನಿಜವೇ ಎನ್ನಿ.' ಅಡೀಲಾ ಉತ್ತರ ಕೊಟ್ಟು ಮತ್ತೆ ಕುಳಿತಳು.

ಅಝೀಜನು ತಾನೂ ಇರಬೇಕೋ ಹೋಗಬೇಕೋ ಎಂದು ಅನುಮಾನಿಸಹತ್ತಿದನು. ಅವನ ಶ್ರೋತೃವೃಂದವು ಒಡೆದು ಹೋಗಹತ್ತಿತು. ಹೆಚ್ಚು ಪರಿಚಯವಿದ್ದ ಅರ್ಧಕರ್ಧಜನ ಹೋಗಹತ್ತಿತ್ತು. ಆದರೆ ಹೆಚ್ಚು ಆಸ್ಥೆಯಿಂದ ಕೇಳುವವರೇ ಉಳಿದಿದ್ದರು. ಈ ಹೊತ್ತು ಅಷ್ಟೇನು ಶಿಷ್ಟಾಚಾರದಂತೆ ನಡೆಯುವ ಕಾರಣವಿಲ್ಲೆಂದು ಬಗೆದು ಅವನೂ ಉಳಿದೇಬಿಟ್ಟನು.

ಮೊದಲಿನಂತೆ ಮತ್ತೆ ಮಾತು ನಡೆಯಿತು.

'ಅತಿಥಿಗಳಿಗೆ ಮಾವಿನಕಾಯಿಗಳನ್ನಾದರೂ–ಸುಮ್ಮನೆ ಚೇಷ್ಟೆಗೆ–ಕೊಡಬಹುದೋ?'

'ನಾನು ಡಾಕ್ಟರನೆಂದು ಹೇಳಬೇಕಾದರೆ 'ಬೇಡ' ಎನ್ನಬಹುದು.

'ಹಾಗಾದರೆ ನಾನು ಆರೋಗ್ಯಕರವಾದ ಕೆಲವು ಸಿಹಿ ಪದಾರ್ಥಗಳನ್ನು ಕಳಿಸುವೆನು. ನಾನೇ ಆ ಸಂತೋಷವನ್ನು ಒದಗಿಸಿಕೊಡುವೆನು.' ಎಂದು ಗೋಡಬೋಲೆಯವರು ಸವಿಮಾತನಾಡಿದರು.

'ಪ್ರೊ. ಗೋಡಬೋಲೆಯುವರ ಸಿಹಿ ಪದಾರ್ಥಗಳು ಬಹಳ ರುಚಿಕರವಾಗಿರುತ್ತವೆ ಮಿಸ್ ಕ್ವೆಸ್ಟೆಡ್ ! ' ಎಂದು ಖಿನ್ನನಾಗಿ ಅಝೀಜನು ನುಡಿದನು. ಅವನಿಗೆ ತಾನೂ ಈ ಪದಾರ್ಥಗಳನ್ನು ಮಾಡಿಸಿ ಕಳಿಸಬೇಕೆಂದೆನಿಸಿತು. ಆದರೆ ಅವುಗಳನ್ನು ತಯಾರಿಸಲಿಕ್ಕೆ ಮನೆಯಲ್ಲಿ ಅವನಿಗೆ ಹೆಂಡತಿಯಿರಲಿಲ್ಲ. 'ನಿಜವಾಗಿಯೂ ಅದು ಹಿಂದೀಯರ ವ್ಯುತ್ಪನ್ನವೆಂದೇ ಹೇಳಬಹುದು. ನನ್ನ ಈ ಒಡ ಸ್ಥಿತಿಯಲ್ಲಿ ನನಗೇನೂ ಕೊಡುವದಕ್ಕೆ ಶಕ್ಯವಿಲ್ಲ. '

'ಅಲ್ಲ, ನೀವು ನಿಮ್ಮ ಮನೆಗೆ ಒರಲು ನಮಗೆ ಔತಣ ಕೊಟ್ಟು, ಮೇಲೆ ಈ ಮಾತನ್ನೇಕೆ ಆಡುತ್ತೀರೋ ನನಗೆ ತಿಳಿಯದಾಗಿದೆ ! '

ಅಝೀಜನಿಗೆ ಮತ್ತೆ ತನ್ನ ಮನೆಯ ನೆನಪಾಗಿ ಗುಂಡುಬಡಿದಂತಾಯಿತು. ಅಯ್ಯೋ ದೇವರೆ ! ಪಾಪ, ಈ ಹುಚ್ಚು ಹುಡಿಗೆಯು ಅವನಾಡಿದ ಮಾತನ್ನೇ ಗಟ್ಟಿಯಾಗಿ ಹಿಡಿದುಕೊಂಡು ಕುಳಿತಿದ್ದಾಳೆ ! ಅವನೇನು ಮಾಡಬೇಕು ? 'ಹೌದು, ಅದೆಲ್ಲ ನಿಶ್ಚಯವಾಗಿದೆ. ಮಾರವಾರ ಗುಹೆಗಳಿಗೆ ದಯವಿಟ್ಟು ಬರಬೇಕೆಂದು ನಿಮ್ಮೆಲ್ಲರಿಗೂ ನಾನು ಆಗ್ರಹದಿಂದ ಬೇಡಿಕೊಳ್ಳುತ್ತೇನೆ. ಅಲ್ಲಿ ನಾನು ತಮ್ಮನ್ನು ಸ್ವಾಗತಿಸುತ್ತೇನೆ. ' ಎಂದು ಅಝೀಜನು ವಿಚಾರಮಾಡಿ ನುಡಿದನು.

'ಬಹಳ ಸಂತೋಷ. ' ಅಡೀಲಾ ಒಡನುಡಿದಳು.

'ನಾನು ಕಳಿಸುವ ಪದಾರ್ಥಗಳಿಗೆ ಹೋಲಿಸಿದರೆ ನಿಜವಾಗಿಯೂ ಅಝೀಜನದೇ ಬಹುದೊಡ್ಡ ಸಮಾರಂಭವೆಂದು ಹೇಳಬಹುದು. ಮಿಸ್ ಕ್ವೆಸ್ಟೆಡ್‌ಳು ನಮ್ಮ ಗುಹೆಗಳನ್ನು ಈ ಮೊದಲೇ ನೋಡಿದ್ದಾಳೇನು ? ' ಪ್ರೊ. ಗೋಡಬೊಲೆಯುವರು ತಮ್ಮದಿಷ್ಟು ಜೋಡಿಸಿದರು.

'ಇಲ್ಲ, ನಾನಿನ್ನೂ ಅವುಗಳ ವಿಷಯಕೇಳಿಲ್ಲ ಸಹ. ' ಅಡೀಲಾ ಹೇಳಿದಳು.

'ಇನ್ನೂ ಕೇಳಲಿಲ್ಲವೇ ? ಮಾರವಾರ ಗುಡ್ಡಗಳಲ್ಲಿಯ ಗುಹೆಗಳನ್ನು ! ?' ಎಂದು ಇಬ್ಬರೂ ಕೂಗಿದರು.

'ಕೇಳಿದ್ದರೆ ಆ ಕ್ಲಬ್ಬಿನಲ್ಲಿ ಕೇಳಬೇಕು. ಅಲ್ಲಿ ಮನಸ್ಸು ಹಿಡಿಯುವಂತಹ ಮಾತುಗಳನ್ನೇ ನಾವು ಕೇಳಿಲ್ಲ. ತಿರುಗ ಮುರುಗ ಬರಿ ಟೇನಿಸ್ಸು

ಇಲ್ಲವೆ ಹುಚ್ಚುಚ್ಚು ಹರಟೆ. ಇಷ್ಟು ಬಿಟ್ಟು ಅಲ್ಲಿ ಮತ್ತೇನೂ ಇಲ್ಲ.'

ಪ್ರೊ. ಗೋಡಬೊಲೆಯವರು ಸುಮ್ಮನಿದ್ದರು. ಬಹುಶಃ ಅವರಿಗೆ ಅವಳು ತನ್ನ ಜನರನ್ನು ಟೀಕಿಸುವದು ಒಳಿತಲ್ಲವೆಂದೆನಿಸಿರಬೇಕು. ಅಥವಾ ಅವಳಾಡಿದ್ದಕ್ಕೆ ತಾನು ಒಪ್ಪಿಗೆ ಕೊಟ್ಟರೆ ರಾಜದ್ರೋಹಿಯೆಂದು ಎಲ್ಲಿ ಅವಳೇ ಹೋಗಿ ಹೇಳುವಳೋ ಎಂದು ಹೆದರಿರಬಹುದು. ಆ ತರುಣ ಅಝೀಜನು ಮಾತ್ರ ಕೂಡಲೆ 'ನನಗೆ ಗೊತ್ತಿದೆ' ಎಂದುಚ್ಚರಿಸಿದನು

'ಹಾಗಿದ್ದರೆ ನನಗೆಲ್ಲವನ್ನೂ ಹೇಳಬೇಕು. ಇಲ್ಲದೆ ಹೋದರೆ ನಾನೆಂದೂ ಹಿಂದುಸ್ತಾನವನ್ನು ತಿಳಿದುಕೊಳ್ಳಲಿಕ್ಕಿಲ್ಲ. ಆ ಮಾರಬಾರ ಗುಡ್ಡಗಳೆಂದರೆ ಸಂಜೆಯ ಹೊತ್ತಿನಲ್ಲಿ ಒಮ್ಮೊಮ್ಮೆ ನಾನು ಕಂಡದ್ದೇ ಇರಬೇಕು? ಈ ಗುಹೆಗಳಾವು?'

ಅಝೀಜನು ಅದನ್ನು ತಿಳಿಸಿಹೇಳುವ ಕೆಲಸವನ್ನೇನೊ ತನ್ನ ಮೈಮೇಲೆ ತೆಗೆದುಕೊಂಡನು. ಆದರೆ ಆ ಗುಹೆಗಳನ್ನು ಅವನೇ ಇನ್ನೂವರೆಗೂ ನೋಡಿಲ್ಲವೆಂಬುದು ಕೂಡಲೆ ಕಂಡುಬಂತು. ಅವನಿಗೆ ಅಲ್ಲಿಗೆ ಹೋಗ ಬೇಕೆಂದೇನೊ ಎಂದಿನಿಂದಲೂ ಆಶೆಯಿತ್ತು. ಆದರೆ ಅವನ ಕಚೇರಿಯ ಕೆಲಸ ಇಲ್ಲವೆ ತನ್ನ ಸ್ವಂತದ ಕೆಲಸ ಅಡ್ಡಬಂದು ಆ ಗುಹೆಗಳು ಇನ್ನೂ ಕಣ್ಣಮರೆಯಲ್ಲಿಯೆ ಉಳಿದಿದ್ದವು. ಇದನ್ನು ನೋಡಿಕೊಂಡು ಗೋಡ ಬೊಲೆಯವರು 'ಅಲ್ಲಪಾ ಹುಡುಗಾ, ಇದ್ಲೆಪ್ಪ ಮಸಿಯಪ್ಪನಿಗೆ ಬುದ್ಧೀ ಹೇಳಿದನಂತೆ; ಈ ಗಾದಿಮಾತನ್ನು ನೀನು ಕೇಳಿದ್ದೀಯಾ?' ಎಂದು ಅಝೀಜನಿಗೆ ಚುಚ್ಚಿ ಮಾತನಾಡಿದರು.

'ಅವು ಬಹಳ ದೊಡ್ಡ ಗುಹೆಗಳಿವೆಯೋ?' ಅಡೀಲಾ ಕೇಳಿದಳು.

'ಇಲ್ಲ, ಅಷ್ಟು ದೊಡ್ಡವಿಲ್ಲ.'

'ಗೋಡಬೊಲೆಯವರೆ, ನೀವೇ ಅವನ್ನಷ್ಟು ವರ್ಣಿಸಿ ಹೇಳಬೇಕು.'

'ಆಗಲಿ; ಬಹಳ ಸಂತೋಷ. ನನಗಿದೇ ಒಂದು ದೊಡ್ಡ ಮರ್ಯಾದೆ.' ಎಂದು ಅವನು ತನ್ನ ಕುರ್ಚಿಯನ್ನು ಮುಂದಕ್ಕೆಳೆದನು. ಮುಖದ ಮೇಲೆ ಗಾಂಭೀರ್ಯವು ಸುಳಿಯಿತು. ಅಡೀಲಾ ತನ್ನ ಸಿಗರೇಟ ಪೆಟ್ಟಿಗೆಯನ್ನು ತೆಗೆದು ಅದರಲ್ಲಿಯ ಒಂದನ್ನು ಅವನಿಗೆ ಕೊಟ್ಟು ಇನ್ನೊಂದನ್ನು ಅಝೀ ಜನಿಗೆ ಕೊಟ್ಟು ತಾನೊಂದನ್ನು ಹೊತ್ತಿಸಿದಳು. ಗಂಭೀರತೆಯಿಂದ ಸ್ವಲ್ಪ

ಹೊತ್ತು ಮೌನವಾಗಿದ್ದು ಅಲ್ಲಿಂದ ' ನೀವು ಒಳಗೆ ಹೋಗಲಿಕ್ಕೆ ಒಂದು ಬಾಗಿಲವಿದೆ ಆ ಬಾಗಿಲದೊಳಗಿಂದ ಹಾಯ್ದು ಹೋದರೆ ಗುಹೆಯೊಳಗೆ ಹೋಗುತ್ತೀರಿ. ' ಎಂದು ಮೊದಲುಮಾಡಿದನು.

' ಹಾಗಾದರೆ ಎಲಿಫಂಟಾ ಗುಹೆಗಳಂತೆಯೋ ಎನ್ನಿ.

'ಛೇ, ಅಲ್ಲ; ಎಳ್ಳಷ್ಟೂ ಅಲ್ಲ! ಎಲಿಫಂಟಾ ಗುಹೆಗಳಲ್ಲಿ ಶಿವಪಾರ್ವತಿಯರ ಮೂರ್ತಿಗಳಿವೆ. ಆದರೆ ಮಾರವಾರದಲ್ಲ ಮೂರ್ತಿಗಳೇ ಯಾವೂ ಇಲ್ಲ. '

' ಆದರೆ ಅವು ಒಳ್ಳೆ ಪವಿತ್ರಸ್ಥಳಗಳು, ಅದರಲ್ಲೇನೂ ಸಂಶಯವಿಲ್ಲ. ' ಎಂದು ಅಝೀಜನು ಆ ಕಥೆಯನ್ನೇ ಮುಂದೆ ಸಾಗಿಸಲಿಕ್ಕೆ ಅನುವಾಗ ಬೇಕೆಂದನು.

' ಛೇ, ಛೇ ! ಅಲ್ಲ. '

' ಆದರೂ ಅವೊಂದು ರೀತಿಯಿಂದ ಅಲಂಕೃತವಾಗಿವೆ ! ' ಅಝೀಜನೇ ಉತ್ತರಕೊಟ್ಟನು.

' ಛೇ , ಇಲ್ಲ. '

' ಹಾಗಾದರೆ ಅವು ಯಾತಕ್ಕಿಷ್ಟು ಪ್ರಸಿದ್ಧ ಆಗಿವೆ ? ನಾವೆಲ್ಲರೂ ಅವು ಅದ್ಭುತ ಮಾರವಾರ ಗುಹೆಗಳೆಂದು ಕರೆಯುತ್ತೇವೆ. ಅದೆಲ್ಲ ಸುಮ್ಮನೆ ನಮ್ಮ ಒಣ ಜಂಭವೇನು ಹಾಗಾದರೆ ? ' ಅಝೀಜನು ಕಿಡಿಯಾಡಿದನು.

' ಛೇ, ತೀರ ಹಾಗೆಂದೂ ನಾನೆನ್ನುವದಿಲ್ಲ. '

' ಹಾಗಾದರೆ ನೀವೆನ್ನುವದಾದರೂ ಏನು ? ಅವು ಹೇಗಿವೆಯೆಂಬು ದನ್ನು ಈ ಹೆಣ್ಣುಮಗಳಿಗಿಷ್ಟು ಹೇಳಿಬಿಡಿರಿ ನೋಡೋಣ ? ' ಅಝೀಜನೇ ಮತ್ತೆ ಕೆಣಕಿದನು.

' ಆಗಲಿ, ಬಹಳ ಸಂತೋಷ. ' ಎಂದು ಅವನು ತನ್ನ ಆ ಸಂತೋಷ ವನ್ನೇ ಕಳೆದುಕೊಳ್ಳಲಿಕ್ಕೆ ಸಿದ್ಧನಾದನು. ಅಝೀಜನಿಗೆ ಇವನು ಆ ಗುಹೆಗಳ ವಿಷಯ ಯಾವುದನ್ನೋ ಮುಚ್ಚಿಡುತ್ತಾನೆಂದು ಅನಿಸಿತು. ಯಾಕಂದರೆ ಅವನೂ ಈ ತರಹದ ಮನಸಿನ ಏರಿಳಿತಗಳನ್ನು ಅನುಭವಿ ಸಿದ್ದನು. ಒಮ್ಮೊಮ್ಮೆಯಂತೂ ಪ್ರಸ್ತುತ ವಿಷಯವನ್ನೆ ಬಿಟ್ಟು ಅಪ್ರಸ್ತುತ ಅನೇಕ ವಿಷಯಗಳನ್ನು ಮಾತಾಡಿ ತನ್ನ ಮೇಲಿನಧಿಕಾರಿಯಾದ ಮೇಜರ ಕ್ಯಾಲೆಂಡರನನ್ನು ರೊಚ್ಚಿಗೆಬ್ಬಿಸುತ್ತಿದ್ದನು. ಮೇಜರನು ಇವನ ಮಬ್ಬು

ತನಕ್ಕಾಗಿ ಹಳಿಯುತ್ತಿದ್ದುದು ಸುಮಾರಾಗಿ ಯೋಗ್ಯವೇ ಇತ್ತು; ಆದರೂ ಸುಮಾರಾಗಿ ಮಾತ್ರ. ವಾಸ್ತವವಾಗಿ, ಅವನ ಅಂಕಿತವನ್ನು ಮೀರಿದ ಯಾವುದೋ ಶಕ್ತಿಯು ಅವನ ಚಪಲ ಚಿತ್ತವನ್ನು ತಡೆದು ನಿಲ್ಲಿಸುತ್ತಿತ್ತು. ಈಗ ಗೋಡಬೋಲೆಯವರ ಅವಸ್ಥೆಯೂ ಹಾಗೇ ಆಯಿತು. ಅವನೇನು ಮನಃಪೂರ್ವಕವಾಗಿ ಯಾವುದನ್ನೂ ಮುಚ್ಚಿಡುತ್ತಿರಲಿಲ್ಲ. ಸ್ವಲ್ಪ ಇದಕ್ಕೂ ಸೂಕ್ಷ್ಮರೀತಿಯಿಂದ ನಡೆಸಿಕೊಂಡಿದ್ದರೆ ಅವನು ತನ್ನ ಚಿತ್ತಸ್ಥೈರ್ಯವನ್ನು ತಂದುಕೊಂಡು ಮಾರವಾರ ಗುಹೆಗಳ ತುಂಬ ಕಲ್ಲೇ ಕೊನರದಂತೆ ಬಿಳಿ ಕಲ್ಲನಾಲಗೆಗಳು ಜೋತು ಬಿದ್ದಿವೆಯೆಂದು ಹೇಳಬಹುದಾಗಿತ್ತು. ಇದನ್ನು ಹೇಳಿಸುವದಕ್ಕಾಗಿಯೆ ಅಝೀಜನು ಎತ್ತುಗಡೆ ನಡೆಸಿದ್ದು. ಆದರೆ ಅದು ಸಾಧ್ಯವಾಗಲಿಲ್ಲ.

ಈ ಸಂಭಾಷಣೆಯು ಒಳ್ಳೇ ಮನೋರಂಜಕವಾಗಿಯೂ ಪ್ರೇಮಪೂರಿತವಾಗಿಯೂ ನಡೆಯಿತು. ಅಡೀಲಾಳಿಗೆ ಅದರ ಅಂತಃಪ್ರವಾಹದ ಕಲ್ಪನೆಯೇ ಇದ್ದಿಲ್ಲ. ಸಾಮಾನ್ಯವಾಗಿ ಸರಳವಿದ್ದ ಆ ಮುಹಮ್ಮದೀಯನ ಮನಸ್ಸು ಸನಾತನಾಂಧಃಕಾರದೊಡನೆ ಹೋರಾಡುತ್ತಿದೆಯೆಂದು ಅವಳಿಗೆ ಗೊತ್ತಾಗಲಿಲ್ಲ. ಅಝೀಜನು ಅದ್ಭುತ ಆಟವನ್ನಾಡಿದನು. ಕೆಲಸ ಮಾಡಲಿಕ್ಕಿಲ್ಲೆಂದು ಹಟಹಿಡಿದ ಜೀವಂತ ಬೊಂಬೆಯೊಂದರೊಡನೆ ಅವನು ತನ್ನ ಆಟವನ್ನು ನಡೆಸಿದ್ದನು. ಅದು ಕೆಲಸಮಾಡಿದರೆ ಅವನಿಗಾಗಲಿ ಪ್ರೊ. ಗೋಡಬೋಲೆಗಾಗಲಿ ಯಾವ ಪ್ರಯೋಜನವೂ ಇರಲಿಲ್ಲ. ಆದರೆ ಅಝೀಜನು ಕೇವಲ ಪ್ರಯತ್ನಕ್ಕೇ ಮನಸೋತು ಈ ಅಮೂರ್ತವಿಚಾರದ ಬೆನ್ನುಬಿದ್ದನು. ಹೆಜ್ಜೆಹೆಜ್ಜೆಗೆ ಅವನ ವಿರೋಧಿಯು ಅವನನ್ನು ತಡೆಯುತ್ತಿದ್ದನು. ಯತ್ನಿಸಿದಷ್ಟು ಮಾರವಾರ ಗುಹೆಗಳ ಅದ್ಭುತವು ಅವನಿಂದ ಮತ್ತಷ್ಟು ದೂರವೇ ಉಳಿಯಿತು.

ಇದೇ ಹೊತ್ತಿಗೆ ರೋನಿಯು ಬಂದೆರಗಿದನು.

ತನಗಾದ ತೊಂದರೆಯನ್ನು ಮುಚ್ಚಿಡದೆ ಅವನು ತೋಟದಿಂದಲೆ 'ಫೀಲ್ಡಿಂಗರಿಗೇನಾಯಿತು? ಎಲ್ಲಿ? ನನ್ನ ತಾಯಿ ಎಲ್ಲಿ?' ಎಂದು ಕೂಗಿಕೊಂಡನು.

'ನಮಸ್ಕಾರ.' ಅಡೀಲಾ ಶಾಂತರೀತಿಯಿಂದ ಉತ್ತರಕೊಟ್ಟಳು.

'ತಾಯಿ ಮತ್ತು ನೀನು ಕೂಡಲೆ ಹೊರಡಬೇಕು. ಪೋಲೊ ಆಟವು ಸುರುವಾಗಿದೆ.' ರೋನಿ ಸ್ವಲ್ಪ ರಭಸದಿಂದ ಹೇಳಿದ.

'ಮತ್ತೆ ಪೋಲೊ ಇಲ್ಲೆಂದು ನಾನು ತಿಳಿದಿದ್ದೆನಲ್ಲ!'

'ಎಲ್ಲವೂ ಬದಲಾಯಿತು. ಕೆಲವು ಲಷ್ಕರೀ ಜನರು ಬಂದಿದ್ದಾರೆ. ಇಲ್ಲಿ ಬಾ, ನಾನು ನಿನಗೆ ಅದನ್ನೆಲ್ಲ ಹೇಳುತ್ತೇನೆ.'

'ನಿಮ್ಮ ತಾಯಿಯವರು ಈಗ ತಿರುಗಿಬರುವರು.' ಎಂದು ಪ್ರೊ. ಗೋಡಬೋಲೆಯವರು ಒಳ್ಳೆ ಮರ್ಯಾದೆಯಿಂದ ಎದ್ದುನಿಂತು ನುಡಿದರು. 'ನಮ್ಮ ಬಡ ಕಾಲೇಜದಲ್ಲಿ ಬಹಳೇ ಸ್ವಲ್ಪ ನೋಡುವದಿದೆ.'

ರೋನಿಯು ಅವನ ಮಾತಿನ ಕಡೆಗೆ ಲಕ್ಷ್ಯವನ್ನೇ ಕೊಡದೆ ತನ್ನ ಎಲ್ಲ ಮಾತುಗಳನ್ನು ಅಡೀಲಾಳಿಗೇ ಹೇಳಹತ್ತಿದನು. ತನ್ನ ಕೆಲಸವನ್ನು ಬಿಟ್ಟು ಗಡಿಬಿಡಿಯಿಂದ ಅವಳನ್ನು ಪೋಲೋ ನೋಡಲಿಕ್ಕೆ ಕರಕೊಂಡು ಹೋಗಬೇಕೆಂದು ಒಳ್ಳೆ ಉತ್ಸಾಹದಿಂದ ಬಂದಿದ್ದನು. ಅಡೀಲಾಳಿಗೂ ಅದನ್ನು ನೋಡಿದರೆ ಮನರಂಜನೆಯಾಗುವದೆಂದು ಅವನ ಭಾವನೆಯಿತ್ತು. ಅಲ್ಲಿದ್ದ ಅಝೀಜ ಮತ್ತು ಗೋಡಬೋಲೆಯವರೊಡನೆ ತಾನು ಬಹಳ ಒಗರಿನಿಂದ ಅಸಭ್ಯತನದಿಂದ ನಡೆದುಕೊಳ್ಳುವೆನೆಂಬುದು ಅವನ ಕನಸುಮನಸಿನಲ್ಲಿಯೂ ಬರಲಿಲ್ಲ. ಅವನಿಗೆ ಹಿಂದೂಜನರೊಡನೆ ಸಂಬಂಧ ಬಂದದ್ದೆಂದರೇ ಅಧಿಕಾರದ ಸಂಬಂಧದ ಹೊರತು ಮತ್ತೊಂದಿಲ್ಲ. ಹೀಗಾಗಿ ಇವರಿಬ್ಬರೂ ತನ್ನ ಕೈಕೆಳಗಿನವರಲ್ಲದ್ದರಿಂದ ಬಿನ್ ಅಧಿಕಾರೀ ಜನರೆಂದು ತಿಳಿದು ಅವರನ್ನು ಮರೆತೇಬಿಟ್ಟನು.

ದುರ್ದೈವದಿಂದ ಅಝೀಜನು ರೋನಿಯಿಂದ ಹೀಗೆ ಮರೆಯಿಸಿಕೊಳ್ಳುವ ಪ್ರವೃತ್ತಿಯಲ್ಲಿರಲಿಲ್ಲ. ಈಗ ಒಂದು ತಾಸಿನ ವರೆಗೆ ದೊರೆತ ಸ್ಥಿರವಾದ ತನ್ನ ಪರಿಚಯದ ಪರಿಸ್ಥಿತಿಯನ್ನು ಕಳೆದುಕೊಳ್ಳಲಿಕ್ಕೆ ಅವನು ಸಿದ್ಧನಾಗಲಿಲ್ಲ. ಗೋಡಬೋಲೆಯವರ ಜೊತೆಗೆ ಅವನೇನೂ ಎದ್ದು ನಿಲ್ಲಲಿಲ್ಲ. ಕುಳಿತಲ್ಲಿಂದಲೆ ಅವನನ್ನು ಕೆಣಕುವಷ್ಟು ಸಖ್ಯಭಾವದ ಸಲುಗೆಯಿಂದ 'ಮಿ. ಹೆಸ್ಲೋಪ, ಬರಬೇಕು; ನಮ್ಮ ಮಾತಿನಲ್ಲಿ ನೀವೂ ಬೆರೆಯಬೇಕು. ನಿಮ್ಮ ತಾಯಿಯವರು ಬರುವ ವರೆಗೆ ಇಲ್ಲಿಯೆ ಕುಳಿತುಕೊಳ್ಳಬಹುದು.'

ರೋನಿಯು ಫೀಲ್ಡಿಂಗನ ಒಬ್ಬ ಚಾಕರನಿಗೆ ಯಜಮಾನನನ್ನು ಕೂಡಲೆ ಕರೆದುಕೊಂಡು ಬರಲಿಕ್ಕೆ ಅಪ್ಪಣೆ ಕೊಟ್ಟನು. ಇದೇ ಅಝೀಜನ ಮಾತಿಗೆ ಉತ್ತರ ಎನಬಹುದು.

'ಅವನಿಗೆ ಅದು ತಿಳಿಯಲಿಕ್ಕಿಲ್ಲ; ನಾನೇ ಹೇಳುತ್ತೇನೆ..' ಎಂದು ಅಝೀಜನು ತಾನೇ ಮೇಲುಬಿದ್ದು ಅವನ ಅಪ್ಪಣೆಯನ್ನು ವಾಕ್ಯಶುದ್ಧವಾಗಿ ಮತ್ತೆ ಉಚ್ಚರಿಸಿದನು.

ಅಝೀಜನ ಅಧಿಕಪ್ರಸಂಗಕ್ಕೆ ತಕ್ಕ ಎದುರುತ್ತರ ಕೊಡಬೇಕೆಂದು ರೋನಿಯ ತುದಿನಾಲಿಗೆಯ ವರೆಗೆ ಬಂದಿತ್ತು; ಆದರೂ ತಡೆದುಕೊಂಡನು. ಅವನಿಗೆ ಇವನೆಂಥವನೆಂಬುದೂ ಗೊತ್ತಿತ್ತು. ಇವನೊ, ಈ ಪಾಶ್ಚಾತ್ಯ ಪದ್ಧತಿಯಿಂದ ಕೆಟ್ಟುಹೋದ ಹುಡುಗ; ತಾನೊ, ಸರಕಾರಿ ನೌಕರ. ಇಲ್ಲದ ಪ್ರಸಂಗಗಳನ್ನೇಕೆ ಮೈಮೇಲೆ ತಂದುಕೊಳ್ಳಬೇಕೆಂದು ಅವನು ಆ ಮಾತನ್ನು ಅಲ್ಲಿಗೇ ಕೈಬಿಟ್ಟು ಉತ್ತರಕೊಡದೆ, ಅವನು ಎಷ್ಟೇ ಕೆಣಕಿದರೂ ಲಕ್ಷ್ಯಕ್ಕೆ ತಾರದೆ ಸುಮ್ಮನಿದ್ದನು. ಇದೇನೇ ಇದ್ದರೂ ಅಝೀಜನು ಮಾತ್ರ ಕೆಣಕುವ ಸ್ವಭಾವದವನೇ. ಅವನಾಡಿದ ಮಾತಿಗೆಲ್ಲ ಒಂದು ಉದ್ಧಟತನದ ರಂಗೇರಿ ಅದು ಕರ್ಣಕಠೋರವಾಗುತ್ತಿತ್ತು. ಅವನನ್ನು ನೇಲಕ್ಕೊಯ್ದ ರೆಕ್ಕೆಗಳು ನಿರ್ವಿಣ್ಣವಾಗಿದ್ದರೂ ಧಡಪಡಿಸಿ ಕಾಡದೆ ಕೆಳಗೆ ಬೀಳಲಿಕ್ಕೆ ಅವನನ್ನೂ ಒಪ್ಪುವಂತಿರಲಿಲ್ಲ. ರೋನಿಗೇ ಎದುರುತ್ತರ ಕೊಡಬೇಕೆಂದೇನು ಅವನ ಅಪೇಕ್ಷೆಯಿರಲಿಲ್ಲ. ಮತ್ತು ರೋನಿಯೂ ಅಝೀಜನಿಗೇನು ಕೆಡಕು ಮಾಡಿದ್ದಿಲ್ಲ. ಆದರೆ ಅಝೀಜನಿಗನಿಸಿದ್ದಿಷ್ಟು: ಇವನು—ಈ ಆಂಗ್ಲೋ ಇಂಡಿಯನ್ನನು—ಸುಖಪಡೆಯುವದಕ್ಕೆ ಮೊದಲು ಮನುಷ್ಯನಾಗಬೇಕು; ಮನುಷ್ಯನಂತೆ ವರ್ತಿಸಬೇಕು.' ಎಂದು. ಅಝೀಜನು ಮಿಸ್ ಕ್ವೆಸ್ಟೆಡ್‌ಳ ಮಾತಿನ ಸಹಾನುಭೂತಿಯನ್ನು ದೊರಕಿಸಲಿಕ್ಕಷ್ಟೇ ಅವಳೊಡನೆ ಇಷ್ಟು ವಿಶ್ವಾಸದಿಂದ ಪರಿಚಯ ಬೆಳೆಸಿರಲಿಲ್ಲ; ಅಥವಾ ಪ್ರೊ. ಗೋಡಬೋಲೆಯವರೆದುರಿಗೆ ತನ್ನ ಜಂಭ ಕೊಚ್ಚಿಕೊಂಡು ಪೌರುಷ ತೋರಿಸಲಿಕ್ಕೆ ಅವನು ಹಾಗೆ ಮಾಡಿರಲಿಲ್ಲ. ಈ ನಾಲ್ವರ ಜೂಗ ಕಟ್ಟಿದ್ದೊಂದು ವಿಚಿತ್ರಪ್ರಸಂಗವೇ! ಇತ್ತ ಅಝೀಜನೊ ರೆಕ್ಕೆ ಬಡೆಯುತ್ತಿದ್ದರೂ ನೆಲಕ್ಕಿಳಿಯುತ್ತಿದ್ದಾನೆ; ಅತ್ತ ಅವಳೊ, ಒಮ್ಮಿಂದೊಮ್ಮೆ ಒದಗಿದ ಈ ಅಸಹ್ಯಪ್ರಸಂಗದಿಂದ

ಮುಂಮುಗಾಣಾಗಿದ್ದಾಳೆ; ರೋಸಿಯೊ, ಇನ್ನೂ ಭುಸುಗುಟ್ಟುತ್ತಿದ್ದಾನೆ; ಆ ಬ್ರಾಹ್ಮಣನೊ, ಇದೆಲ್ಲಕ್ಕೂ ಸುಮ್ಮನೆ ಸಾಕ್ಷಿಯಾಗಿ ನೆಲಕ್ಕೆ ಮುಖ ತಗ್ಗಿಸಿ, ಕೈಗಳನ್ನು ಜೋಡಿಸಿಕೊಂಡು 'ಇದರಲ್ಲೇನು ನೋಡುವದಿದೆ?' ಎನ್ನುವ ಹಾಗೆ ನಿರ್ಲಿಪ್ತನಾಗಿ ನಿಂತಿದ್ದಾನೆ. ಫೀಲ್ಡಿಂಗನು ದೂರದಿಂದಲೆ ಇವರೆಲ್ಲರೂ ತನ್ನ ಸುಂದರವಾದ ಹಾಲಿನ ನೀಲೀ ಕಂಭಗಳ ಮಧ್ಯದಲ್ಲಿ ಗುಂಪುಗಟ್ಟಿ ನಿಂತಿದ್ದನ್ನು ನೋಡಿ ಇದೊಂದು ನಾಟಕದೊಳಗಿನ ದೃಶ್ಯವೇ ಎಂದುಕೊಂಡನು.

'ತಾಯಿ, ಇಲ್ಲಿಯ ವರೆಗೆ ಬರುವ ಶ್ರಮ ತೆಗೆದುಕೊಳ್ಳಬೇಡ. ಇದೋ, ನಾವೇ ಅತ್ತ ಹೊರಟಿದ್ದೇವೆ.' ಎಂದು ರೋಸಿಯು ಮಿಸೆಸ್ ಮೂರಳಿಗೆ ತಿಳಿಸಿದನು. ಆಮೇಲೆ ಫೀಲ್ಡಿಂಗನ ಕಡೆಗೆ ಗಡಿಬಿಡಿಯಿಂದ ಹೋಗಿ ಅವನನ್ನು ಒಂದು ಕಡೆ ಕರೆದು, ಸೌಜನ್ಯ ಸಲುಗೆಗಳ ಸೋಗು ಹಾಕಿ, 'ಇಲ್ಲಿ ನೋಡಿರಿ,–ಕ್ಷಮಿಸಬೇಕು ಮತ್ತೆ–ನೀವು ಮಿಸ್ ಕ್ವೆಸ್ಟೆಡ್ ಳೊಬ್ಬಳನ್ನೇ ಇಲ್ಲಿ ಬಿಟ್ಟು ಹೋಗಬಾರದಾಗಿತ್ತೆಂದು ನನಗನಿಸುತ್ತದೆ.' ಎಂದು ಹರಿಹಾಯ್ದನು.

ಫೀಲ್ಡಿಂಗನು ಸಹ ಸೌಜನ್ಯವನ್ನು ಬಿಡದೆ 'ನನಗೆ ಗೊತ್ತಾಗಲಿಲ್ಲ, ಕ್ಷಮಿಸಿ; ಏನಾಯಿತು?'

'ಒಳ್ಳೇದು..ನಾನೇನೋ ಇಲ್ಲಿಯ ಬಿಸಿಲುಂಡ ನಿರಂಕುಶನಹುದು, ಒಪ್ಪಿಬಿಡುತ್ತೇನೆ. ಆದರೆ ಒಬ್ಬ ಇಂಗ್ಲಿಷ ಹುಡಿಗೆಯು ಇಬ್ಬರು ಹಿಂದೀ ಜನರೊಡನೆ ಸಿಗರೇಟು ಸೇದುತ್ತ ಕುಳಿತಿರುವದು ನನಗೆಷ್ಟೂ ಸೇರುವದಿಲ್ಲ.'

'ಸಿಗರೇಟನ್ನು ಹೇಗೆ ತನ್ನ ಇಚ್ಛೆಯಿಂದಲೆ ಸೇದುತ್ತಾಳೋ ಹಾಗೆಯೆ ತನ್ನ ಇಚ್ಛೆಯಿಂದಲೆ ಅವಳು ಹಿಂದೆ ಉಳಿದಿದ್ದಾಳೆ.'

'ಹೌದು, ಅದೆಲ್ಲ ಇಂಗ್ಲಂಡದಲ್ಲಿ ಸರಿ.'

'ಇಲ್ಲೇನು ಅಂಥ ಆಪತ್ತು ಬಂದಿದೆಯೊ ನನಗೆ ತಿಳಿಯಲೊಲ್ಲದು?' ಅಡೀಲಾ ನಡುವೆ ಬಾಯಿಹಾಕಿದಳು.

'ನಿನಗಿಲ್ಲಿ ತಿಳಿಯದಿದ್ದರೆ ಎಲ್ಲಿಯೂ ತಿಳಿಯುವದಿಲ್ಲ..ಆ ಮೂರ್ಖನು ಎಂಥ ಬಾಯಿಬಡಕನೆಂಬುದು ನಿನಗೆ ಗೊತ್ತಿಲ್ಲವೇ?'

ಇತ್ತ ಅಝೀಜನು ಮಿಸೆಸ್ ಮೂರಳ ಹತ್ತಿರ ನಿಂತು ಮೈದುಂಬಿ

ದವನಂತೆ ಅವಳನ್ನು ಹೊಗಳುತ್ತಿದ್ದನು.

' ಅವನು ಬಾಯಿಬಡಕನೇನೂ ಅಲ್ಲ. ಆದರೆ ಅವನೀಗ ಒಳ್ಳೇ ಹುರುಪಿನಲ್ಲಿದ್ದಾನೆ ಅಷ್ಟೆ. ' ಎಂದು ಫೀಲ್ಡಿಂಗನು ರೋನಿಯು ಮಾತನ್ನು ಪರೋಧಿಸಿದನು.

' ಹಾಗಾದರೆ ಇಷ್ಟು ಅತಿರೇಕದ ಹುರುಪಿಗೇಳಲಿಕ್ಕೆ ಕಾರಣವೇನು ?'

' ಅದು ನನಗೆ ಗೊತ್ತಿಲ್ಲ; ನಾನು ಆ ಸ್ಥಳ ಬಿಟ್ಟಾಗ ಮಾತ್ರ ಅವನು ಸರಿಯಾಗಿದ್ದನು. '

' ಈಗ ನಾನಂದಿದ್ದೆಲ್ಲ ಏನೂ ಅಲ್ಲ. . . . ಅದಿರಲಿ, ನಾನು ಅವನೊಡನೆ ಮಾತೇ ಆಡಲಿಲ್ಲ. '

' ಹಾಗೆ ಮಾಡಿದ್ದೇ ಒಳ್ಳೇದಾಯಿತು ಹಾಗಾದರೆ; ಗಂಡಾಂತರವು ಪಾರಾಯಿತು. . . . ಆಗಲಿ ನಿಮ್ಮ ಹೆಣ್ಣುಮಕ್ಕಳನ್ನು ಕರೆದುಕೊಂಡು ಹೋಗಬಹುದು. '

' ಫೀಲ್ಡಿಂಗ್....ಇದೆಲ್ಲವರಿಂದ ಅನ್ಯಥಾಭಾವಿಸಿದ್ದೇನೆಂದು ಮಾತ್ರ ತಿಳಿದುಕೊಳ್ಳಬಾರದು....ನಿನಗೆ ನಮ್ಮೊಡನೆ ಪೋಲೊಕ್ಕೆ ಬರುವದಾಗ ಲಿಕ್ಕಿಲ್ಲೆಂದು ನನಗನಿಸುತ್ತದೆ ? ಬಂದರಂತೂ ಬಹಳ ಸಂತೋಷ ! '

' ಇಲ್ಲ, ನನಗಾಗಲಿಕ್ಕಿಲ್ಲೆಂದೆನಿಸುತ್ತದೆ ; ತಾವು ಕರೆದದ್ದಕ್ಕೆ ಮಾತ್ರ ಬಹಳ ಸಂತೋಷವಾಯಿತು. ನನ್ನ ಕರ್ತವ್ಯದಲ್ಲಿ ಅಲಕ್ಷ್ಯ ಮಾಡಿದೆನೆಂದು ತಮ್ಮ ಭಾವನೆಯಾಗಿದ್ದಕ್ಕಾಗಿ ನನಗೆ ಬಹಳ ವ್ಯಥೆಯಾಗು ತ್ತಿದೆ. ನಾನು ಹಾಗೆ ಮಾಡಬೇಕೆಂದೇನು ಮಾಡಲಿಲ್ಲ ; ಕ್ಷಮಿಸಿ. '

ಅಲ್ಲಿಂದ ಹೋಗಿಬರುತ್ತೇನೆಂದು ಹೇಳುವದು ಸುರುವಾಯಿತು. ಪ್ರತಿಯೊಬ್ಬನೂ ಮನಸ್ಸಿನಲ್ಲಿ ಒಂದಿಲ್ಲೊಂದು ರೀತಿಯಿಂದ ವ್ಯಥೆಗೊಂ ಡಿದ್ದನು, ಕೆರಳಿದ್ದನು. ಅವರು ನಿಂತ ಭೂಮಿಯೊಳಗಿಂದಲೇ ಕ್ರೋಧವು ಹೊರಚಿಮ್ಮಿ ಬರುವಂತೆ ತೋರಿತು. ಸ್ಕಾಟಲಂಡದ ಗುಡ್ಡದ ಮೇಲಾಗಲಿ ಇಟಲಿಯ ಆಲ್ಫ್ಸ ಪರ್ವತದ ಮೇಲಾಗಲಿ ಮನುಷ್ಯನು ಹೋಗಿ ಇಷ್ಟು ಕ್ಷುದ್ರನಾಗಲು ಶಕ್ಯವಿದೆಯೋ ! ಎಂದು ಫೀಲ್ಡಿಂಗನು ಬಹಳ ಆಶ್ಚರ್ಯ ಚಕಿತನಾದನು. ಹಿಂದುಸ್ಥಾನಕ್ಕೆ ಬಂದಮೇಲೆ ಏನಾದರೂ ಪ್ರಯೋಜನ ಪಡೆಯಬೇಕೆಂದರೆ ಜಗತ್ತಿನ ಬ್ಯಾಂಕಿನಲ್ಲಿ ಹಿಂದುಸ್ಥಾನದ ಹೆಸರಿನಿಂದ

ಶಾಂತಿಧನವನ್ನಾರೂ ಕಾಯ್ದಿಟ್ಟಂತೆಯೆ ಕಾಣುವದಿಲ್ಲ. ಹಿಂದುಸ್ತಾನದಲ್ಲಿ ಶಾಂತಿಯೆ ಇಲ್ಲ ಒಂದು, ಇನ್ನು ಇದ್ದರೆ ಸರ್ವಭಕ್ಷಣವಾದ ಸ್ಮಶಾನ ಶಾಂತಿಯೆ ಇದೆಯೆಂದು ಹೇಳಬಹುದು. ಈ ಸರ್ವಭಕ್ಷಣ ಶಾಂತಿಯೆ ಪ್ರೊ. ಗೋಡಬೋಲೆಯವರನ್ನು ನುಂಗಿತ್ತು. ಇತ್ತ ಅಸಹ್ಯವಾಗಿ ಹರಟುವ ಬಾಯಿಬಡಕ ಅಝೀಜ, ಅತ್ತ ಬೆಪ್ಪು ಬಡೆದುನಿಂತ ಮಿಸೆಸ್ ಮೂರ್ ಮತ್ತು ಮಿಸ್ ಕ್ವೆಸ್ಟೆಡ್. ಇನ್ನು ಫೀಲ್ಡಿಂಗ ಮತ್ತು ಹೆಸ್ಲೋಪ್ ಇಬ್ಬರೂ ಹೊರಗೆ ಒಳ್ಳೆ ಉಪಚಾರವುಳ್ಳವರು ; ಆದರೆ ಒಳಗೆ ಮಾತ್ರ ಒಬ್ಬರನ್ನೊಬ್ಬರು ದ್ವೇಷಿಸುವರು.

'ಹೋಗಿಬರುತ್ತೇನೆ ಮಿ. ಫೀಲ್ಡಿಂಗ್, ನಮಸ್ಕಾರ. ನಿಮ್ಮ ಉಪಕಾರ ಬಹಳಾಯಿತು..ಎಂಥ ಸುಂದರವಾದ ಕಟ್ಟಡವದು!'

'ಹೋಗಿ ಬರಬೇಕು ಮಿಸೆಸ್ ಮೂರ್.'

'ಬರುತ್ತೇನೆ ಮಿ. ಫೀಲ್ಡಿಂಗ್, ನಮಸ್ಕಾರ. ಅಂತೂ ಈ ಸಾಯಂ ಕಾಲವನ್ನು ಬಹಳ ಸಂತೋಷದಿಂದ ಕಳೆದಂತಾಯಿತು.'

'ನಮಸ್ಕಾರ ಮಿಸ್ ಕ್ವೆಸ್ಟೆಡ್; ಹೋಗಿಬನ್ನಿ.'

'ನಮಸ್ಕಾರ ಡಾಕ್ಟರ ಅಝೀಜ.'

'ನಮಸ್ಕಾರ ಮಿಸೆಸ್ ಮೂರ್, ಹೋಗಿಬರಬೇಕು.

'ಡಾಕ್ಟರ ಅಝೀಜರಿಗೆ ನಮಸ್ಕಾರ.'

'ನಮಸ್ಕಾರ ಮಿಸ್ ಕ್ವೆಸ್ಟೆಡ್.' ಎಂದು ಅಝೀಜನು ತಾನು ಅವಳೊಡನೆ ಸಾಕಷ್ಟು ಪರಿಚಿತನಾಗಿದ್ದೇನೆಂದು ತೋರಿಸುವುದಕ್ಕಾಗಿ ಅವಳ ಕೈಯನ್ನು ಮೇಲೆ ಕೆಳಗೆ ಜಗ್ಗಾಡಿದನು. 'ನೀವು ಆ ಮನೋಹರವಾದ ಗುಹೆಗಳನ್ನು ಮರೆಯಲಿಕ್ಕಿಲ್ಲಷ್ಟೇ? ಅದನ್ನೆಲ್ಲ ನಾನು ಬೇಗನೆ ಗೊತ್ತು ಮಾಡುತ್ತೇನೆ. ಚಿಂತೆ ಬೇಡ.' ಎಂದನು.

'ಚೆನ್ನಾಯಿತು.'

ಯಾವ ದೆವ್ವವು ಆ ಗೋಡಬೋಲೆಯನ್ನು ಒಡಿದುಕೊಂಡು ಅವನಿಂದ ಆಡಿಸಿತೋ ಏನೋ, ಅವನು 'ನೀವು ಹಿಂದುಸ್ತಾನವನ್ನು ಇಷ್ಟು ಬೇಗನೆ ಬಿಡುವದೆಂದರೆ ಎಂಥ ನಾಚಿಗೇಡಿತನದ ಮಾತು! ನೀವು ಮಾಡಿದ ನಿರ್ಣಯ

ವನ್ನು ಇನ್ನೊಮ್ಮೆ ವಿಚಾರಮಾಡಿರಿ. . ನೀವು ಇಲ್ಲಿ ಇರಲಿಕ್ಕೇಬೇಕು ಎಂದಂದೇ ಬಿಟ್ಟನು.

ಅಡೀಲಾ ಗಾಬರಿಯಾಗಿ 'ಹೋಗಿಬರುತ್ತೇನೆ ಪ್ರೊ. ಗೋಡಬೊಲೆಯವರೇ; ಸಮಸ್ಕಾರ.' ಎಂದು ಹೇಳಿ 'ಹೌದು, ಮರೆತೇ ಬಿಟ್ಟಿದ್ದೆ, ನೀವು ಹಾಡುವದನ್ನು ನಾವು ಕೇಳದೇ ಇರುವದು ನಾಚಿಕೆಗೇಡಿತನದ ಮಾತಲ್ಲವೇ ?' ಎಂದು ತಡವರಿಸಿದಳು.

'ಓ! ಬೇಕಾದರೆ ಈಗಲೇ ಹಾಡಬಹುದು.' ಎಂದು ಉತ್ತರಕೊಟ್ಟು ಸುರುವೇ ಮಾಡಿದನು.

ಅವನ ಸಣ್ಣದನಿಯು ಸಾವಕಾಶವಾಗಿ ಹೊರಟು ಒಂದರ ಹಿಂದೊಂದರಂತೆ ಸಪ್ತಸ್ವರಗಳಲ್ಲಿಯೂ ಮೊದಲು ಓಡಿಯಾಡಿತು. ಅಲ್ಲಿಂದ ಆಲಾಪನೆ ಸುರುವಾಯಿತು. ಆರೋಹ ಅವರೋಹಗಳೂ ನಡೆದವು. ಇದನ್ನು ಕೇಳಿ ಅವರಿಗೆ ಒಮ್ಮೊಮ್ಮೆ ಅದರಲ್ಲಿ ಬರಿ ತಾಳವೇ ಎದ್ದು ಕಾಣುವದು; ಮತ್ತೊಮ್ಮೆ ತಮ್ಮ ಪಾಶ್ಚಾತ್ಯ ಧಾಟಿಯಂತೆಯೆ ಭಾಸವಾಗುವದು. ಆದರೆ ಅವರ ಕಿವಿಗಳು ಹಾಡಿನ ಅರ್ಥವನ್ನೇನೂ ತಿಳಿಯದಂತಾಗಿ ತಲ್ಲಣಗೊಂಡವು. ಆದರೂ ಅವರ ಮನಸ್ಸು ಕಠಿಣವಲ್ಲದ, ಅಸಹ್ಯವಲ್ಲದ ತಿಳಿಯದ ಆ ಇಂಪು ಸ್ವರಗಳ ಚಕ್ರವ್ಯೂಹದಲ್ಲಿ ತಿರುಗಹತ್ತಿತು. ಅದೊಂದು ಅಪರಿಚಿತ ಪಕ್ಷಿಯ ಹಾಡೆಂದು ಅವರಿಗನಿಸಿತು. ಆದರೆ ಅಲ್ಲಿಯ ಸೇವಕರಿಗೆ ಮಾತ್ರ ಇವನ ಹಾಡಿನ ಸ್ವಾರಸ್ಯ ಹೆಚ್ಚು ತಿಳಿಯಿತು. ಅವರು ಮೆಚ್ಚಿ ತಮ್ಮ ತಮ್ಮೊಳಗೆ ತಲೆಹಾಕಿದರು. ಕೆರೆಯಲ್ಲಿ ಕೆಲಸಮಾಡುವನು—ಮೈಮೇಲೆ ಒಂದು ದುಡ್ಡಿನಷ್ಟು ಅರಿವೆಯಿರಲಿಲ್ಲ—ತನ್ನ ಕೆಲಸ ಬಿಟ್ಟು ಬಂದು ನಿಂತನು. ಹಾಡು ಕೇಳಿ ಮೈಮರೆತು ಬಾಯಿ ತೆರೆದನು. ಹೀಗಿರುವಾಗ ಆ ಸ್ವರಗಳು ಹಾಗೇ ಸಾಗಿ ಕೆಲನಿಮಿಷಗಳಾದಮೇಲೆ ಸುರುವಾಗಿದ್ದಂತೆಯೆ ಒಮ್ಮಿಂದೊಮ್ಮೆ ನಿಂತುಬಿಟ್ಟವು.

'ಚೆನ್ನಾಗಿದೆ; ಯಾವ ಹಾಡು ?' ಎಂದು ಫೀಲ್ಡಿಂಗನು ಕೇಳಿದನು.

'ಆಗಲಿ; ಎಲ್ಲವನ್ನೂ ವಿವರವಾಗಿ ಹೇಳುತ್ತೇನೆ. ಅದೊಂದು ಧಾರ್ಮಿಕ ಹಾಡು. ಹಾಡುವವನು ತಾನೊಬ್ಬ ಗೌಳಗಿತ್ತಿಯೆಂದು ತಿಳಿದುಕೊಂಡು ಶ್ರೀಕೃಷ್ಣನಿಗೆ 'ಬಾ, ನನ್ನೆಡೆಗೆ ಬಾ' ಎಂದು ಕರೆಯುತ್ತಾನೆ.

ದೇವರು ಬರಲಿಕ್ಕೊಪ್ಪುವದಿಲ್ಲ. ಅಲ್ಲಿಂದ ನಮ್ರನಾಗಿ ಮತ್ತೆ ' ನನ್ನೆಡೆಗಷ್ಟೇ ಬರಬೇಡ. ನೀನು ನೂರು ಕೃಷ್ಣರಾಗಿ ನನ್ನ ನೂರು ಗೆಳತಿಯರ ಕಡೆಗೆ ಒಬ್ಬರಿಗೊಬ್ಬನಂತೆ ಹೋಗು. ನನ್ನ ಕಡೆಗೂ ಒಬ್ಬನಾಗಿ ಬಾ. ' ಎಂದು ಬೇಡುತ್ತಾನೆ. ಅವನು ಆಗಲೂ ಬರಲೊಪ್ಪುವದಿಲ್ಲ. ಹೀಗೇ ಸಾಗುತ್ತದೆ ಇದು. ಈ ಹಾಡು ಸಂಧ್ಯಾಕಾಲಕ್ಕೆ ಸರಿಯಾದ ರಾಗದಲ್ಲಿಯೇ ರಚಿಸಲ್ಪಟ್ಟಿದೆ. '

' ಆದರೆ ಆ ಕನ್ನಯ್ಯನು ಇನ್ನಾವುದೊ ಒಂದು ಹಾಡಿನಲ್ಲಿ ಬರುತ್ತಾನೆಂದು ಅನಿಸುತ್ತದೆ? ' ಎಂದು ಮಿಸೆಸ್ ಮೂರಳು ಮೆಲ್ಲನೆ ನುಡಿದಳು.

' ಛೇ, ಇಲ್ಲ. ಅವನು ಬರಲಿಕ್ಕೆ ಒಪ್ಪುವದಿಲ್ಲ. ' ಎಂದು ಅವಳ ಪ್ರಶ್ನೆಯ ಮರ್ಮ ತಿಳಿಯದೆ ಗೋಡಬೊಲೆಯು ಮತ್ತೆ ಮತ್ತೆ ಹೇಳಿದನು. ' ನಾನು ಅವನಿಗೆ ಬಾ, ಬಾ, ಬಾ, ಬಾ, ಎಂದು ಕರೆಯುತ್ತೇನೆ. ಅವನು ಬರಲಿಕ್ಕೇ ಅಲಕ್ಷ್ಯ ಮಾಡುತ್ತಾನೆ. '

ರೋನಿಯ ಕಾಲಸಪ್ಪಳವು ಆಗಲೆ ಕೇಳದಾಗಿತ್ತು. ಎಲ್ಲ ಕಡೆಗೂ ಒಂದು ಕ್ಷಣ ಹೊತ್ತು ತೀರ ನಿಶ್ಯಬ್ದವಾಗಿತ್ತು. ತೆರೆಗಳು ನೀರನ್ನು ಕದಡಲಿಲ್ಲ. ಗಿಡದೆಲೆಗಳು ಅಲುಗಾಡಲಿಲ್ಲ.

—

## ಪ್ರಕರಣ ೮

ಮಿಸ್ ಕ್ವೆಸ್ಟೆಡ್‌ಳಿಗೆ ರೋನಿಯ ಸ್ವಭಾವ ಪರಿಚಯ ಇಂಗ್ಲೆಂಡದಲ್ಲಿಯೆ ಚೆನ್ನಾಗಿತ್ತು. ಆದರೂ ಮದುವೆಯಾಗುವ ಮೊದಲು ಅವನನ್ನೊಮ್ಮೆ ನೋಡಬೇಕೆಂದೆನಿಸಿದ್ದು ಒಳಿತೇ ಆಯಿತೆಂದುಕೊಂಡಳು. ಹಿಂದುಸ್ಥಾನವು ಅವನ ಸ್ವಭಾವಕ್ಕೆ ಆಗಲೆ ಕವಲುಗಳನ್ನೊಡೆಯಿಸಿತ್ತು. ಇಂಗ್ಲೆಂಡದಲ್ಲಿದ್ದಾಗ ಅವನಲ್ಲಿಲ್ಲದ ಸ್ವಸಂತುಷ್ಟಿ, ಛಿದ್ರಾನ್ವೇಷಣ, ನಯದ ಸೂಕ್ಷ್ಮತೆಯ ಅಭಾವ, ಇವೆಲ್ಲವೂ ಈ ಉಷ್ಣಕಟಿಬಂಧ ದೇಶಕ್ಕೆ ಬಂದದ್ದರಿಂದ ಅವನಲ್ಲಿ ಹುಟ್ಟಿ ಬೆಳೆದಿದ್ದವು. ತನ್ನ ಸಂಗಡಿಗರ ಮನಸ್ಸನ್ನು ತಿಳಿದುಕೊಳ್ಳಲು ಈಗ ಹೆಚ್ಚೆಚ್ಚು

ಅಲಕ್ಷ್ಯಮಾಡಹತ್ತಿದನು. ತನಗನಿಸಿದ್ದೇ ಸರಿಯೆಂಬ ಹೆಮ್ಮೆ ಅವನಲ್ಲಂಕುರಿಸಿತ್ತು. ಒಂದು ವೇಳೆ ಅವನಿಗನಿಸಿದ್ದೇ ತಪ್ಪಿರಬಹುದು. ಆದರೆ ಅವನಿಗೇನೂ ಅದರ ಪರಿವೆಯಿರಲಿಲ್ಲ. ತನ್ನದು ತಪ್ಪೆಂದು ಇನ್ನೊಬ್ಬರು ತೋರಿಸಿಕೊಡಲು ಬಂದರೆ ಮಾತ್ರ ಹಾವಿನಂತೆ ಹೆಡೆ ಅಪ್ಪಳಿಸುತ್ತಿದ್ದನು. ಅಂತೇ ಕ್ವೆಸ್ಟೆಡ್‌ಳು ಯಾವುದನ್ನೂ ತನಗೆ ಸಿದ್ಧಮಾಡಿ ತೋರಿಸುವ ಗೊಡವೆಗೇ ಹೋಗಬಾರದೆಂದು ಅವನೇ ಅವಳಿಗೆ ಯಾವಾಗಲೂ ಸೂಕ್ಷ್ಮವಾಗಿ ತಿಳಿಸುತ್ತಿದ್ದನು. ಅವಳೆತ್ತಿದ ವಿಷಯವೇ ವಿಷಯಾಂತರವೆಂದೂ ಅವಳು ಹೂಡಿದ ವಾದವು ನಿರ್ಣಯಿಸಬಹುದಾಗಿದ್ದರೂ ವ್ಯರ್ಥವಾದದ್ದೆಂದೂ ಅವಳಿಗಿಂತ ತನಗೇ ಹೆಚ್ಚು ಜ್ಞಾನವಿದೆಯೆಂದೂ ಅವಳಿಗೆ ತನ್ನ ಅನುಭವವನ್ನು ತಾನೇ ಅರ್ಥಮಾಡಿಕೊಳ್ಳುವ ಸಾಮರ್ಥ್ಯವಿಲ್ಲವೆಂದೂ ಅವಳಿನ್ನೂ ತುಟಿಹಾಲು ತೊಡೆಯದ ಹಸುಳೆಯೆಂದೂ ಒಂದು ರೀತಿಯ ಮುದಲಿಕೆಯಿಂದ, ಒಂದು ರೀತಿಯ ದರ್ಪದಿಂದ ಮೇಲಿಂದ ಮೇಲೆ ಅವಳಿಗೆ ಹೇಳುತ್ತಿದ್ದನು. ಅವನ ಕಲ್ಪನೆಯಲ್ಲಿ, ಇಡೀ ಹಿಂದುಸ್ತಾನವನ್ನು ತಿಳಿದುಕೊಳ್ಳಬೇಕಾದರೆ ಇಂಗ್ಲಂಡದಲ್ಲಿಯ ಒಂದು ಸಾರ್ವಜನಿಕ ಶಾಲೆ, ಒಂದು ಲಂಡನ್ ವಿಶ್ವವಿದ್ಯಾಲಯ, ಒಂದು ವರ್ಷ ಒಬ್ಬ ಕಂಠಪಾಠ ಮಾಡಿಸುವ ಪಂಡಿತನ ಹತ್ತಿರ, ಹಿಂದುಸ್ತಾನದ ಪ್ರಾಂತಗಳಲ್ಲಿಯ ಕೆಲವೊಂದು ಅಧಿಕಾರಸ್ಥಾನಗಳ ಕ್ರಮವಾದ ಬಡತಿ, ಒಮ್ಮೆ ಕುದುರೆಯಿಂದ ಬೀಳುವದು, ಒಮ್ಮೆ ಜ್ವರದಿಂದ ಬೀಳುವದು— ಇಷ್ಟೇ ಸಾಕು ಎಂದಿತ್ತು. ಆದರೆ ಮಿಸ್ ಕ್ವೆಸ್ಟೆಡ್‌ಳ ಕಲ್ಪನೆಯು ಮಾತ್ರ ಇದಕ್ಕೂ ತೀರ ಬೇರೆಯಾಗಿತ್ತು. ಅವಳ ಕಲ್ಪನಾಸೃಷ್ಟಿಯಲ್ಲಿ ರೋನಿಯ ಈ ಒಂದೇ ಒಂದು ವರ್ಷದ ಕಸುಕು ಅನುಭವಕ್ಕಿಂತ ಇಪ್ಪತ್ತು ವರ್ಷಗಳವರೆಗೆ ಈ ದೇಶದಲ್ಲಿದ್ದ ಕ್ಯಾಲೆಂಡರ ಮತ್ತು ಟರ್ಟನ್ ಇವರ ಹಣ್ಣಾದ ಅನುಭವಕ್ಕೇ ಹೆಚ್ಚಿನ ಬೆಲೆ ಬಂತು. ರೋನಿಯು ತನ್ನ ಮಟ್ಟಿಗೆ ಹೆಚ್ಚಿನದೇನೂ ಹೇಳಿಕೊಳ್ಳಲಿಲ್ಲ. ಅವನು ಹಾಗೆ ಮಾಡಬಹುದೆಂದು ಅವಳೇನೂ ಬಗೆದಿದ್ದಳು. ಆದರೆ ಅವನ ಹಸಿಬಿಸಿ ಅಧಿಕಾರದ ದರ್ಪ, ಅದರಿಂದಲೇ ಹುಟ್ಟಿ ಬಂದಂತಿದ್ದ ಅವನ 'ನಾನು ಪೂರ್ಣನಲ್ಲ, ನಾನು ಪೂರ್ಣನಲ್ಲ; ಆದರೆ..' ಎಂಬ ಹುರುಳಿಲ್ಲದ ಶುಂಭ ಮಾತು, ಇವು ಮಾತ್ರ ಅವಳನ್ನು ಕಟುಕಿ ಕೆರಳಿಸಿದವು.

ರೋನಿಯು ಫೀಲ್ಡಿಂಗನ ಮನೆಯಲ್ಲಿ ಎಂಥ ಒರಟುತನದಿಂದ ನಡೆದು ಕೊಳ್ಳುವದದು ! ತನ್ನ ಮನಸ್ಸಿನ ಸಿಡಿಮಿಡಿಯನ್ನು ಎಲ್ಲರಿಗೂ ತೋರಿಸಿ, ನಡೆದ ಮಾತಿನ ಸ್ವಾರಸ್ಯವನ್ನು ಕೆಡಿಸುವದೇನು ! ಗುಂಗುಹಿಡಿಸುವ ಹಾಡು ನಡೆದಾಗ ಒಮ್ಮೆಲೆ ಎದ್ದು ಹೊರಟುಹೋಗುವದೇನು ! ಎಲ್ಲವೂ ಅಸಹ್ಯವಾಯಿತು. ಕೊನೆಗೆ ಅವನು ಟಮ್ ಟಮ್‌ದಲ್ಲಿ ತಮ್ಮವರನ್ನು ಕುಳ್ಳಿರಿಸಿಕೊಂಡು ಹೋಗುವಾಗ ಇದೆಲ್ಲದರ ಫಲವಾಗಿ ಅಡೀಲಾ ಮಾತ್ರ ಸುಮ್ಮನೆ ಸಿಟ್ಟಿಗೆದ್ದ ಹಾವಿನಂತೆ ಭುಸುಗುಟ್ಟುತ್ತಿದ್ದಳು. ಹೊತ್ತು ನೋಡಿ ಅವನನ್ನು ಕಚ್ಚದೆ ಬಿಡಬಾರದೆಂದು ಒಪ್ಪಿಸಿ ಕುಳಿತಳು. ರೋನಿಯಲ್ಲಿಯೂ ಆವೇಶ, ಸಿಟ್ಟು ತುಂಬಿಕೊಂಡದ್ದರಿಂದ ಅವಳಿಗೆ ಬಹಳೊತ್ತು ಕಾಯು ಬೇಕಾಗಿ ಬರಲಿಲ್ಲ. ಇನ್ನೂ ಅವರು ಕಾಲೇಜನ್ನು ಬಿಟ್ಟು ಸ್ವಲ್ಪಾದರೂ ದೂರ ಬಾದಿದ್ದರೋ ಇಲ್ಲೋ ಅಷ್ಟರಲ್ಲಿಯೆ ತನ್ನ ಮಗ್ಗುಲಿಗೆ ಕುಳಿತ ತಾಯಿಯನ್ನು ರೋನಿಯು 'ಅದೇನೋ ಆ ಮಾರಬಾರ ಗುಹೆಗಳ ಸುದ್ದಿ ಹೊರಟಿತ್ತಲ್ಲ, ಏನದು ?' ಎಂದು ಕೇಳುವದು ಮಿಸ್ ಕ್ವೆಸ್ಟೆಡ್‌ಳಿಗೆ ಕೇಳಿಸಿತು. ಕೂಡಲೇ ಗುಂಡುಹಾರಿಸುವದನ್ನು ಸುರುವು ಮಾಡಿಯೇಬಿಟ್ಟಳು.

'ಮಿಸೆಸ್ ಮೂರ್ ! ಆ ನಿಮ್ಮ ಉಲ್ಲಾಸಿ ಡಾಕ್ಟರನು ತನ್ನ ಮನೆಯಲ್ಲಿ 'ಪಾರ್ಟಿ' ಕೊಡುವದರ ಬದಲು ಈಗ ಒಂದು ವನಭೋಜನವನ್ನೇ ಪರ್ಯಟು ಮಾಡಿದ್ದಾನೆ, ಅಲ್ಲವೆ ? ನಾವು ಅವನಿಗೆ ಅಲ್ಲಿ ಭೆಟ್ಟಿಯಾಗಬೇಕು ! ನಾವು ಅಂದರೆ—ಮಿ. ಫೀಲ್ಡಿಂಗ್, ಪ್ರೊ ಗೋಡಬೊಲೆ, ನೀವು ಮತ್ತು ನಾನು—ಅದೇ ಆ ನಮ್ಮ ಗುಂಪು.'

'ಅಂದರೆ ಎಲ್ಲಿ ?'

'ಮಾರಬಾರ ಗುಹೆಗಳಲ್ಲಿ.'

'ಹೀಗೋ ? ಬಹಳ ಸಂತೋಷವಾಯಿತು.' ಎಂದು ಸ್ವಲ್ಪ ಹೊತ್ತು ಸುಮ್ಮನಿದ್ದು ಅಲ್ಲಿಂದ 'ಅವನು ಆ ಕಾರ್ಯಕ್ರಮದ ವಿವರಗಳನ್ನೆಲ್ಲ ಹೇಳಿದನೇನು ?' ಎಂದು ಕೆದರಿ ಕೇಳಿದನು.

'ಇಲ್ಲ, ನೀನು ಅವನೊಡನೆ ಮಾತನಾಡಿದ್ದರೆ ನಾವು ಅವುಗಳನ್ನೆಲ್ಲ ನಿರ್ಣಯಿಸಬಹುದಾಗಿತ್ತು.'

ರೋನಿಯು ನಗುತ್ತ ತಲೆಯಲ್ಲಾಡಿಸಿದನು.

‘ ಏಕೆ, ನಾನು ನಗುವ ಹಾಗೆ ಏನಾದರೂ ಮಾತಾಡಿದೆನೇ ? ’

‘ ಇಲ್ಲ, ನೀವು ಅವನ ಮಾತೆತ್ತಿದಾಗ ನಾನು ಅವನ ಕುತ್ತಿಗೆಯ ಮೇಲೆ ಅಸ್ತವ್ಯಸ್ತವಾಗಿ ಏರಿ ಬಿದ್ದಿದ್ದ ಕಾಲರನ್ನು ನೆನೆಯುತ್ತಿದ್ದೆನು. ’

‘ ಸರಿ, ನೀವು ಗುಹೆಗಳ ವಿಷಯವಾಗಿಯೇ ವಿಚಾರಿಸುತ್ತಿದ್ದೀರೆಂದು ನಾನು ತಿಳಿದಿದ್ದೆನು. ’

‘ ಹಃ ಹಃ ಹಃ, ಅಲ್ಲ. ಆ ನಿಮ್ಮ ಡಾಕ್ಟರನು ಅಡಿಯಿಂದ ಮುಡಿಯ ವರೆಗೆ ಒಳ್ಳೇ ‘ ಟಾಪ್ ಟೇಪ್ ’ ಡ್ರೆಸ್ ಮಾಡಿ ಆ ಕಾಲರಿನ ಹಿಂದಿನ ಗುಂಡಿ ಹಾಕುವದನ್ನೇ ಮರೆತಿದ್ದನು ! ಇದೇ ನೋಡಿರಿ ಈ ದೇಶೀ ಮನುಷ್ಯರ ಲಕ್ಷಣ. ಎಲ್ಲ ಮಾಡಿ ಈ ಸಣ್ಣ ಪುಟ್ಟ ವಿವರಗಳಿಗೇ ಲಕ್ಷ್ಯಕೊಡುವಂತಿಲ್ಲ ಇದೇ ಈ ಜನರ ಸಡಿಲುಸ್ವಭಾವವನ್ನು ಸ್ಪಷ್ಟಗೊಳಿಸುತ್ತಿದೆ. ಇನ್ನು ಎಷ್ಟೋ ಮೈಲು ದೂರವಿದ್ದ ಆ ಗುಹೆಗಳಲ್ಲಿ ಭೆಟ್ಟಿಯಾಗುವದಂತೂ ಎಂಥ ಮಾತೋ ಏನೋ ! ಅವಕ್ಕೆ ಹೋಗುವದೆಂದರೆ ‘ ಚಾರಿಂಗ್ ಕ್ರಾಸ್ ’ದ ಗಡಿಯಾರಕ್ಕೆ ಹೋದಂತೆಂದು ತಿಳಿದಿದ್ದೀರಾ ? ’

‘ ಹಾಗಾದರೆ ನೀವು ಅವುಗಳನ್ನು ನೋಡಿದ್ದೀರೇನು ? ’

‘ ಇಲ್ಲ. ಆದರೆ ಸಹಜ ರೀತಿಯಿಂದ ಅವುಗಳ ವಿಷಯ ಸಾಕಷ್ಟು ಕೇಳಿಬಲ್ಲೆನು. ’

‘ ಓ ! ಸಹಜರೀತಿಯಿಂದ ! ’

‘ ತಾಯಿ, ನೀವೂ ಈ ಆವಸರದ ಪ್ರವಾಸಕ್ಕೆ ವಚನಬದ್ಧರಾಗಿದ್ದೀರಾ ? ’

‘ ನಿನ್ನ ತಾಯಿ, ಯಾವುದಕ್ಕೂ ಬದ್ಧಳಾಗಿಲ್ಲ. ಎಂದು ಅನಪೇಕ್ಷಿತವಾಗಿ ಮಿಸೆಸ್ ಮೂರಳು ನುಡಿದಳು. ‘ ಅದರಲ್ಲಿ ಈ ಪೋಲೊ ಆಟ ನೋಡುವದಕ್ಕಂತೂ ಅವಳು ಬದ್ಧಳಾಗಿಲ್ಲವಲ್ಲ ? ನೀನು ದಯಮಾಡಿ ಗಾಡಿಯನ್ನು ಮೊದಲು ಬಂಗ್ಲೆಕ್ಕೆ ಹೊಡೆದು ಅಲ್ಲಿ ನನ್ನನ್ನಿಳಿಸಿ ಮುಂದೆ ಹೋಗಬಹುದು ನನಗೀಗ ವಿಶ್ರಾಂತಿ ಬೇಕಾಗಿದೆ. ’

‘ ನನ್ನನ್ನೂ ಇಳಿಸಿಬಿಡಿರಿ. ನನಗೂ ಏಕೋ ಆ ಆಟ ನೋಡುವದು ಬೇಡಾಗಿದೆ. ’ ಎಂದು ಅಡೀಲಾ ದನಿಗೂಡಿಸಿದಳು.

‘ ಹಾಗಾದರೆ ನಿಮ್ಮನ್ನು ಬಿಡುವದಕ್ಕಿಂತ ಪೋಲೋಕ್ಕೆ ಹೋಗುವ

ದನ್ನೇ ಬಿಡುವದು ಹೆಚ್ಚು ಸುಲಭವೆಂದು ತೋರುತ್ತದೆ. ' ಎಂದು ರೋನಿಯು ಕಿಡಿಕಿಡಿಯಾಗಿ ನುಡಿದನು. ದಣಿದು ನಿರಾಶೆ ಹೊಂದಿ ಕೊನೆಗೆ ಕ್ರೋಧಪರವಶನಾಗಿ, ದೊಡ್ಡದೊಂದು ಉಪನ್ಯಾಸಮಾಡುವವನ ದನಿಯಲ್ಲಿ 'ನೀವು ಈ ಹಿಂದೀ ಜನರೊಡನೆ ಊಟಮಾಡುತ್ತ ಕೂಡುವದು ನನಗೆಷ್ಟೂ ಸಹಿಸದು. ನಿಮಗೆ ಮಾರವಾರ ಗುಹೆಗಳನ್ನು ನೋಡುವದೇ ಬೇಕಾಗಿದ್ದರೆ ಬ್ರಿಟಿಶ ಜನರ ವ್ಯವಸ್ಥೆಯಲ್ಲಿ ನೀವು ಹೋಗಬಹುದು. ' ಎಂದು ಕೂಗಿಕೊಂಡನು.

'ನಾನು ಈ ಗುಹೆಗಳ ವಿಷಯವನ್ನೇ ಕೇಳಿಲ್ಲ; ಅವು ಯಾವು, ಎಲ್ಲಿವೆ, ಎಂಬುದೂ ಗೊತ್ತಿಲ್ಲ. ಆದರೆ (ಮಗ್ಗಲಿನ ಗಾದಿಯನ್ನು ತಟ್ಟಿ) ಸುಮ್ಮನೆ ನೀನಿಷ್ಟು ಬಡಿದಾಡಿ ಆಯಾಸಮಾಡಿಕೊಳ್ಳುವದು ಮಾತ್ರ ನನಗೆ ಬೇಡ. ' ಎಂದು ಮಿಸೆಸ್ ಮೂರಳು ಸಂತಾಪದಿಂದ ನುಡಿದಳು.

ಮುದಿಕೆಯ ಸಂತಾಪದ ಮಾತನ್ನು ಕೇಳಿ ಅವರಿಬ್ಬರಿಗೂ ನಾಚಿಕೆಯಾಯಿತು. ಅವಳನ್ನು ಬಂಗ್ಲೆಯಲ್ಲಿಳಿಸಿ, ಅವಳ ಸಮಾಧಾನಕ್ಕಾಗಿ ಇಬ್ಬರೂ ಪೋಲೋಕ್ಕೆ ಹೊರಟುಹೋದರು. ಉದ್ವಿಗ್ನಗೊಂಡ ಅವರ ಮನಸ್ಸನ್ನೂ ಕಾರ್ಮೋಡ ಕವಿದ ಆಕಾಶದಂತೆ ಗುಡುಗಾಡುತ್ತಿದ್ದರೂ ಮಳೆಗರೆಯಲಿಲ್ಲ. ಮಿಸಾ ಕ್ವೆಸ್ಟೆಡ್‌ಳು ಇಷ್ಟೊತ್ತಿನ ವರೆಗಿನ ತನ್ನ ನಡತೆಯ ವಿಚಾರವನ್ನೇ ಮಾಡುತ್ತಿದ್ದಳು. ಆವಳಿಗೆ ಅದೇಕೊ ಸರಿಯೆನಿಸಲಿಲ್ಲ. ರೋನಿಯನ್ನೂ ತನ್ನನ್ನೂ ತೂಗಿ ನೋಡಿಕೊಂಡು ತನ್ನ ಮದುವೆಯ ವಿಷಯಕ್ಕೆ ಸರಿಯಾಗಿ ನಿರ್ಣಯಿಸುವದನ್ನು ಬಿಟ್ಟು ಯಾವುದೋ ಆ ಮಾವಿನ ಹಣ್ಣಿನ ಮಾತು ಹೊರಟಾಗ, ಅದೂ ಯಾರಿಗಾರೊ ನಾಲ್ಕು ಜನ ಕೂಡಿದ ಗುಂಪಿನಲ್ಲಿ, ತನಗೆ ಅದೇಕೊ ಈ ಹಿಂದುಸ್ತಾನದಲ್ಲಿ ನಿಲ್ಲುವ ಇಚ್ಛೆಯಿಲ್ಲೆಂದು ಹೇಳಿ, ತಾನು ರೋನಿಯನ್ನು ಮದುವೆಯಾಗುವದಿಲ್ಲೆಂಬ ಸೂಚ್ಯಾರ್ಥದ ಧ್ವನಿಯನ್ನೂ ಹುಟ್ಟಿಸಿದಳು. ಆದರೆ ಎಷ್ಟು ನಯವಾಗಿ ಸೂಕ್ಷ್ಮವಾಗಿ ಹೇಳುವದದು! ಸುಸಂಸ್ಕೃತ ಹುಡಿಗಿಯರ ರೀತಿಯೇ ಇದು! ಹಾಗೆ ನೋಡಿದರೆ ಅವಳದನ್ನು ಅವನಿಗೇ ಹೇಳುವದವಶ್ಯವಿತ್ತು. ಆದರೆ, ಪಾಪ, ಹೇಳಬೇಕೆಂದರೆ ಅದರಲ್ಲಿ ಹೇಳುವದೇನೂ ಉಳಿದಿರಲೇ ಇಲ್ಲ. ಅವಳ ಮೈಮನಸುಗಳಿಗೆ ಪ್ರಿಯವಾದ ಆ 'ಸಾದ್ಯಂತ ಮಾತು' ಹಾಗೇ 'ಮುಂದೆ

ಹೇಳೋಣ; ಇನ್ನೂ ಮುಂದೆ ಹೇಳೋಣ' ಎಂದು ಮುಂದಕ್ಕೆ ಜಾರಿ ಜಾರಿ ಹೋಗಿ ಕೊನೆಗೆ ಹೇಳದೇ ಹಾಗೆಯೇ ಉಳಿದು ಬಿಟ್ಟಿತು. ಈ ಸಂಜೆಯ ತಂಪು ಹೊತ್ತಿನಲ್ಲಿ ಅವನಿಗೆ ಒಗ್ಗದ ಈ ಮಾತನ್ನು—ಅದರಲ್ಲಿಯೂ ಅವನ ನಡತೆಗೇ ಕೊಂಕಿಟ್ಟ ಮಾತನ್ನು—ಹೇಳುವದರಲ್ಲಿ ಅವಳಿಗೇನೂ ಅರ್ಥ ಕಾಣಿಸಲಿಲ್ಲ .... ಚಂದ್ರಪುರ ಪಟ್ಟಣದ ಮಹಾದ್ವಾರದ ಹತ್ತಿರುವ ದೊಡ್ಡ ಮೈದಾನದಲ್ಲಿ ಆ ಪೋಲೊ ಆಟ ನಡೆದಿತ್ತು. ಸೂರ್ಯನು ಆಗಲೆ ಮುಳುಗುವದರಲ್ಲಿದ್ದನು. ಪ್ರತಿಯೊಂದು ಗಿಡವೂ ರಾತ್ರಿಯ ಆಗಮನವನ್ನು ಸೂಚಿಸುತ್ತಿತ್ತು. ಅವರು ಅಲ್ಲಿ ಕೂಡಿದ್ದ ಆ ಅಧಿಕಾರಿಗಳ ಗುಂಪನ್ನು ಬಿಟ್ಟು ದೂರದಲ್ಲಿರುವ ಒಂದು ಸ್ಥಳಕ್ಕೆ ಬಂದರು. ಅಲ್ಲಿಗೆ ಬಂದೊಡನೆ ಮಿಸ್ ಕ್ವೆಸ್ಟೆಡ್'ಳು ಇಷ್ಟೊತ್ತಿನ ವರೆಗೆ ತಾನು ಅರಗಿಸಲಾರದೆ ಒಳಗೆ ತುಂಬಿಟ್ಟುಕೊಂಡಿದ್ದ ಆ ಮಾತನ್ನು ಹೊರಗೆ ಹಾಕಿದಳು. 'ನಾವೊಮ್ಮೆ ಸಾದ್ಯಂತವಾಗಿ ಮಾತಾಡಬೇಕಾಗಿದೆ ರೋನಿ?'

'ಈಗ ಬೇಡ; ನನ್ನ ಮನಸ್ಸು ಸರಿಯಾಗಿಲ್ಲ. ಕ್ಷಮಿಸು.' ಎಂದು ಹೇಳಿ 'ನಿನಗೂ ನನ್ನ ತಾಯಿಗೂ ಆ ಗುಹೆಗಳಿಗೆ ಹೋಗಲು ಕಟ್ಟಪ್ಪಣೆ ಮಾಡಬೇಕೆಂದು ನನ್ನ ಉದ್ದೇಶವಿರಲಿಲ್ಲ. ಈ ದಿನ ಮುಂಜಾನೆ ಆ ಬಂಗಾಲಿಗಳು ನಿಮ್ಮನ್ನು ಅಲ್ಲಿ ಹಾಗೆ ಬಿಟ್ಟದ್ದನ್ನು ನೋಡಿ ನನಗೆ ಬಹಳ ದುಃಖವಾಯಿತು. ಇಂಥ ಪ್ರಸಂಗವು ಮೇಲಿಂದ ಮೇಲೆ ಬರಬಾರದೆಂದು ನನ್ನ ಆಶೆ.' ಎಂದು ತನ್ನ ಮಾತನ್ನು ಸರಿಮಾಡಿಕೊಳ್ಳಲು ಹವಣಿಸಿದನು.

'ಅದರ ವಿಷಯವಲ್ಲ ನಾನು......'

'ಇಲ್ಲ ಇಲ್ಲ, ಆದರೆ ಅಝೀಜನು ಸಹ ಈ ಗುಹೆಗಳ ವಿಷಯದಲ್ಲಿ ಇಂಥದೇ ಏನಾದರೊಂದು ಕಲಕು-ಮಲಕು ಮಾಡಬಹುದು. ಬೇಕಾದರೆ ಅವನ ದನಿಯ ಮೇಲಿಂದ ನಾನು ಹೇಳಬಲ್ಲೆ, ಅವನ ಆ ಆಮಂತ್ರಣದಲ್ಲಿ ಏನೂ ಅರ್ಥವಿರಲಿಲ್ಲೆಂದು. ಅದು ಸುಮ್ಮನೆ ನಿಮ್ಮೊಡನೆ ಸರಸವಾಡುವದಕ್ಕಾಗಿ ಒಂದು ನೆಪ.'

'ಅಲ್ಲ, ಅಲ್ಲ. ನಾನು ಮಾತನಾಡುವದು ತೀರ ಬೇರೆಯಿದೆ; ಆ ಗುಹೆಗಳಿಗೇನೂ ಸಂಬಂಧಪಟ್ಟದ್ದಲ್ಲ.' ಎಂದ ನಿರ್ವರ್ಣವಾದ ಅಲ್ಲಿಯ ಹುಲ್ಲಿನ

ಕಡೆಗೆ ನೆಟ್ಟನೋಟದಿಂದ ನೋಡಿ 'ನಾವು ಮದುವೆಯಾಗಬಾರದೆಂದು ಕೊನೆಗೆ ನಿಶ್ಚಯಿಸಿದ್ದೇನೆ.' ಎಂದು ಮಾತು ಮುಗಿಸಿದಳು.

ರೋನಿಗೆ ಕುತ್ತಿಗೆ ಹಿಚುಕಿದಂತಾಯಿತು. ಅಡೀಲಾ ತನ್ನ ದೇಶಕ್ಕೆ ಹೋದ ಮೇಲೆ ತಿರುಗಿ ಈ ದೇಶಕ್ಕೆ ಬರುವದಿಲ್ಲೆಂದು ಅಝೀಜನು ಆಗಾಗ ಹೇಳಿದ್ದನ್ನು ಅವನು ಕೇಳಿದ್ದನು. ಆದರೆ ಅದನ್ನು ನಂಬಿರಲಿಲ್ಲ. ಇಂಗ್ಲಿಷ ಮನುಷ್ಯರಿಬ್ಬರ ನಡುವೆ ಒಬ್ಬ ಹಿಂದೀ ಮನುಷ್ಯನು ಸುದ್ದಿಗಾರನಾಗಿ ಓಡಾಡುವನೆಂದು ಅವನೆಂದೂ ಭಾವಿಸಿರಲಿಲ್ಲ. ಅಂತೇ ಅತ್ತ ಕಡೆಗೆ ಅಷ್ಟು ಲಕ್ಷ್ಯ ಕೊಟ್ಟಿರಲಿಲ್ಲ. ಹರಿದಾಡುತ್ತಿರುವ ಮನಸ್ಸನ್ನು ಬಿಗಿಹಿಡಿದು ಮೆಲ್ಲನೆ 'ನೀನು ನನ್ನನ್ನು ಮದುವೆಯಾಗುವೆನೆಂದು ಎಂದೂ ನನಗೆ ಹೇಳಿರಲಿಲ್ಲ ನೀನೂ ಬದ್ಧಳಾಗಿಲ್ಲ; ನನ್ನನ್ನೂ ಬಂಧಿಸಿಲ್ಲ. ಏನಾದರೊಂದು ನಿನ್ನ ಮನಸ್ಸಿನಲ್ಲಿಯೆ ಕಲ್ಪಿಸಿಕೊಂಡು ಸುಮ್ಮನೆ ಆ ಮನಸ್ಸನ್ನೇಕೆ ಹೊಯ್ದಾಟದಲ್ಲಿ ನೂಕುವಿ ?..ಬೇಡ.' ಎಂದು ಹೇಳಿದನು.

ಅವಳಿಗೇ ನಾಚಿಕೆಯೆನಿಸಿತು. ಅವನ ನಯವೆಷ್ಟು! ಅವನು ತನ್ನ ಮಾತನ್ನೇ ಅವಳ ಗಂಟಲದಲ್ಲಿ ನೂಕಬಹುದಾಗಿತ್ತು. ಆದರೆ ಹಾಗೆ ಮಾಡಲಿಲ್ಲ. ಅವಳಂತೆ ಅವನಿಗೂ ದೇಹಸಂಬಂಧಗಳ ಪವಿತ್ರತೆಯಲ್ಲಿ ವಿಶ್ವಾಸವಿದ್ದುದರಿಂದ ಮದುವೆಯ ನಿಶ್ಚಯಕ್ಕೂ ಅವನೇನು ಒತ್ತಾಯಪಡಿಸಲಿಲ್ಲ. ಇಂಗ್ಲಿಷ ಸರೋವರಗಳ ಅದ್ಭುತರಮ್ಯಸೌಂದರ್ಯದ ಪ್ರದೇಶದಲ್ಲಿ ಮೊದಲವರು ಭೆಟ್ಟಿಯಾದಾಗ ಅವರನ್ನು ಆಕರ್ಷಿಸಿದ್ದು ಇದೇ ಈ ನಯ, ಈ ಪವಿತ್ರ ಕಲ್ಪನೆ. ಆವಳ ಪರೀಕ್ಷಾಕಾಲವಂತೂ ದಾಟಿತು. ಆದರೆ ಅದಿನ್ನೂ ಹೆಚ್ಚು ದುಃಖದಾಯಕವಿರಬೇಕೆಂದೂ, ಇನ್ನೂ ಹೆಚ್ಚು ಕಾಲ ನಡೆಯಬೇಕೆಂದೂ ಅವಳಿಗನಿಸಿತು. 'ಅಡೀಲಾ ರೋನಿಯನ್ನು ಮದುವೆಯಾಗುವದಿಲ್ಲ?!' ಇದೊಂದು ಅವಳಿಗೆ ಕನಸಿನ ಹಾಗೆ ಜಾರಿ ಹೋಗುವಂತೆ ತೋರಿತು.

'ನಾವಿನ್ನೂ ಇದರ ಬಗ್ಗೆ ಸ್ವಲ್ಪ ಚರ್ಚೆ ಮಾಡೋಣ; ಯಾಕಂದರೆ ಇದೆಲ್ಲ ಬಹಳ ಮಹತ್ವದ್ದಿದೆ. ನಾವು ಸುಮ್ಮನೆ ತಪ್ಪುದಾರಿ ಹಿಡಿಯಬಾರದು. ಅಲ್ಲದೆ ನನ್ನ ವಿಷಯವಾಗಿ ನಿಮ್ಮ ಅಭಿಪ್ರಾಯವೇನಿದೆಯೆಂದು ನನಗೆ ತಿಳಿದುಕೊಳ್ಳಬೇಕಾಗಿದೆ....ನೀವು ಅದನ್ನು ಹೇಳಿದರೆ ನಮ್ಮಿಬ್ಬರಿಗೂ

ಅದು ಸಹಾಯವಾಗಬಹುದು.' ಎಂದು ಅಡೀಲಾ ಮತ್ತೆ ಮಾತು ಮುಂದರಿಸಿದಳು.

ರೋನಿಯ ಮನಸ್ಸು ಹೊಯ್ದಾಡಿತು; ಆದರೆ ಅವನ ರೀತಿ ಮಾತ್ರ ಇನ್ನೂ ಗಂಭೀರವಾಗಿತ್ತು. 'ಹೀಗೆ ಚರ್ಚೆಮಾಡುವದರಲ್ಲಿ ನನಗೆ ಬಹಳ ವಿಶ್ವಾಸ ವಿಲ್ಲ—ಅಲ್ಲದೆ ಈ ಮೊಹರಮ್ಮಿಗಾಗಿ ನನಗೆ ಬೀಳುವ ಹೆಚ್ಚಿನ ಕೆಲಸ ದಿಂದ ನಾನು ಸತ್ತು ಸುಣ್ಣಾಗಿ ಹೋಗಿದ್ದೇನೆ..ದಯವಿಟ್ಟು ಕ್ಷಮಿಸು.'

'ನನಗಿಷ್ಟೇ ಬೇಕಾಗಿದೆ, ನಮ್ಮಿಬ್ಬರಲ್ಲಿ ಪ್ರತಿಯೊಂದೂ ಸ್ಪಷ್ಟ ವಾಗಬೇಕು. ಮತ್ತೆ ನನ್ನ ನಡತೆಯ ವಿಷಯವಾಗಿ ನಿಮಗೇನಾದರೂ ಕೇಳುವದಿದ್ದರೆ ಅವಶ್ಯವಾಗಿ ಕೇಳಬೇಕು, ನಾನು ಹೇಳುತ್ತೇನೆ.'

'ಆದರೆ ನನಗೆ ಕೇಳವದೇ ಏನೂ ಇಲ್ಲ....ಇಷ್ಟೇ ಹೇಳಬಲ್ಲೆ, ನೀನು ನಿನ್ನ ಮರ್ಯಾದೆಯಲ್ಲಿಯೇ ನಡೆದುಕೊಂಡಿದ್ದಿ—ಇಲ್ಲಿಗೆ ಬಂದು ನಾನು ಕೆಲಸ ಮಾಡುವದನ್ನು ನೀನು ನೋಡಿದ್ದೊಂದು ಒಳ್ಳೆ ಯದೆ ಆಯಿತು—ಮತ್ತೆ....ಮತ್ತೆ....ಇನ್ನು ಮುಂದೆ ಮಾತಾಡುವದರಲ್ಲಿ ಅರ್ಥವಿಲ್ಲ—ನಾವಿನ್ನು ಸ್ವಲ್ಪ ಉತ್ಸಾಹವನ್ನು ತಂದುಕೊಳ್ಳಬೇಕು ಅಷ್ಟೆ..' ಎಂದು ರೋನಿಯು ನೊಂದು ನುಡಿದನು.

ಅವಳನ್ನಿನ್ನು ತಿರುಗಿ ಹಾದಿಗೆ ತರಬೇಕೆಂದರೆ ಅವನ ಅಭಿಮಾನಕ್ಕೆ ಸಾಲಲಿಲ್ಲ. ಆದರೂ ಅವಳ ನಡತೆಯು ಮಾತ್ರ ಕೆಟ್ಟದ್ದೆಂದು ಅವನು ತಿಳಿಯಲಿಲ್ಲ. ತನ್ನ ಜನರ ವಿಷಯದಲ್ಲಿ ಯಾವಾಗಲೂ ಅವನು ಹೀಗೆಯೆ ಒಳ್ಳೆ ಉದಾರ ಮನಸ್ಸನ್ನು ತೋರಿಸುವನು.

'ಆಯಿತು, ಇನ್ನೇನೂ ಉಳಿದಿಲ್ಲವೆಂದು ನನಗನಿಸುತ್ತದೆ. ನಿಮಗೂ ನಿಮ್ಮ ತಾಯಿಗೂ ಈ ಎಲ್ಲ ತೊಂದರೆ ಕೊಟ್ಟದ್ದಕ್ಕಾಗಿ ನನ್ನನ್ನು ಕ್ಷಮಿಸ ಬೇಕು.' ಎಂದು ಮಿಸ್ ಕ್ವೆಸ್ಟೆಡ್‌ಳು ಭಾರವಾದ ದನಿಯಲ್ಲಿ ನುಡಿದು ತಾವು ನಿಂತ ಗಿಡದ ಕಡೆಗೆ ಕ್ರೂರದೃಷ್ಟಿಯಿಂದ ನೋಡಿದಳು. ಒಂದು ಹಸಿರು ಬಣ್ಣದ ಸಣ್ಣ ಪಕ್ಷಿಯು ಅವಳನ್ನೇ ನೋಡುತ್ತಿತ್ತು. ಏನು ಅದರ ಹೊಳಪು! ಏನು ಅದರ ಮೈಮಾಟ! ಎಷ್ಟು ಚೆಂದ! ಇದೆ ಅಂಗಡಿ ಯೊಳಗಿಂದ ಹಾರಿಬಂದಿರಬಹುದು! ಅವಳ ದೃಷ್ಟಿಗೆ ತನ್ನ ದೃಷ್ಟಿಯನ್ನು ತಾಗಿಸಿ ಅದೂ ಕಣ್ಣು ಮುಚ್ಚಿತು; ಮತ್ತು ಒಂದೆರಡುಸಲ ಟಣಪುಣನೆ

ಹಾರಿ ಮಗುವ ಹಂಚಿಕೆಯನ್ನು ಮಾಡಿತು. ಹಿಂದುಸ್ತಾನದಲ್ಲಿಯ ಯಾವುದೋ ಒಂದು ಕಾಡು ಪಕ್ಷಿ! 'ಹಾದು, ಇನ್ನೇನೂ ಇಲ್ಲ.' ಎಂದು ಮನದಣಿಯೆ ಮಾತನಾಡುವ ಮನಸ್ಸಿದ್ದರೂ ಮತ್ತೆ ಮತ್ತೆ ಇಷ್ಟೇ ಹೇಳುತ್ತಿದ್ದಳು. 'ಅದಿರಲಿ, ನಾವು ಕಟ್ಟಾ ಬ್ರಿಟಿಶರಂತೆ ಇಲ್ಲಿಯ ವರೆಗೆ ನಡೆದುಕೊಂಡಿದ್ದೇವೆ. ಅದೆಲ್ಲ ಸರಿಯೆಂದೇ ತೋರುತ್ತದೆ?'

'ನಾವು ಬ್ರಿಟಿಶರೆಂದ ಮೇಲೆ ಅದೆಲ್ಲ ಸರಿಯೇ.'

'ಏನೇ ಆಗಲಿ ರೋನಿ, ನಾವು ಬಡಿದಾಡಿಲ್ಲ.'

'ಬಡಿದಾಡಿದ್ದರೆ ಬಹಳ ಮೂರ್ಖತನವಾಗುತ್ತಿತ್ತು. ಅಲ್ಲ, ನಾವೇಕೆ ಬಡಿದಾಡಬೇಕು?'

'ಹಾಗಾದರೆ ನಾವಿಬ್ಬರೂ ಇನ್ನು ಗೆಳೆಯರಂತಿರಬಹುದಲ್ಲ?'

'ಹಾಗಿರುವೆವೆಂದೇ ನಾನು ತಿಳಿಯುತ್ತೇನೆ'

'ತೀರ ನಿಜ.'

ಇಬ್ಬರ ನಡುವೆ ಈ ಒಪ್ಪಿಗೆಯು ಬಂದು ಇಬ್ಬರನ್ನೂ ಬೆಸೆದ ಮೇಲೆ ಅವರಿಬ್ಬರಲ್ಲಿಯೂ ಉಪಶಾಂತಿಯು ಒಂದು ತೆರೆಯೆದ್ದು ಮಾರ್ದವದಲ್ಲಿ ಪರಿಣಮಿಸಿ ಮತ್ತೆ ಹಿಂತಿರುಗಿತು. ಅವರು ತಮ್ಮ ಒಳಗಿನ ತಿಳಿವಿನಿಂದಲೆ ಆಗಲೆ ಮಿದುವಾಗಿದ್ದರು; ಹಣ್ಣಾಗಿದ್ದರು. ಅದರಿಂದಲೆ ಅವರಿಗೆ ತಾವು ಒಂಟಿಗರೆಂದೂ ಇಷ್ಟೊತ್ತಿನ ವರೆಗೆ ಮಾತನಾಡಿದ್ದು ತಮ್ಮ ಬುದ್ಧಿಗೆ ಒಪ್ಪದೆಂದೂ ಎನಿಸಿತ್ತು. ಅವರಿಬ್ಬರ ನಡುವೆ ಭಿನ್ನಮತವಾದದ್ದು ಅವರ ನೈಜ ಸ್ವಭಾವದಿಂದಲ್ಲ; ಅವರ ಭಿನ್ನ ಅನುಭವಗಳಿಂದ. ಉಳಿದೆಷ್ಟೋ ಮನುಷ್ಯರಂತೆ ಅವರು ಅಷ್ಟೇನು ಭಿನ್ನವಾಗಿ ತೋರಲಿಲ್ಲ. ವಾಸ್ತವವಾಗಿ ನೋಡಿದರೆ—ಅಲ್ಲಿಯೆ ತೀರ ಅವರ ಸಮೀಪದಲ್ಲಿ ನಿಂತಿದ್ದ ಜನರೊಡನೆ ಅವರನ್ನು ಹೋಲಿಸಿದರೆ—ಅವರಲ್ಲಿ ಏನೂ ಭೇದವಿಲ್ಲೆಂದೇ ಹೇಳಬಹುದು. ಅಲ್ಲಿಯೆ ಒಬ್ಬ ಅಧಿಕಾರಿಯ ಪೋನಿಯನ್ನು ಹಿಡಿದುಕೊಂಡು ನಿಂತಿದ್ದ ಭಿಲ್ಲ, ನವಾಬ ಬಹದ್ದೂರರ ಮೋಟರು ಹೊಡೆಯುವ ದೇಶೀ ಕ್ರಿಶ್ಚನ್, ಸ್ವತಃ ನವಾಬ ಬಹದ್ದೂರರು, ಅವನ ಫಟಿಂಗ ಮೊಮ್ಮಗ, ಇವರಲ್ಲಿ ಯಾರೂ ಈ ತರಹದ ಮದುವೆಯ ಸಂಬಂಧದ ಕಠಿಣ ಪ್ರಶ್ನೆಯನ್ನು ಇಷ್ಟು ನೇರವಾಗಿ, ಇಷ್ಟು ಶಾಂತವಾಗಿ ಎಂದೂ ವಿಚಾರಿಸುತ್ತಿರಲಿಲ್ಲ. ಆದರೆ ಸುಮ್ಮನೆ ಆ

ಪ್ರಶ್ನೆಯ ಪರಿಶೀಲನೆಯಿಂದಲೆ ಅವರಿಬ್ಬರ ತೊಡಕು ಬಿಚ್ಚಿದಂತಾಯಿತು. ಅವರ ಗೆಳೆತನ ಎಂದಿಗೂ ಉಳಿಯಿತು, ಬಾಳಿತು.

' ನಮ್ಮ ಮೇಲೆ ಆ ಗಿಡದಲ್ಲಿ, ಕುಳಿತಿರುವ ಹಸಿರು ಪಕ್ಷಿಯ ಹೆಸರೇನು ನಿಮಗೆ ಗೊತ್ತಿದೆಯೆ ? ' ಎಂದು ತನ್ನ ಭುಜವನ್ನು ರೋನಿಯ ಭುಜದ ಸಮೀಪಕ್ಕೆ ಸರಿಸಿ ಅಡೀಲಾ ಕೇಳಿದಳು.

' ಮಧುಪ ಭಕ್ಷಕ. '

' ಛೇ, ಅಲ್ಲ. ಇದರ ರೆಕ್ಕೆಗಳ ಮೇಲೆ ಕೆಂಪು ಗೀರುಗಳಿರುತ್ತವೆ. '

' ಹಾಗಾದರೆ ಗಿಳಿ. ' ಎಂದು ಚಟಕ್ಕನೆ ಹೇಳಿದನು.

' ಊಹೂಂ; ಅದೂ ಅಲ್ಲ.'

ಈ ಹೊತ್ತಿಗೆ ಆ ಪಕ್ಷಿಯು ಹಾರಿ ಗಿಡದ ತುಟ್ಟ ತುದಿಗೆ ಹೋಯಿತು. ಅದು ಹಾರಿಹೋದದ್ದು ಅವರಿಗಷ್ಟು ಮಹತ್ವದ್ದೆನಿಸಲಿಲ್ಲ. ಆಗಲೂ ಅವರದನ್ನು ಗುರುತಿಸಲು ಹವಣಿಸಬಹುದಾಗಿತ್ತು. ಹೀಗೆ ಗುರುತಿಸಿ ಹೆಸರರಿತುಕೊಳ್ಳುವದರಿಂದಲೆ ಮನಸ್ಸಿಗೆ ಒಂದು ಬಗೆಯ ಆನಂದವಾಗುತ್ತದೆ. ಆದರೆ ಈ ಹಿಂದುಸ್ತಾನದಲ್ಲಿ ಯಾವುದನ್ನೂ ಗುರುತಿಸಲಿಕ್ಕೇ ಬರುವಂತಿಲ್ಲ. ' ಅದು ಏನು ? ' ಎಂದು ಕೇಳುವದೊಂದೇ ತಡ ಅದು ಮಾಯವಾಗಿ ಇನ್ನೊಂದರಲ್ಲಿ ಸೇರಿತೆಂದೇ ತಿಳಿಯಬೇಕು.

' ಅಷ್ಟೇಕೆ, ಮ್ಯಾಕ್‌ಬ್ರಾಯಿಡನ ಹತ್ತಿರ ಪಕ್ಷಿಗಳ ಸಚಿತ್ರ ಪುಸ್ತಕವೇ ಇದೆ; ನೋಡಿದರಾಯಿತು. ಪಕ್ಷಿಗಳ ವಿಷಯದಲ್ಲಿ ನಾನೇನು ನುರಿತವನಲ್ಲ. ನಿಜವಾಗಿ ಹೇಳಲಾ ? ನನ್ನ ಕೆಲಸವನ್ನು ಬಿಟ್ಟರೆ ಹೊರಗಿನದು ನನಗೇನೂ ಗೊತ್ತಿಲ್ಲ. ಇದು ವಿಷಾದಕರವಾದ ಮಾತಾಗಿದ್ದರೂ ನಿಜವಾದ ಸಂಗತಿ.' ಎಂದು ವಿಷಣ್ಣನಾಗಿ ಹೇಳಿದನು.

' ನಾನಾದರೂ ಏನು ? ಅದರಂತೆಯೇ. ಯಾತಕ್ಕೂ ಪ್ರಯೋಜನವಿಲ್ಲ. '

' ಇದನ್ನೇನು ನಾನು ಕೇಳುತ್ತೇನೆ ? ' ಎಂದು ನವಾಬಬಹದ್ದೂರನು ತನ್ನ ಉಚ್ಚಸ್ವರದಲ್ಲಿ ಕೂಗಿದನು. ಆದರಿಂದ ಇವರಿಬ್ಬರೂ ಬೆಚ್ಚಿಬಿದ್ದರು. ' ನಾನು ಕೇಳುತ್ತಿರುವದು ಇದೆಂಥ ಅಶಕ್ಯ ಮಾತು ! ಇಂಗ್ಲೀಷ ಸ್ತ್ರೀಯು

ಯಾತಕ್ಕೂ ಪ್ರಯೋಜನವಿಲ್ಲ! ಛೇ, ಛೇ, ಛೇ ' ಎಂದು ತನ್ನನ್ನಿನ್ನು ಅವರು ಒರವಾಡಿಕೊಳ್ಳುವರೆಂಬದನ್ನು ನೋಡಿಕೊಂಡು ಗಹಗಹಿಸಿ ನಕ್ಕನು.

'ಬರಬೇಕು ಸವಾಬಸಾಹೇಬರೇ, ಪೋಲೋ ನೋಡುತ್ತಿದ್ದಿರೇನು?' ಎಂದು ತೋರಿಕೆಯ ಉತ್ಸಾಹದಿಂದ ರೋನಿಯು ಕೇಳಿದನು.

' ಹಃ ಹಃ ಹಃ, ಹೌದು; ಸಾಹೇಬರೇ ಹೌದು. '

' ಕ್ಷೇಮದಿಂದ್ದೀರಾ ? ' ಎಂದು ತನ್ನಲ್ಲಿಯೂ ಹೇಗೋ ಉತ್ಸಾಹ ತಂದುಕೊಂಡು ಅಡೀಲಾ ಕೇಳಿ ತನ್ನ ಕೈ ಮುಂದೆ ಚಾಚಿದಳು. ಅವಳ ಈ ಸ್ವೇಚ್ಛಾವೃತ್ತಿಯನ್ನು ನೋಡಿ ಇವಳು ಈ ದೇಶಕ್ಕೆ ಹೊಸಬಳಿರ ಬೇಕೆಂದು ಅವನು ನಿಶ್ಚಯಿಸಿಕೊಂಡು ಅತ್ತ ಕಡೆಗೆ ಅಷ್ಟು ಲಕ್ಷ್ಯವನ್ನೇ ಕೊಡಲಿಲ್ಲ. ಅಲ್ಲದೆ ಇಷ್ಟಕ್ಕೇ ಅವರು ಅಸೀತಿವಂತರೆಂದು ಭಾವಿಸಲಿಲ್ಲ. ಅದೇನೇ ಇದ್ದುಕೊಳ್ಳಲಿ, ಅದನ್ನು ನೋಡುವದು ತನ್ನ ಕೆಲಸವಲ್ಲ; ತಾನು ಬಂದದ್ದು ಸಿಟಿ ಮ್ಯಾಜಿಸ್ಟ್ರೇಟರೊಬ್ಬರೆ ಒಬ್ಬ ಯುವತಿಯೊಡನೆ—ಅದೂ ಮೂರುಸಂಜೆಯ ಹೊತ್ತಿನಲ್ಲಿ—ನಿಂತದ್ದನ್ನು ನೋಡಿ ಅವರಿಗೇನಾದರೂ ತಾನು ಸಹಾಯಮಾಡಬೇಕೆಂದು ; ತನ್ನ ಹತ್ತಿರಿದ್ದ ಹೊಸ ಮೋಟರ ಕಾರನ್ನು ಅವರ ಉಪಯೋಗಕ್ಕೆ ಕೊಡಬೇಕೆಂದು. ತನ್ನ ಈ ಸಹಾಯ ವನ್ನು ಸಿಟಿಮ್ಯಾಜಿಸ್ಟ್ರೇಟರು ಬೇಕಾದರೆ ಸ್ವೀಕರಿಸಬಹುದು, ಬೇಡಾದರೆ ಬಿಡಬಹುದು ; ಅದನ್ನು ಮೊದಲೇ ವಿಚಾರಿಸುವದು ತನ್ನ ಕೆಲಸವಲ್ಲ ; ಹೀಗೇ ಏನೇನೋ ಮನಸ್ಸಿನಲ್ಲಿ ಯೋಚಿಸಿಕೊಂಡು ಬಹದ್ದೂರರು ಬಂದಿದ್ದರು.

ರೋನಿಗೆ ತಾನು ಈ ಮೊದಲು ಗೋಡಬೋಲೆ ಮತ್ತು ಅಝೀಜ ರೊಡನೆ ಒರಟುತನದಿಂದ ನಡೆದುಕೊಂಡದ್ದಕ್ಕಾಗಿ ಒಳಗೊಳಗೆ ಸಾಕೆನಿಸಿತ್ತು. ಹಿಂದೀ ಜನರನ್ನು ಚೆನ್ನಾಗಿ ನಡೆಯಿಸಿಕೊಳ್ಳುತ್ತೇನೆಂದು ತೋರಿಸುವದಕ್ಕಾಗಿ ಈಗ ಅವನಿಗೆ ಅನಾಯಾಸವಾಗಿ ಒಂದು ಸುಪ್ರಸಂಗವೊದಗಿಬಂದಂತಾ ಗಿತ್ತು. ಅದನ್ನು ಬಿಡದೆ ಅವನು ಆ ಪಕ್ಷಿಯ ಬಗ್ಗೆ ಮಾತು ನಡೆದಾಗ ಹೇಗೆ ಒಂದು ರೀತಿಯ ಸಲುಗೆಯಿಂದ, ಆದರೆ ಒಳಗೆ ನೋವಿಟ್ಟುಕೊಂಡು ಮಾತಾಡಿದನೋ ಹಾಗೆಯೆ ' ಒಂದರ್ಧ ಗಂಟೆ ಇದರಲ್ಲಿ ಕೂತುಕೊಂಡು

ಚಕ್ಕರ್ ಹೊಡೆದು ಬರೋಣವೇ ? ನಿನಗೂ ಮನಸ್ಸಿಗೆ ಹಗುರೆನಿಸಬಹುದು, ಅಲ್ಲವೇ ಅಡೀಲಾ ? ' ಎಂದು ಕೇಳಿದನು.

' ನಾವು ತಿರುಗಿ ನಮ್ಮ ಬಂಗ್ಲೆಕ್ಕೆ ಬೇಗ ಹೋಗಬೇಕಲ್ಲವೆ ? '

' ಏಕೆ ? ' ಎಂದು ಅವಳನ್ನೇ ದಿಟ್ಟಿಸಿ ನೋಡಿದನು.

' ನಾನು ನಿಮ್ಮ ತಾಯಿಯನ್ನು ಕಂಡು ಮುಂದಿನ ಆಲೋಚನೆ ಯನ್ನು ಮಾಡಬೇಕಾಗಿದೆ. '

' ನಿನ್ನ ಮನಸಿಗೆ ಬಂದಹಾಗೆ ಮಾಡಬಹುದು ; ಆದರೆ ಅದಕ್ಕೆ ಅಷ್ಟೇನೂ ಗಡಿಬಿಡಿಯಿಲ್ಲ ; ಇದೆಯೇನು ? '

' ನಾನು ನಿಮ್ಮನ್ನು ಬಂಗ್ಲೆಕ್ಕೆ ಮುಟ್ಟಿಸುವೆನು. ಆದರೆ ಮೊದಲು ಒಂದು ಸಣ್ಣ ಚಕ್ಕರ್ ಹೊಡೆಯಬಹುದು. ' ಎಂದು ಆ ಮುದುಕನು ಹಲ್ಲು ಕಿರಿದುಹೇಳಿ ತನ್ನ ಕಾರಿನ ಕಡೆಗೆ ಗಡಿಬಿಡಿಯಿಂದ ಓಡಿದನು.

' ಅಡೀಲಾ, ನನಗೆ ತೋರಿಸಲಿಕ್ಕಾಗದ ಈ ದೇಶದ ಕೆಲ ಭಾಗವನ್ನು ಅವನು ತೋರಿಸಬಹುದು. ಅವನೊಬ್ಬೇ ರಾಜನಿಷ್ಠನಿದ್ದಾನೆ. ಮತ್ತೆ.... ನಿನಗೂ ನಿನ್ನ ಬೇಸರ ಕಳೆದುಕೊಳ್ಳಲು ಅನುಕೂಲವಾಗಬಹುದು, ಅಲ್ಲವೇ? '

ಅವನಿಗಿನ್ನು ಹೆಚ್ಚು ತೊಂದರೆ ಕೊಡಲಕ್ಕೆ ಮನಸ್ಸಿಲ್ಲದೆ ಅವನ ಮಾತಿಗೆ ಅಡೀಲಾ ಒಪ್ಪಿದಳು ; ಆದರೆ ಹಿಂದುಸ್ತಾನವನ್ನು ನೋಡಬೇಕೆಂಬ ಅವಳ ಆಶೆಯು ಒಮ್ಮೆಂದೊಮ್ಮೆ ಕುಗ್ಗಿತು. ಅದರಲ್ಲಿ ಒಂದು ಕೃತ್ರಿಮಾಂಶವು ಬಂದು ಸೇರಿತು.

ಅವರೆಲ್ಲರೂ ಕಾರಿನಲ್ಲಿ ಹೇಗೆ ಹಿಡಿಸಬೇಕು ? ಆಯಿತು, ಆ ಮುದುಕನ ಮೊಮ್ಮಗನನ್ನು ಬಿಟ್ಟುಹೋಗಬೇಕಾಯಿತು. ನವಾಬಬಹದ್ದೂರರಿಗೆ ಇಂಗ್ಲೀಷ ಹುಡುಗಿಯ ಹತ್ತಿರ ಕುಳಿತುಕೊಳ್ಳುವ ಮನಸ್ಸಿಲ್ಲದ್ದರಿಂದ ಅವರು ' ಫ್ರಂಟ್‌ಸೀಟಿ ' ನಲ್ಲಿ ಕುಳಿತರು. ಮೋಟರು ಹೊರಟಿತು. ' ನೋಡಿರಿ, ನಾನಿಷ್ಟು ಮುದುಕನಾಗಿದ್ದರೂ ಈಗ ಮೋಟರು ಹೊಡೆಯಲಿಕ್ಕೆ ಕಲಿಯುತ್ತಿದ್ದೇನೆ....ಮನುಷ್ಯನ ಪ್ರಯತ್ನಕ್ಕೆ ಮಿಕ್ಕಿದ್ದು ಯಾವದರಿ ? — ಪ್ರಯತ್ನ ಮಾತ್ರ ಮಾಡಬೇಕು— ' ಎಂದು, ತನ್ನ ಈ ಮಾತಿಗೆ ಮುಂದೆ ಬರುವ ಪ್ರಶ್ನೆಯನ್ನು ತಾನೇ ಮನದಲ್ಲಿ ತಂದುಕೊಂಡು ' ಅಂದರೆ.... ನಾನೇ ಆ 'ಸ್ಟೀರಿಂಗ್ ' ಹಿಡಿದುಕೊಂಡು ಕೂತು ಹೊಡೆಯುವದಿಲ್ಲ—ನಮ್ಮ

ಶಾಫರನು ಹೊಡಿಯುತ್ತಿರುತ್ತಾನೆ—ನಾನು ಅವನ ಹತ್ತಿರ ಕುಳಿತು ಹೀಗೇಕೆ ಮಾಡಬೇಕು? ಹಾಗೇಕೆ ಮಾಡಬಾರದು? ಹೀಗೆ ಮಾಡಿದರೇ ನಾಗುತ್ತದೆ? ಹಾಗೆ ಮಾಡಿದರೇನಾಗುತ್ತದೆ? ಎಂದು ಸುಮ್ಮನೆ ಅವ ನನ್ನು ಕೇಳಿ ಪ್ರತಿಯೊಂದನ್ನೂ ತಿಳಿದುಕೊಳ್ಳುತ್ತೇನೆ—ಹೀಗೆ ಮಾಡುವ ದರಿಂದ ಏನಾಗಿದೆ ಗೊತ್ತೇ? ಭಯಂಕರ ಗಂಡಾಂತರಗಳಿಂದ—ಅಂದರೆ ಆ ನಮ್ಮ ಮಿತ್ರನೊಬ್ಬನಿಗೆ ಇಂಗ್ಲಿಷ್ ಕ್ಲಬ್ಬಿನಲ್ಲಿ ಎಲ್ಲರನ್ನೂ ಸ್ವಾಗತಿಸುವ ಸಮಾರಂಭ ನಡೆದಾಗ ಒದಗಿತ್ತಲ್ಲ, ನಗೆಗೀಡುಮಾಡಲಿಕ್ಕೆ— ಅಂಥ ಗಂಡಾಂತರಗಳಿಂದ ಸಹಜ ಪಾರಾಗುತ್ತೇವೆ— ಆ ನಮ್ಮ ಪನ್ನಾಲಾಲ ಮಹಾಶಯರು! ಸಾಹೇಬರೇ, ನಿಮ್ಮ ಆ ಗಿಡಗಳೆಲ್ಲ ಕೆಟ್ಟುಹೋದವೇನು?.. ಇಲ್ಲ, ಕೆಟ್ಟಿರಲಿಕ್ಕಿಲ್ಲೆಂದು ನನಗನಿಸುತ್ತದೆ....ಗಂಗಾವತಿ ರಸ್ತೆಯುಗುಂಟ ಹೋಗೋಣವೇ?.... ಬೇಕಾದರೆ ಹೀಗೇ ಒಂದು ಹರದಾರಿಯಷ್ಟು ಮುಂದೆ ಹೋಗೋಣವೇ?.... ಎಂದು ಹೇಳಹೇಳುತ್ತ ಬಹದ್ದೂರರು ಗೊರಕೆಹೊಡೆಯಹತ್ತಿದರು.

ಗಂಗಾವತಿ ರಸ್ತೆಯ ದುರಸ್ತಿ ನಡೆದದ್ದು ರೋನಿಗೆ ಗೊತ್ತಿದ್ದದರಿಂದ ಅವನು ಶಾಫರನಿಗೆ 'ಗಂಗಾವತಿ ರಸ್ತೆಯಕಿಂತ ಮಾರವಾರ ರಸ್ತೆಗೇ ಹೊಡಿ.' ಎಂದು ಹೇಳಿ ತನ್ನ ಪಾಲಿಗೆರವಾಗಿದ್ದ ಅಡೀಲಾಳ ಹತ್ತಿರ ಸರಿದು ಕುಳಿತುಕೊಂಡನು. ಕಾರು ಭರ್ರೆಂದು ಸಪ್ಪಳಮಾಡುತ್ತ ಒಂದು ಒಡ್ಡಿನ ಮೇಲಿನ ದಾರಿಯುಗುಂಟ ಓಡಹತ್ತಿತು. ಕೆಳಗೆ ಜೀವವಿಲ್ಲದ ಸಪ್ಪಗಿನ ಹೊಲಗಳು; ಎಡಬಲಕ್ಕೆ ಒಣಕಲು ಗಿಡಗಳ ಸಾಲುಗಳು; ಒಟ್ಟಿನಲ್ಲಿ ಮನಸ್ಸನ್ನು ಹಿಗ್ಗಿಸುವ ದೃಶ್ಯವೇನೂ ಅಲ್ಲ. ಆ ವಿಸ್ತಾರವಾದ ಪ್ರದೇಶದಲ್ಲಿ ಚೆಲುವಂತೂ ಎಲ್ಲಿಯೋ ಮಾಯವಾಗಿತ್ತು. ಅಲ್ಲಿಯದೆಲ್ಲವೂ 'ಬನ್ನಿ ಬನ್ನಿ' ಎಂದು ವ್ಯರ್ಥವಾಗಿ ಕರೆಯುವಂತಿತ್ತು. ಕಣ್ಣು ಹಸಿವೆಯನ್ನು ತಣಿಸು ವಂತಹದೇನೂ ಅಲ್ಲಿರಲಿಲ್ಲ. ಆ ತರುಣತರುಣಿಯರು ಸಣ್ಣದನಿಯಲ್ಲಿ ಮಾತುಕತೆಯಾಡುತ್ತಿದ್ದರು; ವಿಶೇಷ ಉತ್ಸಾಹವನ್ನೇನೂ ತೋರಿಸುತ್ತಿರ ಲಿಲ್ಲ. ಕತ್ತಲೆಯು ಅಲ್ಲಿಯ ವನಸ್ಪತಿಗಳೊಳಗಿಂದ ಹೊರಸೂಸಿ ಬಂದು ದಾರಿ ಯನ್ನು ಮುತ್ತುವ ಮೊದಲು ಮಗ್ಗುಲಿಗಿದ್ದ ಹೊಲಗಳನ್ನೆಲ್ಲ ಮುತ್ತಿತು. ರೋನಿಯ ಮುಖದ ಮೇಲೂ ಮಬ್ಬುಗವಿಯಿತು; ಈ ಮುಖವೇ ಅವನ

ಶೀಲದ ಬಗ್ಗೆ ಅಡೀಲಾಳಲ್ಲಿ ಆದರವನ್ನು ಹುಟ್ಟಿಸುತ್ತಿತ್ತು. ಧಡಿಕೆಯಿಂದ ಅವಳ ಕೈಯು ಅವನಿಗೆ ತಾಕಿತು. ಕೂಡಲೆ ಇಬ್ಬರಲ್ಲಿಯೂ ವಿದ್ಯುತ್ ಸಂಚಾರವಾಯಿತು. ಪ್ರಾಣಿಜಾತಿಗೆ ಸಾಮಾನ್ಯವಾದ ಒಂದು ಆನಂದ ಲಹರಿಯು ಇಬ್ಬರಲ್ಲಿಯೂ ಹರಿದಾಡಿತು. ಆಗ ಅವರಿಗನಿಸಿತು, ತಮ್ಮ ಇಷ್ಟೊತ್ತಿನ ಬಡಿದಾಟಗಳೆಲ್ಲ ಪ್ರಣಯಕಲಹಗಳೆಂದು. ಇಬ್ಬರೂ ಅಭಿಮಾನಿಗಳು ; ಅಂತೇ ಕೈಯಲ್ಲಿ ಸಿಕ್ಕ ಕೈಯನ್ನು ಯಾರೂ ಹೆಚ್ಚು ಒತ್ತಿಕ್ಕಲಿಲ್ಲ; ಅಥವಾ ಹಿಂಜರಿದು ಯಾರೂ ಹಿಂದಕ್ಕೂ ತೆಗೆದುಕೊಳ್ಳಲಿಲ್ಲ. ಅವರಲ್ಲಿ ಒಂದು ಆತ್ಮೀಯತೆಯ ಮೋಹ—ಹೊನ್ನೀಹುಳದ ಪ್ರಕಾಶದಂತೆ—ತಾತ್ಪೂರ್ತಿಕವಾಗಿ ಏಕದೇಶೀಯವಾಗಿ ತುಂಬಿಬಂತು. ಒಂದು ನಿಮಿಷದಲ್ಲಿಯೆ ಅದು ಮರೆಯಾಗುವದೇನೋ ನಿಜ ; ಆದರೆ ಮರೆಯಾಗುವದು ತಿರುಗಿ ಬರುವದಕ್ಕೇ. ಆದರೆ ಈ ಕತ್ತಲೆಯ ಮಾತು ಹಾಗಲ್ಲ. ಇದು ಕೊನೆಯುಷರೆಗೂ ಉಳಿಯುವದು. ಅವರನ್ನೀಗ ಮುಸುಕಿದ ರಾತ್ರಿಯು ಸಹ ತೋರಲಿಕ್ಕೆ ಅಖಂಡವಾಗಿ ಕಂಡರೂ ಅದೂ ಒಂದು ಮೋಹಜಾಲವೇ. ಭೂಮಿಯ ಅಂಚಿನೊಳಗಿಂದ ಮುಂದವಾಗಿ ಇಳಿದು ಒರುವ ಮಿಣಿಮಿಣಿ ಕಿರಣಗಳಿಂದ ಮಿನುಗುವ ನಕ್ಷತ್ರಗಳಿಂದ ಆ ರಾತ್ರಿಯೂ ಪಲ್ಲಟಗೊಂಡಿದೆ.

ಇಬ್ಬರೂ ಒಬ್ಬರೊಬ್ಬರ ಕೈಯನ್ನು ಒತ್ತಿಕ್ಕಿದರು. ಅಷ್ಟರಲ್ಲಿ ಕಾರು ಪುಟಿಯಿತು—ಹಾರಿತು—ಮಗ್ಗಲು ಹೊರಳಿತು—ಗಾಲಿಗಳೆರಡು ಗಾಳಿಯಲ್ಲಿ ಹಾರಿದವು— ಬ್ರೆಕ್ ಹಾಕಿತು— ಬದುವಿನ ಮೇಲಿನ ಗಿಡಕ್ಕೆ ಹಾಯಿತು—ನಿಂತಿತು. ಅಪಘಾತ—ಸಣ್ಣದು. ಯಾರಿಗೂ ಅಪಾಯವಿಲ್ಲ. ನವಾಬಬಹದ್ದೂರರು ಎಚ್ಚತ್ತರು. ‘ ಅರೆ ಅಲ್ಲಾ ! ’ ಎಂದು ಕೂಗಿ ಗಡ್ಡವನ್ನು ಗಟ್ಟಿಯಾಗಿ ಜಗ್ಗಿಕೊಂಡರು. ‘ ಏನಾಯಿತು ? ಏನು ಮುರಿಯಿತು ? ’ ಎಂದು ರೋನಿಯು ಎಲ್ಲ ಸ್ಥಿತಿಯನ್ನು ತಿಳಿದುಕೊಳ್ಳುವದಕ್ಕಾಗಿ ಒಂದು ಕ್ಷಣ ಸುಮ್ಮನಿದ್ದು ಅಲ್ಲಿಂದ ಕೇಳಿದನು. ಆ ದೇಶೀ ಕ್ರಿಶ್ಚನ್ನನು ಅವನ ದನಿಗೆ ಎಚ್ಚತ್ತು ಸ್ವಲ್ಪ ಗಾಬರಿಗೊಂಡರೂ ರೋಮರೋಮಗಳಲ್ಲಿ ಇಂಗ್ಲೀಷ ಮನುಷ್ಯನ ಆವೇಶ ತುಂಬಿಕೊಂಡು ‘ ನನಗೆ ಐದು ನಿಮಿಷ ಅವಕಾಶಕೊಡಿರಿ, ನಿಮ್ಮನ್ನು ಎಲ್ಲಿಗೆ ಬೇಕು ಅಲ್ಲಿಗೆ ಕರೆದುಕೊಂಡು ಹೋಗುತ್ತೇನೆ. ’ ಎಂದು ಉತ್ತರಕೊಟ್ಟನು.

‘ ಅಡೀಲಾ ಅಂಜಿದೆಯೇನು ಮತ್ತೆ ? ’ ಎಂದು ಇಷ್ಟೊತ್ತಿನವರೆಗೆ ಹಿಡಿದ ಅವಳ ಕೈಯನ್ನು ಬಿಟ್ಟನು.

‘ ಸ್ವಲ್ಪವೂ ಇಲ್ಲ. ’

‘ ಅಂಜದೇ ಇರುವದೆಂದರೆ ಮಹಾ ಮೂರ್ಖತನವೆಂದೇ ನಾನು ತಿಳಿಯುತ್ತೇನೆ. ’ ಎಂದು ನವಾಬಬಹದ್ದೂರರು ನಡುವೆಯೆ ಬಾಯಿಹಾಕಿ ತಮ್ಮ ಹುಂಬತನವನ್ನು ಪ್ರದರ್ಶಿಸಿದರು.

‘ ಒಳ್ಳೇದು, ಈಗಂತೂ ಆಗುವದೆಲ್ಲ ಆಗಿಹೋಯಿತು. ಆಗಿಹೋದ ಮೇಲೆ ಅತ್ತುಮಾಡುವದೇನು ? ’ ಎಂದು ರೋನಿಯು ಕಾರಿನಿಂದಿಳಿಯುತ್ತ ನುಡಿದನು.

‘ ಆಯಿತು, ಗಿಡಕ್ಕೆ ಹಾಯ್ದದ್ದೊಂದು ನಮ್ಮ ಸುದೈವವೇ ಎನಬೇಕು. ’

‘ ಎಲ್ಲ ಆಯಿತು....ಹೌದು, ಗಂಡಾಂತರವಂತೂ ಪಾರಾಯಿತು; ಸಿಗರೇಟು ಸೇದೋಣ, ನಮಗೆ ಮನಸಿಗೆ ಬಂದದ್ದನ್ನು ಮಾಡೋಣ. ಹೌದು, ಇನ್ನು ಸುಖವನ್ನು ಅನುಭವಿಸೋಣ....ಅರೆ ಅಲ್ಲಾ!....’ ಎಂದು ನವಾಬರು ತಮ್ಮ ದಿವ್ಯ ತತ್ವದ ಮುಂಡಿಗೆಗಳನ್ನು ಉರುಳಿಸಿದರು.

‘ ಹಾಯ್ದದ್ದು ಪೂಲಿಗಲ್ಲವೇ ? ಗಾಲಿಯು ಗಿರಿಗಿರಿ ತಿರುಗಿತು! ’

‘ ಗಾಲಿ ತಿರುಗಲಿಲ್ಲ. ಗಾಡಿಯೇ ಯಾವುದೋ ಒಂದು ಪ್ರಾಣಿಯ ಮೇಲೆ ಹಾಯಿತು. ’ ಎಂದು ಅಡೀಲಾ ಹೇಳಿದಳು.

ಒಮ್ಮೆಲೆ ಆ ಮುದುಕನು ಗಟ್ಟಿಯಾಗಿ ಕಿರುಚಿದನು. ಅವನ ಅಂಜಿಕೆಗೇನೂ ಕಾರಣವಿರಲಿಲ್ಲ. ಇದನ್ನು ನೋಡಿ ಎಲ್ಲರೂ ಖೊಳ್ಳೆಂದು ನಕ್ಕರು.

‘ ಪ್ರಾಣಿಯ ಮೇಲೆ ? ’

‘ ಒಂದು ದೊಡ್ಡ ಪ್ರಾಣಿಯೆ ಬಲಗಡೆ ಕತ್ತಲೆಯೊಳಗಿಂದ ಜಿಗಿದು ಬಂದು ಹಾಯಿತು. ’

‘ ಓ ! ದೇವರಾಣೆಯೆಂದರೂ ಇದೇ ಸರಿ. ಇಕಾ ಇಲ್ಲಿ ಬಣ್ಣ ಸಹ ಹಾರಿಹೋಗಿದೆ. ’ ಎಂದು ರೋನಿ ಹೇಳಿದನು.

‘ ಹೌದು, ಅವರಾಡುವ ಮಾತು ದೇವರ ಸಾಕ್ಷಿಯಾಗಿ ಸರಿಯಿದೆ. ’ ಎಂದು ಆ ದೇಶೀ ಕ್ರಿಶ್ಚನ್ನನೂ ದನಿಗೂಡಿಸಿದನು. ಮೋಟರ ಬಾಗಿಲ

ಸುರಡಿನ ಪತ್ತಿರೊಂದು ತಗ್ಗೇ ಬಿದ್ದಿತ್ತು. ಅದರಿಂದ ಬಾಗಿಲು ತೆರೆಯು ಬೇಕಾದರೆ ಬಹಳ ಕಠಿಣವಾಯಿತು.

' ನಿಶ್ಚಯವಾಗಿಯೂ ನಾನು ಹೇಳುವದು ಸತ್ಯ. ನಾನದರ ಕೂದಲಿದ್ದ ಬೆನ್ನನ್ನು ಸ್ಪಷ್ಟವಾಗಿ ನೋಡಿದ್ದೇನೆ. '

' ಅಡೀಲ್, ಹಾಗಾದರೆ ಅದಾವ ಪ್ರಾಣಿ ? '

' ನನಗಿಲ್ಲಿಯ ಪಕ್ಷಿಗಳದು ಹೇಗೆ ಗೊತ್ತಿಲ್ಲವೊ ಹಾಗೆಯೆ ಇಲ್ಲಿಯ ಪ್ರಾಣಿಗಳದೂ ಗೊತ್ತಿಲ್ಲ. ನೋಡಿದರೆ ಅದರ ಆಕಾರ ಆಡಿನಕಿಂತ ದೊಡ್ಡದಿತ್ತು. '

' ಸರಿಹೋಯಿತು ; ಆಡಿನಕಿಂತ ದೊಡ್ಡದು....! ' ಎಂದು ಮುದುಕನು ತಡವರಿಸಿದನು.

' ಏನೇ ಇದ್ದರೂ ಅದನ್ನು ಹುಡುಕಿ ತೆಗೆಯೋಣ. ಅದರ ಹೆಜ್ಜೆ ಗುರುತುಗಳನ್ನೇ ಹಿಂಬಾಲಿಸೋಣ. ' ಎಂದು ರೋನಿಯು ತನ್ನ ಸಾಹಸದ ಕುತೂಹಲವನ್ನು ತೋರಿಸಿದನು.

' ಹಾಗೆಯೇ ಆಗಬಹುದು. ನಿಮಗೆ ಈ ' ಇಲೆಕ್ಟ್ರಿಕ್ ಟಾರ್ಚ ' ಬೇಕೇನು ? ' ಎಂದು ಮುದುಕನು ಮುಂಗಡವಾಗಿಯೆ ಕೇಳಿದನು.

ಇಬ್ಬರೂ ಕೂಡಿಕೊಂಡು ಕೆಲವು ಹೆಜ್ಜೆ ಕತ್ತಲೆಯಲ್ಲಿ ಹಿಂದಕ್ಕೆ ಹೋದರು. ಇಂಥ ಗಂಡಾಂತರದ ಹೊತ್ತಿನಲ್ಲಿಯೂ ಸ್ಥೈರ್ಯವನ್ನು ಕಾಯ್ದುಕೊಳ್ಳಲು ಹಚ್ಚಿದ ಅವರ ಕೆಚ್ಚೆದೆಯನ್ನೂ ಅದಕ್ಕೆ ಅವರನ್ನು ಅಣಿಗೊಳಿಸಿದ ಶಿಕ್ಷಣವನ್ನೂ ಕೊಂಡಾಡತಕ್ಕದ್ದು. ಅಡ್ಡಾತಿಡ್ಡ ಹೊರಳುತ್ತ ಹೊರಟ ಗಾಲಿಗಳ ಗುರುತು ಹಿಡಿದುಕೊಂಡು ಹೋಗಿ ಹೊಡತ ಬಿದ್ದ ಸ್ಥಳವನ್ನೆ ಮುಟ್ಟಿದರು. ಅಲ್ಲಿಯೆ ಒಂದು ಹತ್ತು ಹೆಜ್ಜೆಯಲ್ಲಿ ಆ ಪೂಲು ಇತ್ತು. ಬಹುಶಃ ಆ ಪ್ರಾಣಿಯು ಹಳ್ಳದೊಳಗಿಂದ ಬಂದಿರಬೇಕು. ಅಲ್ಲಿಯ ವರೆಗೆ ಗಾಲಿಯ ಗುರುತುಗಳು ಸ್ಪಷ್ಟವಾಗಿ ಒಂದೇ ಸಮನೆ ಇದ್ದವು ; ಮುಂದೆ ಮಾತ್ರ ಎಲ್ಲವೂ ಹುಚ್ಚಾಪಟ್ಟಿಯಾಗಿ ಹೋಗಿತ್ತು. ಯಾವದನ್ನೂ ಗುರುತು ಹಿಡಿಯಲಿಕ್ಕೆ ಬಾರದಂತಿತ್ತು. ಅಲ್ಲದೆ ಟಾರ್ಚಿನ ಬೆಳಕು ಅಲ್ಲಿಯ ಕತ್ತಲೆಯನ್ನೇ ಹೆಚ್ಚಿಸಿತ್ತು. ಅಂದಮೇಲೆ ಏನು ಮಾಡುವುದು ? ಕಣ್ಣಿಗೆ ಮಂಕು ಹಿಡಿದಂತಾಗಿ ಇಷ್ಟೊತ್ತಿನವರೆಗೆ ಕಂಡಿದ್ದರ ಅರ್ಥಕೂಡ ಸ್ಪಷ್ಟವಾಗಿ

ಆಗಲಿಲ್ಲ. ಇದೂ ಅಲ್ಲದೆ ಆಗ ಅಡೀಲಾಳು ಗಾಬರಿಯಲ್ಲಿ ಬಗ್ಗಿದ್ದರಿಂದ ಗಾಳಿಗೆ ಅವಳ ಅಂಚು ಅಲೆದಾಡಿತ್ತು. ಅವಳೇ ಗಾಡಿಗೆ ಹೊಡೆದಿರಬೇಕೆಂದೂ ಅವನಿಗೆ ಭ್ರಮೆಯಾಯಿತು. ಆದರೂ ಅವರಿಗೀಗ ಮನಸಿನ ಭಾರ ಇಳಿದಂತಾಗಿತ್ತು. ತಮ್ಮಿಬ್ಬರ ನಡುವಿನ ಸಂಬಂಧವನ್ನು ಮರೆತು, ಒಮ್ಮೆಂದೊಮ್ಮೆ ಕರಾಬದ್ದು ಧೂಳದಲ್ಲಿ ಅತ್ತಿತ್ತ ತಿರುಗುವಾಗ ಸಾಹಸದ ಉತ್ಸಾಹವು ಅವರಿಬ್ಬರಲ್ಲಿಯೂ ಕುಣಿದಾಡುತ್ತಿತ್ತು.

'ಅದು ಕೋಣ ಇರಬೇಕು.' ಎಂದು ತಮ್ಮ ಜೊತೆಗೆ ಬಾರದೆ ಹಿಂದುಳಿದಿದ್ದ ಆ ಮುದುಕನಿಗೆ ಕೇಳುವಂತೆ ಅಡೀಲಾ ಕೂಗಿ ಹೇಳಿದಳು.

'ಹೌದು, ಅದೇ ಇರಬೇಕು.' ಎಂದು ಹಿಂದಿನಿಂದ ಉತ್ತರ ಬಂತು.

'ಅದು ಕತ್ತೆಕಿರುಬ ಆಗಿದ್ದರೆ....?'

ರೋನಿಯು ಈ ಕೊನೆಯ ಊಹೆಯನ್ನೇ ಎತ್ತಿ ಹಿಡಿದನು. ಕತ್ತೆಕಿರುಬಗಳು ಹಳ್ಳಗಳಲ್ಲಿ ಸುಳಿದಾಡುವದೂ ನಿಜ ; ಮತ್ತು ಅದಕ್ಕೆ ಕಾರಿನ ಈ ಮುಂದೀಪಗಳಿಂದ ಕಣ್ಣು ಕುಕ್ಕುವದೂ ನಿಜ.

'ಉತ್ತಮ ವಿಚಾರ ! ಕತ್ತೆಕಿರುಬ !' ಎಂದು ಆ ಮುದುಕನು ಸಿಟ್ಟಿನ ಆವಿರ್ಭಾವದಿಂದ ರಾತ್ರಿಯನ್ನೇ ಅಣಕಿಸುವಂತೆ ನುಡಿದನು. 'ಮಿ. ಹ್ಯಾರಿಸ್ !'

'ಇನ್ನೊಂದು ಕ್ಷಣ—ಇನ್ನು ಹತ್ತು ನಿಮಿಷ ಕೊಡಿರಿ ಸಾಕು.' ಹ್ಯಾರಿಸ್‌ನ ಉತ್ತರ ಬಂತು.

'ಸಾಹೇಬರು ಅದು ಕತ್ತೆಕಿರುಬ ಅನ್ನುತ್ತಾರೆ ?'

'ಮಿ. ಹ್ಯಾರಿಸ್, ಚಿಂತೆಬೇಡ. ಸಾವಕಾಶ ಆಗಲಿ. ಬಹದ್ದೂರರೇ, ಅವನೇ ನಮ್ಮನ್ನು ಈ ಹೊತ್ತು ಉಳಿಸಿದ್ದು. ಇಲ್ಲದಿದ್ದರೆ ಕಾರಿಗೆ ಕಾರೇ ಟಾಂಗಮೇಲಾಗುತ್ತಿತ್ತು. ಹ್ಯಾರಿಸ್, ನೀನು ಬಹಳ ಒಳ್ಳೆಯ ಕೆಲಸ ಮಾಡಿದ್ದೀಯಾ.' ಎಂದಾಡಿದನು ರೋನಿ.

'ಮಾರವಾರದ ರಸ್ತೆಕ್ಕೆ ಬಾರದೆ ಗಂಗಾವತಿ ರಸ್ತೆಗೆ ನಾನು ಹೇಳಿದಂತೆ ಅವನು ತೆಗೆದುಕೊಂಡು ಹೋಗಿದ್ದರೆ ಇಷ್ಟೆಲ್ಲ ಅನರ್ಥ ಎಲ್ಲಿ ಆಗುತ್ತಿತ್ತು ?'

'ಅದು ನನ್ನ ತಪ್ಪು. ಈ ರಸ್ತೆಗೆ ಬರಲಿಕ್ಕೆ ನಾನೇ ಹೇಳಿದೆ ;

ಯಾಕಂದರೆ ಇದೇ ರಸ್ತೆ ಹೆಚ್ಚು ಚೆನ್ನಾಗಿತ್ತು. ಮಿ. ಲೆಸ್ಲೀಯು ಈ ರಸ್ತೆಯನ್ನು ಗುಡ್ಡದವರೆಗೆ ಪಕ್ಕಾಮಾಡಿಸಿದ್ದಾನೆ. '

' ಓಹೋ! ಈಗ ನನಗೆ ತಿಳಿಯಿತು ' ಎಂದು ಧೈರ್ಯ ತಂದುಕೊಂಡು ಆ ಅಪಘಾತ ಸಂಭವಿಸಿದ್ದಕ್ಕಾಗಿ ತನ್ನನ್ನು ಕ್ಷಮಿಸಬೇಕೆಂದು ಮೆಲ್ಲಗೆ ಬೇಡಿಕೊಂಡನು. ಅದಕ್ಕೆ ರೋನಿಯು ' ಏನಿಲ್ಲ, ಅದೇನಿಲ್ಲ. ' ಎಂದು ಗೊಣಗುಟ್ಟಿದನು. ' ಆದರೆ ಕ್ಷಮಾಪಣೆಯನ್ನು ಬೇಡತಕ್ಕವನು ಇದಕ್ಕೆ ಮೊದಲೇ ಬೇಡಬೇಕಿತ್ತು. ಆಂಗ್ಲಜನರು ಗಂಡಾಂತರಗಳಲ್ಲಿ ಶಾಂತರಿರುತ್ತಾರೆಂದು ಅವರ ಮಹತ್ವ ಕಗ್ಗಿಮೆಯೆಂದು ತಿಳಿದುಕೊಳ್ಳಬಾರದು. ನವಾಬ ಬಹದ್ದೂರನು ಈ ಪ್ರಸಂಗದಲ್ಲಿ ಗೌರವದಿಂದ ನಡೆದುಕೊಳ್ಳಲಿಲ್ಲ ' ಎಂಬ ಭಾವವು ರೋನಿಯಲ್ಲಿ ಮೂಡಿಬಿಟ್ಟಿತ್ತು.

ಇದೇ ಹೊತ್ತಿಗೆ ಎದುರಿನಿಂದ ಒಂದು ದೊಡ್ಡ ಮೋಟಾರ ಕಾರು ಬಂತು. ರೋನಿಯು ಕೆಲ ಹೆಜ್ಜೆ ಮುಂದೆ ಹೋಗಿ ಅಧಿಕಾರದ ದರ್ಪದಿಂದ ಕೈಸನ್ನೆಮಾಡಿ ಅದನ್ನು ನಿಲ್ಲಿಸಿದನು. ಅದರ ಮೇಲೆ ' **ಮುದಕಲ್ ಸಂಸ್ಥಾನ** ' ಎಂದು ಬರೆದಿತ್ತು. ಚಟುವಟಿಕೆ, ಅಂತಃಕರಣಗಳ ಮೂರ್ತಿಯಾದ ಮಿಸ್ ಡೆರೆಕ್ಕಳು ಒಳಗಿದ್ದಳು.

' ಮಿ. ಹೆಸ್ಲೋಪ, ಮಿಸ್ ಕ್ವೆಸ್ಟೆಡ್, ಒಬ್ಬ ನಿರುಪದ್ರವಿ ಸ್ತ್ರೀಯನ್ನು ಸುಮ್ಮನೆ ಏಕೆ ತಡೆದು ನಿಲ್ಲಿಸುತ್ತೀರಿ? ' ಎಂದು ಗಾಬರಿಯಾಗಿ ಕೇಳಿದಳು.

' ಹಾಗಲ್ಲ, ನಾವಿಲ್ಲಿ ಸಿಗಿಬಿದ್ದಿದ್ದೇವೆ. '

' ಇಂಥ ಕೊಳಚಿಯಲ್ಲಿ! '

' ನಮ್ಮ ಕಾರಿಗೆ ಕತ್ತೆಕಿರುಬು ಹಾಯಿತು.

' ಹೀಗೇನು ? ಏನು ಚಮತ್ಕಾರವಿದು ! '

' ನೀವು ನಮ್ಮನ್ನು ಕರೆದೊಯ್ಯುವ ಸಪಾಯ ಮಾಡುವಿರಾ ?

' ಓಹೋ. '

' ನನ್ನನ್ನೂ ಕರೆದುಕೊಂಡು ಹೋಗಬೇಕು. ' ಎಂದು ನವಾಬರೂ ಅತ್ತೂಕರೆದು ಔತಣ ಹಚ್ಚಿಕೊಂಡರು.

' ಹಾಗಾದರೆ ನನ್ನದೇನು ಗತಿ? ' ಎಂದು ಹ್ಯಾರಿಸ್ಸನು ಒದ್ದಾಡಿದನು.

' ಇದೆಲ್ಲಾ ಏನಿದು ಹುಚ್ಚುಚ್ಚಾರ? ನನ್ನದೇನು ಬಸ್ಸುಗಾಡಿಯೆಂದು

ತಿಳಿದಿದ್ದೀರಾ?' ಎಂದು ಮಿಸ್ ಡೆರೆಕ್ಕಳು ನಿರ್ದಾಕ್ಷಿಣ್ಯವಾಗಿ ಕೇಳಿದಳು. 'ಇಲ್ಲಿ ಒಳಗೆ ಇಗಾಗಲೇ ಒಂದು ಹಾರ್ಮೋನಿಯಮ್ ಇದೆ; ಎರಡು ನಾಯಿಕುನ್ನಿಗಳಿವೆ. ಬೇಕಾದರೆ ಒಬ್ಬನು ಮುಂದೆ ಈ ನಾಯಿಕುನ್ನಿಯನ್ನು ಕರಕೊಂಡು ಕುಳಿತರೆ ನಾನು ಮೂವರನ್ನೂ ಕರೆದುಕೊಂಡು ಹೋಗಬಹುದು. ಅದಕ್ಕೂ ಹೆಚ್ಚಾಗುವದಿಲ್ಲ.'

'ಆಗಲಿ, ನಾನು ಮುಂದೆ ಕೂಡುವೆನು.' ಎಂದು ನವಾಬರು ಹಲ್ಲು ಕಿರಿದು ಹೇಳಿಕೊಂಡರು.

'ಹಾಗಾದರೆ ಒಳಗೆ ಜಿಗಿಯಿರಿ. ನೀವು ಯಾರೋ ಏನೋ ನನಗಂತೂ ಕಲ್ಪನೆಯೇ ಇಲ್ಲ.' ಎಂದು ಮಿಸ್ ಡೆರೆಕ್ಕಳು ಹೇಳಿದಳು.

'ನಿಮ್ಮದೆಲ್ಲ ಆಯಿತು; ನನ್ನ ಊಟದ ವಿಚಾರವೇನು? ಇಡಿ ರಾತ್ರಿ ನಾನೊಬ್ಬನೆ ಇಲ್ಲಿರಬೇಕೆಂದರೆ ನನಗಂತೂ ಸಾಧ್ಯವಿಲ್ಲ.' ಎಂದು ಆ ಶಾಫರನು ತಾನೂ ಯುರೋಪಿಯನ್ನನೆಂದು ತಿಳಿದುಕೊಂಡು ಅದೇ ಠೀವಿಯಿಂದ ಮುಂದೆ ಬಂದು ತಡೆದುನಿಂತನು. ಕತ್ತಲೆಯಿದ್ದರೂ ಅವನ ತಲೆಯ ಮೇಲಿನ ಟೋಪಿಯು ಇನ್ನೂ ಎದ್ದುಕಾಣುತ್ತಿತ್ತು. ಆಳುವ ಜನಾಂಗದವರು ಆ ಮುಖಕ್ಕೆ ಕೊಟ್ಟ ಕಾಣಿಕೆಯೆಂದರೆ—ಉಳಿದದ್ದೇನೂ ಇಲ್ಲದಿದ್ದರೂ—ಆ ಕೆಟ್ಟ ಹಲ್ಲುಗಳದು. ಇಂಥ ಹಲ್ಲುಗಳನ್ನು ಹಾಯಿಸಿಕೊಂಡ ಆ ಮುಖವು ಟೊಪ್ಪಿಗೆಯೊಳಗಿಂದ ದೈನ್ಯ ತುಂಬಿಕೊಂಡು ಹೊರಗೆ ಇಣಿಕಿತು. 'ಇದೆಲ್ಲ ಏನು? ನೀವು ಕಪ್ಪು ಮತ್ತು ಬಿಳಿ ಜನರು ಕೂಡಿ ನನಗೆ ಹೀಗೆ ಕಾಡಿಸಬೇಡಿರಿ. ನಾನೂ ನಿಮ್ಮಂತೆ ಈ ದರಿದ್ರ ಹಿಂದುಸ್ತಾನದಲ್ಲಿ ಪುಟ್ಟಪೂರ ಸಿಗಿಬಿದ್ದಿದ್ದೇನೆ. ನನ್ನನ್ನೂ ಇಷ್ಟು ಮೇಲಕ್ಕೆತ್ತಿರಿ.' ಎನ್ನುವಂತೆ ಅವನ ಮುಖಭಾವವಿತ್ತು.

'ನಿನ್ನನ್ನು ಊಟ ಕೊಟ್ಟು ನಾಯಿಕಲ್ಲಮೇಲೆ ಕಳಿಸಿಕೊಡುತ್ತೇನೆ. ಅದಷ್ಟು ಬೇಗನೆ ಕಳಿಸುತ್ತೇನೆ ಅಷ್ಟೊತ್ತಿನ ವರೆಗೆ ಕಾರನ್ನು ಸರಿಮಾಡುತ್ತಿರು.' ಎಂದು ನವಾಬರು ಮತ್ತೆ ತಮ್ಮ ಮೊದಲಿನ ಗಾಂಭೀರ್ಯವನ್ನು ತಂದುಕೊಂಡು ಆಜ್ಞಾಪಿಸಿದರು.

ಅವರೆಲ್ಲರೂ ಹೊರಟರು. ಹ್ಯಾರಿಸನು ಮಾತ್ರ ಅವರನ್ನೊಮ್ಮೆ ನುಂಗುವಂತೆ ತಿರಸ್ಕಾರದಿಂದ ನೋಡಿ, ತನ್ನ ಸ್ಥಳಕ್ಕೆ ಬಂದು, ಮುದುಡಿ

ಮುಂಟ್ಟಿಗೆಯಾಗಿ ಕುಳಿತುಕೊಂಡನು. ಈ ಇಂಗ್ಲೀಷರು ಮತ್ತು ಹಿಂದು ಗಳು ಇಬ್ಬರೂ ಕೂಡಿ ನಿಂತದ್ದನ್ನು ನೋಡಿ ತಾನು ಇವರಲ್ಲಿ ಯಾರ ಪೈಕಿ ಎಂಬುದೇ ಗೊತ್ತಾಗದೆ ಅವನಲ್ಲಿ ಸ್ವಾಭಿಮಾನದ ಕಿಚ್ಚು ಪ್ರಜ್ವಲಿಸಿತು ಒಂದು ಕ್ಷಣ ಅವನ ರಕ್ತದಲ್ಲಿ ಹರಿದಾಡುವ ವಿರುದ್ಧಪ್ರವಾಹಗಳಿಂದ ಅವನಿಗೆ ಉಸಿರುಗಟ್ಟಿದಂತಾಯಿತು; ಆಮೇಲೆ ಅವೆರಡೂ ಕೂಡಿದವು, ಒಂದಾದವು. ಆಗ ಅವನಿಗೆ ತಾನೆಂದರೇ ತಾನೆ ಹೊರತು ಯಾವ ಜಾತಿಗೂ ಸೇರಿದವನಲ್ಲ ಎನಿಸಿತು.

ಇತ್ತ ಮಿಸ್ ಡೆರೆಕ್ಕಳು ಪೆಟ್ಟು ಬಿದ್ದ ಹಾವಿನಂತೆ ಹರಿದಾಡುತ್ತಿದ್ದಳು. ಮುದಕಲ್ ಸಂಸ್ಥಾನದ ಕಾರನ್ನು ಕಳವುಮಾಡಿಕೊಂಡು ಬಂದು ಬಿಟ್ಟಿದ್ದಳು. ಅವಳ ಮಹಾರಾಜನು ಮಿತಿಮೀರಿ ಸಿಟ್ಟಿಗೇಳಬಹುದು. ಆದರೆ ಅವಳೇನು ಅದಕ್ಕನಷ್ಟು ಮಹತ್ವ ಕೊಟ್ಟಿರಲಿಲ್ಲ. ಬಹಳಾದರೆ ಅವನು ಅವಳನ್ನು ಸುಲಿಯಬಹುದು ಅಷ್ಟೆ. 'ಈ ಜನರು ನಿಮ್ಮನ್ನು ಬಿಡುವರೆಂದು ನನಗೇನೂ ಭರವಸೆಯಿಲ್ಲ....ನಾನು ಹೀಗೇ ದೆವ್ವನಂತೆ ಕಸಿದುಕೊಳ್ಳದಿದ್ದರೆ ನಾನಿಷ್ಟೊತ್ತಿಗೆ ಹಳ್ಳಾಕುಡಿ ಹೋಗಿ ಹಳೆ ಮಾತಾಗುತ್ತಿತ್ತು....ಆ ಮೂರ್ಖ ಮಹಾರಾಜನಿಗಾದರೂ ಏನು, ಕಾರು ಬೇಕಾಗಿತ್ತೇನು ? ಎಂದೂ ಇಲ್ಲ....ನಾನಿಲ್ಲಿ ಚಂದ್ರಪುರದಲ್ಲಿ ಬಂದಾಗ ಅವನ ಕಾರಿನಲ್ಲಿ ಕೂತು ತಿರುಗಾಡಿದರೆ ಸಾಕು, ಅದೇ ಒಂದು ಅವನಿಗೆ ಗೌರವ.. ಏನೇ ಆದರೂ ಅವನು ಹಾಗೇ ತಿಳಿದುಕೊಳ್ಳುವಂತೆಯೂ ಮಾಡಬೇಕು.. ಆದರೆ ನಮ್ಮ ಮಹಾರಾಣಿಯವರ ಸ್ವಭಾವ ಮಾತ್ರ ಬೇರೆ. ಬಹಳ ಒಳ್ಳೆಯವರು, ಅಂತಃಕರುಣೆಗಳು.. ಅಕಾ, ಅಲ್ಲಿದೆಯಲ್ಲ ಆ ದೆವ್ವ ಖೋಡಿ, ಅದು ಅವಳ ಟ್ಯಾರಿಯರ್ ನಾಯಿ.. ಡ್ರೈವ್ಹರನಿಂದ ಅವೆರಡನ್ನೂ ಎಬ್ಬಿಸಿ ತಂದಿದ್ದೇನೆ....ಹಃ ಹಃ ನರೇಂದ್ರಸಭೆಗೆ ನಾಯಿ ಕರೆದುಕೊಂಡು ಹೋಗುವದೆಂದರೆ, ಹಃ ಹಃ ನರೇಂದ್ರರನ್ನು ಕರೆದುಕೊಂಡು ಹೋದಂತೆಯೆ ! 'ಎಂದು ಬಿದ್ದುಬಿದ್ದು ನಕ್ಕಳು. 'ಈ ಹಾರ್ಮೋನಿಯಮ್ ತಂದದ್ದು ಮಾತ್ರ ಸ್ವಲ್ಪ ತಪ್ಪಾಯಿತು; ನಾನೇ ಒಪ್ಪುತ್ತೇನೆ....ಅದನ್ನು ಗಾಡಿಯಲ್ಲಿಯೆ ಬಿಡಬೇಕೆಂದಿದ್ದೆನು....ಅಯ್ಯೋ ದೇವರೇ !..'

ರೋನಿಯು ಸ್ವಲ್ಪ ಬಿಗಿಹಿಡಿದೇ ನಕ್ಕನು. ಇಂಗ್ಲೀಷ ಜನರು

ಸಂಸ್ಥಾನಗಳಲ್ಲಿ ನೌಕರಿ ಹಿಡಿಯುವದು ಅವನಿಗೆ ಸೇರಲಿಲ್ಲ. ಯಾಕೆಂದರೆ ಅಲ್ಲಿ ಅವರ ಮಾತು ಸ್ವಲ್ಪ ನಡೆಯುತ್ತಿದ್ದರೂ ಅವರ ಸಾಮಾನ್ಯ ಮರ್ಯಾದೆಗೆ ಕುಂದುಬರುವದೆಂದೂ, ಈ ತರಹದ ಸಂಬಳಕ್ಕೆ ಆಳಾಗಿ ದುಡಿಯುವ ಸೈನಿಕರು ಎಷ್ಟು ಸಂಪಾದಿಸಿದರೂ ಅಷ್ಟೇ, ಅವರಿಂದ ಇಲ್ಲಿಯ ತಮ್ಮ ಆಡಳಿತಕ್ಕೆ ಏನೂ ಸಹಾಯವಾಗುವದಿಲ್ಲವೆಂದೂ ಅವನು ಮನದಲ್ಲಿಯೆ ಮರುಗಿದನು. 'ನಿಮ್ಮಂತಹ ತರುಣ ಸ್ತ್ರೀಯರು ಹೀಗೆಯೇ ನಡೆಯುಸಿದರೆ ನೀವು ಈ ಹಿಂದೂ ಜನರಕಿಂತಲೂ ಒಂದು ಕೈ ಮೇಲಾಗುವಿರಿ' ಎಂದು ನಿರ್ದಾಕ್ಷಿಣ್ಯವಾಗಿ ಹೇಳಿಯೆಬಿಟ್ಟನು.

'ಅಷ್ಟಾಗುವತನಕ ಇವರು ನಮ್ಮನ್ನಿಲ್ಲಿ ಸುಮ್ಮನೆ ಬಿಡುವರು? ಸುಲಿದೇ ಬಿಡುವರು. ಅಲ್ಲಿಂದೇನು? ಮತ್ತೆ ಬೇರೆ ಕಡೆಗೆ ಹೋಗುವದು; ಹೊಸ ಕೆಲಸ ಹಿಡಿಯುವದು. ಇಡಿ ಹಿಂದುಸ್ಥಾನದಲ್ಲೆಲ್ಲ ಈ ಮಹಾರಾಣಿಯರು, ರಾಣಿಯರು, ಬೇಗಮ್ಮರು, ಬೇಕಾದಷ್ಟಿದ್ದಾರೆ; ಅವರೆಲ್ಲ ನಮ್ಮಂಥವರಿಗಾಗಿಯೆ ಬಾಯಿಬಿಡುತ್ತಿದ್ದಾರೆ.'

'ಹೀಗೇನು? ಇದು ನನಗೆ ಗೊತ್ತೇ ಇದ್ದಿಲ್ಲ!'

'ನಿಮಗೆ ಗೊತ್ತಾದರೂ ಹೇಗೆ ಆಗಬೇಕು ಮಿ. ಹೆಸ್ಲೋಪ? ಇಲ್ಲಿಯ ಮಹಾರಾಣಿಯವರದು ಪಾಪ, ಅವನಿಗೆ ಹೇಗೆ ಗೊತ್ತಿರಬೇಕು, ಮಿಸ್ ಕ್ವೆಸ್ಟೆಡ್? ಇರಲಿಕ್ಕಿಲ್ಲೆಂದು ನನಗಂತೂ ಅನಿಸುತ್ತದೆ.'

'ಅವರು ಬರಿ ಹೆಸರಿಗೆ ದೊಡ್ಡಜನರು. ಅಂಥ ದೊಡ್ಡಜನರಲ್ಲಿ ಏನೂ ಹುರುಳಿರುವದಿಲ್ಲ.' ಎಂದು ಅಡೀಲಾ ಆ ತರುಣಿಯ ಮಾತಿನ ಧಾಟಿಯನ್ನು ಸೇರದಿದ್ದರೂ ಶಾಂತರೀತಿಯಿಂದ ನುಡಿದಳು. ಕತ್ತಲೆಯಲ್ಲಿ ಅವಳ ಕೈಯು ಮತ್ತೆ ರೋನಿಯ ಕೈಗೆ ತಾಗಿತು. ಮತ್ತೆ ಆನಂದದ ತೆರೆಯೊಂದು ಇಬ್ಬರಲ್ಲಿಯೂ ಎದ್ದಿತು. ಇಬ್ಬರ ಮನಸ್ಸೂ ಇನ್ನಿಷ್ಟು ಸಮೀಪ ಬಂದವು.

'ಮಿಸ್ ಕ್ವೆಸ್ಟೆಡ್, ನೀವು ತಪ್ಪುತಿಳಿದುಕೊಂಡಿದ್ದೀರಿ. ಅವರು ನಿಜವಾಗಿ ದೊಡ್ಡಜನರು.' ಎಂದು ಡೆರೆಕ್ಕಳು ಮತ್ತೆ ಹೇಳಿದಳು.

'ಅವರು ತಪ್ಪುತಿಳಿದುಕೊಂಡಿದ್ದಾರೆಂದು ನಾನೆಂದೂ ಹೇಳಲಾರೆ.' ಎಂದು ನವಾಬ ಬಹದ್ದೂರರು ತಾವು ಕುಳಿತಲ್ಲಿಂದಲೆ ಒಮ್ಮೆಲೆ ನಡುವೆ ಬಾಯಿಹಾಕಿ ಮಾತನಾಡಿದರು. 'ದೇಶೀಸಂಸ್ಥಾನ—ಹಿಂದೂಸಂಸ್ಥಾನ-

ಹಿಂದೂ ಸಂಸ್ಥಾನದ ರಾಜನ ಹೆಂಡತಿ—ನಿಸ್ಸಂಶಯವಾಗಿ ಅತ್ಯುತ್ತಮ ಹೆಣ್ಣುಮಗಳಿರಬಹುದು–ಅಂದರೆ ಮುದಕಲ್ ಮಹಾರಾಣಿಯವರಲ್ಲಿ ಏನಾದರೂ ದೋಷಾರೋಪಣೆ ಮಾಡುತ್ತೇನೆಂದು ಮಾತ್ರ ದಯವಿಟ್ಟು ಕ್ಷಣಮಾತ್ರವೂ ತಿಳಿದುಕೊಳ್ಳಬಾರದು–ಆದರೆ ಇಷ್ಟು ಮಾತ್ರ ಧೈರ್ಯವಾಗಿ ಹೇಳಬಲ್ಲೆ: ಅವರು ಸಾಮಾನ್ಯವಾಗಿ ಅಶಿಕ್ಷಿತರೂ ಮೂಢಭಾವನೆಯುಳ್ಳವರೂ ಇರುತ್ತಾರೆ–ನಿಮ್ಮ ರಾಣಿಯವರೇನು ಇದಕ್ಕೆ ಹೊರತಿರಲಿಕ್ಕಿಲ್ಲ !—ಇಂಥ ಸ್ತ್ರೀಯರಿಗೆ ಶಿಕ್ಷಣದ ಯಾವ ಅನುಕೂಲವಿದೆ .... ಮೂಢಭಾವನೆಯಂತೂ ಬಹಳ ಭಯಂಕರವಾದದ್ದು.. ನಮ್ಮ ಹಿಂದೀಜನರಿಗೆ ಇದೊಂದು ರೋಗ....' ಹೀಗೆನುವಾಗ ಅವನ ಈ ದೋಷಾರೋಪಣೆಯನ್ನು ಎತ್ತಿ ತೋರಿಸುವಂತೆ ಸಿವ್ಹಿಲ್ ಸ್ಟೇಶನ್ನಿನ ದೀಪಗಳು ಬಲಕ್ಕೆ ಎತ್ತರಿನ ಮೇಲೆ ಕಂಡವು. ನವಾಬರು ಮತ್ತಿಷ್ಟು ಬಾಯಿ ಹರಿಬಿಟ್ಟರು. 'ಮೂಢಭಾವನೆಯನ್ನು ಕಿತ್ತೊಗೆಯುವದು ಪ್ರತಿಯೊಬ್ಬ ನಾಗರಿಕನ ಕರ್ತವ್ಯವಾಗಿದೆ—ನನಗೆ ದೇಶೀಸಂಸ್ಥಾನದ ಅನುಭವವು ಅಷ್ಟಿಲ್ಲ—ಈ ಮುದಕಲ್ ಸಂಸ್ಥಾನದ್ದಂತೂ ಎಳ್ಳಷ್ಟಿಲ್ಲ—ಆಗರೂ ಬ್ರಿಟಿಶ್ ಹಿಂದುಸ್ತಾನದಂತೆ ಅಲ್ಲಿ ರಾಜ್ಯದಾಡಳಿತವು ವ್ಯವಸ್ಥಿತರೀತಿಯಿಂದ ನಡೆದಿದೆಯೆಂದು ನನಗನಿಸುವದಿಲ್ಲ—ಬ್ರಿಟಿಶ್ ಹಿಂದುಸ್ತಾನದಲ್ಲಿ ವಿಚಾರಶೀಲತೆಯೂ ಆಡಳಿತದ ವ್ಯವಸ್ಥೆಯೂ ಸಖ್ಯಭಾವದಿಂದ ಕೂಡಿಕೊಂಡು ನಡೆದಿವೆ....'

'ಗೋಲೀ....' ಎಂದು ಮಿಸ್ ಡೆರೆಕ್ಕಳು ಕೂಗಿದಳು.

ಅವಳ ವಾಕ್ಯಪೂರ್ತಿಯಾಗುವವರೆಗೆ ನಿಲ್ಲದೆ ಆ ಮುದುಕನು ತನ್ನ ಮಾತನ್ನು ಹಾಗೇ ಮುಂದೆ ನಡೆಸಿದನು. ಅವನ ನಾಲಿಗೆ ಬಿಚ್ಚಿಬಿಟ್ಟಂತಾಗಿತ್ತು; ಅವನ ಮನಸ್ಸು ಇನ್ನೂ ಏನನ್ನೋ ಹೇಳಬೇಕೆಂದು ಹರಿದಾಡುತ್ತಿತ್ತು. ದೊಡ್ಡವರೆನಿಸಿಕೊಳ್ಳುವವರಲ್ಲಿ ಹುರುಳಿರುವದಿಲ್ಲೆಂಬ ಮಿಸ್ ಕ್ವೆಸ್ಟೆಡ್‌ಳ ಮಾತಿಗೆ ಅವನೂ ತನ್ನ ಒಪ್ಪಿಗೆಯನ್ನು ತೋರಿಸಬೇಕೆಂದಿದ್ದನು. ಹಾಗೆ ನೋಡಿದರೆ ಅವನೇ ಈ ಸ್ವತಂತ್ರ ಸಂಸ್ಥಾನಿಕರಕಿಂತ ಎಷ್ಟೋ ದೊಡ್ಡವನಿದ್ದನು. ಆದರೆ ಹಾಗೆ ತಾನು ದೊಡ್ಡವನೆಂದು ಅವಳಿಗೆ ತಾನೇ ತಿಳಿಸಬಾರದೆಂದು ಅವನಾಶೆ ; ತಾನೇ ತಿಳಿಸಿದರೆ ಅವಳಿಗೆಲ್ಲಿ ಅವಮರ್ಯಾದೆ ಮಾಡಿದೆನೆಂಬ ಭಾವನೆ ಬಂದೀತೋ ಎಂಬ ಎದೆಗುದಿ ಅವನಿಗೆ. ಇವೆಲ್ಲ ಅವನ

ಆ ವ್ಯಾಖ್ಯಾನದ ತಳಹದಿಯಾಗಿದ್ದವು. ಇದೆಲ್ಲದರ ಜೊತೆಗೆ ಮಿಸ್ ಡೆರೆಕ್ಕಳು ತನ್ನನ್ನು ಮೋಟರಿನಲ್ಲಿ ಕೂಡಿಸಿಕೊಂಡದ್ದಕ್ಕೆ ಕೃತಜ್ಞತೆಯೂ ತೀರ ಅಸಹ್ಯವಾದ ನಾಯಿಕುನ್ನಿಯನ್ನು ತನ್ನ ಕಂಕುಳಲ್ಲಿ ಕುಳ್ಳಿರಿಸಿಕೊಳ್ಳುವ ದುರ್ಧರ ಪ್ರಸಂಗ ಬಂದದ್ದಕ್ಕಾಗಿ ಜಿಗುಪ್ಸೆಯೂ ಅಂದು ಸಾಯಂಕಾಲ ಆ ತರುಣ ತರುಣಿಯರನ್ನು ತಾನೇ ಕರೆದುಕೊಂಡು ಬಂದು ಅಪಘಾತಕ್ಕೀಡುಮಾಡಿದಂತಾಯಿತಲ್ಲೆಂಬುದಕ್ಕಾಗಿ ವಿಷಾದವೂ ಬೆರೆತಿದ್ದವು. ಇನ್ನು ಹೋದ ಮೇಲೆ ತನ್ನ ಕ್ಲೀನರನನ್ನು ಹುಡುಕಿ ತರಬೇಕು ; ಮೊಮ್ಮಗನು ಮತ್ತೇನು ತುಂಟತನವನ್ನು ಎಬ್ಬಿಸಿದ್ದಾನೋ ನೋಡಬೇಕು ; ಇದೆಲ್ಲದಕ್ಕಾಗಿ ತಾನು ಊರ ಹತ್ತಿರವೇ ಇಳಿಯಬೇಕು. ಈ ಎಲ್ಲ ತನ್ನ ಚಿಂತೆಗಳನ್ನು ಒಂದೇ ಹಗ್ಗದಲ್ಲಿ ಅವನು ಹೊಸೆಯುತ್ತಿರುವಾಗ ಆ ಶ್ರೋತೃವೃಂದಕ್ಕೆ ತನ್ನ ಮಾತಿನಲ್ಲಿ ಬೇಸರ ಹುಟ್ಟಿತ್ತೆಂದು ಅವನಿಗೆ ಗೊತ್ತಾಯಿತು. ಸಿಟಿಮ್ಯಾಜಿಸ್ಟ್ರೇಟರು ಅತ್ತ ಹಾರ್ಮೋನಿಯಮ್ಮದ ಮರೆಗೆ ಆ ಇಬ್ಬರೂ ತರುಣಿಯರೊಡನೆ ಚಕ್ಕಂದ ಹೊಡೆಯುತ್ತಿದ್ದರೂ ನವಾಬರು ತಮ್ಮ ಸೌಜನ್ಯವನ್ನು ಕಾಯ್ದುಕೊಳ್ಳುವದಕ್ಕಾಗಿ ಅತ್ತ ಲಕ್ಷ್ಯವಿಲ್ಲದವರಂತೆ ತಮ್ಮ ಮಾತನ್ನು ಸಾಗಿಸಬೇಕಾಯಿತು. ಅವನಿಗೆ ಬೇಸರ ಎಂಬುದೇ ಗೊತ್ತಿರಲಿಲ್ಲ. ಅವರು ಮರ್ಯಾದೆಗೆಟ್ಟು ನಡೆದರೂ ಅವನಿಗೇನು ವಿಶೇಷವೆನಿಸಲಿಲ್ಲ. ಯಾಕಂದರೆ ದೇವರು ಎಲ್ಲರನ್ನೂ ಭಿನ್ನಭಿನ್ನವಾಗಿಯೆ ಹುಟ್ಟಿಸಿದ್ದಾನೆಂಬ ತತ್ವ ಬೇರೆ ಅವನ ಬೆನ್ನಿಗಿತ್ತು. ಈಗಂತೂ ಒಂದ ಆಪತ್ತು ದೂರಾಯಿತೆಂದ ಮೇಲೆ ಅವನ ಜೀವನವು ಯಥಾಪ್ರಕಾರವಾಗಿ ಮೊದಲಿನಂತೆ ಸುಖದಿಂದ ಸಾಗಿತು.

ಅಂತೂ ಬೆಣೆಯಿಲ್ಲದ ಈ ಹಳೆ ಕಾರಂಜಿಯು 'ಇಳಿದು ಹೋದ ಮೇಲೆ ರೋನಿಯು ಅವನ ವಿಷಯಕ್ಕೆ ಏನನ್ನೂ ಎತ್ತಿ ಆಡಲಿಲ್ಲ. ಪೋಲೊ ಆಟದ ವಿಷಯಕ್ಕೆ ಹರಟೆ ಹೊಡೆದನು. ಒಬ್ಬ ಮನುಷ್ಯನ ವಿಷಯವಾಗಿ ಕೂಡಲೆ ಅಭಿಪ್ರಾಯಮಾಡಿಕೊಳ್ಳುವದು ಮತ್ತು ಅದನ್ನು ಹೊರಗೆಡಹುವದು ವಿಹಿತವಲ್ಲೆಂದು ಟರ್ಟನ್ನನು ಅವನಿಗೆ ಕಲಿಸಿಕೊಟ್ಟಿದ್ದನು. ಆದುದರಿಂದ ಅವನು ನವಾಬರ ವಿಷಯವಾಗಿ ಮಾತನಾಡುವದನ್ನೆಲ್ಲ ಸಾಯಂಕಾಲದ ವರೆಗೆ ಮುಂದೂಡಿದನು. ನವಾಬರು ಇಳಿಯುವ ಹೊತ್ತಿನಲ್ಲಿ ಅವರಿಗೆ ಸಮಸ್ಕಾರ ಮಾಡಲಿಕ್ಕೆ ಕೈ ಎತ್ತಿದಾಗ ಮತ್ತೆ ಅದು ಅಡೀಲಾಳಿಗೆ

ತಾಕಿತು. ಕೂಡಲೆ ಅವಳದನ್ನು ಗಟ್ಟಿಯಾಗಿ ಹಿಡಿದು ಮುದ್ದಿಟ್ಟಳು. ರೋನಿಯೂ ತನ್ನ ಒಪ್ಪಿಗೆಯನ್ನು ಸೂಚಿಸಿದನು. ಅವರ ಈ ಸಲದ ನಿಶ್ಚಲವಾದ ಹಿಡಿತವು ಏನೊ ಹೊಸದನ್ನು ಸೂಚಿಸಿತು. ಬಂಗ್ಲೆಗೆ ಹೋದೊಡನೆ ಮತ್ತೊಮ್ಮೆ ಒಬ್ಬರನ್ನೊಬ್ಬರು ನೋಡಿದರು. ಮಿಸ್ ಕ್ವೆಸ್ಟೆಡ್‌ಳೇ ನಡಗುವ ದನಿಯಲ್ಲಿ ಮೊದಲು ಮಾತನಾಡಿದಳು. ' ರೋನಿ, ನಾನು ಮೈದಾನದಲ್ಲಿ ಆಡಿದ್ದನ್ನು ತಿರುಗಿ ತೆಗೆದುಕೊಳ್ಳುತ್ತೇನೆ. ' ರೋನಿಯೂ ಇದಕ್ಕೆ ಒಪ್ಪಿದನು. ಕೊನೆಗೆ ಇಬ್ಬರೂ ಮದುವೆಯಾಗಬೇಕೆಂದು ನಿಶ್ಚಯವಾಯಿತು.

ಈ ಹೊತ್ತಿನ ಬಡಿದಾಟವು ಈ ರೀತಿಯಲ್ಲಿ ಪರ್ಯವಸಾನಹೊಂದುವದೆಂದು ಇಬ್ಬರೂ ಕಲ್ಪಿಸಿರಲಿಲ್ಲ. ಅಡೀಲಾ ಏನೊ ಮತ್ತೆ ತನ್ನ ಮೊದಲಿನ ಅನಿಶ್ಚಯದ ಸ್ಥಿತಿಗೆ ಹೋಗಬೇಕೆಂದು ಹವಣಿಸಿದರೂ ಪರಿಸ್ಥಿತಿಯು ಕೈಮೀರಿ ಹೋಗಿತ್ತು. ಇಷ್ಟೊತ್ತಿನ ವರೆಗೆ ಆ ಹಸಿರು ಪಕ್ಷಿಯಂತೆ, ಆ ಕೂದಲುಳ್ಳ ಪ್ರಾಣಿಯಂತೆ ಇದ್ದ ಅವಳು ಈಗ ಬೇರೆಯಾದಳು. ' ಇದು ಇಂಥವನದು ' ಎಂದು ಗಣಪ್ಪನಿಗೆ ಚೀಟಿಹತ್ತುವಂತೆ ತನಗೂ ಒಂದು ಚೀಟಿಹತ್ತಿದಂತೆ ಅವಳಿಗೆನಿಸಿತು. ತಾನೇ ಈ ಬಂಧನದಲ್ಲಿ ಸಿಲುಕಿದ್ದನ್ನು ನೆನೆನೆನೆದು ಅವಳು ತಳಮಳಗೊಂಡಳು ; ಮುಖಭಂಗವಾದವರಂತೆ ತಪ್ತಳಾದಳು. ಅವಳಿಗೆ ಹೀಗೆ ಚೀಟಿ ಹಚ್ಚಿಡುವದೆಂದರೆ ಮೈ ಉರಿಯುತ್ತಿತ್ತು. ಇದಕ್ಕಾಗಿಯೆ ತನ್ನ ಮತ್ತು ತನ್ನ ಪ್ರಿಯಕರನ ನಡುವೆ ಒಂದು ಮಹಾಯುದ್ಧವಾಗಬಹುದೆಂದೂ ಅವಳು ಕಲ್ಪಿಸಿದ್ದಳು. ಯುದ್ಧವೇನೋ ಆಯಿತು; ಆದರೆ ನಾಟಕದೊಳಗಿನ ಯುದ್ಧವಾಯಿತು ಅಷ್ಟೆ.

ಇತ್ತ ರೋನಿಗೂ ಒಳಗೆ ಆನಂದವಾಗಿತ್ತು. ಆದರೆ ಆಶ್ಚರ್ಯವೇ ಹೆಚ್ಚಾಗಿದ್ದರಿಂದ ಅವಳಿಗೇನು ಹೇಳಬೇಕೆಂಬುದೇ ಅವನಿಗೆ ಗೊತ್ತಾಗಲಿಲ್ಲ. ಹೇಳುವದಾದರೂ ಏನು ? ಅದೇ ಮಾತು, ಆ ಮದುವೆಯದು. ಅದೀಗ ತಾನಾಗಿಯೆ ನಿಶ್ಚಯವಾಗಿಬಿಟ್ಟಮೇಲೆ ಹೇಳಲಿಕ್ಕೆ ಇನ್ನು ಉಳಿಯಿತಾದರೂ ಏನು ? ಏನೂ ಇಲ್ಲ.

' ಬಾ ಅಡೀಲಾ, ಇದನ್ನೆಲ್ಲ ತಾಯಿಗೆ ತಿಳಿಸೋಣ. ' ಎಂದು ಜಾಳಿಗೆಯಂಥ ತಗಡಿನ ಬಾಗಿಲನ್ನು ನೂಕಿದನು. ಮೂರಳು ಆಗ ಇಲ್ಲಿಲ್ಲದ ಮತ್ತು ತಾನಿಲ್ಲಿಗೆ ಬಂದಮೇಲೆ ಹೆಚ್ಚಾಗಿ ಹೆಸರು ಕೂಡ ಉಚ್ಚರಿಸದ

ತನ್ನೆರಡೂ ಮಕ್ಕಳ ಬಗ್ಗೆ ಕನಸಿನಲ್ಲಿ ಕನವರಿಸುತ್ತಿದ್ದಳು. ಅವಳಿಗೆ ಆ ಹುಡುಗರನ್ನು ಕಂಡಂತಾಗಿತ್ತು; ಮುದ್ದಿಟ್ಟಂತಾಗಿತ್ತು. ರೋನಿಯು ನೂಕಿದ ಬಾಗಿಲ ಸಪ್ಪಳವು ಅವಳನ್ನು ಈ ಕನಸಿನಿಂದ ಎಚ್ಚರಿಸಿತು. ಮೊದ ಮೊದಲು ಅವಳಿಗೆ ತಾನು ಏನು ಮಾಡಬೇಕೆಂಬುದೇ ತಿಳಿಯಲಿಲ್ಲ. ಈ ವಿಚಾರಮಾಡುವದನ್ನೆ ಮುಂದೂಡುವ ಚಟವು ಅವಳಿಗೂ ಆಗಲೆ ಅವರಿಂದ ಹತ್ತಿತ್ತು. ಆದರೆ ಅವರಿಂದಲೆ ಅದು ಇಂದು ಒಮ್ಮೆಲೆ ಮುಕ್ತಾಯಕ್ಕೆ ಬಂದದ್ದನ್ನು ನೋಡಿ ಸ್ವಲ್ಪ ಗಾಬರಿಯಾದಳು

ಪ್ರಾಮಾಣಿಕ ರೀತಿಯಿಂದ ತಾನು ಹೇಳುವದೆಲ್ಲ ಹೇಳಿಯಾದ ಮೇಲೆ ರೋನಿಯು ಬಳ್ಳೆ ಸೌಮ್ಯವಾಗಿ ನಯದಿಂದ ' ಇಲ್ಲಿ ನೋಡಿರಿ, ಇನ್ನು ನೀವಿಬ್ಬರೂ ಹಿಂದುಸ್ತಾನವನ್ನು ಬೇಕಾದ ಹಾಗೆ ನೋಡಬಹುದು.... ಫೀಲ್ಡಿಂಗನ ಮನೆಯಲ್ಲಿ ನನ್ನನ್ನು ನಾನೇ ನಗೆಗೀಡುಮಾಡಿಕೊಂಡೆನೆಂದು ನನಗೆ ಗೊತ್ತಿದೆ....ಆದರೆ ಅದೆಲ್ಲ ಈಗ ಬೇರೆ....ಆಗ ನನ್ನಟೇ ನನಗೆ ನಿಶ್ಚಯವಿದ್ದಿಲ್ಲ....' ಎಂದು ಹೇಳಿದನು.

' ನನ್ನ ಕರ್ತವ್ಯ ಇಲ್ಲಿಗೆ ಮುಗಿಯಿತು. ಇನ್ನು ನನಗೆ ಹಿಂದುಸ್ತಾನವನ್ನು ನೋಡುವದೇ ಬೇಡ. ಬಂದ ದಾರಿಯಿಂದಿನ್ನು ತಿರುಗೋಣ ' ಎಂದು ಮಿಸೆಸ್ ಮೂರಳು ತನ್ನಲ್ಲಿಯೆ ಆಲೋಚಿಸಿಕೊಂಡಳು. ಸುಖಪ್ರದವಾದ ಮದುವೆಗಳ ಅರ್ಥವೇನೆಂಬುದನ್ನೂ ತನ್ನ ಹಿಂದಿನ ಮದುವೆಗಳನ್ನೂ ಅವುಗಳೊಂದರಲ್ಲಿ ರೋನಿ ಹುಟ್ಟಿದ್ದನ್ನೂ ನೆನಪಿಗೆ ತಂದುಕೊಂಡಳು. ಅಡೀಲಾಳ ತಂದೆ ತಾಯಿಗಳ ವಿವಾಹವೂ ಸುಖಪ್ರದವಾಗಿತ್ತು. ಈ ತರುಣ ಪೀಳಿಗೆಯೂ ಅದನ್ನೇ ಮುಂದರಿಸಿದ್ದು ಒಳಿತಾಯಿತೆಂದುಕೊಂಡಳು. ಶಿಕ್ಷಣವು ಹೆಚ್ಚಾದಂತೆ, ಧ್ಯೇಯಗಳು ಉಚ್ಚವಾದಂತೆ, ಶೀಲಸ್ವಭಾವಗಳು ಸ್ಥಿರವಾದಂತೆ, ಈ ತರಹದ ಮದುವೆಗಳು ಬೆಳೆಯುತ್ತ ಹೋಗುತ್ತವೆ. ಮಿಸೆಸ್ ಮೂರಳು ಅಂದು ಗವ್ಹರ್ನಮೆಂಟ ಕಾಲೇಜನ್ನು ನೋಡಿ ಬಂದದ್ದರಿಂದ ಸಾಕಷ್ಟು ದಣಿದಿದ್ದಳು. ಕಾಲುಗಳು ಹರಿಯುತ್ತಿದ್ದವು; ಓಡಿದಂತೆ ನಡೆಯುತ್ತಿದ್ದ ಫಿಲ್ಡಿಂಗನ ಬೆನ್ನುಹತ್ತಿ ಬರಬೇಕಾದರೆ ಅವಳಿಗೆ ಸಾಕು ಬೇಕಾಗಿತ್ತು. ಇಷ್ಟಾಗಿಯೂ ಅವನು ಅವಳನ್ನು ಬಿಟ್ಟು ದೂರ ಬಂದು ಬಿಟ್ಟಿದ್ದನು. ಅಲ್ಲದೆ ಬರುವಾಗ ಟಮ್‌ಟಮ್‌ದಲ್ಲಿ ಈ ಹುಡುಗ-ಹುಡುಗಿ

ಯರಿಬ್ಬರೂ ತಾವಿನ್ನೆಂದೂ ಕೂಡದವರಂತೆ ಬಡಿದಾಡಿದ್ದೊಂದು ಅವಳ ಮನಸ್ಸಿನಲ್ಲಿನ್ನೂ ಕಟಿಯುತ್ತಿತ್ತು. ಈಗ ಅದೆಲ್ಲವೂ ಸರಿಹೋಗಿದ್ದರೂ ಮೊದಲಿನಂತೆ ಲಗ್ನದ ವಿಷಯಕ್ಕಷ್ಟು ಉತ್ಸಾಹದಿಂದ ಮಾತನಾಡುವದು ಅವಳಿಗೆ ಸಾಧ್ಯವಿದ್ದಿಲ್ಲ. ರೋನಿಗಂತೂ ತನ್ನ ಇಷ್ಟಾರ್ಥವೇ ದೊರೆತಂತಾಗಿತ್ತು. ಇನ್ನು ಮಿಸೆಸ್ ಮೂರಳಿಗೇನು? ಅವಳು ತನ್ನದೇಶಕ್ಕೆ ಮರಳಿ ಹೋಗಬೇಕು; ಉಳಿದ ತನ್ನ ಹುಡುಗರಿಗೆ ಅವರು ಒಯಸಿದರೆ ಇದೇ ರೀತಿಯ ಸಹಾಯಮಾಡಬೇಕು; ಯಾಕಂದರೆ ತಾನಂತೂ ಈಗ ಮದುವೆಯಾಗುವ ವಯಸ್ಸನ್ನು ಮೀರಿದ್ದಾಳೆ, ಅಂದಮೇಲೆ ಪರರಿಗೆ ಸಹಾಯ ಮಾಡುವದಷ್ಟೇ ಇನ್ನವಳ ಕೆಲಸ. ಇನ್ನದಕ್ಕೆ ಪ್ರತಿಫಲವೆಂದರೆ 'ಬಹಳ ಒಳ್ಳೆಯ ಹೆಣ್ಣುಮಗಳು.' ಎಂದು ಜನರು ಹೊಗಳುವದೇ. ಹಿರಿಯರೆನಿಸಿಕೊಳ್ಳುವವರು ಇದಕ್ಕೂ ಹೆಚ್ಚು ಆಶೆಮಾಡಬಾರದು.

ಅಲ್ಲಿಂದ ಅವರಿಬ್ಬರೇ ಕುಳಿತು ಊಟಮಾಡಿದರು. ಸವಿಸವಿಯಾಗಿ ಮಾತನಾಡಿಕೊಂಡರು. ನಕ್ಕರು, ಕಲೆದರು. ತಮ್ಮ ಭವಿಷ್ಯಜೀವನದ ಒಗ್ಗೆ ಏನೇನೊ ಸವಿಗನಸುಗಳನ್ನು ಕಂಡರು. ಮುಂದೆ ಅಂದೇ ನಡೆದು ಹೋದ ಸಂಗತಿಗಳನ್ನೆಲ್ಲ ಒಂದೊಂದಾಗಿ ನೆನೆದರು. ರೋನಿಯು ತನ್ನ ದೃಷ್ಟಿಯಿಂದ ಆ ದಿಸದ ವಿಮರ್ಶೆ ಮಾಡಿ ವಿವರಿಸಿದನು. ಅದು ಹೆಣ್ಣುಮಕ್ಕಳ ದೃಷ್ಟಿಯಿಂದ ಬೇರೆಯಿತ್ತು. ಅಂದು ಆ ಹೆಣ್ಣುಮಕ್ಕಳೆಲ್ಲ ಸುಖದಿಂದ ಕಾಲ ಕಳೆಯುತ್ತಿದ್ದಾಗ ಅಥವಾ ಹಾಗೆ ತಿಳಿದುಕೊಂಡಾಗ ರೋನಿಯು ಮಾತ್ರ ತನ್ನ ಆಫೀಸ ಕೆಲಸದಲ್ಲಿ ಮುಳುಗಿಹೋಗಿದ್ದನು. ಮೋಹರಮ್ ಸಮೀಪಿಸಿತ್ತು; ಯಥಾಪ್ರಕಾರ ಚಂದ್ರಪುರದ ಮಹಮ್ಮದೀಯರು ಯಾವದೋ ಒಂದು ಅಶ್ವಥಮರದ ಟೊಂಗೆಗಳ ಕೆಳಗೆ ಹಾಯ್ದುಹೋಗಲಿಕ್ಕೆ ಬಾರದಷ್ಟು ದೊಡ್ಡ ಡೋಲಿಗಳನ್ನು ಕಟ್ಟಿದ್ದರು; ಮುಂದ ಏನೆಂಬುದು ಎಲ್ಲರಿಗೂ ಗೊತ್ತೇ ಇದೆಯಲ್ಲ? ತಮ್ಮ ಡೋಲಿ ಅದಕ್ಕೆ ತಟ್ಟಬಾರದೆಂದು ಒಬ್ಬನು ಆ ಅಶ್ವಥಮರವನ್ನೇರಿ ಆ ಟೊಂಗೆಯನ್ನೇ ಕಡಿದನು; ಹಿಂದೂಜನರು ಧರ್ಮದ ಹೆಸರಿನಿಂದ ಅದನ್ನು ನಿಷೇಧಿಸಿದರು; ಆಯಿತು, ದೊಡ್ಡದೊಂದು ಧಾರ್ಮಿಕ ದಂಗೆಯೆ ಎದ್ದಿತು. ಮುಂದೇನು? ದೇವರೇ ಗತಿ! ಸೈನ್ಯಕ್ಕೆ ಹೇಳಿ ಕಳುಹಿದರು; ಅಲ್ಲಿಂದ ಕೊನೆಗೆ ಟರ್ಟನ್ನನ ಮಧ್ಯಸ್ತಿಕೆಯಿಂದ ರಾಜೀ

ಕವಿಊಟಿಗಳು, ಪ್ರತಿನಿಧಿಗಳ ಓಡಾಟ ನಡೆದವು; ಆಗ ದಿವದ ಕೆಲಸವೆಲ್ಲ ಚಂದ್ರಪುರದಲ್ಲಿ ನಿಂತುಹೋಯಿತು; ಆ ಮೆರವಣಿಗೆ ಮತ್ತೊಂದು ದಾರಿಯಿಂದ ಹೋಗಬೇಕೊ? ಅಥವಾ ಆ ಡೋಲಿಗಳನ್ನೇ ಗಿಡ್ಡಮಾಡಬೇಕೊ? ಎಂಬ ಮಹಾವಾದ ಹುಟ್ಟಿತು; ಮಹಮ್ಮದೀಯರು ಬೇರೆ ದಾರಿಯಿಂದ ಹೋಗಬೇಕೆಂದರು; ಹಿಂದುಗಳು ಡೋಲಿಗಳು ಗಿಡ್ಡವಾಗಬೇಕೆಂದರು; ಕಲೆಕ್ಟರರು ಮೊದಮೊದಲು ಹಿಂದುಗಳನ್ನೇ ಎತ್ತಿಹಿಡಿದರು; ಆದರೆ ಕೊನೆಗೆ ಅವರಿಗೆ ಹಿಂದುಗಳೇ ಆ ಗಿಡವನ್ನು ಕೃತ್ರಿಮವಾಗಿ ನೆಲಕ್ಕೆ ಬಾಗಿಸಿದ್ದಾರೆಂದು ಸಂಶಯಬಂತು; ಅಲ್ಲಿಂದ ಅಳತೆ ಹಾಕುವದು—ಹಂಚಿಕೆಮಾಡುವದು—ಮೊದಲಾದ ಅಧಿಕಾರಿಗಳ ಸ್ಥಾನಿಕ ಚೌಕಸಿಯು ಪ್ರಾರಂಭವಾಯಿತು. ಇಷ್ಟೆಲ್ಲದರಿಂದಲೂ ರೋನಿಗೇನು ಆ ದಿವಸ ಬೇಸರಬಂದಿದ್ದಿಲ್ಲ. ಹಿಂದುಸ್ಥಾನಕ್ಕೆ ಬ್ರಿಟಿಶರು ಆವಶ್ಯಕರೆಂದು ಇದರಿಂದಲೇ ತೋರಿಸಿಕೊಟ್ಟಂತಾಯಿತು. ಅವರಿಲ್ಲದಿದ್ದರೆ ರಕ್ತಪಾತವಾಗುವದು ಕಟ್ಟಿಟ್ಟಮಾತೆಂಬುದೂ ಗೊತ್ತಾಯಿತು. ತಾನು ಈ ದೇಶಕ್ಕೆ ಕೇವಲ ನಯದ ನಡತೆಗಾಗಿ ಬಂದವನಲ್ಲ, ಶಾಂತಿಯ ಸ್ಥಾಪನೆಗಾಗಿ ಬಂದವನೆಂಬುದು ಅಡೀಲಾಳಿಗೆ—ಅವಳೀಗ ತನ್ನ ಹೆಂಡತಿಯಾಗಲೊಪ್ಪಿದ್ದರಿಂದ—ಈಗ ತಿಳಿಯಬಹುದೆಂದು ರೋನಿಯು ಮನಸಿನಲ್ಲಿಯೆ ಲೆಕ್ಕಹಾಕಿದನು.

'ಇದೀಗ ನಮಗೆ ಕಾರು ಕೊಟ್ಟ ಆ ಮುದುಕ ಗೃಹಸ್ಥನು ನಮ್ಮನ್ನು ನೋಡಿ ಏನೆಂದು ತಿಳಿದುಕೊಳ್ಳಬಹುದು?' ಎಂದು ಅಡೀಲಾ ಕೇಳಿದಳು. ರೋನಿಯು ಬಯಸಿದ್ದೂ ಅದೇ, ಅವಳು ಕೇಳಿದ್ದೂ ಅದೇ ಆಯಿತು.

'ಪಾಪ, ನಮ್ಮ ಆ ಮುದುಕನು ಬಹಳ ಸಹಾಯಮಾಡುವವನು; ಎಲ್ಲ ಸಾರ್ವಜನಿಕ ಕೆಲಸಗಳೂ ಅವನಿಲ್ಲದೆ ಸಾಗುವಂತಿಲ್ಲ. ಮೊನ್ನೆ ನಾವು ಆ 'ಬ್ರಿಜ್‌ಪಾರ್ಟಿ' ಯ ಹೆಸರಿನಿಂದ ಸರ್ಕಸೊಂದನ್ನು ಕೂಡಿಸಿದ್ದೆವಲ್ಲ, ಅದರಲ್ಲಿ ನೀನು ಅವನನ್ನು ನೋಡಿದ್ದೀ, ಅಲ್ಲವೇ?'

'ಏನು? ನಾನು ನಿಜವಾಗಿಯೂ ನೋಡಿದ್ದೇನೆಯೆ?'

'ನನಗಂತೂ ಹಾಗನಿಸುತ್ತದೆ. ಅಲ್ಲಿ ಕೂಡಿದವರೆಲ್ಲರೂ ಮೃಗಗಳೇ ನೋಡು! ಯಾರನ್ನೂ ನಂಬುವಂತಿಲ್ಲ. ಅಲ್ಲ, ಅವರು ಒಮ್ಮೊಮ್ಮೆ ತಮ್ಮ ಕಾಲರಿನ ಹಿಂದಿನ ಗುಂಡಿಗಳನ್ನೇ ಮರೆತುಬಿಡುತ್ತಾರೆ! ನಿನಗೇ ಆ ಹೊತ್ತು

ಅನುಭವಕ್ಕೆ ಬಂದಿದೆಯಲ್ಲ, ಎಷ್ಟು ತರಹದ ಜನರೊಡನೆ ನಿನಗೆ ನಡೆದು ಕೊಳ್ಳಬೇಕಾಯಿತೆಂಬುದು! ಆ ಭಟ್ಟಾಚಾರ್ಯ, ಅವರ ಮನೆಯವರು, ಒಂದು ತರಹ; ಅಝೀಜ ಇನ್ನೊಂದು ತರಹ; ಈ ಮನುಷ್ಯ ಮೂರನೆಯ ತರಹ. ಇವರೆಲ್ಲರೂ ನಿಮ್ಮನ್ನು ಕೈಬಿಟ್ಟಿದ್ದರಲ್ಲಿ ಆಶ್ಚರ್ಯವೇನೂ ಇಲ್ಲ.'

'ಅಝೀಜನೊಬ್ಬನು ನನಗೆ ಸೇರಿದ. ಅವನು ನನ್ನ ನಿಜವಾದ ಗೆಳೆಯ.' ಎಂದು ಮಿಸೆಸ್ ಮೂರಳು ನಡುವೆಯೆ ಮಾತನಾಡಿದಳು.

'ಆ ಪಶುವು ನಮ್ಮ ಕಾರಿಗೆ ಬಂದು ಹಾದಾಗ ಈ ನವಾಬರೆಷ್ಟು ಗಾಬರಿಯಾಗಿದ್ದರು ನೋಡಿದೆಯಲ್ಲವೇ? ಪಾಪ, ಆ ಶಾಫರನನ್ನು ಅಲ್ಲಿಯೇ ಬಿಟ್ಟು ಹೊರಟುಬಿಟ್ಟ..! ಮಿಸ್ ಡೆರೆಕ್ಕಳಿಗೆ ಅಧಿಕಪ್ರಸಂಗಮಾಡಿ 'ನಾನೂ ಬರುತ್ತೇನೆಂ' ದು ತಾನೇ ಹೇಳಿಬಿಟ್ಟ!.. ಇದಕ್ಕೂ ಹೆಚ್ಚಿನ ಅಪರಾಧ ಏನು ಬೇಕು?.. ಆದರೆ ಬಿಳಿಮನುಷ್ಯನೆಂದಿಗಾದರೂ ಹೀಗೆ ಮಾಡಬಲ್ಲನೇ? ಎಂದೂ ಇಲ್ಲ..'

'ಯಾವ ಪಶುವದು?'

'ಓ! ಮಾರವಾರ ಮಾರ್ಗದಲ್ಲಿ ನಮಗೊಂದು ಅಪಘಾತ ಸಂಭವಿಸಿತು. ಅದು ಕತ್ತೆಕಿರುಬೆಂದು ಅಡೇಲಾ ಹೇಳುತ್ತಾಳೆ.'

'ಅಪಘಾತವೇ!' ಎಂದು ಮೂರಳು ಹೌಹಾರಿಬಿದ್ದಳು.

'ಅಂಥದೇನೂ ಆಗಿಲ್ಲ. ಯಾರಿಗೂ ಘಾಯವಾಗಿಲ್ಲ. ನಮ್ಮನ್ನು ಕರೆದುಕೊಂಡು ಹೋದ ಆ ನವಾಬನು ಮಾತ್ರ ತನ್ನ ಕನಸಿನೊಳಗಿಂದ ಆ ಸಪ್ಪಳಕ್ಕೆ ಎಚ್ಚತ್ತನು; ಮತ್ತು ಅಪಘಾತವಾದದ್ದು ನಮ್ಮ ತಪ್ಪಿನಿಂದ ಎಂದು ಮೆಲ್ಲಗೆ ರಾಗ ತೆಗೆದನು! ಅಲ್ಲದೆ ಮಾತುಮಾತಿಗೊಮ್ಮೆ 'ಸರಿ, ಹೌದು' ಎಂದು ಹಾಡಿಯೆ ಹಾಡುತ್ತಿದ್ದನು.'

ಮಿಸೆಸ್ ಮೂರಳು ನಡುವೊಮ್ಮೆ 'ದೆವ್ವ!' ಎಂದಳು. ಆದರೆ ತರುಣರಾರೂ ಅತ್ತ ಲಕ್ಷ್ಯಕೊಡದೆ ತಮ್ಮ ವಿಚಾರದಲ್ಲಿಯೆ ತೊಡಗಿಬಿಟ್ಟದ್ದರಿಂದ ಆ ದೆವ್ವದ ಮಾತು ಅಲ್ಲಿಗೇ ನಿಂತುಹೋಯಿತು.

'ಹೌದು, ಅವನದು ಅಂಥ ದೊಡ್ಡ ಅಪರಾಧವೇನೂ ಅಲ್ಲ, ಇದು ನಿಜ. ಆದರೆ ಏನೇ ಅಂದರೂ ಅವನು ದೇಶಿಮನುಷ್ಯ. ಅಂತೆಯೆ ಅವನನ್ನು ನಮ್ಮ ಕ್ಲಬ್ಬಿನಲ್ಲಿ ತೆಗೆದುಕೊಳ್ಳುವದಿಲ್ಲ. ಹೀಗಿದ್ದೂ ಮಿಸ್ ಡೆರೆಕ್ಕಳಂಥ ಸಂಭಾ

ವಿತ ಹುಡುಗೆಯು ಈ ದೇಶೀಜನರ ಕೈಯಲ್ಲಿ ಹೇಗೆ ಕೆಲಸಕ್ಕಿದ್ದಾಳೆಯೋ ನನಗಂತೂ ತಿಳಿಯದಾಗಿದೆ..ಆಗಲಿ, ನಾನಿನ್ನು ನನ್ನ ಆಫಿಸಿನ ಕೆಲಸ ಸಾಗಿ ಸಬೇಕು..ಹೋಗುತ್ತೇನೆ..ಏ! ಕೃಷ್ಣಾ!..' ಎಂದು ರೋನಿಯು ಸ್ವಲ್ಪ ದರಲ್ಲಿ ಮುಗಿಸಿ ಹೊರಟುನಿಂತನು. ಕೃಷ್ಣಾ ಎಂದರೆ ಕಚೇರಿಯಿಂದ ಫಾಯಿ ಲುಗಳನ್ನು ತರುವ ಚಾಕರನು. ಅವನಿನ್ನೂ ಬಂದಿದ್ದಿಲ್ಲ. ಕೂಡಲೆ ಮನೆಯ ಲ್ಲೆಲ್ಲ ಗೊಂದಲೋಗೊಂದಲವೆದ್ದಿತು. ರೋನಿಯು ಗದ್ದರಿಸಿದ, ಕೂಗಿ ಕೊಂಡ, ಹರಿಹಾಯ್ದ. ಸೂಕ್ಷ್ಮವನ್ನರಿಯಬಲ್ಲವನು ಮಾತ್ರ ಅವನು ಸಿಟ್ಟಿ ಗೆದ್ದಿದ್ದಿಲ್ಲವೆಂದೂ ಫಾಯಿಲುಗಳೇ ಅವನಿಗೆ ಬೇಕಿರಲಿಲ್ಲವೆಂದೂ ಹೀಗೆ ಕೂಗಾಡುವದೇ ಒಂದು ನಿತ್ಯದ ಚಟವೆಂದೂ ಹೇಳಬಹುದಾಗಿತ್ತು. ಸೇವ ಕರಿಗೂ ಇದೆಲ್ಲ ಗೊತ್ತು. ಮೆಲ್ಲನೆ ಕಂದೀಲುಗಳನ್ನು ಹಿಡಿದುಕೊಂಡು ಅವ ನನ್ನು ಹುಡುಕುವವಕ್ಕಾಗಿ ಸುತ್ತಾಡಹತ್ತಿದರು. ರೋನಿಗೆ ಮಾತ್ರ ತಾನು ಕೂಗಿದ್ದಕ್ಕೆ ಭೂಮ್ಯಾಕಾಶಗಳೇ ತಮ್ಮ ಮೌನದಿಂದ ಉತ್ತರ ಕೊಟ್ಟವು. ಆ ಮೌನದ ಪ್ರತಿಧ್ವನಿಯಿಂದ ಅವನ ಉದ್ವೇಗಗೊಂಡ ಮನಸ್ಸು ಶಾಂತವಾಯಿತು. ಆ ಚಾಕರನಿಗೆ ಎಂಟಾಣೆದಂಡಮಾಡಿ ಮತ್ತೊಂದು ಕೋಣೆಯಲ್ಲಿ ಕೂಡಿಬಿದ್ದ ತನ್ನ ಕೆಲಸವನ್ನು ತೀರಿಸಲಿಕ್ಕೆ ಕುಳಿತುಕೊಂಡನು.

'ಅಡೀಲಾ, ನೀನು ಬೇಕಾದರೆ ನಿನ್ನ ಭಾವೀ ಅತ್ತೆಯೊಡನೆ ಇಸ್ಪೇಟು ಆಡಬಹುದೇ? ಅಥವಾ ಅದು ನಿನಗೆ ಬಹಳ ಸಪ್ಪೆಗೆನಿಸುವವೇನು?'

'ಓಹೋ! ಆಡಬಹುದು. ನನ್ನ ಮನಸ್ಸೂ ಈಗೇನು ಹೊಯ್ದಾಟ ದಲ್ಲಿಲ್ಲ. ಯಾಕಂದರೆ ಕೊನೆಗೊಮ್ಮೆ ಎಲ್ಲವೂ ಬಗೆಹರಿಯಿತು...ಹೀಗಾದುದ ರಿಂದ ನಾನು ಬಹಳ ಬದಲಾದಂತೆ ನನಗೇನೂ ಅನಿಸುವದಿಲ್ಲ..ನಾವು ಮೂವರೂ ಮೊದಲು ಹೇಗಿದ್ದೆವೋ ಹಾಗೆಯೆ ಇದ್ದೇವೆ.'

'ಹೀಗನಿಸುವದೇ ಬಹಳ ಒಳ್ಳೆಯದು.' ಎಂದು ಮಿಸೆಸ್ ಮೂರಳು 'ದೈವದಾಟದ' (ಪೇಶನ್ಸ) ಮೊದಲನೆಯ ಸಾಲನ್ನು ಹಚ್ಚಿಯೆಬಿಟ್ಟಳು.

'ನನಗೂ ಹಾಗೆಯೇ ಅನಿಸುತ್ತಿದೆ.' ಎಂದು ವಿಚಾರಮಗ್ನಳಾಗಿ ಆ ಹುಡುಗೆಯೂ ಉತ್ತರಕೊಟ್ಟಳು.

'ಇದು ನೋಡು ಅಡೀಲಾ, ಫೀಲ್ಡಿಂಗನ ಮನೆಯಲ್ಲಿ ನಡೆದದ್ದನ್ನು ನೋಡಿದಾಗ ಮಾತ್ರ ಇದೇನೊ ಬೇರೆ ರೀತಿಯಾಗಿ ಪರಿಣಮಿಸುವದೆಂದು

ನನಗೆ ಗಾಬರಿ ಹುಟ್ಟಿತ್ತು....ಅಕಾ, ಕೆಂಪುರಾಣಿಯು ಮೇಲೆ ಆ ಕರೇ ತುಡುಗ ಜಾಕಿ......' ಹೀಗೇ ಆಟವಾಡುತ್ತ ಅವರಿಬ್ಬರೂ ಮೆಲ್ಲಗೆ ಹರಟೆ ಪ್ರಾರಂಭಮಾಡಿದರು.

ಕೂಡಲೆ ಅಡೀಲಾ ಹೇಳಿದಳು. 'ನಾನು ಅಝೀಜನಿಗೂ ಗೋಡ ಬೋಲೆಯವರಿಗೂ ಈ ದೇಶದಲ್ಲಿ ನಿಲ್ಲುವದಿಲ್ಲೆಂದು ಹೇಳಿದ್ದನ್ನು ನೀವು ಕೇಳಿ ದಿರಲ್ಲ! ನನ್ನ ಮನಸಿನಲ್ಲೇನೂ ಹಾಗಿರಲಿಲ್ಲ. ಹಾಗಾದರೆ ನಾನೇಕೆ ಹಾಗೆ ಹೇಳಿದೆ? ಹಂ, ನಾನು ಸಾಕಷ್ಟು ಸರಳವಿರಲಿಕ್ಕಿಲ್ಲ ಒಂದು; ಇಲ್ಲವೆ ಆಗ ನಾನಾಡಿದ್ದರ ಕಡೆಗೆ ನನ್ನದೇ ಲಕ್ಷ್ಯವಿರಲಿಕ್ಕಿಲ್ಲ; ಅಥವಾ ನನಗೇಕೊ ಏನೊ ಎಲ್ಲವೂ ಆಗ ಮಿತಿತಪ್ಪಿದ ಹಾಗೆನಿಸಿತು. ಹೀಗಿದ್ದೂ ನೀವು ನನ್ನ ಕೂಡ ಬಹಳ ಒಳ್ಳೆಯ ರೀತಿಯಿಂದ ನಡೆದುಕೊಂಡಿರಿ. ನನಗೂ ಇಂಗ್ಲೆಂಡ ದಿಂದ ಹೊರಡುವಾಗ ನಿಮ್ಮ ಹಾಗೆಯೆ ನಡೆದುಕೊಳ್ಳಬೇಕೆಂದು ಆಶೆಯಿತ್ತು. ಆದರೆ ಹಾಗೆ ನಡೆದುಕೊಳ್ಳುವದಾಗಲಿಲ್ಲ....ಮಿಸೆಸ್ ಮೂರ್! ಶುದ್ಧವಾಗಿ ಪ್ರಾಮಾಣಿಕ ರೀತಿಯಿಂದ ಇರಲಿಕ್ಕೆ ಬಾರದೆ ಇದ್ದರೆ ಜೀವಿಸಿಯಾದರೂ ಫಲವೇನು?'

ಮೂರಳು ಇಸ್ಪೇಟಿನೆಲೆಗಳನ್ನು ಇಡಹತ್ತಿದ್ದಳು. ಅವಳಿಗೆ ಅಡೀ ಲಾಳ ಈ ಮಾತುಗಳ ಅರ್ಥವು ಅಸ್ಪಷ್ಟವಾದರೂ ಅವುಗಳ ಹಿಂದಿರುವ ಅವಳ ಮನದ ಕ್ಷೋಭೆಯನ್ನು ಮಾತ್ರ ಅವಳು ಗುರುತಿಸದೆ ಇರಲಿಲ್ಲ. ಅವಳೂ ತನ್ನ ಮದುವೆಗಳನ್ನು ಮಾಡಿಕೊಳ್ಳುವಾಗ ಹೀಗೆಯೆ ಹೊಯ್ದಾಡಿದ್ದಳು, ಹೀಗೆಯೆ ಮನಸ್ತಾಪಮಾಡಿಕೊಂಡಿದ್ದಳು, ಹೀಗೆಯೆ ಸಂಶಯಗೊಂಡಿದ್ದಳು. ಆದರೆ ಮದುವೆಯಾದಮೇಲೆ ಅದೆಲ್ಲವೂ ಸರಿಹೋಗಿತ್ತು; ಅದರಂತೆಯೆ ಇವಳ ಮದುವೆಯೂ ಬಹುಮಟ್ಟಿಗೆ ಎಲ್ಲವನ್ನೂ ಸರಿಪಡಿಸುವದೆಂದು ಕೊಂಡಳು. ಆಮೇಲೆ ಅವಳು 'ನಾನೇನು ಅಷ್ಟು ಹಚ್ಚಿಕೊಳ್ಳುವದಿಲ್ಲ ಅದಕ್ಕೆ ಮುಖ್ಯವಾಗಿ ಈ ವಿಲಕ್ಷಣ ಪರಿಸ್ಥಿತಿಯೇ ಕಾರಣ; ನಾವಿಬ್ಬರೂ ಈಗ ಮಹತ್ವವಿದ್ದುದನ್ನು ಬಿಟ್ಟು ಕ್ಷುಲ್ಲಕವಾದುದಕ್ಕೆ ಲಕ್ಷ್ಯಗೊಡುತ್ತಿ ದ್ದೇವೆ; ಇಲ್ಲಿಯ ಜನರನ್ನುವ ಹಾಗೆ ನಾವು ಇನ್ನೂ ಹೊಸಬರೆ' ಎಂದು ನುಡಿದಳು.

'ನನ್ನ ಚಿಂತೆ ಜಂಜಡಗಳೆಲ್ಲ ಈ ಹಿಂದುಸ್ತಾನದೊಡನೆ ಬೆರೆತಿವೆ ಯೆಂದು ನಿಮ್ಮರ್ಥವೇ?'

'ಹಿಂದುಸ್ತಾನದ......' ಎಂದಿಷ್ಟಕ್ಕೇ ನಿಂತಳು.

'ನೀವು ಅದಕ್ಕೆ ದೆವ್ವವೆಂದು ಹೇಗೆ ಹೇಳಿದಿರಿ?'

'ಯಾವುದಕ್ಕೆ?'

'ನಮ್ಮ ಕಾರಿಗೆ ಹಾಯ್ದು ಪ್ರಾಣಿಗೆ. ಯಾಕೆ ಆಗಳೆ ಮಾತಿನಲ್ಲಿ ದೆವ್ವ ಎಂದು ನೀವೆನ್ನಲಿಲ್ಲವೇ?'

'ನಾನೆಂದಿದ್ದರರಿವೇ ನನಗಿರಲಿಲ್ಲಾಗ.'

'ಬಹಳಮಾಡಿ ಅದು ಕತ್ತೆಕಿರುಬು ಇರಬಹುದು.'

'ಹಂ, ಇದ್ದರೆ ಅದೇ ಇರುವ ಸಂಭವ ಹೆಚ್ಚು.'

ಅತ್ತೆಸೊಸೆಂದಿರಿಬ್ಬರೂ ತಮ್ಮ 'ಪೇಶನ್ಸ' ಆಟವನ್ನು ಹಾಗೇ ಸಾಗಿಸಿದರು. ಇತ್ತ ಕೆಳಗೆ ಚಂದ್ರಪುರದಲ್ಲಿ ನವಾಬಬಹದ್ದೂರರು ತಮ್ಮ ಕಾರಿನ ಸಲುವಾಗಿ ಹಾದೀ ನೋಡುತ್ತಿದ್ದರು. ಅವರು ಕುಳಿತದ್ದು ತಮ್ಮೊಂದು ಶಹರದ ಮನೆಯ ಹಿಂಬದಿಗೆ. ಆ ಮನೆಯಲ್ಲಿಯೊ ಶ್ರೀರಾಮರಕ್ಷ; ಏನೂ ಇದ್ದಿಲ್ಲ; ಅವರೇ ಅದರಲ್ಲಿ ಇನ್ನೂ ಕಾಲು ಸಹ ಹಾಕಿರಲಿಲ್ಲ. ಆದರೂ ಅವರ ಸುತ್ತಲು ಒಂದು ಸಣ್ಣ ಸಭೆಸೇರಿತ್ತು. ಈ ದೊಡ್ಡವರೆನಿಸಿಕೊಳ್ಳುವ ಹಿಂದೀ ಜನರ ಸುತ್ತಲೂ ಎಲ್ಲಿ ಹೋದಲ್ಲಿ ಒಂದು ಮರಿಸಭೆಗಿರುವಷ್ಟು ಜನ ಇದ್ದದ್ದರಿಂದೇ ತಿಳಿಯಬೇಕು. ಬಿಳಿ ಹೊಸ ಪಾವುಡಗಳು—ಈ ಪಾವುಡ ಎಂದರೆ ಪೆದ್ದತನದ ಅವತಾರವೇ—ತೆರೆಯನೊರೆಯಂತೆ ಮುಂದೆ ಬಂದು ಬಾಗಿ ಮತ್ತೆ ಹಿಂದೆ ಸರಿದು ಹೋದವು. ನವಾಬರ ಮನಸ್ಸು ಬೇರೆ ಯಾವದೋ ವಿಚಾರದಿಂದ ಈ ಮೊದಲೇ ತುಂಬಿಕೊಂಡಿತ್ತು. ಅವರ ವಾಕ್ಸರಣಿಯು ಧಾರ್ಮಿಕವಿಷಯಕ್ಕೇ ಹೊಂದಿಕೊಂಡು ಹೋಗುವಂತಿತ್ತು. ಅವರು ಹೇಳಿದ್ದು ಒಂಬತ್ತು ವರ್ಷಗಳ ಹಿಂದಿನ ಮಾತು. ಅದೇ ಹೊಸದಾಗಿ ಅವರು ಮೋಟರು ತೆಗೆದುಕೊಂಡಾಗ ಒಬ್ಬ ಕುಡುಕನ ಮೇಲೆ ಹಾಯಿಸಿ ಅವನನ್ನು ಕೊಂದಿದ್ದರು. ಆ ಮನುಷ್ಯನು ಯಾವಾಗಲೂ ಅವರ ಕಣ್ಣಿಗೆ ಕಟ್ಟಿದಂತಾಗಿತ್ತು. ದೇವರ ಮತ್ತು ಕಾಯಿದೆಯ ಕಣ್ಣಲ್ಲಿ ಅವರು ನಿರ್ದೋಷಿಗಳೇ ಇದ್ದರು. ಯಾಕಂದರೆ ಕೊಡತಕ್ಕ ಲುಕ್ಸಾನದ ಎರಡರಷ್ಟು ಅವರು

ತುಂಬಿಕೊಟ್ಟಿದ್ದರು. ಆದರೆ ಅವರ ಮನಸ್ಸಿಗೆ ಮಾತ್ರ ಅದರದೇನೂ ಉಪ ಯೋಗವಾಗಲಿಲ್ಲ. ಅವರ ಕಣ್ಣಿಗೆ ಕಟ್ಟಿದ ಆ ಮನುಷ್ಯನೇನು ಮಾಯ ವಾಗಲಿಲ್ಲ; ಸುಮ್ಮನೆ ಪಿಳಿ ಪಿಳಿ ಕಣ್ಣುಬಿಡುತ್ತ ಸತ್ತ ಸ್ಥಳದಲ್ಲಿ ಅನನಿನ್ನೂ ನಿಂತೇನಿಂತಿದ್ದನು. ಇಂಗ್ಲೀಷರಿಗೊಬ್ಬರಿಗೂ ಇದು ಗೊತ್ತಿದ್ದಿಲ್ಲ; ಅವನ ಶಾಫರನಿಗೂ ಗೊತ್ತಿದ್ದಿಲ್ಲ. ಅದೊಂದು ದೊಡ್ಡ ರಹಸ್ಯವೇ ಆಗಿತ್ತು. ಆ ರಹಸ್ಯವನ್ನು ಮಾತಿನಕಿಂತ ರಕ್ತಸಂಬಂಧವೇ ಹೆಚ್ಚು ತಿಳಿದುಕೊಳ್ಳಬಹುದು. ಈ ಮಾತಾದ ಮೇಲೆ ಅವನು ಅಂದಿನ ಅಪಘಾತದ ಮಾತಿಗೆ ಬಂದುಮುಟ್ಟಿ ದನು. ತಾನೇ ಹೇಗೆ ಎರಡನೆಯುವರನ್ನು ಗಂಡಾಂತರದಲ್ಲಿ ನೂಕಿದನೆಂಬು ದನ್ನೂ ಅವನು ಗಾಬರಿಯ ದನಿಯಲ್ಲಿ ಮೊದಲು ವಿಸ್ತರಿಸಿ ಅಲ್ಲಿಂದ 'ನಾನು ಸತ್ತಿದ್ದರೆ ಏನಾಗಬೇಕಾಗಿತ್ತು? ಎಂದಾದರೂ ಒಮ್ಮೆ ಸಾಯುವವನೇ, ಆದರೆ ಯಾರು ನನ್ನನ್ನು ನಂಬಿದ್ದರೊ..' ಎನ್ನುವಾಗ ಸುತ್ತಲೂ ನೆರೆದವರು ನಡುಗಿ 'ದೇವರೇ ಕರುಣಿಸು!' ಎಂದು ಪ್ರಾರ್ಥಿಸಿದರು.

ಇದೆಲ್ಲ ನಡೆದಾಗ ಅಝೀಜನೊಬ್ಬನು ಮಾತ್ರ ಆ ಗುಂಪಿನಿಂದ ದೂರೇ ನಿಂತುಕೊಂಡಿದ್ದನು. ಅವನ ಅನುಭವವೇ ಅವನನ್ನು ಎಲ್ಲರಂತೆ ಪ್ರಾರ್ಥಿ ಸಲು ತಡೆಹಾಕಿತು. ದೆವ್ವಗಳನ್ನು ತುಚ್ಛಮಾಡಿದ್ದರಿಂದಲ್ಲವೆ ಅವನು ಮಿಸೆಸ್ ಮೂರಳ ಪರಿಚಯವನ್ನು ಪಡೆದದ್ದು? ಅವನು ಅಲ್ಲಿಯೆ ನಿಂತಿದ್ದ ಆ ಮುದು ಕನ ಮೊಮ್ಮಗನಿಗೆ-ಹೆಣ್ಣಿನ ವೈಯ್ಯಾರವಿದ್ದ ಆ ಹುಡುಗನಿಗೆ-ಬಹಳ ಸಲುಗೆ ಯಿಲ್ಲದಿದ್ದರೂ ಕಿವಿಯಲ್ಲಿ 'ನೂರುದ್ದೀನ! ನಿನಗೆ ಗೊತ್ತಿದೆ, ನಾವು ಮುಸ ಲ್ಮಾನರು ಈ ಮೂಢಭಾವನೆಗಳನ್ನು ದೂರಟ್ಟಬೇಕು; ಇಲ್ಲವಾದರೆ ಹಿಂದು ಸ್ಥಾನವು ಎಂದೂ ಮುಂದೆ ಬರುವದಿಲ್ಲ. ಮಾರವಾರ ದಾರಿಯ ಮೇಲಿನ ಈ ಕೆಟ್ಟ ಹಂದಿಯ ವಿಷಯ ಎಷ್ಟು ದಿವಸ ಕೇಳಬೇಕು!' ಎಂದು ಊದಿ ದನು. ನೂರುದ್ದೀನನು ಕೆಳಗೆ ಮುಖಮಾಡಿದನು. ಅಝೀಜನು ಮತ್ತೆ ಮುಂದೆ ಸಾಗಿಸಿದನು. 'ಈ ನಿಮ್ಮ ಅಜ್ಜನೂ ಹಿಂದಿನ ಪೀಳಿಗೆಗೆ ಸೇರಿದವನು. ಅಂದರೆ ಅವನ ವಿಷಯಕ್ಕೆ ನನಗೆ ಗೌರವವಿಲ್ಲದಿಲ್ಲ. ಅದು ನಿನಗೂ ಗೊತ್ತಿದೆ. ಅವನ ವಿರುದ್ಧ ನನಗೇನೂ ಹೇಳಬೇಕಾಗಿಲ್ಲ. ಆದರೆ ಇಷ್ಟೆ, ನಾವು ತರುಣ ರಿರುವದರಿಂದ ನಮಗೆ ಅವರದು ತಪ್ಪೆನಿಸುತ್ತದೆ. ನೂರುದ್ದೀನ, ನೀನು ದೆವ್ವಗಳನ್ನು ನಂಬುವದಿಲ್ಲೆಂದು ಆಣೆಮಾಡಿ ನನಗೆ ವಚನಕೊಡಬೇಕು.

ನನ್ನ ಮಾತು ಕೇಳುತ್ತಿದ್ದೀಯಾ?.....ಮತ್ತು ನಾನು ಸತ್ತರೆ—ಯಾಕಂದರೆನನ್ನ ಆರೋಗ್ಯ ಆಗಲೆ ಕೆಡಹತ್ತಿದೆ—ನನ್ನ ಮೂವರು ಮಕ್ಕಳೂ ಅದರಲ್ಲಿ ವಿಶ್ವಾಸವಿಡದಂತೆ ಅವರನ್ನು ಜೋಪಾನಮಾಡುತ್ತೇನೆಂದೂ ಅಭಿವಚನಕೊಡಬೇಕು ನೀನು.'

ನೂರುದ್ದೀನನು ಮುಂಗುಳುನಗೆ ನಕ್ಕನು. ಅಝೀಜನ ಮಾತಿಗೊಂದು ತಕ್ಕ ಉತ್ತರ ಅವನ ತುದಿನಾಲಿಗೆಯ ವರೆಗೆ ಬಂದಿತ್ತು. ಆದರೆ ಅದು ಹೊರಬೀಳುವಷ್ಟರಲ್ಲಿ ನವಾಬರ ಮೋಟರ ಗಾಡಿಯು ಬಂದಿದ್ದರಿಂದ ಅವನು ಅಲ್ಲಿಂದ ಹೊರಟೇಬಿಟ್ಟನು.

ಅತ್ತ ಮೇಲ್ಗಡೆ 'ಸಿವ್ಹಿಲ್ ಲೈನ'ದಲ್ಲಿ ಅತ್ತೆ ಸೊಸೆಂದಿರ ಪೇಶನ್ಸದ ಆಟವಿನ್ನೂ ನಡೆದಿತ್ತು. ಮಿಸೆಸ್ ಮೂರಳು 'ಕರಿಜಾಕಿಯ ಮೇಲೆ ಕೆಂಪು ಹತ್ತು.' ಎಂದು ಗೊಣಗುಟ್ಟುತ್ತಿದ್ದಳು. ಅಡೀಲಾಳು ಅವಳಿಗೆ ಆಟದಲ್ಲಿ ಸಹಾಯಮಾಡುತ್ತಿದ್ದಳು. ಮತ್ತು ಆಟದ ನಡುನಡುವೆ ಕತ್ತೆಕಿರುಬಿನ ಕಥೆಯನ್ನೂ, ಲಗ್ನನಿಶ್ಚಯದ ವಿಷಯವನ್ನೂ ಮುದಕಲ್ ಮಹಾರಾಣಿಯ ವಿಷಯವನ್ನೂ ಭಟ್ಟಾಚಾರ್ಯರ ಸುದ್ದಿಯನ್ನೂ ಸಾಮಾನ್ಯವಾಗಿ ಆ ದಿವಸದಲ್ಲಿ ಆಗಿಹೋದ ಎಲ್ಲ ಸಂಗತಿಗಳನ್ನೂ ಬೆರಸಿ ಹೇಳುತ್ತಿದ್ದಳು. ಆ ದಿವಸದ ಹುರುಬರುಕಾದ ಮೇಲ್ಮೈಯು ಹಿಂದುಸ್ಥಾನವನ್ನು ಚಂದ್ರನಿಂದ ನೋಡಿದರೆ ಕಾಣುವಂತೆ ನುಣ್ಣಗೆ ವಿವರಹೀನವಾಗಿ ಕಾಣುತ್ತಿತ್ತು. ಆಯಿತು, ಅವರು ಆಟ ಮುಗಿಸಿ ಮಲಗಲಿಕ್ಕೆ ಹೋದರು. ಅದೇ ಹೊತ್ತಿಗೆ ಇನ್ನೊಂದೆಡೆಗೆ ಜನ ಹಾಸಿಗೆಯಿಂದೆದ್ದರು. ಇವರಿಗೂ ಅವರಿಗೂ ಯಾವುದರಲ್ಲಿಯೂ ಹೊಂದಿಕೆಯಿಲ್ಲ. ಇವರ ಬಾಳುವೆಯಲ್ಲಿ ಅವರಿಗೆ ಮಹತ್ವವಿಲ್ಲ. ಪೂರ್ಣ ಶಾಂತವೂ ಅಲ್ಲ, ಪೂರ್ಣಕತ್ತಲೆಯೂ ಅಲ್ಲ, ಹೀಗೆ ರಾತ್ರಿಯೂ ಕಳೆದು ಹೋಗಹತ್ತಿತು. ಇದಕ್ಕೂ ಮತ್ತು ಹಿಂದಿನ ರಾತ್ರಿಗಳಿಗೂ ಭೇದವೆಂದರೆ ಇಂದಿನ ಆ ಬಿರುಗಾಳಿಗಳು ಹೊಡೆತಗಳ ಮಾತ್ರ. ಅವು ನೇರವಾಗಿ ಆಕಾಶದಿಂದ ಬಂದು ತಿರುಗಿ ಹಾಗೇ ಮೇಲೆ ಆಕಾಶಕ್ಕೆ ಜಿಗಿದು ಇಲ್ಲಿ ಏನನ್ನೂ ಬಿಡಿದೆ ಕೊಚ್ಚಿಕೊಂಡು ಹೋದವು. ಇದೇ ಬೆಸಿಗೆಯು ಬರುವದರ ಕಣ್ಸನ್ನೆ ಕಾಣುತ್ತದೆ.

—

## ಪ್ರಕರಣ ೯

ತಾನೇ ಮುಂಗಡ ಹೇಳಿದಂತೆ ಆಗ್ನೀಜಸು ಕಾಯಿಲೆಬಿದ್ದನು; ಸಣ್ಣ ಕಾಯಿಲೆ ಮತ್ತೆ. ಮೂರುದಿನ ದಾಟಿದ ಮೇಲೆ ಬಹಳ ಜಡ್ಡಾದವರಂತೆ ಸೋಗುಹಾಕಿ ಕೆಲಸಕ್ಕೆ ಹೋಗದೆ ತನ್ನಮನೆಯಲ್ಲಿಯೆ ಹಾಸಿಗೆ ಹಿಡಿದು ಬಿದ್ದುಕೊಂಡನು. ಸುಮ್ಮನೆ ಜ್ವರದ ಝುಳುಕು ಬಂದುಹೋಗಿದ್ದರಿಂದ ಆವನು ಅಂತಹದೇನಾದರೂ ಮಹತ್ವದ ' ಕೇಸು ' ಬಂದರೆ ಆಸ್ಪತ್ರಿಗೆ ತನ್ನ ಜಡ್ಡನ್ನು ಅಲಕ್ಷಿಸಿಯೂ ಹೋಗಿಬರುತ್ತಿದ್ದನು. ಆಗೀಗ, ತಾನು ಸಾಯುವೆ ನೆಂದು ತಿಳಿದು ಸಿಕ್ಕಾಪಟ್ಟೆಯಾಗಿ ನರಳಾಡುವನು. ಆದೂ ಬಹಳ ಹೊತ್ತು ಕೂಡ ಅಲ್ಲ ; ಒಂದು ಕ್ಷಣಹೊತ್ತು. ಅಲ್ಲಿಂದ ಏನಾದರೊಂದು ಸಣ್ಣ ಮಾತು ನೆನಪಾದರೂ ಸಾಕು, ಆವನ ಮನಸ್ಸಾಗಲೆ ಬದಲಾಗಿಬಿಡುವದು. ಅಂದು ಆದಿತ್ಯವಾರ. ಪೂರ್ವದೇಶಗಳಿಗೆ ಏನೂ ಅರ್ಥವಿಲ್ಲದ ದಿವಸ ; ಕಡಿಮೆ ಕೆಲಸಮಾಡುವದಕ್ಕೊಂದು ನೆವ ; ಚೈನಿಹೊಡಿಯಲಿಕ್ಕೊಂದು ಹಾದಿ. ತೂಕ ಡಿಸುತ್ತ ಆಗ್ನೀಜಸು ' ಸಿವ್ಹಿಲ್ ಸ್ಟೇಶನ್ ' ದಿಂದಲೂ ಕಟುಗರ ಮನೆಯಾಚೆ ಗಿರುವ ಚರ್ಚದಿಂದಲೂ ಬರುವ ಗಂಟೆಯ ಸಪ್ಪಳವನ್ನು ಕೇಳುತ್ತಿದ್ದನು. ಈ ಎರಡೂ ಗಂಟೆಗಳು ಬೇರೆ ಬೇರೆ ಉದ್ದೇಶವನ್ನೇ ಸಾರುತ್ತಿದ್ದವು. ಒಂದು ಆ್ಯಂಗ್ಲೋ ಇಂಡಿಯನ್ನರನ್ನಷ್ಟೇ ಕೂಗಿಕೂಗಿ ಕರೆಯುತ್ತಿತ್ತು. ಇನ್ನೊಂದು ಇಡೀ ಮನುಷ್ಯಜಾತಿಯನ್ನೇ ನಿರ್ಣಾದಸಿಯಲ್ಲಿ ಕೂಗುತ್ತಿತ್ತು. ಮೊದ ಲಿನ ಗಂಟೆಗೆ ಆವನದೇ ಆಡ್ಡಿಯಿರಲಿಲ್ಲ ; ಎರಡನೆಯದಕ್ಕೆ—ಆದೇ ದುರ್ಬಲ ವಿದ್ದುದರಿಂದ—ಅವನು ಮನಸ್ಸು ಹಾಕಲಿಲ್ಲ. ಮುಪ್ಪಿನ ಗ್ರೇಜರ್ಫೊರ್ಡನೂ ತರುಣ ಸೋರ್ಲೆಯೂ ಇಬ್ಬರೂ ದುರ್ಭಿಕ್ಷ ಕಾಲದಲ್ಲಿ ಅನ್ನಕೊಟ್ಟು ಎಷ್ಟೋ ಜನರನ್ನು ಅವರ ಧರ್ಮ ಬಿಡಿಸಿ ಕ್ರಿಶ್ಚನ್ನರನ್ನಾಗಿ ಮಾಡಿದ್ದರು. ಆದರೆ ಮತ್ತೆ ಸುಭಿಕ್ಷಕಾಲ ಬಂದೊಡನೆಯೇ ಅವರ ಕೆಲಸವೇನೂ ನಡೆಯದಂತಾ ಗುತ್ತಿತ್ತು. ಪ್ರತಿಸಲ ಅವರಿಗೆ ಇದರಿಂದ ದುಃಖವೂ ಆಶ್ಚರ್ಯವೂ ಆಗು ತ್ತಿದ್ದರೂ ಅವರೆಂದೂ ಬುದ್ಧಿಗಲಿಯಲಿಲ್ಲ. ' ಫೀಲ್ಡಿಂಗನನ್ನುಳಿದು ಯಾವ

ಇಂಗ್ಲೀಷ ಮನುಷ್ಯನೂ ನಮ್ಮನ್ನು ತಿಳಿದುಕೊಳ್ಳಲಾರನು. ಆದರೆ ನಾನು ಅವನನ್ನು ಹೇಗೆ ಮತ್ತೊಮ್ಮೆ ಕಾಣಬಹುದು? ಅವನೀಗ ಈ ಕೋಣೆಯಲ್ಲಿ ಒಂದರೆ....ಅಯ್ಯೋ....! ಈ ಹೊಲಸು....! ನನ್ನನ್ನು ಕೊಂದು ಬಿಡುತ್ತದೆ—' ಎಂದು ಅಝೀಜನು ತನಮುಳಿಸಿದನು. ಹಸನನನ್ನು ಕರೆದು ಅದನ್ನು ಸ್ವಚ್ಛಮಾಡಹೇಳಿದನು. ಆದರೆ ಹಸನನು ಅಂದೇ ಬಂದ ತನ್ನ ಸಂಬಳದ ರೂಪಾಯಿಗಳನ್ನು ಹೊರಂಗಳದ ಪಾವಟಿಗೆಯ ಮೇಲೆ ಬಾರಿ ಸುತ್ತ ಕುಳಿತಿದ್ದನು. ರೂಪಾಯಿಗಳ ನಾದದಲ್ಲಿ ಅಝೀಜನು ಕೂಗಿದ್ದು ಅವನಿಗೆ ಕೇಳಿಸಿರಲಿಕ್ಕಿಲ್ಲ; ಏನು, ಕೇಳಿಯೂ ಕೇಳದವನಂತೆ ಕುಳಿತಿದ್ದನೋ! ಅಝೀಜನು ಕರೆದೂ ಕರೆಯದಿದ್ದಂತೆ 'ಇದಿ ಹಿಂದುಸ್ತಾನವೇ ಹೀಗೆ.. ನಮ್ಮಂತೆ....ನಾವಂತೂ ಹೀಗಿದ್ದೇವೆ....' ಎಂದು ಮತ್ತೆ ತೂಕಡಿಸ ಹತ್ತಿದನು. ಅವನ ಕಲ್ಪನಾವಿಲಾಸವು ರಸಜೀವನದ ಉಯ್ಯಾಲೆಯಲ್ಲಿ ತೂಗಾಡಲಾರಂಭಿಸಿತು. ಕ್ರಮವಾಗಿ ಅದು ಕೊನೆಗೆ ತನ್ನ ಮೆಟ್ಟಿಗೇ ಬಂದು ನಿಂತಿತು. ಅದೆಂದರೆ—ಮಿಶನರಿಗಳ ಅಭಿಪ್ರಾಯದಂತೆ ಒಂದು ತಳ ಬುಡವಿಲ್ಲದ ತಗ್ಗು—ಆದರೆ ಅಝೀಜನ ಅಭಿಪ್ರಾಯದಂತೆ ಸಹಜವಾಗಿ ದಾಟಬಹುದಾದ ಒಂದು ಸಣ್ಣ ಕೊರಕಲು. ಹೌದು, ಅಝೀಜನಿಗೆ ಒಂದು ದಿನ ಸಾಯಂಕಾಲ ಯಾವುದಾದರೂ ಹುಡುಗೆಯ ಕೂಡ ಹಾಡು, ನಾಚು ಎಲ್ಲದರಲ್ಲಿಯೂ ಚಕ್ಕಂದಹೊಡೆಯುವದು ಬೇಕಾಗಿತ್ತು. ಈ ಚಕ್ಕಂದ ಕೊನೆಗೆ ಸಂಭೋಗದಲ್ಲಿ ಪರಿಣಮಿಸಿದರೂ ಅಡ್ಡಿ ಇದ್ದಿಲ್ಲ. ಇದೇ ಅವನಿಗೆ ಖಂಡಿತವಾಗಿ ಬೇಕಾದದ್ದು. ಆದರೆ ಇದು ಸಾಧಿಸುವದು ಹೇಗೆ? ಮೇಜರ ಕ್ಯಾಲೆಂಡರನು ಹಿಂದೀ ಮನುಷ್ಯನಾಗಿ ಅವನಂತೆ ವಿಧುರನಾಗಿದ್ದರೆ ತರುಣರ ಈ ಅವಸ್ಥೆಯನ್ನು ನೆನೆದು ಅವರಿಗೆ ಕಲಕತ್ತೆಗೆ ಹೋಗುವದಕ್ಕಾಗಿ, ಇಲ್ಲದ ಪ್ರಶ್ನೆಗಳನ್ನು ಕೇಳದೆ ಎರಡೊ ಮೂರೊ ದಿವಸಗಳ ರಜೆಯನ್ನು ಕೊಟ್ಟು ಬಿಡಬಹುದಾಗಿತ್ತು. ಆದರೆ ಮೇಜರನು ತನ್ನ ಕೈಕೆಳಗಿನವರೆಂದರೆ ಕಲ್ಲಿನ ಮೂರ್ತಿಗಳೆಂದಾಗಲಿ ಇಲ್ಲವೆ ಇಲ್ಲಿಯೆ ಚಂದ್ರಪುರದ ಬಾಜಾರಬಸವಿಯರಿಗೆ ಹೋಗುತ್ತಿರಬೇಕೆಂದಾಗಲಿ ತಿಳಿದುಕೊಂಡಿರಬೇಕು; ಎರಡೂ ಹೇಸಿ ಕಲ್ಪನೆ ಗಳೇ! ಆದರೆ ಫೀಲ್ಡಿಂಗನು ಮಾತ್ರ....

'ಹಸನ್'

ಸೇವಕನು ಓಡುತ್ತಾ ಬಂದನು.

'ಬಾ ತಮ್ಮಾ ಇಲ್ಲಿ. ಆಕಾ, ಅಲ್ಲಿ ನೋಡು, ನೊರಜೆಷ್ಟಿವೆ?' ಹೀಗೆಂದು ಒಳಮಾಳಿಗೆಯಿಂದ ಜೋತುಬಿದ್ದ ಇಲೆಕ್ಟ್ರಿಕ್ ತಂತಿಗೆ ಮುತ್ತಿದ ಆ ಗುಂಪನ್ನು ತೋರಿಸಿದನು. ವಿದ್ಯುತ್ಪ್ರಕಾಶಕ್ಕೆ ಆಳಾಗಿ ಬಾಗಿದಂತಿದ್ದ ತಂತಿಯ ತುಂಡೊಂದು ಅವಕ್ಕೆಲ್ಲ ಮುಖ್ಯವಾದ ಆಧಾರವಾಗಿತ್ತು. ವಿದ್ಯುತ್ಪ್ರಕಾಶಕ್ಕೇನೂ ಅದರ ಕಡೆಗೆ ಲಕ್ಷ್ಯವೇ ಇದ್ದಿಲ್ಲ. ನೊರಜುಗಳ ಒಂದು ಮಹಾಸೇನಾಸಮೂಹವೇ ತಂತಿಯ ಒಂದು ತುಂಡಿನ ಮೇಲೆ ತಳವೂರಿ ಅದನ್ನೆಲ್ಲ ಕಪ್ಪು ಮಾಡಿಬಿಟ್ಟಿತ್ತು.

'ಹುಜೂರ್, ಅವು ನೊರಜು!'

ಹೌದು, ಹೌದು, ಅದು ನನಗೆ ಗೊತ್ತಿದೆ. ಆದರೆ ನಾನು ನಿನ್ನನ್ನೇಕೆ ಕರೆದದ್ದು?'

'ಅವುಗಳನ್ನು ಇನ್ನೊತ್ತಟ್ಟಿಗೆ ಹೊಡೆದಟ್ಟಲಿಕ್ಕೆ ಹುಜೂರ್.' ಎಂದು ಹಸನನು ಸ್ವಲ್ಪ ನೊಂದುಕೊಂಡು ಹೇಳಿದನು.

'ಇನ್ನೊತ್ತಟ್ಟಿಗೆ ಹೊಡೆದರೆ ಮತ್ತೆ ತಿರುಗಿ ಬರುತ್ತವಲ್ಲ?'

'ಹುಜೂರ್.'

'ಏನೇ ಮಾಡು, ಅವು ತಿರುಗಿ ಬಾರದಂತೆ ವ್ಯವಸ್ಥೆಮಾಡಬೇಕು ನೋಡು. ನಿನ್ನನ್ನು ಯಾತಕ್ಕಾಗಿ ಇಟ್ಟುಕೊಂಡದ್ದು ಮತ್ತೆ?' ಎಂದು ಅಧಿಕಾರಿಯು ಗದ್ದರಿಸಿದನು.

ಹಸನನು ಒಬ್ಬ ಸಣ್ಣಹುಡುಗನಿಗೆ ಮಹಮ್ಮದಲಿಯ ಮನೆಯಿಂದ ನಿಚ್ಚಣಿಕೆಯೊಂದನ್ನು ತರಹೇಳಿ, ಅಡಿಗೆಯವನಿಗೆ ಸ್ಟೋವ್ ಹೊತ್ತಿಸಿ ನೀರು ಕಾಯಿಸಲು ಹೇಳಿ, ತಾನು ಸ್ವತಃ ಕೈಯಲ್ಲಿ ಬಕೀಟನ್ನು ತೆಗೆದುಕೊಂಡು ನಿಚ್ಚಣಿಕೆಯನ್ನು ಹತ್ತಿ ಆ ನೊರಜು ಮುತ್ತಿದ ತಂತಿಯನ್ನು ಬಿಸಿನೀರಿನಲ್ಲದ್ದಿಬಿಡಬೇಕೆಂದು ಹಂಚಿಕೆ ಹಾಕಿದನು.

'ಒಳ್ಳೆಯದು; ಹಾಗಾದರೆ ಈಗ ನೀನೇನು ಮಾಡತಕ್ಕವನು?

'ನೊರಜುಗಳನ್ನು ಸಂಹಾರ ಮಾಡತಕ್ಕವನು.'

'ಸರಿ, ಜಾಣ! ಹಾಗೇ ಮಾಡು.'

ಹಸನನು ತನ್ನ ಆ ಹಂಚಿಕೆಯನ್ನೇ ತಲೆಯಲ್ಲಿಟ್ಟುಕೊಂಡು ಹೊರ

ಬಿದ್ದು ಆ ಸಣ್ಣ ಹುಡುಗನನ್ನು ಹುಡುಕಹತ್ತಿದನು. ಆ ಹುಡುಗನೇ ಸಿಗದ್ದರಿಂದ ಮೆಲ್ಲನೆ ತಿರುಗಿ ಒಳಂಗಳದೊಳಗಿನ ತನ್ನ ಸ್ಥಳಕ್ಕೆ ಬಂದನು. ಆದರೆ ರೂಪಾಯಿಗಳನ್ನು ಮಾತ್ರ ಈಗ ಬಾರಿಸಿ ನೋಡಲಿಲ್ಲ. ಹಾಗೆ ಮಾಡಿದ್ದರೆ ಆ ಝಣ ಝಣ ಸಪ್ಪಳವು ಅವನ ಯಜಮಾನನಿಗೆ ಕೇಳಿಸಿ ಅವನ ಪುಷ್ಪಾರ್ಚನೆಗೆ ಮತ್ತೆ ಪ್ರಾರಂಭವಾಗಬಹುದಾಗಿತ್ತು. ರವಿವಾರದ ಗಂಟೆಗಳು ನಡಗುತ್ತ ಇನ್ನೂ ಬಾರಿಸುತ್ತಿದ್ದವು. ಪೂರ್ವದೇಶವು ಇಂಗ್ಲೆಂಡದ ಹತ್ತು ಪ್ರದೇಶಗಳ ಮಾರ್ಗವಾಗಿ ಮತ್ತೆ ಪೂರ್ವಕ್ಕೇ ತಿರುಗಿತು. ಆದರೆ ದ್ರಾವಿಡಪಾಣಾಯಾಮದಿಂದ ಬಹಳೇ ನಗೆಗೀಡು ಮಾತ್ರ ಆಯಿತು.

ಅಝೀಜನು ಮತ್ತೆ ಸುಂದರ ತರುಣಿಯರ ವಿಷಯ ಯೋಚಿಸಹತ್ತಿದನು.

ಅವನ ಮನಸ್ಸೀಗ ವ್ಯಗ್ರವಾಗಿದ್ದರೂ ನೀಚವಾಗಿರಲಿಲ್ಲ. ಬಹಳ ವರ್ಷಗಳ ಹಿಂದೆಯೆ ಅವನು ತನ್ನ ಪ್ರಕೃತಿಯ ವಿಷಯಕ್ಕೆ ಬೇಕಾದುದೆಲ್ಲವನ್ನು ತಿಳಿದುಕೊಂಡಿದ್ದನು. ಅವನಿಗಿದು ಬಂದದ್ದು ಅವನು ಹುಟ್ಟಿದ ಸಾಮಾಜಿಕ ಪರಿಸ್ಥಿತಿಯ ಪುಣ್ಯಬಲದಿಂದ. ಅವನು ವೈದ್ಯಕಿಯನ್ನು ಅಭ್ಯಾಸಮಾಡಲು ತೊಡಗಿದಾಗ ಯುರೋಪವು ಈ ಕಾಮಶಾಸ್ತ್ರದ ವಿಷಯಗಳನ್ನು ವಿಭಾಗಿಸಿ ವ್ಯವಸ್ಥಿತರೀತಿಯಿಂದ ಇಡುವಲ್ಲಿ ತೋರಿಸುವ ಪಾಂಡಿತ್ಯವನ್ನೂ ಆಡಂಬರವನ್ನೂ ನೋಡಿ ಅವನಿಗೆ ತೀರಾ ಅಸಹ್ಯವೆನಿಸಿತ್ತು. ಈ ವಿಜ್ಞಾನಶಾಸ್ತ್ರವು ಎಲ್ಲವನ್ನೂ ತಪ್ಪುತುದಿಯಿಂದ ಹಿಡಿದು ವಿಚಾರಿಸಹತ್ತಿದೆಯೆಂದು ಅವನಿಗನಿಸಿತ್ತು. ಜರ್ಮನ್ ಗ್ರಂಥದಲ್ಲಿದ್ದ ಮಾತ್ರದಿಂದ ತನಗೂ ಅದೇ ತರಹದ ಅನುಭವಗಳು ಬರಬೇಕೆಂದಾಗಲಿ, ತನ್ನ ಅನುಭವಗಳೆಲ್ಲ ಅದರಲ್ಲಿವೆಯೆಂದಾಗಲಿ ಅವನು ತಿಳಿದುಕೊಳ್ಳಲಿಲ್ಲ. ತಾನು ತನ್ನ ತಂದೆ-ತಾಯಿಗಳಿಂದ, ತನ್ನ ಮನೆಯಲ್ಲಿಯ ಆಳು-ಹೋಳುಗಳಿಂದ ಪಡೆದ ಜ್ಞಾನವೇ ಒಳ್ಳೆ ಫಲಕಾರಿಯೆಂದು ಅವನಿಗನಿಸಿತು. ಇದನ್ನೇ ಪ್ರಸಂಗ ಬಂದಾಗಲೆಲ್ಲ ಅವನು ಮುಂದಿಗೂ ಹೇಳುತ್ತಿದ್ದನು.

ಹೀಗೆಯೆ ತಾನು ಏನಾದರೊಂದು ಹುಚ್ಚುಚ್ಚು ಬಡಿದು ಬಹಿರಂಗವಾಗಿ ಹೊರಚಾಳಿಗೆ ಹತ್ತುವ ಅವಿವೇಕ ಮಾಡಿದರೆ ತನ್ನ ಮಕ್ಕಳಿಗೆ ಅನ್ಯಾಯ

ಮಾಡಿದಂತಾಗುವದೆಂದೂ ಅವರ ಸ್ವರೂಪನಾಶವನ್ನು ತಾನೆ ಕುಳಿತು ಮಾಡಿದಂತಾಗುವದೆಂದೂ ಅವನು ಬಗೆದಿದ್ದನು. ಆದರೆ ಒಂದು ಕ್ಷಣ ಹೊತ್ತು ಇದೆಲ್ಲವೂ ಸಂಭವಿಸಿ ಅವನು ಲಫಂಗನೆಂದು ಗೊತ್ತಾಯಿತೆಂದು ಕಲ್ಪಿಸೋಣ; ಅಂದರೇನಾಗುವದು ? ಅವನ ವಿಷಯಕ್ಕೆ ಮೇಜರ ಕ್ಯಾಲೆಂಡರನು ಏನೇ ತಿಳಿದುಕೊಂಡಿದ್ದರೂ ಇವನು ತನ್ನ ಸ್ಥಾನಮರ್ಯಾದೆಯನ್ನು ಕಾಯ್ದುಕೊಳ್ಳಬೇಕಾಗುವದು; ನೀತಿಯು ದೊಡ್ಡದೊಂದು ಪ್ರಭಾವಳಿಯು ಆಶ್ರಯದಲ್ಲಲ್ಲದಿದ್ದರೂ ಅಘೋಜನು ತನ್ನದೇ ಆದ ಒಂದು ರೀತಿಯಲ್ಲಿ ಆದರ ಯುಕ್ತಾಯುಕ್ತತೆಯನ್ನು ಒರೆಹಚ್ಚಿನೋಡಿದನು. ಇಂಗ್ಲೀಷ ಮನುಷ್ಯನಿಗೂ ಅವನಿಗೂ ಎಲ್ಲಿಯಾದರೂ ಭೇದವಿದ್ದರೆ ಅದು ಇಲ್ಲಿಯೇ. ಅಘೋಜನ ರೀತಿ-ನೀತಿಗಳೆಲ್ಲ ಸಮಾಜದ ಆಧಿಪತ್ಯಕ್ಕೆ ತಲೆಬಾಗಿದಂತಹವು. ಅಂತೆಯೇ ಎಲ್ಲಿಯವರೆಗೆ ಸಮಾಜಕ್ಕೆ ತಿಳಿಯುವದಿಲ್ಲವೋ ಅಲ್ಲಿಯವರೆಗೆ ಅದಕ್ಕೆ ಮೋಸ ಮಾಡುವದರಲ್ಲಿ ಯಾವ ಅಪರಾಧವೂ ಇಲ್ಲ; ಯಾಕಂದರೆ ಅದಕ್ಕೆ ತಿಳಿದಾಗಲೆ ನಾವು ಅಪರಾಧಿಗಳಾಗುವೆವು; ತಿಳಿಯದಿದ್ದಾಗಲೆಲ್ಲ ನಾವು ಸಂಭಾವಿತರೆಂದೇ ಅದು ಗ್ರಹಿಸಿರುತ್ತದೆ; ಸಮಾಜವೆಂದರೇನು ಅದು ದೇವರಂತೆಯಾಗಲಿ, ಮಿತ್ರನಂತೆಯಾಗಲಿ ಕೇವಲ ಅಪ್ರಾಮಾಣಿಕತೆ, ಅಪನಂಬಿಕೆಗಳ ಅಸ್ತಿತ್ವದಿಂದಲೇ ಮುಳುಗಿಹೋಗುವಂಥದೇನೂ ಅಲ್ಲ, ಎಂಬ ಈ ಮಾತುಗಳನ್ನು ಅವನು ಸ್ಪಷ್ಟವಾಗಿ ತಿಳಿದುಕೊಂಡಿದ್ದನು. ಅಂತೆಯೆ ಕಲಕತ್ತೆಗೆ ಹೋಗುವದಕ್ಕಾಗಿ ಯಾವ ಮಾದರಿಯ ಸುಳ್ಳು ಹೇಳಬೇಕೆಂಬುದನ್ನು ಅವನಾಗಲೆ ಗೊತ್ತುಮಾಡಿದ್ದನು. ತನಗೊಂದು ಕಾಗದವನ್ನೂ ತಂತಿಯನ್ನೂ ಕಳಿಸುವಂತೆ ಕಲಕತ್ತೆಯಲ್ಲಿ ತನ್ನ ವಿಶ್ವಾಸಿಕನೊಬ್ಬನನ್ನು ಹುಡಕಬೇಕು; ಅವು ಬಂದಮೇಲೆ ಮೇಜರ ಕ್ಯಾಲೆಂಡರನಿಗೆ ತೋರಿಸಬೇಕು; ಅಲ್ಲಿಂದ ಎಲ್ಲವೂ ಸುಸೂತ್ರವಾಗುವದು ಎಂದು ಬಗೆದನು.

ಹೀಗೆಲ್ಲ ಅಘೋಜನು ಆಲೋಚಿಸುತ್ತಿರುವಾಗಲೆ ಅವನ ಕಂಪೌಂಡಿನಲ್ಲಿ ಗಾಲಿಗಳ ಸಪ್ಪಳವು ಕೇಳಬಂತು. ಯಾರೊ ತನ್ನನ್ನು ನೋಡಿಕೊಂಡು ಹೋಗಲಿಕ್ಕೆ ಬಂದಿರಬೇಕೆಂದುಕೊಂಡನು. ಜನರು ತನಗೆ ತೋರಿಸುತ್ತಿರುವ ಈ ಸಹಾನುಭೂತಿಯ ಕಲ್ಪನೆಯಿಂದ ಅವನ ಜ್ವರವು ಹೆಚ್ಚಿತು. ನರಳುವದನ್ನು ಹೆಚ್ಚುಮಾಡಿ ತುಂಬ ಮುಸುಕುಹಾಕಿಕೊಂಡು ಮಲಗಿದನು.

'ಅಝೀಜ, ಹೇಗಿದೆ? ನಮಗೆ ಬಹಳ ಚಿಂತೆಯಾಗಿದೆ.' ಎಂದು ಹಮೀದುಲ್ಲಾ ಕೇಳಿದನು. ಒಬ್ಬನು, ಇಬ್ಬರು, ಮೂವರು, ನಾಲ್ವರು ಹೀಗೆ ಒಬ್ಬರ ಹಿಂದೊಬ್ಬರು ಬಂದು ಅವನು ಮಲಗಿದ ಹಾಸಿಗೆಯ ಮೇಲೆಯೇ ಕುಳಿತುಕೊಂಡರು.

'ಮಂದಿಗೆ ಗುಳಿಗೆ ಕೊಡುವ ವೈದ್ಯರೇ ಜಡ್ಡಿಗೆ ಬಿದ್ದರೆ ಸ್ವಲ್ಪ ಕಠಿಣ ಮತ್ತೆ!' ಎಂದು ಅಸಿಸ್ಟಂಟ್ ಇಂಜನಿಯರರಾದ ಸೈಯದಮಹಮ್ಮದರು ಬಾಣಬಿಟ್ಟರು.

'ಹಾಗೇ ಊರಮಂದಿಗೆಲ್ಲ ನೀರುಬಿಡುವ ಇಂಜನಿಯರರೂ ಜಡ್ಡಿಗೆ ಬಿದ್ದರೆ ಅಷ್ಟೇ ಕಠಿಣ ಮತ್ತೆ!' ಎಂದು ಪೋಲೀಸ ಇನ್ಸ್ಪೆಕ್ಟರರಾದ ಹಕ್ಕರು ತಿರುಗಿ ಬಾಣಬಿಟ್ಟರು.

'ಹೌದು, ಹೌದು, ನಾವೆಲ್ಲರೂ ದೊಡ್ಡಮನುಷ್ಯರೇ; ಸುಮ್ಮನೆ ಏಕೆ? ನಮ್ಮ ಪಗಾರವೆ ಅದನ್ನು ಹೇಳುತ್ತದೆ.'

'ಡಾಕ್ಟರ ಅಝೀಜರು, ಹೋದ ಗುರುವಾರ ಮಧ್ಯಾಹ್ನದ ಚಹವನ್ನು ನಮ್ಮ ಪ್ರಿನ್ಸಿಪಾಲರ ಮನೆಯಲ್ಲಿ ತೆಗೆದುಕೊಂಡರು. ಅಲ್ಲಿಗೆ ಹೋಗಿದ್ದ ಪ್ರೊ. ಗೋಡಬೋಲೆಯವರೂ ಹೀಗೆಯೇ ಜಡ್ಡಿಗೆ ಬಿದ್ದಿದ್ದಾರೆ. ಇದನ್ನು ನೋಡಿದರೆ ಸ್ವಲ್ಪ ವಿಚಿತ್ರವೆ ಕಾಣುತ್ತದೆ?' ಎಂದು ಇಂಜನಿಯರನ ಅಣ್ಣನ ಮಗನಾದ ರಫಿಯು ಇಲ್ಲದ ಸಂಶಯದ ಗಾಳಿನ್ನೂದಿದನು.

ಆದರಿಂದ ಪ್ರತಿಯೊಬ್ಬನ ಹೃದಯಾಗ್ನಿಯೂ ಗಾಳಿಗೊಡ್ಡಿದಂತಾಗಿ ಪ್ರಜ್ವಲಿಸಿತು.

'ಛೀ, ಇದೆಲ್ಲ ಹುಚ್ಚುಮಾತು....' ಎಂದು ಹಮೀದುಲ್ಲಾ ತನ್ನ ಅಧಿಕಾರಯುಕ್ತ ವಾಣಿಯಿಂದ ಹೇಳಿ ಅದನ್ನು ತಕ್ಕಮಟ್ಟಿಗೆ ಶಾಂತ ಮಾಡಿದನು.

'ನಿಜವಾಗಿಯೂ ಹುಚ್ಚುಮಾತು.' ಎಂದು ಉಳಿದವರೂ ಅಲ್ಲಿಂದ ನಾಚಿ ದನಿಗೂಡಿಸಿದರು. ಏನೋ ಒಂದು ಅಪವಾದವನ್ನು ಕಲ್ಪಿಸಿ ಅದನ್ನು ಹಬ್ಬಿಸಲಿಕ್ಕೆ ಪ್ರಯತ್ನ ಪಟ್ಟು ಪಟ್ಟು ಸೋತುಹೋದದ್ದರಿಂದ ಧೈರ್ಯ ಗುಂದಿದ ಆ ಮಹಾಮರಪಂಡಿತ ಹುಡುಗನು ಈಗ ಗೋಡೆಯಕಡೆಗೆ ಬೆನ್ನು ಮಾಡಿಕೊಂಡು ಎದ್ದುನಿಂತನು.

'ಪ್ರೊಫೆಸರ ಗೋಡಬೊಲೆಯವರಿಗೂ ಜಡ್ಡಾಗಿವೆಯೆ?' ಎಂದು ಎದೆ ನಡುಗಿ ಅಝೀಜನು ಕೇಳಿದನು. 'ನನಗೆ ಬಹಳೇ ಕೆಡಕೆನಿಸುತ್ತಿದೆ.' ಎಂದು ಗಂಭೀರವಾಗಿದ್ದರೂ ಅಂತಃಕರುಣವನ್ನು ತೋರುವ ಅವನ ಮುಖವು ಕಿತ್ತಳೆಬಣ್ಣದ ಹೊದ್ದಿಕೆಯ ನಿರಿಗೆಗಳೊಳಗಿಂದ ಹಣಿಕಿಕ್ಕಿತು. 'ಮಹಮ್ಮದ ಮತ್ತು ಹಕ್ಕ್, ನೀವು ಚೆನ್ನಾಗಿದ್ದೀರಾ? ನನ್ನ ಆರೋಗ್ಯವನ್ನು ವಿಚಾರಿಸಲಿಕ್ಕೆ ಬಂದುದಕ್ಕಾಗಿ ತುಂಬಾ ಉಪಕೃತನಾಗಿದ್ದೇನೆ.. ಹಮೀದುಲ್ಲಾ, ನೀವು ಹೇಗಿದ್ದೀರಿ?....ಏನೇ ಅನ್ನಿರಿ, ನೀವು ಕೆಟ್ಟಸುದ್ದಿಯನ್ನು ತಂದಂತಾಯಿತು....ಪಾಪ, ಒಳ್ಳೆಯ ಮನುಷ್ಯ!..ಏನು ಜಡ್ಡು ಅವನಿಗೆ..?'

'ಯಾಕೆ ರಫೀ, ಸುಮ್ಮನಿದ್ದೀಯಲ್ಲಾ? ಉತ್ತರಕೊಡು. ನೀನೇ ಸುದ್ದಿಯನ್ನು ತಂದವನಲ್ಲವೇ?' ಎಂದು ಅವನ ಕಕ್ಕನೇ ಚುಚ್ಚಿನುಡಿದನು.

'ಹೌದು, ರಫೀ ಎಂದರೆ ಸಾಮಾನ್ಯಮನುಷ್ಯನೆಂದು ತಿಳಿದಿದ್ದೀರೇನು? ಅಲ್ಲ; ಚಂದ್ರಪುರಕ್ಕೆ ಅವನೊಬ್ಬ 'ಶರ್ಲಾಕ ಹೋಮ್ಸ' ಇದ್ದಂತೆ. ಮಾತಾಡು ರಫೀ, ಮಾತಾಡು.'

ತನ್ನನ್ನು ಕಾಲಿಗೆ ಹತ್ತಿದ ಧೂಳಿಗಿಂತ ಕಡಿಮೆ ಮಾಡಿಕೊಂಡು ಆ ಹುಡುಗನು ಮೆತ್ತಗೆ 'ಡಾಯೆರಿಯಾ' ಎಂದನು. ಇದನ್ನು ಕೇಳಿದೊಡನೆ ಹಿರಿಯರೆಲ್ಲರ ಮನಸ್ಸಿನಲ್ಲಿ ಮತ್ತೆ ಸಂಶಯದ ಜ್ವಾಲೆಗಳೆದ್ದವು; ಆದರೆ ಮೊದಲಿನಕಿಂತ ಬೇರೆ ದಿಕ್ಕಿನ ಕಡೆಗೆ ತಮ್ಮ ನಾಲಿಗೆ ಚಾಚಿದ್ದವಷ್ಟೆ.

'ಡಾಯೆರಿಯಾ ಎನ್ನುವದು ಕಾಲೆರಾದ ಮೊದಲಿನ ಮೆಟ್ಟಲಾಗಿರಬಹುದೇನು? ಹಾಗಿದ್ದರೆ ಇದು ಬಹಳ ಕಠಿಣಕ್ಕೇ ಬಂದಂತಾಯಿತು! ಈಗಿನ್ನೂ ಇದು ಮಾರ್ಚದ ಕೊನೆಯ ಭಾಗ. ಒಂದು ವೇಳೆ ಇದು ನಿಜವಿದ್ದರೆ ಈ ಸುದ್ದಿಯನ್ನು ಇನ್ನೂ ನನಗೇಕೆ ತಿಳಿಸಿಲ್ಲ?' ಎಂದು ಅಝೀಜನು ಸ್ವಲ್ಪ ಗಾಬರಿಯಾಗಿ ಕೇಳಿದನು.

'ಅವನಿಗೆ ಡಾಕ್ಟರ ಪನ್ನಾಲಾಲರ ಉಪಚಾರ ನಡೆದಿದೆ ಸರ್.'

'ಓಹೋ! ಹೀಗೇನು! ಸರಿಹೋಯಿತು. ಇಬ್ಬರೂ ಹಿಂದುಗಳಲ್ಲವೇ! ಇಲ್ಲಿದೆ ನೋಡಿರಿ ಅವರ ಗುಟ್ಟು. ಈ ನೊರಜಿನಂತೆ ಇವರೆಲ್ಲರೂ ಕೂಡುತ್ತಾರೆ; ಕೂಡಿ, ಎಲ್ಲಕ್ಕೂ ಕಪ್ಪು ಬಳಿಯುತ್ತಾರೆ. ರಫೀ, ಇಲ್ಲಿ ಬಾ;

ಕುಳಿತುಕೊ. ನನಗಷ್ಟು ಎಲ್ಲವನ್ನೂ ವಿವರವಾಗಿ ಹೇಳು ನೋಡೋಣ? ವಾಂತಿಯೂ ನಡೆದಿದೆಯೇನು?'

ಹೌದು ಸರ್. ಅಲ್ಲದೆ ವಿಚಿತ್ರ ವೇದನೆಯೂ ಇದೆಯಂತೆ.'

' ಸರಿ, ಸರಿ, ಎಲ್ಲವೂ ಗೊತ್ತಾಯಿತು. ಇನ್ನು ಇಪ್ಪತ್ತುನಾಲ್ಕು ತಾಸುಗಳಲ್ಲಿ ಅವನ ಅವತಾರ ಮುಗಿದಂತಾಯಿತೆಂದೇ ತಿಳಿಯಬೇಕು.'

ಎಲ್ಲರೂ ಎದೆಗೆ ಗುಂಡುಬಡಿದಂತಾಗಿ ಗಾಬರಿಗೊಂಡು ಒಬ್ಬರ ಮುಖ ವನ್ನೊಬ್ಬರು ಪಿಳಿಪಿಳಿ ಕಣ್ಣುಬಿಟ್ಟು ನೋಡಿದರು. ಆದರೆ ಪ್ರೊ. ಗೋಡ ಬೊಲೆಯವರು ಇಂಥ ಹೊತ್ತಿನಲ್ಲಿಯೂ ತಮ್ಮ ಜಾತಿ-ಬಾಂಧವನಿಗೇ ಅಂಟಿಕೊಂಡದ್ದರಿಂದ ಅವರಲ್ಲಿ ಅವನ ಬಗ್ಗೆ ಮೊದಲು ಹುಟ್ಟಿದ ಅನುಕಂಪದ ಪರಿಣಾಮವು ಬಹಳೇ ಕಡಿಮೆಯಾಯಿತು. ಬೇನೆಯಿಂದ ಬಳಲುತ್ತಿದ್ದ ಒಂದು ವ್ಯಕ್ತಿಯೆಂದು ಅವನ ಮೇಲೆ ಮೊದಲು ಹುಟ್ಟಿದ ಅವರ ಕನಿಕರ, ಕರುಣೆಗಳು ಈಗ ಕಡಿಮೆಯಾದುವಷ್ಟೇ ಅಲ್ಲ, ಆಗಲೇ ಅವನನ್ನು ಬೇನೆ ಹಬ್ಬಿಸುವ ಹುಳುವೆಂದು ದೂಷಿಸುವದೂ ಪ್ರಾರಂಭವಾಯಿತು. ' ಎಲ್ಲ ಬೇನೆ ಗಳೂ ಈ ಹಿಂದೂಜನರಿಂದಲೇ ಹುಟ್ಟುವವು.' ಎಂದು ಹಕ್ಕನು ಕೊಂಕು ನುಡಿದನು. ಕೂಡಲೆ ಸೈಯದ ಮಹಮ್ಮದನೂ ತಾನು ಪ್ರಯಾಗ ಉಜ್ಜ ಯನಿಗಳಲ್ಲಿ ಕಂಡ ಹಿಂದೂಧರ್ಮದ ಜಾತ್ರೆಗಳನ್ನು ಕಟಕುವ ಅಣಕದಿಂದ ವರ್ಣಿಸಿ ಹಕ್ಕನ ಮಾತಿನ ಕಾಳ್ಗಿಚ್ಚಿಗೆ ಬಿರುಗಾಳಿಯಾಗಿ ಬಂದನು. ' ಪ್ರಯಾಗ ದಲ್ಲಿ ನದಿಯ ನೀರು ಹರಿಯುತ್ತಿರುವದರಿಂದ ಅಲ್ಲಿಯ ಕಿಲ್ಮಿಷವೂ ಹರಿದು ಹೋಗುವದು. ಆದರೆ ಉಜ್ಜಯನಿಯಲ್ಲಿದ್ದ ಆ ಸಣ್ಣನದಿಗೆ ಒಡ್ಡುಹಾಕಿ ಪ್ರವಾಹವನ್ನು ತಡೆಗಟ್ಟಿದ್ದರಿಂದ ಸಾವಿರಾರು ಜನ ಸ್ನಾನಮಾಡುವವರು ಆ ಜಲಾಶಯವನ್ನು ತಮ್ಮ ಕ್ರಿಮಿಗಳಿಂದ ತುಂಬಿಬಿಡುವರು.' ಎಂದು ಮುಂತಾಗಿ ಅಲ್ಲಿಯ ಪ್ರಖರಸೂರ್ಯನನ್ನೂ ಓಣಿ ಓಣಿ ಹಿಡಿದು ಬತ್ತಲೆ ತಿರುಗುವ ಕೆಲ ಸಾಧುಗಳನ್ನೂ ಧರ್ಮದ ಹೆಸರಿನಿಂದ ಅಲ್ಲಿ ನಡೆಯುತ್ತಿದ್ದ ಕೆಲ ಅನ್ಯಾಯಗಳನ್ನೂ ಅಸಹ್ಯವಾಗುವಂತೆ ವರ್ಣಿಸಿದನು. ಕುಳಿತವರ ಲೊಬ್ಬರು ಅವನನ್ನು ಉಜ್ಜಯನಿಯಲ್ಲಿದ್ದ ಮುಖ್ಯಮೂರ್ತಿ ಯಾವುದೆಂದು ಕೇಳಿದಾಗ ಅವನು ತನಗದು ಗೊತ್ತಿಲ್ಲವೆಂದೂ ತಾನೇ ಹೋಗಿ ಅದನ್ನು ಕೇಳಿಕೊಳ್ಳುವಷ್ಟು ಕೀಳನಾಗಲಿಲ್ಲವೆಂದೂ ಇಂಥ ಸಣ್ಣಪುಟ್ಟ ಮಾತುಗಳಿಗೆ

ಗಾಗಿ ತಾನೂ ಹೊತ್ತು ಹಾಳುಮಾಡಿಕೊಳ್ಳುವವನಲ್ಲವೆಂದೂ ಇನ್ನೂ ಏನೇನೊ ಒಂದಕ್ಕೆ ಹತ್ತು ಹೇಳಿ ತನ್ನ ಮೂಗೆ ಮೇಲು ಮಾಡಿಕೊಳ್ಳಬೇಕೆಂದು ಹವಣಿಸಿದನು. ಅವನಿಗೆ ಮಾತನಾಡುವ ಆವೇಗ ಬಂದರೆ ಆ ಭರದಲ್ಲಿ ಅವನು ಪಂಜಾಬಿ ಸುರುವುಮಾಡಿಬಿಡುತ್ತಿದ್ದನು. ಆಗ ಎಲ್ಲರೂ ಕಣ್ಣುಬಿಡುತ್ತ ಸುಮ್ಮನೆ ಕೂಡಬೇಕಾಗುತ್ತಿತ್ತು.

ಅಝೀಜನಿಗೆ ತನ್ನ ಧರ್ಮವನ್ನು ಯಾರಾದರೂ ಹೊಗಳುವದು ಬೇಕಾಗಿತ್ತು. ಅದರಿಂದ ಅವನ ಮನಸ್ಸಿನ ಮೇಲಾಹೊಯ್ದಾಟವು ಶಾಂತವಾಗಿ ಒಳಗಿನ ಅವನ ಸುಂದರ ಕಲ್ಪನೆಗಳು ರೂಪಪಡೆದು ಜೀವದುಂಬಲು ಅನುವಾಗುತ್ತಿತ್ತು. ಇಂಜನಿಯರರ ಮಹಾಘೋಷಣೆಯು ಮುಗಿದ ಮೇಲೆ ‘ನನ್ನ ಅಭಿಪ್ರಾಯವೂ ಹೀಗೆಯೆ ಇದೆ.’ ಎಂದು ಕಣ್ಣರಳಿಸಿ, ಕೈಯನ್ನೆತ್ತಿ ಅಭಯವನ್ನು ಸೂಚಿಸಿ, ಅಂತಃಕರಣವುಕ್ಕಿ ಹೇಳಿದನು. ಮತ್ತು ಹೊದ್ದುಕೊಂಡದ್ದನ್ನು ಇನ್ನೂ ಸ್ವಲ್ಪಸರಿಸಿ ಘಾಲೀಬನ ಕವನವೊಂದನ್ನು ಅಂದು ತೋರಿಸಿದನು. ಹಿಂದಿನ ಮಾತಿಗೂ ಅದಕ್ಕೂ ಏನೂ ಸಂಬಂಧವಿದ್ದಿಲ್ಲ. ಆದರೆ ಏನೊ ಅದು ಅವನ ಹೃದಯದಿಂದ ಚಿಮ್ಮಿ ಬಂತು; ಮತ್ತು ಕೇಳಿದವರ ಹೃದಯಕ್ಕೆ ಹೋಗಿ ನೇರವಾಗಿ ಮುಟ್ಟಿತು. ಕವನದಲ್ಲಿಯ ಕರುಣರಸದಿಂದ ಅವರು ತಮ್ಮನ್ನು ತಾವೇ ಮರೆತುಬಿಟ್ಟಿದ್ದರು. ಈ ಕರುಣರಸವೇ ಕಾವ್ಯದ ಶ್ರೇಷ್ಠಗುಣವೆಂದು ಅವರಾಗ ಮನಗಂಡರು. ಕಾವ್ಯವು ಕೇಳುವವನಲ್ಲಿ ಅವನ ನ್ಯೂನತೆಯ ಅರಿವನ್ನು ಹುಟ್ಟಿಸಿ ಅವನ ಅಂತಃಕರಣವನ್ನು ಅರಳಿಸಬೇಕು, ಸಯಗೊಳಿಸಬೇಕು; ಮಾನವಜೀವನವನ್ನೊಂದು ಹೂವಿನಂತೆ ಮಾಡಬೇಕು. ಇಷ್ಟೊತ್ತಿನವರೆಗೆ ತಾಳಮೇಳವಿಲ್ಲದ ಧ್ವನಿಗಳಿಂದ ತುಂಬಿದ್ದ ಆ ಹೊಲಸು ಕೋಣೆಯು ಇದರಿಂದ ಒಮ್ಮೆಲೆ ಸ್ತಬ್ಧವಾಯಿತು. ಆ ಹುಚ್ಚುಚ್ಚು ಒಳಸಂಚುಗಳು, ಆ ಹುಚ್ಚುಚ್ಚು ಹರಟೆ, ಆ ಅತೃಪ್ತಿ, ಆ ಸಿಡಿಮಿಡಿ ಎಲ್ಲವೂ ತಣ್ಣಗಾದವು. ಅಮರಜ್ಯೋತಿಗಳಂತೆ ಹೊಳೆಹೊಳೆವ ಅಮೃತಶಬ್ದಗಳು ಆ ಉದಾಸೀನತೆಯ ಕತ್ತಲೆಯನ್ನು ದೂರಟ್ಟಿದವು. ಹಿಂದುಸ್ತಾನವು ಒಂದೇ ಎಂಬ ಭಾವನೆಯು—ಯುದ್ಧಹೂಡುವದಕ್ಕೆ ಹುರಿದುಂಬಿಸುವ ಕೂಗಿನ ಕರೆಯನ್ನು ಕೇಳಿದಾಗ ಬರುವಂತಹದಲ್ಲ, ಶಾಂತಿರಾಜ್ಯಸ್ಥಾಪನೆಗಾಗಿ ದೇಹವನ್ನು ತೇಯ್ದ ಮಹಾತ್ಮರ ಅಂತಃಸ್ಫೂರ್ತಿಯ ದಿವ್ಯ

ವಾಣಿಯನ್ನು ಕೇಳಿದಾಗ ಉಕ್ಕಿಬರುವ ವಿಶ್ವಕುಟುಂಬದ ದರ್ಶನಬಲದಿಂದ ಮೂಡುವಂತಹದು—ಬಂತು. ಇನ್ನು ಮುಸಲ್ಮಾನರು? ಯಾವಾಗಲೂ ಒಂದೇ ಇದ್ದಾರೆ. ಆದರೆ ಈ ದ್ವೈವೀಭಾವನೆಯು ಅವರಲ್ಲಿರುವದು ಎಷ್ಟು ತ್ರಿಸ ವರೆಗೆ? ಅವರು ಆ ಬಾಗಿಲಿನಿಂದ ಹೊರಗೆ ನೋಡುವ ವರೆಗೆ ಮಾತ್ರ. ಅಲ್ಲಿಂದೇನು? ಎಲ್ಲ ಗಾಳಿಗೆ ಗಾಳಿ, ಬಯಲಿಗೆ ಬಯಲೇ. ಇನ್ನು ಅಝೀಜನು ಹಾಡಿದ ಫಾಲೀಬನೊ, ಅವನ ಮಾತು ಬೇರೆ. ಅವನು ಹಿಂದುಸ್ತಾನದ ಲ್ಲಿದ್ದು ಅವರಿಗೋಸುಗ ತನಗನಿಸಿದ್ದೆಲ್ಲವನ್ನೂ ಈ ರೀತಿಯಾಗಿ ಕಾವ್ಯದಲ್ಲಿ ಎರಕಹೊಯ್ದಿಟ್ಟನು. ಅವನು ನೋಡಿ ಆನಂದಪಟ್ಟು ಹಾಡಿದ ಅಂದಿ 'ಟ್ಯುಲಿಫ್' ಹೂಗಳೂ ಬಿದ್ದುಹೋಗಿವೆ, ಗುಲಾಬಿಹೂಗಳೂ ಬಿದ್ದು ಹೋಗಿವೆ; ಅವುಗಳೊಡನೆ ಫಾಲೀಬನೂ ಬಿದ್ದೂಹೋಗಿದ್ದಾನೆ. ಆದರೆ ಅವನ ಹಾಡಿನಲ್ಲಿ ಹುಟ್ಟಿ, ಬೆಳೆದು ಅರಳಿನಿಂತ 'ಟ್ಯುಲಿಪ್' ಗುಲಾಬಿಹೂಗಳು ಮಾತ್ರ ಚಿರಂಜೀವಿಯಾಗಿ ನವೋನವವಾಗಿ ಇನ್ನೂ ಇವೆ. ಅರಬಸ್ತಾನ ಇರಾಣ, ತುರ್ಕಸ್ತಾನ ಮೊದಲಾದ ಉತ್ತರದ ರಾಜ್ಯಗಳು ಇನ್ನೂ ಅವರ ಹಾಡಿಗೆ ಮೈಮರೆತು ಕೈಚಾಚಿ—ದುಃಖದಿಂದ ನಿಜ, ಯಾಕಂದರೆ ಎಲ್ಲ ಸೌಂದರ್ಯವೂ ದುಃಖಮಯವಾಗಿದೆ—ಮನೆಮನೆಗೂ ಬೀದಿ ಬೀದಿಗೂ ಒಡೆದ ಕನ್ನಡಿಯಂತೆ ತುಂಡುತುಂಡಾಗಿ ಬಿದ್ದ ಚಂದ್ರಪುರವನ್ನು ಈಗಲೂ ಸ್ವಾಗತಿಸುತ್ತವೆ. ಅಲ್ಲದೆ ಚಂದ್ರಪುರವೊಂದು ರಾಷ್ಟ್ರವೆಂದೂ ಅದು ಇಡಿಯಾಗಿ ಒಂದೇ ಇದೆಯೆಂದೂ ಸಾರಿ ಹೇಳುತ್ತಿವೆ.

ಈಗ ಕೂಡಿದವರಲ್ಲಿ ಹಮೀದುಲ್ಲಾನೊಬ್ಬನೆ ಕಾವ್ಯದಲ್ಲಿ ಪರಿಣತ ಮತಿಯಾಗಿದ್ದನು. ಉಳಿದವರೆಲ್ಲ ಔರಂಗಜೇಬನ ವಂಶದವರೇ! ಅವರ ಮನಸ್ಸೆಂದರೆ ಸಹರಾರಣ್ಯವಿದ್ದಂತಿತ್ತು. ರಸ ಹುಟ್ಟುವಂತೆಯೆ ಇಲ್ಲ. ಆದರೂ ಅವರು ಬಹಳ ತಾಳ್ಮೆಯಿಂದ ಕುಳಿತು ಕೇಳುತ್ತಿದ್ದರು. ಯಾಕಂದರೆ ಸಾಹಿತ್ಯಕ್ಕಿನ್ನೂ ಅವರ ಸುಧಾರಕ ತತ್ವದಿಂದ ನೋಡಚೀಟಿ ಬಂದಿರಲಿಲ್ಲ. ಉದಾಹರಣೆಗಾಗಿ ಆ ಪೋಲೀಸ ಇನ್ಸ್ಪೆಕ್ಟರು. ಅವರು ಅಝೀಜನು ಹೀಗೆ ಕವಿತೆ ಅಂದು ಮಹಾಪಾಪ ಮಾಡಿದನೆಂದೂ ಬಗೆಯಲಿಲ್ಲ; ಅವನ ಹಾಡು ನಡೆದಾಗ ಎಲ್ಲಿಯಾದರೂ ಅದು ತಮ್ಮ ಮನಸ್ಸನ್ನು ಮುಟ್ಟಿ ಈ ಆನಂದ-ಗೀನಂದದಂಥ ಸುಂಕುರೋಗವನ್ನು ಹಚ್ಚಿ-ಗಿಚ್ಚೀತೆಂದು ನಿರ್ಲಿಪ್ತ

ರಾಗಿ ಬೇರೆ ತಮ್ಮದೆ ಚಕ್ಕಂದ ಹರಟೆಯಲ್ಲಿಯೂ ಮಗ್ನರಾಗಲಿಲ್ಲ. ಅವರು ತಮ್ಮ ಮನಸ್ಸನ್ನು ಬರಿದಾಗಿಟ್ಟುಕೊಂಡು ಕುಳಿತಿದ್ದರಷ್ಟೆ. ಇದರಿಂದ ಅವನ ವಿಚಾರಗಳೇ——ಅವು ಕ್ಷುಲ್ಲಕವಿರಬಹುದು—ಮರಳಿ ಅವನ ಮನಸ್ಸನ್ನು ಹೊಕ್ಕಕೂಡಲೆ ಅವುಗಳಿಗೊಂದು ಹೊಸತನ ಹೊಸಸವಿ ಬಂದುಬಿಡುತ್ತಿತ್ತು. ಈ ಕಾವ್ಯದಿಂದೇನು ಯಾರಿಗೂ ಏನೂ ಒಳಿತಾಗಿದ್ದಿಲ್ಲ. ಆದರೆ ಅದೊಂದು ಸುಮ್ಮನೆ ನೆನಪುಕೊಡುವ ಕುರುಹಾಗಿತ್ತು, ಸೌಂದರ್ಯದ ದೈವೀಮುಖದ ವಾಣಿಯಾಗಿತ್ತು; ಸತ್ಯಲೋಕ ಆನಂದಲೋಕಗಳನ್ನು ಒಂದುಗೂಡಿಸುವ ಕೋಗಿಲೆಯಾಗಿತ್ತು. ಕೃಷ್ಣನಿಗೆ ಮೊರೆಯಿಟ್ಟು ಕೂಗಿದ ಕರೆಯಕಿಂತ ಹೆಚ್ಚು ಅಸ್ಪಷ್ಟವಾಗಿದ್ದರೂ ಅದು ನಮ್ಮ ಸಂಕುಚಿತಜೀವನದ ಬೇಸರವನ್ನೂ ವಿಭಕ್ತತೆಯನ್ನೂ ಎಂದೂ ಬಾರದಿದ್ದರೂ ಎಂದೂ ಬೇಸರಾಗದ ಆ ಗೆಳೆಯನ ಅವಶ್ಯಕತೆಯನ್ನೂ ಹೊರಗೆಡವಿತು. ಆದರೆ ಅದೇ ಹಾಡು ಅಝೀಜನನ್ನು ಮಾತ್ರ ಮತ್ತೆ ಹೆಣ್ಣುಮಕ್ಕಳ ವಿಚಾರಕ್ಕೆ ಹಚ್ಚಿತು. ಈ ಸಲ ಸ್ವಲ್ಪ ಬೇರೆ ರೀತಿಯಾಗಿ; ಮೊದಲಿನಕ್ಕಿಂತಲೂ ಕಡಿಮೆ ನಿರ್ದಿಷ್ಟವಾಗಿ; ಹೆಚ್ಚು ಉತ್ಕಟವಾಗಿ. ಕಾವ್ಯವು ಒಮ್ಮೊಮ್ಮೆ ಅವನ ಮೇಲೆ ಈ ತರಹದ ಪರಿಣಾಮವನ್ನೂ ಮಾಡುತ್ತಿತ್ತು. ಒಮ್ಮೊಮ್ಮೆ ಅದು ಅವನ ಬರಿ ಆಶೆಆಕಾಂಕ್ಷೆಗಳನ್ನೂ ಹೆಚ್ಚಿಸುತ್ತಿತ್ತು. ಇವೆರಡರಲ್ಲಿ ಯಾವ ಪರಿಣಾಮವು ಪ್ರಾರಂಭವಾಗಬಹುದೆಂದು ಅವನಿಗೆ ಮೊದಲಿಗೆ ಗೊತ್ತಾಗುತ್ತಿದ್ದಿಲ್ಲ. ಇದಕ್ಕಾಗಲಿ ಅಥವಾ ತನ್ನ ಜೀವನದಲ್ಲಿ ಮತ್ತಿನ್ನಾವದಕ್ಕೂ ಆಗಲಿ ಅವನಿಗೊಂದು ನಿಯಮವನ್ನು ಹುಡಿಕೊಳ್ಳಲಿಕ್ಕೇ ಸಾಧ್ಯವಾಗಿದ್ದಿಲ್ಲ.

ಹಮೀದುಲ್ಲಾ ಬರುವಾಗ ದಾರಿಯ ಮೇಲೆಯೆ ಇದ್ದ ದೇಶಬಕ್ತರ ಒಂದು ಉಪದ್ಯಾಪಿಸಂಘದ ಕಮಿಟಿಗೆ ಹೋಗಿದ್ದನು. ಆ ಸಂಘವು ಒಟ್ಟಿನಲ್ಲಿ ರಾಷ್ಟ್ರೀಯಮನೋವೃತ್ತಿಯದಿತ್ತು. ಹಿಂದುಗಳೂ ಮುಸಲ್ಮಾನರೂ ಇಬ್ಬರು ಶೀಖರೂ ಇಬ್ಬರು ಪಾರ್ಶಿಗಳೂ ಒಬ್ಬ ಜೈನನೂ ಒಬ್ಬ ದೇಶಿ ಕ್ರಿಶ್ಚನ್ನನೂ ಅದರಲ್ಲಿ ಕೂಡಿ ಸ್ವಾಭಾವಿಕವಾಗಿರುವದರಕಿಂತ ಹೆಚ್ಚಾಗಿ ಒಬ್ಬರನ್ನೊಬ್ಬರು ಪ್ರೀತಿಸಲು ಹವಣಿಸುತ್ತಿದ್ದರು. ಇಂಗ್ಲೀಷರನ್ನು ಬಯ್ಯುವವರೆಗೆ ಎಲ್ಲರೂ ಒಂದಾಗುತ್ತಿದ್ದರು; ಮತ್ತು ಎಲ್ಲವೂ ಸರಿಯಾಗಿ ನಡೆಯುತ್ತಿತ್ತು. ಆದರೆ ಅದರಿಂದ ಸುಸಂಘಟಿತ ಕಾರ್ಯವೇನಾದರೂ ಆಗಿತ್ತು ಎನ

ಬೇಕೇ ? ಏನೂ ಇಲ್ಲ. ಇಂಗ್ಲೀಷರು ಹಿಂದುಸ್ಥಾನವನ್ನು ಬಿಟ್ಟುಹೋದರೆ ಈ ಸಂಘವೂ ಕಣ್ಮರೆಯಾಯಿತೆಂದೇ ತಿಳಿಯಬೇಕು. ತನ್ನ ಆಪ್ತನಾದ ಪ್ರೀತಿಯ ಅಝೀಜನು ಈ ಜೀವನವನ್ನೂ ಅದಕ್ಕೆ ತಾರಕಮಂತ್ರದಂತಿದ್ದ ಶೀಲವನ್ನೂ ಕೂಡಿಯೆ ಹಾಳುಮಾಡುವ ಈ ರಾಜಕಾರಣದಲ್ಲಿ ಬೀಳದಿದ್ದದ್ದನ್ನೂ ನೋಡಿ ಸಂತೋಷಬಟ್ಟನು. ಹಮೀದುಲ್ಲಾನಿಗೆ ಆಗ ತನ್ನ ಕೆಂಬ್ರಿಜಿನಲ್ಲಿಯ ಜೀವನವು ದುಃಖತುಂಬಿಕೊಂಡ ರಮ್ಯಕಾವ್ಯದಂತೆ ನೆನಪಿಗೆ ಬಂತು. ಇಪ್ಪತ್ತು ವರುಷಗಳ ಹಿಂದೆ ಅವನು ಅದೆಷ್ಟು ಸುಖಿಯಾಗಿದ್ದನಲ್ಲಿ ! ಬ್ಯಾನಿಸ್ಟರ ದಂಪತಿಗಳ ಆಶ್ರಮದಲ್ಲಿ ಈ ರಾಜಕಾರಣ ತೊತ್ತಿನಂತಿತ್ತು. ಆಟ, ದುಡಿತ, ಸತ್‌ಸಹವಾಸ ಇವೇ ಅಲ್ಲಿಯ ರಾಷ್ಟ್ರಜೀವನದ ಹಾಸು ಹೊಕ್ಕಾಗಿದ್ದವು. ಆದರೆ ಇಲ್ಲಿಯ ರಾಷ್ಟ್ರಜೀವನದಲ್ಲಿದ್ದದ್ದು ಭಯ, ಕುತಂತ್ರ, ಹಿಂದೆ ನಿಂತು ಆಟವಾಡಿಸುವದು ! ಅವನು ಸೈಯದ್ ಮುಹಮ್ಮದ ಮತ್ತು ಹಕ್ಕರನ್ನು—ಅವರು ತನ್ನ ಜೊತೆಗೇ ಬಂದಿದ್ದರೂ—ನಂಬಲಾರದೆ ಹೋದನು; ಇನ್ನೂ ಆ ವಿದ್ಯಾರ್ಥಿಯಂತೂ ಕೇಳುವದೇನು, ಹೇಳು ಇದ್ದಂತೆ ಹೇಳು.

'ಅಝೀಜ, ಅಝೀಜ, ಹೊತ್ತಾಯಿತು; ನಾವಿನ್ನು ಹೋಗಲೇ ಬೇಕು. ಬೇಗನೆ ನೆಟ್ಟಗೆ ಮಾಡಿಕೋ; ಯಾಕಂದರೆ ನೀನಿಲ್ಲದಿದ್ದರೆ ನಮ್ಮ ಗುಂಪೇ ಮೂಲಿಗುಂಪಾಗುವದು ?' ಎಂದು ಬಾಗಿ ಹೇಳಿದನು.

'ಆಗಲಿ, ನಾನು ನಿಮ್ಮ ಈ ಅಂತಃಕರಣದ ಮಾತುಗಳನ್ನು ಮರೆಯುವಂತಿಲ್ಲ.' ಎಂದು ಅಝೀಜನು ಉತ್ತರಕೊಟ್ಟನು.

'ಆಯಿತು, ಅವಕ್ಕೆ ನಮ್ಮವಿಷ್ಟು ಕೂಡಿಸು.' ಎಂಜನಿಯರನೆಂದನು.

'ಒಳ್ಳೇದು, ಸೈಯದ್ ಮುಹಮ್ಮದ ನಾನು ಹಾಗೇ ಮಾಡುತ್ತೇನೆ.'

'ಮತ್ತು ನನ್ನವು; ಮತ್ತು ನನ್ನವು ಸರ್' ಎಂದು ಉಳಿದವರೂ ಒಳಿತುಮಾಡಲಿಕ್ಕೆ ತಮ್ಮ ತಮ್ಮ ಶಕ್ತಿಯಿದ್ದಷ್ಟು ಉದ್ಬುದ್ಧರಾಗಿ ಕೂಗಿದರು. ಫಲ ಬರಲಿ, ಬಿಡಲಿ, ಅವರಾಡಿದ ಮಾತುಗಳು ನಂದದಿರುವ ಸಣ್ಣ ಜ್ವಾಲೆಗಳವು ! ಆ ಗುಂಪಿನ್ನೂ ಹಾಗೆಯೆ ಹಾಸಿಗೆಯ ಮೇಲೆ ಕುಳಿತು, ಹಸನನು ಓಡಿಹೋಗಿ ಬಜಾರದಿಂದ ತಂದ ಕಬ್ಬನ್ನು ತಿನ್ನಹತ್ತಿತು. ಅಝೀಜನು ಒಂದು ಕಪ್ಪಿನ ತುಂಬ ಮಸಾಲೆಹಾಲನ್ನು ಕುಡಿದನು. ಅಷ್ಟರಲ್ಲಿ

ಇನ್ನೊಂದು ಗಾಡಿಯು ಬಂದ ಸಪ್ಪಳವು ಕೇಳಿಸಿತು. ಆ ಭಯಂಕರ ವ್ಯಕ್ತಿಯಾದ ರಾಮ್‌ಚಂದನ ಸಾರಥ್ಯದಲ್ಲಿ ಡಾಕ್ಟರ ಪನ್ನಾಲಾಲರು ಬಂದರು. ಕೂಡಲೆ ಬೇನೆಸುವರ ಕೋಣೆಯ ವಾತಾವರ್ಣವು ಅಲ್ಲಿ ಪ್ರಸ್ಥಾಪಿತವಾಯಿತು. ರೋಗಿಯು ಮತ್ತೆ ತನ್ನ ರಗ್ಗಿನಲ್ಲಿ ಸೇರಿಕೊಂಡನು.

' ಮಹನೀಯರು ಕ್ಷಮಿಸಬೇಕು. ನಾನು ಮೇಜರ ಕ್ಯಾಲೆಂಡರರ ಆಜ್ಞೆಯ ಪ್ರಕಾರ ವಿಚಾರಮಾಡಿಕೊಂಡು ಹೋಗಲು ಬಂದಿದ್ದೇನೆ ' ಎಂದು ಅವನು ತನ್ನ ಕುತೂಹಲಕ್ಕಾಗಿ ಬಂದಿದ್ದರೂ ಆ ಗವಿಯಲ್ಲಿ ಸೇರಿದ್ದ ಧರ್ಮಮದೋನ್ಮತ್ತರನ್ನು ನೋಡಿ ಕುಗ್ಗಿ ಗಾಬರಿಯಾಗಿ ಹೇಳಿದನು.

ಭೂಮಿಯ ಮೇಲೆ ದಂಡವತ್ ಬಿದ್ದ ಆಕೃತಿಯನ್ನು ತೋರಿಸಿ ಹವಿಊದುಲ್ಲಾನು ' ಇಗೊ, ಇಲ್ಲಿ ಮಲಗಿದ್ದಾನೆ. ' ಎಂದು ಹೇಳಿದನು.

' ಡಾಕ್ಟರ ಅಝೀಜ, ಅಝೀಜ, ನಾನು ಪನ್ನಾಲಾಲ—ವಿಚಾರಿಸಿಕೊಂಡು ಹೋಗಲಿಕ್ಕೆ ಬಂದಿದ್ದೇನೆ. '

ಅಝೀಜನು ನಿರ್ಭಾವದ ತನ್ನ ಮುಖವನ್ನು ಆ ' ಥರ್ಮಾಮೀಟರ 'ಕ್ಕೆ ತೋರಿಸಿದನು.

' ದಯವಿಟ್ಟು ನಿಮ್ಮ ಕೈಯನ್ನಿಷ್ಟು ಕೊಡಿರಿ. ' ಎಂದು ಅವನ ಕೈಯನ್ನು ತೆಗೆದುಕೊಂಡು ಜಂತಿಯಕಡೆಗೆ ಮುಖಮಾಡಿ ಅಲ್ಲಿ ಹಾರಾಡುತ್ತಿದ್ದ ನೊರಜುಗಳನ್ನು ನೋಡಿ ' ಸ್ವಲ್ಪ ಜ್ವರವಿದೆ. ' ಎಂದು ಕೊನೆಗೆ ಸಾರಿದನು.

' ಬಹಳೇನು ಇಲ್ಲವೆಂದು ನನಗೆ ತೋರುತ್ತದೆ. ' ಎಂದು ರಾಮ್‌ಚಂದನು ಸ್ವಲ್ಪ ತಂಟೆಯನ್ನೆಬ್ಬಿಸಬೇಕೆಂದೇ ನುಡಿದನು.

' ಆದರೂ ಸ್ವಲ್ಪ ಇದೆ. ಇನ್ನು ಸ್ವಲ್ಪ ಅವನು ಹಾಸಿಗೆಯ ಮೇಲೆಯೆ ಇರಬೇಕು. ' ಎಂದು ಪನ್ನಾಲಾಲನು ಮತ್ತೆ ಹೇಳಿದನು ; ಮತ್ತು ಥರ್ಮಾಮೀಟರನ್ನು ಜಾಡಿಸಿ ಅದರಲ್ಲಿಯ ಪಾರಜದ ನಿಲುವು ಕೊನೆಮುಟ್ಟಿ ಶೂನ್ಯದಲ್ಲಿ ಲಯವಾಗುವಂತೆ ಮಾಡಿದನು. ತಾನು ಕುದುರೆಯ ಮೇಲಿದ್ದಾಗ ಕುಚೋದ್ಯಮಾಡಿ ತನ್ನನ್ನು ಸಂಕಟಕ್ಕೀಡುಮಾಡಿದ ಆ ಅಝೀಜನನ್ನು ಲವನೆಂದೂ ಸೇರುತ್ತಿರಲಿಲ್ಲ. ಇದೇ ಹೊತ್ತನ್ನು ಸಾಧಿಸಿ ಮೇಜರ ಕ್ಯಾಲೆಂಡರನಿಗೆ ' ಇವನು ಜಡ್ಡಿನ ಸೋಗುಹಾಕಿದ್ದಾನೆ. ' ಎಂದು ತಿಳಿಸಿ ಅವನ

ಮುಯ್ಯಿ ಮುಟ್ಟಿಸಬೇಕೆಂದು ಮನದಲ್ಲಿಯೇ ಮಾಡಿಕೊಂಡನು. ಆದರೆ ತನಗೂ ಒಂದು ದಿವಸ ಹೀಗೇ ಮಾಡಬೇಕಾಗಿ ಬರಬಹುದು ; ಆಗ ? ಇದು ಅಲ್ಲದೆ ಮೇಜರ ಕ್ಯಾಲೆಂಡರರು ಈ ದೇಶೀ ಜನರ ವಿಷಯಕ್ಕೆ ಏನು ಬೇಕಾದಂಥ ಕೆಟ್ಟದ್ದನ್ನು ನಂಬುತ್ತಿದ್ದರೂ ಒಬ್ಬರೊಬ್ಬರ ಮೇಲೆ ಹೇಳಿದ ಚಾಡಿಯನ್ನು ಮಾತ್ರ ಅವರೆಂದೂ ನಂಬುತ್ತಿರಲಿಲ್ಲ ಹೀಗಿರುವಾಗ ಸಹಾನುಭೂತಿ ತೋರಿಸುವದೇ ಉತ್ತಮ ಮಾರ್ಗವೆಂದು ತಿಳಿದು ‘ ಹೊಟ್ಟೆ ಹೇಗಿದೆ ? ತಲೆ ಹೇಗಿದೆ ? ’ ಎಂದು ಅಂತಃಕರುಣದಿಂದ ಕೇಳಿದನು. ಅಲ್ಲಿಂದ ಅಲ್ಲಿಯೇ ಒರಿದಾಗಿ ಬಿದ್ದ ಕಪ್ಪನ್ನು ನೋಡಿ ‘ ನೀವು ಹಾಲು ತೆಗೆದುಕೊಳ್ಳಬಹುದು. ’ ಎಂದೂ ಸೂಚಿಸಿದನು.

‘ ಡಾಕ್ಟರ ಸಾಹೇಬ, ನೀವು ಬಂದದ್ದರಿಂದ ನಮಗೆಷ್ಟೋ ಹಗುರೆನಿಸಿತು. ನೀವು ಬಂದದ್ದು ಬಹಳ ಒಳಿತಾಯಿತು ; ಇದೊಂದು ನಮ್ಮ ಮೇಲೆ ದೊಡ್ಡ ಉಪಕಾರವಾಯಿತು. ’ ಎಂದು ಹಮೀದುಲ್ಲಾನು ಮುಖಸ್ತುತಿ ಮಾಡಿ ಅವನನ್ನು ಉಬ್ಬಿಸಹತ್ತಿದನು.

‘ ಹೆಃ ಹೆಃ ಹಾಗೇನು ಇಲ್ಲ ; ಅದು ನನ್ನ ಕರ್ತವ್ಯವೇ. ’

‘ ನಿಮಗೆಷ್ಟು ಕೆಲಸ ಇರುತ್ತದೆಂಬುದು ನಮಗೆ ಗೊತ್ತಿಲ್ಲವೆ ? ’

‘ ಹೌದು, ಅದೂ ನಿಜ. ’

‘ ಊರಲ್ಲೇನಾದರೂ ಹೊಸ ಬೇನೆ-ಗೀನೆ ಇದೆಯೇನು ?

ಡಾಕ್ಟರನು ಈ ಮಾತಿನಲ್ಲಿ ಅವನು ಏನೊ ಬಲಿಯೊಡ್ಡಿದ್ದಾನೆಂದು ಸಂಶಯಗೊಂಡನು. ಬೇನೆ ಇದೆಯೆಂದಾಗಲಿ ಇಲ್ಲವೆಂದಾಗಲಿ ಹೇಳಿದರೆ ಆಗನ್ನವರು ತಿರುಗಿ ತನ್ನ ಕೊರಳಿಗೇ ಹಾಕಿ ಬೇಕಾದ ಹಾಗೆ ಉಪಯೋಗಿಸಬಹುದೆಂದು ತಿಳಿದು ‘ ಊರೆಂದಮೇಲೆ ಯಾವಾಗಾದರೂ ಯಾವದಾದರೂ ಬೇನೆ ಇದ್ದದ್ದೇ. ನಾನು ಯಾವಾಗಲೂ ಕೆಲಸದಲ್ಲಿ ತೊಡಗಿರುತ್ತೇನೆ, ಅದು ಈ ಡಾಕ್ಟರರ ಸ್ವಭಾವ ಹಃ ಹಃ ಹಃ ’ ಎಂದು ಉತ್ತರಕೊಟ್ಟನು.

‘ ಹೌದು, ಅವರಿಗೆ ಒಂದು ನಿಮಿಷ ಕೂಡ ಅವಕಾಶವಿರುವದಿಲ್ಲ. ಈಗ ಅವರು ಕೂಡಲೆ ಗವ್ಹರ್ನಮೆಂಟ ಕಾಲೇಜಿಗೆ ಹೋಗಬೇಕು. ’ ಎಂದು ರಾಮ್‌ಚಂದನೂ ಅದನ್ನೇ ಎತ್ತಿಹಿಡಿದನು.

‘ ಓಹೋ ! ನೀವು ಪ್ರೊ. ಗೋಡಬೋಲೆಯವರನ್ನು ನೋಡಲಿಕ್ಕೆ ಹೋಗುತ್ತೀರೆಂದು ತೋರುತ್ತದೆ ? ’

ಡಾಕ್ಟರರು ತಮ್ಮ ಉದ್ಯೋಗದ ಗೌರವವನ್ನು ಮುಖದ ಮೇಲೆ ಮೂಡಿಸಿ ಸುಮ್ಮನಿದ್ದರು.

‘ ಅವರ ‘ ಡಾಯೆರಿಯ ’ ಕಡಿಮೆಯಾಗಿರಬಹುದೆಂದು ಕಾಣುತ್ತದೆ ?’

‘ ಸುಧಾರಿಸಹತ್ತಿದ್ದಾರೆ ; ಆದರೆ ಡಾಯೆರಿಯಾದಿಂದಲ್ಲ. ’

‘ ಮತ್ತೇನೂ ಇಲ್ಲ. ನಾವು ಅವರ ವಿಷಯಕ್ಕೆ ಸ್ವಲ್ಪ ಆತುರರಾಗಿದ್ದೇವೆ. ಅವರಿಗೂ ಡಾಕ್ಟರ ಅಝೀಜರಿಗೂ ಬಹಳ ಗೆಳೆತನ. ದಯವಿಟ್ಟು ನೀವಿಷ್ಟು ಅವರ ರೋಗದ ಹೆಸರು ಹೇಳಿದರೆ ಬಹಳ ಉಪಕಾರವಾಗುವದು. ’

ಸ್ವಲ್ಪ ತಡೆದು ಎಚ್ಚರಿಕೆಯಿಂದ ‘ ಹೇಮೋರಾಯಿಡ್ಸ ’ ಎಂದು ನುಡಿದರು.

‘ ಏ ರಫೀ, ನೀನು ಹೇಳಿದ ಕಾಲೆರಾ ಇಷ್ಟೆಲ್ಲ ಮಾಡಿತು. ’ ಎಂದು ಅಝೀಜನು ತಾಳಿಕೊಳ್ಳಲಿಕ್ಕಾಗದೆ ಕಿರಿಚಿಬಿಟ್ಟನು.

‘ ಕಾಲೆರಾ ! ಕಾಲೆರಾ ! ಮುಂದೇನು ? ’ ಎಂದು ಡಾಕ್ಟರರು ಗೊಂದಲದಲ್ಲಿ ಬಿದ್ದು ಕೂಗಿದರು. ‘ ನನ್ನ ರೋಗಿಗಳ ವಿಷಯಕ್ಕೆ ಈ ಸುಳ್ಳು ಸುಳ್ಳು ಸುದ್ದಿಗಳನ್ನು ಯಾರು ಹುಟ್ಟಿಸುತ್ತಾರೆ ? ’

ಹಮೀದುಲ್ಲಾನು ಅಪರಾಧಿಯ ಕಡೆಗೆ ಬೊಟ್ಟುಮಾಡಿ ತೋರಿಸಿದನು.

‘ ಒಮ್ಮೆ ಕಾಲೆರಾ ಎಂದು ಕೇಳುತ್ತೇನೆ, ಇನ್ನೊಮ್ಮೆ ಗಂಟಿನ ಪ್ಲೇಗೆಂದು ಕೇಳುತ್ತೇನೆ; ಸುಳ್ಳಿನ ಎಲ್ಲ ತರವನ್ನೂ ಕೇಳುತ್ತೇನೆ. ಇದು ಎಲ್ಲಿಗೆ ಮುಗಿಯುವದು ? ಎಂದು ಒಮ್ಮೊಮ್ಮೆ ನನಗೆ ನಾನೆ ಪ್ರಶ್ನೆಮಾಡಿಕೊಳ್ಳುತ್ತೇನೆ. ಈಗ ಊರತುಂಬೆಲ್ಲ ಇದೇ ತರಹದ ಸುದ್ದಿಗಳು ! ಏನಾದರೂ ಮಾಡಿ ಇದನ್ನು ಹುಟ್ಟಿಸುವವರನ್ನು ಹುಡುಕಿ ತೆಗೆಯಲಿಕ್ಕೇಬೇಕು ಮತ್ತು ಯೋಗ್ಯರಿಂದ ಅವರಿಗೆ ತಕ್ಕ ಶಿಕ್ಷೆಯಾಗಲೇಬೇಕು. ’

‘ ರಫೀ, ಕೇಳಿದಿಯಾ ಅದನ್ನು ? ಸುಮ್ಮನೆ ನಮ್ಮಲ್ಲಿ ಈ ಸುಳ್ಳುಸುದ್ದಿಗಳನ್ನು ತಂದು ತಂದು ಏಕೆ ತುಂಬುತ್ತೀ ? ’

ಆ ಹುಡುಗನು ತನಗೆ ಸುದ್ದಿಯನ್ನು ಇನ್ನೊಬ್ಬ ಹುಡುಗನು ಹೇಳಿದನೆಂದು ಮೆಲ್ಲಗೆ ಹಾರಿಸಿಕೊಂಡುಬಿಟ್ಟನು. ಮತ್ತು ಸರಕಾರವು ತಮಗೆ ಒತ್ತಾಯದಿಂದ ಓದಲು ಹಚ್ಚಿದ ಆ ಕೆಟ್ಟ ವ್ಯಾಕರಣವು ಶಬ್ದಗಳಿಗೂ ವಿಪರೀತಾರ್ಥಗಳನ್ನು ಕೊಟ್ಟು ಎಂಥ ಚತುರುಕುವಿದ್ಯಾರ್ಥಿಗಳನ್ನೂ ಹೀಗೆ ಅಡ್ಡದಾರಿಗೆ ಹಚ್ಚುತ್ತದೆಂದು ಅದಕ್ಕೆ ಕಾರಣವನ್ನೂ ಕೊಟ್ಟನು.

'ಅಂದರೆ ಡಾಕ್ಟರಿಗೆ ಆರೋಪ ಹೊರಿಸಲು ಇದೊಂದು ದೊಡ್ಡಕಾರಣವೆಂದುಕೊಂಡಿದ್ದೀಯೇನು?' ಎಂದು ರಾಮಚಂದನು ಕೆರಳಿ ನುಡಿದನು.

'ನಾನನ್ನುವದೂ ಹಾಗೇ. ' ಎಂದು ರಂಗಿಗೇರುತ್ತಿರುವ ಮಾತುಗಳನ್ನು ತಪ್ಪಿಸಬೇಕೆಂಬ ಆಶೆಯಿಂದ ಹಮೊದುಲ್ಲಾ ನುಡಿದನು. ಜಗಳ ಒಮ್ಮೆ ಹುಟ್ಟಿತೆಂದರೆ ಬಹುಬೇಗ ಬಹುದೂರ ಹಬ್ಬುತ್ತದೆ. ಆಗಲೆ ಸೈಯುದ ಮತ್ತು ಹಕ್ಕರು ಸಿಟ್ಟಿಗೆದ್ದು ಬಡಿದಾಟಕ್ಕೆ ಏರಿಬರುವ ಸಿದ್ಧತೆಯಲ್ಲಿಯೆ ಇದ್ದಂತೆ ತೋರಿತು. 'ರಫೀ, ನೀನು ಸರಿಯಾಗಿ ಕ್ಷಮೆ ಬೇಡಲಿಕ್ಕೆಬೇಕು. ನಿಮ್ಮ ಕಕ್ಕನ ಇಚ್ಛೆಯೂ ಹಾಗಿದೆಯೆಂದು ನನಗನಿಸುತ್ತದೆ. ನಿನ್ನ ಅಜಾಗರೂಕತೆಯ ಮೂಲಕವೇ ಈ ಸಭ್ಯಗೃಹಸ್ಥನಿಗೆ ಇಷ್ಟೆಲ್ಲ ತೊಂದರೆಯಾಗಿದ್ದರೂ ಇನ್ನೂ ನೀನು ಮಿಟ್ಟಿಮಿಸುಕದಂತೆ ದಿನ್ನಿದೇವರ ಹಾಗೆ ನಿಂತಿದ್ದೀಯಲ್ಲ! ಏನಿದು? ತಪ್ಪಾಯಿತು ಎಂದು ನಿನ್ನ ಬಾಯಿಂದಿನ್ನೂ ಬರಬಾರದೇ?'

'ಹೋಗಲಿ ಬಿಡಿರಿ, ಹುಡುಗ ಇನ್ನೂ' ಎಂದು ಇಷ್ಟಕ್ಕೇ ತುಷ್ಟರಾಗಿ ಡಾಕ್ಟರ ಪನ್ನಾಲಾಲರು ಹೇಳಿದರು.

'ಹುಡುಗರಾದರೇನಾಯಿತು? ಅವರಿಗೆ ಬುದ್ಧೀಕಲಿಸಬೇಕು. ಒಮ್ಮೆ ಚೆನ್ನಾಗಿ ಪಾಠಹಾಕಿ ಕೊಡಬೇಕು.' ಎಂದು ರಾಮ್‌ಚಂದನು ಮತ್ತೆ ಕೆದಕಿದನು.

'ಹಾಗೆ ಪಾಠಹಾಕಿಕೊಟ್ಟು ಬುದ್ಧೀ ಕಲಿಸಬೇಕಾಗಿದ್ದರೆ ನಿಮ್ಮಮಗ ಇನ್ನೂ ನಪಾಸೇಕೆ ಆಗುತ್ತಿದ್ದ?' ಎಂದು ಸೈಯುದ ಮುಹಮ್ಮದನು ಒಮ್ಮಿಂದೊಮ್ಮೆ ಎದ್ದುನಿಂತನು.

'ಓಹೋ! ಹೀಗೇನು? ಇರಬಹುದು. ನಿಮ್ಮ ಹುಡುಗನಂತೆ

ಮುಂದೆ ಹೋಗಲಿಕ್ಕೆ ಅವನಿಗೇನು ' ಅಭ್ಯುದಯ ಮುದ್ರಣಾಲಯ ' ದಲ್ಲಿ ಪ್ರಶ್ನೆಗಳನ್ನು ಹೊರಗೆಡವಲಿಕ್ಕೆ ಯಾರಾದರೂ ಆಪ್ತರಿದ್ದಾರೆಯೇ ? ಅಂಥ ಸುಸಂಧಿ ಅವನಿಗೆಲ್ಲಿಂದ ಬರಬೇಕು ? '

' ನಿಮಗೇನು ಅವರ ಖಟ್ಲೆ ನಡಿಯಿಸಲು ವಕೀಲಿಪತ್ರ ಬರೆದು ಕೊಟ್ಟಿಲ್ಲ ! '

ಅವರ ದನಿ ಏರಿತು. ಒಬ್ಬರನ್ನೊಬ್ಬರು ಸುತ್ತುಸುತ್ತು ಹಾಕಿ ಬೈಯ್ಯ ಲಾರಂಭಿಸಿದರು; ಹಳೇ ಮಾತುಗಳನ್ನು ತೆಗೆದು ಇಬ್ಬರೂ ತಿಪ್ಪೆಕೆದರಹತ್ತಿ ದರು; ಕೊನೆಗೆ ಬಾಯಿಗೆ ಬಾಯಿ ಹೋಗಿ ಕೈಗೆ ಕೈ ಹತ್ತುವದರಲ್ಲಿತ್ತು. ಹಮೊದುಲ್ಲಾ ಮತ್ತು ಪಲ್ನಾಲಾಲ ಇವರು ಅವರನ್ನು ಸಮಾಧಾನಗೊಳಿಸ ಲಿಕ್ಕೆ ಯತ್ನಿಸುತ್ತಿದ್ದರು. ಈ ಗೊಂದಲ ನಡೆದಿರುವಾಗಲೆ ಯಾರೋ ಒಬ್ಬರು ಹೊರಗಿನಿಂದ ' ಅವನಿಗೆ ನಿಜವಾಗಿ ಜಡ್ಡಾಗಿದೆಯೆ, ಇಲ್ಲವೆ ? ' ಎಂದು ಕೇಳುತ್ತ ಒಳಗೇ ಸುಸುಳಿಬಂದರು. ಅವರೇ ಮಿ. ಫೀಲ್ಡಿಂಗರು. ಅವ ರನ್ನು ನೋಡಿ ಎಲ್ಲರೂ ಬುದಿಬುದಿ ಎದ್ದುನಿಂತರು. ಹಸನನು ಅವರಿಗೆ ಮರ್ಯಾದೆ ಮಾಡುವದಕ್ಕೋಸುಗ ಕಬ್ಬಿನ ಗಳವನ್ನು ತೆಗೆದುಕೊಂಡು ನೊರಜುಗಳು ಕೂತಿದ್ದ ಆ ತುಂಡಿಗೆ ಹೊಡೆದನು.

' ಬನ್ನಿ, ಕುಳಿತುಕೊಳ್ಳಿ ' ಎಂದು ಅಝೀಜನು ಉದಾಸೀನನಾಗಿ ನುಡಿ ದನು. ಏನು ಆ ಕೋಣೆ ! ಏನು ಆ ಗುಂಪು ! ಏನು ಆ ಹೋಳೀಹುಣ್ಣಿವೆ ! ನೆಲದ ಮೇಲೆಲ್ಲ ಕಬ್ಬಿನ ಸಿಪ್ಪಿಗಳೇನು ! ಗೋಡೆಗಳಿಗೆಲ್ಲ ಮಸಿ ಸಿಡಿಸಿದ್ದೇನು ! ಇಂಥ ಹೊಲಸುಗೋಡೆಗಳ ಮೇಲೆ ನಗ್ನಚಿತ್ರಗಳು ಅಸ್ತವ್ಯಸ್ತವಾಗಿ ಜೋತುಬಿದ್ದದ್ದೇನು ! ಗಾಳಿಯಿಲ್ಲದೆ ಗವಾಕ್ಷುಚುಚ್ಚುವದೇನು ! ಅಝೀಜನಿ ಗೇನೊ ಹೀಗೆಯೆ ಇದ್ದು ಇಂಥ ಕೆಳಗಿನ ತರಗತಿಯ ಜನರೊಡನೆ ಕಾಲಕಳೆ ಯಬೇಕೆಂದೇನು ಮನಸ್ಸಿರಲಿಲ್ಲ. ಈ ಎಲ್ಲ ಗೊಂದಲದ ಮೂಲಕ ಅವನ ಮನಸ್ಸಿನಲ್ಲಿ ಉಳಿದದ್ದೆಂದರೆ ಆ ರಫಿಯ ವಿಷಯ. ಅಝೀಜನೇ ಅವನನ್ನು ಮೊದಲು ನೋಡಿ ನಕ್ಕು ಎರಡನೆಯವರೂ ನಗುವಂತೆ ಮಾಡಿ ಅವನಿಗೆ ಇಲ್ಲದ ತೊಂದರೆ ಕೊಡುವದಕ್ಕೆ ಅನುವುಮಾಡಿಕೊಟ್ಟಿದ್ದನು. ಅದಕ್ಕಾ ಗಿಯೇ ಈಗ ಆ ಹುಡುಗನನ್ನು ಸಮಾಧಾನಮಾಡಿ ಕಳಿಸಬೇಕೆಂದನು.

‘ ಮಿಸ್ಟರ ಫೀಲ್ಡಿಂಗರು ನಮ್ಮ ಗೆಳೆಯನನ್ನು ಭೆಟ್ಟಿಯಾಗಲಿಕ್ಕೆ ದಯ ಮಾಡಿಸಿದ್ದು ಬಹಳ ಒಳ್ಳೆಯದಾಯಿತು. ನಿಜವಾಗಿಯೂ ತಮ್ಮ ಈ ಮಹಾಕರುಣೆಯಿಂದ ನಮ್ಮ ಹೃದಯವೂ ಬೆಳಗಿತು. ’ ಎಂದು ಪೋಲೀಸ ಇನ್ಸ್ಪೆಕ್ಟರರು ಆದರೋಪಚಾರ ಮಾಡಿದರು.

‘ ಹಾಗೆಲ್ಲ ನೀನು ಅವರಿಗೆ ಇಲ್ಲದ ಉಪಚಾರದ ಮಾತನಾಡಬೇಡ; ಅದು ಅವರಿಗೆ ಸೇರುವದಿಲ್ಲ. ಅವರಿಗೆ ನಿಮ್ಮ ಈ ‘ ಥ್ರಿ ಚೀರ್ಸ್ ’ ಬೇಕಿಲ್ಲ. ಅವರಿರುವವರೊಬ್ಬರೇ. ’ ಎಂದು ಅಝೀಜನು ಒಂದು ಮಾತಿನ ಚಮಕು ಹೊಡೆದು ‘ ರಫೀ, ಇಲ್ಲಿ ಬಾ. ಇಲ್ಲಿ ಕೆಳಗೆ ಕೂಡು. ನೀನು ನಮ್ಮ ಹಮೀದುಲ್ಲಾನ ಕೂಡ ಬಂದದ್ದನ್ನು ನೋಡಿ ನನಗೆ ಬಹಳ ಸಂತೋಷವಾಯಿತು. ನಿನ್ನನ್ನು ನೋಡಿದರೆ ನನಗೆ ಬೇಗನೆ ವಾಸಿಯಾಗಲಿಕ್ಕೆ ಅನುಕೂಲವಾಗುತ್ತದೆ. ’ ಎಂದನು.

‘ ನನ್ನದು ತಪ್ಪಾಯಿತು. ಕ್ಷಮಿಸಿರಿ. ’ ಎಂದು ರಫಿಯು ತನ್ನ ಭದ್ರತೆಯನ್ನು ಕಾಯ್ದುಕೊಳ್ಳುವದಕ್ಕಾಗಿ ಹೇಳಿದನು.

‘ ಒಳ್ಳೇದು ಅಝೀಜ, ನಿನಗೆ ಜಡ್ಡಾಗಿದ್ದುದು ನಿಜವೋ ಸುಳ್ಳೋ ? ’ ಎಂದು ಫೀಲ್ಡಿಂಗನು ಮತ್ತೆ ಕೇಳಿದನು.

‘ ನಾನು ಜಡ್ಡಿನ ಸೋಗು ಹಾಕಿದ್ದೇನೆಂದು ನಿಮಗೆ ಮೇಜರ ಕ್ಯಾಲೆಂಡರರು ಆಗಲೇ ಹೇಳಿರಬೇಕಲ್ಲ ? ’

‘ ಓ ! ಅದು ನಿಜವೇನು ? ’ ಆ ಗುಂಪಿಗೆ ಗುಂಪೇ ನಕ್ಕಿತು ಈ ಮಾತಿಗಾಗಿ.

‘ ಇಂಗ್ಲೀಷ ಮನುಷ್ಯನನ್ನು ಅವನು ಖುಷಿಯಲ್ಲಿದ್ದಾಗ ನೋಡಬೇಕು, ಒಳ್ಳೆ ವಿನೋದಿಯಾಗಿರುತ್ತಾನೆ ? ’ ಎಂದು ಅವರೆಲ್ಲರೂ ಅಂದುಕೊಂಡರು.

‘ ಆ ಜಡ್ಡಿನ ವಿಷಯ ಡಾ. ಪನ್ನಾಲಾಲರನ್ನು ವಿಚಾರಿಸಿ. ’

‘ ನಾನೇನು ಇಲ್ಲಿ ಬಹಳೊತ್ತು ನಿಂತು ನಿಮಗೆ ಬೇಸರ ಹುಟ್ಟಿಸುವದಿಲ್ಲ ? ’

‘ ಅದಾಗದು. ನನ್ನ ಈ ಸಣ್ಣ ಕೋಣೆಯಲ್ಲಿ ಈಗಾಗಲೇ ಆರು ಜನರಿದ್ದಾರೆ. ನೀವೂ ದಯವಿಟ್ಟು ಕುಳಿತುಕೊಳ್ಳಬೇಕು. ’ ಎಂದು ಅಝೀಜನು

ರಫೀಯುಕಡೆಗೆ ಮುಖ ತಿರುಗಿಸಿದನು. ಆ ಹುಡುಗನು ತನ್ನ ಪ್ರಿನ್ಸಿಪಾಲರು ಬಂದದ್ದನ್ನು ನೋಡಿ ಅಂಜಿಬಿಟ್ಟಿದ್ದನು. ಮತ್ತು ತಾನು ಅವನ ವಿಷಯಕ್ಕೆ ಏನೇನೋ ಸುಳ್ಳುಸುದ್ದಿಯನ್ನು ಹಬ್ಬಿಸಲಿಕ್ಕೆ ಹವಣಿಸಿದ್ದನ್ನು ನೆನೆದು ಆದಷ್ಟು ಅಲ್ಲಿಂದ ಅವನು ಜಾರಬೇಕೆನ್ನುವದರಲ್ಲಿದ್ದನು.

'ಅವನಿಗೆ ಜಡ್ಡು ಆಗಿದೆ, ಆಗಿಲ್ಲ;' ಎಂದು ಹಮೀದುಲ್ಲಾ ಅವನಿಗೆ ಸಿಗರೇಟು ಕೊಡುತ್ತ ಹೇಳಿದನು. 'ಮತ್ತೆ ನಾವೆಲ್ಲರೂ ಕೂಡ ಅದೇ ಸ್ಥಿತಿಯಲ್ಲಿಯೆ ಇದ್ದೇವೆಂದರೂ ಅಡ್ಡಿ ಇಲ್ಲ.'

ಫೀಲ್ಡಿಂಗನು ಒಪ್ಪಿದನು. ಅವನಿಗೂ ಆ ಚಪಲ ಚೆಲುವ ಬ್ಯಾರಿಸ್ಟರನಿಗೂ ಒಳ್ಳೆ ಸಲುಗೆ ಬೆಳೆಯಿತು. ಒಬ್ಬರೊಬ್ಬರ ಪರಿಚಯು ಚೆನ್ನಾಗಿ ಆಯಿತು. ಒಬ್ಬರೊಬ್ಬರಲ್ಲಿ ವಿಶ್ವಾಸವೂ ಹುಟ್ಟಿತು.

'ಈ ಇಡೀ ಜಗತ್ತೇ ಸಾಯುತ್ತಿರುವಂತೆ ತೋರುತ್ತದೆ. ಆದರಿನ್ನೂ ಸತ್ತಿಲ್ಲ. ಇದರಿಂದಲೆ ಯಾವುದೋ ಒಂದು ಪರಮೋಪಕಾರಿಯಾದ ಅದ್ಭುತ ಶಕ್ತಿಯು ಇದೆಲ್ಲದರ ಹಿಂದೆ ಇದೆಯೆಂದು ನಾವು ಗ್ರಹಿಸಬೇಕಾಗುತ್ತದೆ. ಅದು ಬೇಕಾದ ಹೆಸರಿನಿಂದಿರಬಹುದು.'

'ಅಹಾ! ಎಂಥ ಸತ್ಯ! ಏನು ದಿವ್ಯ ತತ್ವ!' ಎಂದು ಪೋಲೀಸ ಇನ್‌ಸ್ಪೆಕ್ಟರು ತನ್ನ ಧರ್ಮವನ್ನೇ ಇವರು ಸ್ತುತಿಸುತ್ತಾರೆಂದು ತಿಳಿದು ತಲೆಹಾಕಿದರು.

'ಮಿ. ಫೀಲ್ಡಿಂಗರೂ ಇದು ಸತ್ಯವೆಂದು ತಿಳಿಯುತ್ತಾರೇನು?'

'ಯಾವುದು ಸತ್ಯವೆಂದು? ಜಗತ್ತೆಂದೂ ಸಾಯುವದಿಲ್ಲವೆನ್ನುವದು ನನಗೆ ನಿಶ್ಚಯವಾಗಿ ಗೊತ್ತಿದೆ.'

'ಅಲ್ಲ, ಅಲ್ಲ; ಆ ಅದ್ಭುತ ಶಕ್ತಿ, ಆ ಈಶ್ವರನ ಅಸ್ತಿತ್ವ?'

'ಸರಿ. ನಾನೇನು ಆ ಈಶ್ವರನ ಅಸ್ತಿತ್ವದಲ್ಲಿ ನಂಬುವದಿಲ್ಲ.'

'ಹಾಗಾದರೆ ನೀವು ದೇವರಿದ್ದಾನೆಂದು ಹೇಗೆ ನಂಬುವಿರಿ?' ಎಂದು ಸೈಯದಮುಹಮ್ಮದನು ಕೇಳಿದನು.

'ನಾನು ದೇವರಿದ್ದಾನೆಂದೂ ನಂಬುವದಿಲ್ಲ.'

ಇದರಿಂದ ಆ ಗುಂಪಿನಲ್ಲಿ ಸ್ವಲ್ಪ ಗಡಿಬಿಡಿಯೆದ್ದಿತು. 'ಇದೇ ಉತ್ತರ ಬರುವದೆಂದು ನಾನು ಹೇಳಲಿಲ್ಲವೇ?' ಎನ್ನುವವರಂತೆ ಎಲ್ಲರೂ ಒಬ್ಬರನ್ನೊ

ಬ್ಬರು ಕಣ್ಣುಹಾರಿಸಿ ನೋಡಿದರು. ಅಯ್ಯೋಜನು ದಂಗುಬಡೆದು ಒಂದು ಕ್ಷಣ ಮೇಲೆ ನೋಡಿದನು.

' ಇಂಗ್ಲೆಂಡದಲ್ಲಿ ಈಗ ಬಹಳ ಜನರು ನಾಸ್ತಿಕರಾಗಿದ್ದಾರೆನ್ನುವದು ನಿಜವಾದ ಸಂಗತಿಯೆ ? ' ಎಂದು ಹವಿಾದುಲ್ಲಾ ಕೇಳಿದನು.

' ನೀವು ಆ ಸುಶಿಕ್ಷಿತ ವಿಚಾರವಂತ ಜನರಂದಿರೇನು ? ಅವರೆಂದರೆ ಹೌದು, ಅವದು ನಾಸ್ತಿಕರು ; ಆದರೆ ಆ ಹೆಸರು ಮಾತ್ರ ಅವರ ಮನಸ್ಸಿಗೆ ಬರುವದಿಲ್ಲ. ನಿಜವಾದ ಸಂಗತಿಯೆಂದರೆ ಪಶ್ಚಿಮದೇಶದಲ್ಲಿ ಈಗ ಯಾರೂ ಈ ನಾಸ್ತಿಕ ಆಸ್ತಿಕದ ಜಂಜಾಟವನ್ನು ಹಚ್ಚಿಕೊಳ್ಳುವದಿಲ್ಲ. ಆದರೆ ಅದೇ ಐವತ್ತು ವರುಷಗಳ ಹಿಂದೆ, ನಾನು ನೀವು ಸಣ್ಣವರಿದ್ದಾಗ, ರಾಜ್ಯದ ಜೀವನ ದಲ್ಲಿಯೆ ಗೊಂದಲವೆಬ್ಬಿಸುವಷ್ಟು ತುಂಬಿಕೊಂಡಿತ್ತು. '

' ಮತ್ತೆ ನೀತಿಯೂ ಹಾಗೆಯೆ ಕಡಿಮೆಯಾಗುತ್ತ ನಡೆದಿಲ್ಲವೇ ? '

' ಅದು ನೀವನ್ನುತ್ತೀರಲ್ಲಾ....ಅದರ ಮೇಲೆ....ಹೌದು.. ಹೌದು..ನೀತಿಯೂ ಕಡಿಮೆಯಾಗುತ್ತಿದೆಯೆಂದು ನನ್ನ ಭಾವನೆ....'

' ಈ ಪ್ರಶ್ನೆ ಕೇಳುವದಕ್ಕೆ ಕ್ಷಮಿಸಬೇಕೆಂದು ಮೊದಲೇ ಕೇಳಿಕೊಳ್ಳು ತ್ತೇನೆ. ಅಲ್ಲಿ ಇದೆಲ್ಲ ಹೀಗಿದ್ದದ್ದೆಯಾದರೆ ಇಂಗ್ಲೆಂಡ ದೇಶವು ಹಿಂದುಸ್ಥಾನ ವನ್ನು ವಶದಲ್ಲಿಟ್ಟುಕೊಳ್ಳುವದು ನ್ಯಾಯವೇ ? '

ಎತ್ತ ಸುತ್ತಾಡಿದರೂ ಮತ್ತೆ ಅವರು ಅಲ್ಲಿಗೇ ಬಂದರು, ರಾಜಕಾರ ಣಕ್ಕೆ. ' ಈ ಪ್ರಶ್ನೆಯು ನನ್ನ ಮನಸ್ಸಿಗೆ ಹತ್ತದು. ನಾನೊಂದು ನೌಕರಿ ಗಾಗಿ ಇಲ್ಲಿಗೆ ಬಂದವನು. ಇಂಗ್ಲೆಂಡದ ಕೈ ಇಲ್ಲಿ ಏಕೆ ಇದೆ ? ಅದು ಇಲ್ಲಿ ಇರಬೇಕೋ ಇರಬಾರದೋ ? ಇದರ ಬಗ್ಗೆ ನಾನು ಹೇಳಲಾರೆ. ಅದು ನನಗೆ ಮಿಾರಿದ್ದು. ' ಎಂದು ಸ್ಪಷ್ಟವಾಗಿ ಉತ್ತರವಿತ್ತನು.

' ಚೆನ್ನಾಗಿ ಪ್ರಶಸ್ತಿಯನ್ನು ಪಡೆದ ದೇಶಿ ಜನರಿಗೂ ವಿದ್ಯಾಖಾತೆಯಲ್ಲಿ ನೌಕರಿಗಳು ಬೇಕಾಗಿವೆ. '

' ಹಾಗೆ ನನಗೂ ಅನಿಸುತ್ತದೆ. ಆದರೆ ನಾನು ಮೊದಲು ಬಂದೆ, ಮೊದಲು ಸಿಕ್ಕಿತು. ' ಎಂದು ಫೀಲ್ಡಿಂಗನು ಮುಗುಳುನಗೆ ನಗುತ್ತ ಹೇಳಿದನು.

' ಮತ್ತೆ ಕ್ಷಮಿಸಬೇಕು ಈ ಪ್ರಶ್ನೆಗೆ. ಯೋಗ್ಯ ಹಿಂದೀಜನರು ತೆರವಿರಲಿಕ್ಕೆ ಇಂಗ್ಲೀಷ ಮನುಷ್ಯನು ಬಂದು ಜಾಗಹಿಡಿದುಕೊಂಡು ಕೂಡು

ವದು ಯೋಗ್ಯವೇ ? ನ್ಯಾಯವೇ ? ಕ್ಷಮಿಸಬೇಕು, ನನಗೆ ವ್ಯಕ್ತಿ ವಿಷಯ ವಾಗಿ ಏನೂ ಮಾತಾಡುವದಿಲ್ಲ. ಸ್ವತಃ ನಮಗೆ ತಾವಿಲ್ಲದ್ದುದರಿಂದ ಬಹಳ ಸಂತೋಷವೆನಿಸುತ್ತಿದೆ. ಮತ್ತು ಹೀಗೆ ಮನಬಿಚ್ಚಿ ಮಾತನಾಡುವದಕ್ಕಾ ದರೂ ತಾವಿಲ್ಲಿ ಒಂದು ಸಮಯವನ್ನು ಕಲ್ಪಿಸಿಕೊಡುತ್ತಿದ್ದೀರಿ. ಅದರ ಉಪಯೋಗ ಅಷ್ಟಿಷ್ಟೆಂದಲ್ಲ '

ಈ ತರಹದ ಮಾತಿಗೆಲ್ಲ ಒಂದೇ ಒಂದು ಉತ್ತರವಿದೆ. ' ಇಂಗ್ಲೆಂಡವು ತನ್ನ ಕಲ್ಯಾಣಕ್ಕಾಗಿ ಹಿಂದುಸ್ತಾನವನ್ನು ಕೈಯಲ್ಲಿಟ್ಟುಕೊಂಡಿದೆ. ' ಆದರೆ ಫೀಲ್ಡಿಂಗನಿನ್ನೂ ಇದನ್ನು ಹೇಳಲಿಕ್ಕೆ ಹಿಂಜರಿಯುತ್ತಿದ್ದನು. ಪ್ರಾಮಾಣಿಕ ತನದ ಉತ್ಸಾಹವು ಅವನನ್ನಾಗಲೆ ನಿರ್ವಿಣ್ಣಮಾಡಿಬಿಟ್ಟಿತ್ತು. ' ನನಗೂ ಇಲ್ಲಿರುವದು ಸಂತೋಷವೆನಿಸುತ್ತಿದೆ. . . . ಇದೇ ನನ್ನ ಉತ್ತರ. . . . ಇದೇ ನನ್ನ ಕಾರಣ. . . . ಉಳಿದ ನ್ಯಾಯಾನ್ಯಾಯದ ವಿಷಯಕ್ಕೆ ನಾನೇನೂ ಹೇಳಲಾರೆ. . . . ಹಾಗೆ ನೋಡಿದರೆ ನಾನು ಹುಟ್ಟಿದ್ದೇ ನ್ಯಾಯವಿರಲಿಕ್ಕಿಲ್ಲ. . ಯಾಕಂದರೆ ನಾನು ಉಸಿರಾಡಿಸಿದಾಗೆಲ್ಲ ಇನ್ನೊಬ್ಬರ ಗಾಳಿಯನ್ನೇ ತೆಗೆದು ಕೊಳ್ಳುತ್ತೇನೆ. . . . ಅಲ್ಲವೇ ? . . . ಆದರೂ ನಾನು ಹುಟ್ಟಿದ್ದಕ್ಕೇನೂ ನನಗೆ ಕೆಡಕೆನಿಸಿಲ್ಲ. . . . ನಾನಿಲ್ಲಿ ಬಂದದ್ದೂ ಸಂತೋಷವೇ ...ಮನುಷ್ಯನು ಎಂಥ ಬದ್ಮಾಷನಿದ್ದರೂ ಅವನಿಂದ ಕೊನೆಗೆ ಸುಖವಾಗುತ್ತಿದ್ದರೆ ಅದೇ ಒಂದು ಸಾಫಲ್ಯ. . . .'

ಹಿಂದೀ ಜನರಿಗೆಲ್ಲ ಪರಮಾಶ್ಚರ್ಯವಾಯಿತು. ಈ ವಿಚಾರಸರಣಿ ಯೇನು ಅವರಿಗೆ ತೀರ ಹೊಸದಾಗಿರಲಿಲ್ಲ. ಆದರೆ ಅವನು ಆ ಶಬ್ದಗಳನ್ನುಪ ಯೋಗಿಸಿದ ಧ್ವನಿಯು ರೀತಿಯು ಮಾತ್ರ ಸ್ವಲ್ಪ ಕೆರಳಿಸುವಂತಹದಿತ್ತು. ನ್ಯಾಯ ಮತ್ತು ನೀತಿಗಳಿಗೆ ಮರ್ಯಾದೆಕೊಟ್ಟು ಅವನು ಮಾತನಾಡಿದ ಕೆಲ ವಾಕ್ಯಗಳನ್ನು ಬಿಟ್ಟರೆ ಉಳಿದೆಲ್ಲ ಅವನ ಮಾತುಗಳೂ ಅವರಿಗೆ ಕರ್ಣ ಕಠೋರವಾಗಿಯೂ ಮನಸ್ಸನ್ನು ಕಲಕುವಂತಹವಾಗಿಯೂ ಪರಿಣಮಿ ಸಿದವು. ಏನೋ ಅವನೊಡನೆ ಗೆಳೆತನದ ಪ್ರೀತಿಯನ್ನು ತೋರಿಸುವದಕ್ಕಾಗಿ ಆಡಿದ ಮಾತುಗಳನ್ನು ಬಿಟ್ಟರೆ ಅವರು ಆಡುವದಕ್ಕೂ ಅವರಿಗೆ ಅನಿಸಿದ್ದಕ್ಕೂ ಏನೂ ಸಂಬಂಧವಿರಲಿಲ್ಲ. ಅವರೆಲ್ಲರ ಮನಸ್ಸೆ ಸಂಪ್ರದಾಯಬದ್ಧವಾಗಿ

ಬೆಳೆದದ್ದು. ಆ ಸಂಪ್ರದಾಯಗಳನ್ನೇ ಅಣಕಿಸಿ ತಿರಸ್ಕರಿಸಿಬಿಟ್ಟದ್ದರಿಂದ ಅವರ ಮನಸ್ಸೇ ಕುಸಿದುಬಿದ್ದಂತಾಗಿತ್ತು.

' ಹಿಂದುಸ್ತಾನದಲ್ಲಿರಲಿಕ್ಕೆ ಯಾವ ಇಂಗ್ಲೀಷರಿಗೆ ಸಂತೋಷವೆನಿಸುವದಿಲ್ಲವೊ ಅವರಿಗೇನಾದರೂ ನೆವ ಇದೆಯೇ ? ' ಎಂದು ಕೇಳಿ ಹಮೀದುಲ್ಲಾನೆ ಅತಿ ಜಾಣ್ಮೆಯಿಂದ ಮಾತಿನೆಳೆಯನ್ನು ಮುಂದೆ ಜಗ್ಗಿದನು.

' ಅವರಿಗೇನು, ಯಾವದೂ ಇಲ್ಲ; ಅವರನ್ನು ಬೇಕಾದಹಾಗೆ ಹೊರಗೆ ದಬ್ಬಿರಿ. '

' ಉಳಿದವರಿಂದ ಅವರನ್ನಷ್ಟೇ ಹುಡುಕಿತೆಗೆಯುವದು ಬಹು ಕಷ್ಟ. ' ಎಂದು ನಕ್ಕನು.

' ಕಷ್ಟದಕಿಂತಲೂ ಅನ್ಯಾಯ. ' ಎಂದು ರಾಮಚಂದನು ನುಡಿದನು. ' ಯಾವ ಹಿಂದೀ ಗೃಹಸ್ಥನೂ ಹೀಗೆ ಹೊರಗೆ ದಬ್ಬುವದು ಯೋಗ್ಯವೆಂದು ಒಪ್ಪುವದಿಲ್ಲ. ಇಲ್ಲಿಯೆ ನಮಗೂ ಉಳಿದ ರಾಷ್ಟ್ರಗಳಿಗೂ ಭೇದವಾಗುವದು! ನಾವಷ್ಟು ಆಧ್ಯಾತ್ಮಿಕವೃತ್ತಿಯವರು ! '

' ಹೌದು, ಹೌದು. ತೀರ ಸತ್ಯವಾದ ಮಾತು. ' ಎಂದು ಪೋಲೀಸ ಇನ್ಸ್ಪೆಕ್ಟರರು ತಮ್ಮ ಒಪ್ಪಿಗೆಯನ್ನಿತ್ತರು.

' ಹಕ್ಕರೆ, ಇದು ನಿಜವೇ? ನಾವಷ್ಟು ಆಧ್ಯಾತ್ಮಿಕವೃತ್ತಿಯವರೆಂದು ನನಗೇನು ಅನಿಸುವದಿಲ್ಲ. ಇಷ್ಟೇ, ನಾವು ಸುಸಂಘಟಿತರಾಗಲಾರೆವು, ನಾವೆಷ್ಟು ಮಾತನಾಡಿದರೂ ಅದು ಇಲ್ಲಿಗೇ ಬರುವದು. ನಮಗೆ ನಿಯತ ಹೊತ್ತಿಗೆ ಕೆಲಸಮಾಡಿ ಗೊತ್ತಿಲ್ಲ. ರೇಲ್ವೆಗಾಡಿಗಳನ್ನು ತಪ್ಪಿಸಿಕೊಳ್ಳುವದಂತೂ ನಮಗಿನ್ನೂ ಬಿಟ್ಟಿಲ್ಲ. ಇದೆಲ್ಲ ನಮ್ಮ ಭಾರತದ ಆಧ್ಯಾತ್ಮವೃತ್ತಿಯ ಫಲ ಅಲ್ಲವೇ ? ಇನ್ನಿದಕ್ಕಿಂತ ಹೆಚ್ಚಿನದೇನು ಬೇಕು ? ನಾನು, ನೀವು ಇದೇ ಹೊತ್ತಿಗೆ ಆ ದೇಶಭಕ್ತರ ಕಮಿಟಿಯಲ್ಲಿರಬೇಕಾಗಿತ್ತು ; ಆದರೆ ಇಲ್ಲ. ನಮ್ಮ ಗೆಳೆಯ ಡಾಕ್ಟರರು ಇಷ್ಟರಲ್ಲಿಯೆ ತಮ್ಮ ರೋಗಿಗಳ ಹತ್ತಿರ ಇರಬೇಕಾಗಿತ್ತು ; ಆದರೆ ಇಲ್ಲ. ನಮ್ಮದು ಹೀಗೆಯೆ ಕಾಲದ ಕೊನೆಯವರೆಗೂ ನಡೆಯತಕ್ಕದ್ದೇ. . . . '

' ಈಗಿನ್ನೂ ಆ ಕಾಲದ ಕೊನೆ ಬಂದಿಲ್ಲ, ಯಾಕಂದರೆ ಇದೇ ಹತ್ತೂವರೆ ಗಂಟೆಯಾಗಿದೆ. ಹಃ ಹಃ ' ಎಂದು ಡಾಕ್ಟರ ಲಾಲರು ಸ್ವಸ್ಥಚಿತ್ತರಾಗಿ

ಹೇಳಿದರು. ' ಸಭ್ಯಗೃಹಸ್ಥರೇ ನನಗೆ ಸ್ವಲ್ಪ ಮಾತಾಡಲಿಕ್ಕೆ ನೀವು ಅವ ಕಾಶ ಕೊಟ್ಟರಿ.... ಎಂಥ ಕುತೂಹಲ ಹುಟ್ಟಿಸುವ ಮಾತುಗಳವು !.. ಮಿಸ್ಟರ ಫೀಲ್ಡಿಂಗರಿಗೆ ಎಷ್ಟು ಕೃತಜ್ಞತೆಯನ್ನರ್ಪಿಸಿದರೂ ಕಡಿಮೆಯೆ.. ಅವರ ಅನುಭವರಸವೂ ಅವರ ತೂಕ ತಪ್ಪದ ಮಾತಿನ ರೀತಿಯೂ ಬೆಲೆ ಕಟ್ಟುವ ಅವರ ಜಾಣ್ಮೆಯೂ ಇವು ನಮ್ಮ ಮಕ್ಕಳಿಗೆಲ್ಲ ಸಂಜೀವನಿಯಂತೆ ಜೀವದುಂಬಿಸುವವು....'

' ಡಾಕ್ಟರ ಲಾಲ್ ! '

' ಡಾಕ್ಟರ ಅಝೀಜ ? '

' ನೀವು ನನ್ನ ಕಾಲಮೇಲೆ ಕುಳಿತಿದ್ದೀರಿ ! '

' ಕ್ಷಮಿಸಬೇಕು ; ಆದರೆ ಅದನ್ನೇ ಕೆಲವರು ನಿಮ್ಮ ಕಾಲು ನಮಗೆ ಒದೆಯುತ್ತಿದೆಯೆನ್ನಬಹುದಲ್ಲವೆ ? '

' ಇತ್ತ ಬನ್ನಿರಿ. ಏನೇ ಆಗಲಿ. ನಾವು ರೋಗಿಗೆ ಸುಮ್ಮನೆ ಶ್ರಮ ಬಡಿಸುತ್ತಿದ್ದೇವೆ. ' ಎಂದು ಫೀಲ್ಡಿಂಗನು ಅವರನ್ನು ಕರೆದನು. ಅಲ್ಲಿಂದ ಅವ ರೆಲ್ಲ ಒಬ್ಬರಹಿಂದೊಬ್ಬರು—ನಾಲ್ವರು ಮುಸಲ್ಮಾನರು, ಇಬ್ಬರು ಹಿಂದು ಗಳು, ಒಬ್ಬ ಆಂಗ್ಲೇಯನು—ಹೀಗೆ ಸಾಗಿ ಬಂದರು. ಬೇರೆ ಬೇರೆ ಕಡೆಗೆ ನೆರಳಿನ ತುಂಡುಗಳಲ್ಲಿ ನಿಂತುಕೊಂಡಿದ್ದ ಅವರವರ ಗಾಡಿಗಳನ್ನು ಕರೆತರುವ ವರೆಗೆ ಅವರು ಅಲ್ಲಿಯೆ ಹೊರಂಗಳದಲ್ಲಿ ನಿಂತರು.

' ನಿಮ್ಮ ವಿಷಯಕ್ಕೆ ಅಝೀಜನಿಗೆ ಬಹಳ ಆದರವಿದೆ. ಬೇನೆಬಿದ್ದುದ ರಿಂದ ಅವನು ಹೆಚ್ಚು ಮಾತನಾಡಲಿಲ್ಲವಷ್ಟೆ. '

' ನನಗದು ಪೂರ್ತಿಯಾಗಿ ತಿಳಿಯಿತು. ' ಎಂದು ಫೀಲ್ಡಿಂಗನು ತಾನು ಭೆಟ್ಟಿಗೆ ಬಂದುದಕ್ಕೆ ನಿರಾಶೆಹೊಂದಿ ನುಡಿದನು. ' ಸುಮ್ಮನೆ ಇವನು ತನ್ನನ್ನು ಅಗ್ಗಮಾಡಿಕೊಳ್ಳುತ್ತಾನೆ ' ಎಂಬ ಅವನ ಮೇಲಿನ ಕ್ಲಬ್ಬಿನ ಟೀಕೆಯು ಅವನ ಮನೋಭೂಮಿಕೆಯ ಮೇಲೆ ಹಾಯ್ದುಹೋಯಿತು. ಅವನಿಗೆ ತನ್ನ ಕುರುರೆಯನ್ನು ತರಿಸಿಕೊಳ್ಳುವದು ಆಗಲಿಲ್ಲ. ಇದೇ ಮೊದಲು ಭೆಟ್ಟಿಯಾದ್ದರಿಂದ ಅಝೀಜನ ವಿಷಯವಾಗಿ ಅವನಿಗೆ ಬಹಳ ಆದರವಿತ್ತು; ಮತ್ತು ಅದು ಇನ್ನೂ ಬೆಳೆಯಬೇಕೆಂದೂ ಅವನ ಆಶೆ.

—

## ಪ್ರಕರಣ ೧೦

ಬೇಸಿಗೆಯು ಬಿಸಿಲಿನ ಕಾವೂ ಅವರ ಮಾತಿನ ಕಾವೂ ಎರಡೂ ಕೂಡಿಯೆ ಕೊನೆಗೆ ಅಲ್ಲಿಂದ ಜಾಗ ಬಿಟ್ಟು ಹೊರಗೆ ಬಂದವು. ಅವರ ಕೊನೆ ಮೊದಲಿಲ್ಲದ ಅನಿರ್ಣಯದ ಮಾತುಕತೆ ಅಲ್ಲಿ ನಡೆದಾಗ ಹೊರಗೆ ಮಹಾ ಪ್ರಳಯವಾದಂತಾಗಿ ಮಾನವಜಾತಿಯನ್ನೇ ಉಡುಗಿಕೊಂಡು ಹೋದಂತೆ ಬೀದಿಗಳೆಲ್ಲ ರಣಗುಟ್ಟುತ್ತಿದ್ದವು. ಅಝೀಜನ ಬಂಗ್ಲೆಯು ಎದುರಿಗೆ ಅರ್ಧ ಪರ್ಧ ಕಟ್ಟಿದ ಒಂದು ದೊಡ್ಡಮನೆಯಿತ್ತು. ಅದು ಇಬ್ಬರು ಜೋತಿಷಿ ಅಣ್ಣತಮ್ಮಂದಿರದು. ಅಲ್ಲಿ ಒಂದು ಇಣಚಿಯು ತಲೆಕೆಳಗೆ ತನ್ನ ಹೊಟ್ಟೆ ಯನ್ನು ಸುಡುತ್ತಿರುವ ಸಾರಗಂಬಕ್ಕೆ ಹತ್ತೊತ್ತಿ, ತನ್ನ ಚಿಕ್ಕ ಬಾಲವನ್ನು ಮೇಲೆಕೆಳಗೆ ಮಾಡುತ್ತ, ತೂಗುಬಿದ್ದಿತ್ತು. ಆ ಮನೆಯಲ್ಲಿದ್ದ ಒಕ್ಕಲೆಂದರೆ ಅದೊಂದೇ ಎಂದು ತೋರಿತು. ಅದರ ಚಿರಗುಡುವದು ಅನಂತತಗೆ ಹೊಂದಿಕೆ ಯಾಗಿತ್ತಾದರೂ ಇಣಚಿಗಳಿಗೇ ಹೊರತು ಇನ್ನಾರಿಗೂ ಚಿತ್ತಾಕರ್ಷಕ ವಾಗಿದ್ದಿಲ್ಲ. ಅಷ್ಟರಲ್ಲಿ ಧೂಳಿ ತುಂಬಿದ ಇನ್ನೊಂದು ಗಿಡದಿಂದ ಬೇರೆ ದನಿಯು ಕೇಳಿಬಂತು. ಕೆಂಪು ಪಕ್ಷಿಗಳು ಹುಳಗಳನ್ನು ಹುಡುಕುವದರ ಸಲುವಾಗಿ ಅಲ್ಲಿ ಹಾರಾಡುತ್ತ ಕಿಲಿಬಿಲಿ ಮಾಡುತ್ತಿದ್ದವು. ಅಲ್ಲದೆ ಕಲ್ಲು ಕುಟ್ಟಿಗನ ಪಕ್ಷಿಯೊಂದು ಕಣ್ಣಿಗೆ ಕಾಣದಿದ್ದರೂ 'ಫಾಂಕ್ ಫಾಂಕ್' ಎಂದು ಒಂದೇ ಸಮನೆ ಸುರುವುಮಾಡಿತ್ತು. ಬಹುಸಂಖ್ಯಾಕಪ್ರಾಣಿ ಗಳಿಗೆ ಮನುಷ್ಯರೆಂದು ಕರೆಯಿಸಿಕೊಳ್ಳುವ ಈ ಅಲ್ಪಸಂಖ್ಯಾಕಪ್ರಾಣಿಗಳು ತಮ್ಮಷ್ಟಕ್ಕೆ ತಾವು ಏನು ಬಗೆದರೇನು, ಏನು ನಿಶ್ಚಯಿಸಿಕೊಂಡರೇನು, ಅದಾವುದರ ಕಿಮ್ಮತ್ತೂ ಅವಕ್ಕೆ ಇಲ್ಲ. ಹಿಂದುಸ್ತಾನದ ಎಷ್ಟೋ ಜನರಿಗೆ—ಅದೇಕೆ ಬಹುಜನರಿಗೆ—ಹಿಂದುಸ್ತಾನವನ್ನು ಹೇಗೆ ಆಳುತ್ತಾರೆಂಬುದೇ ಗೊತ್ತಿಲ್ಲ. ಮತ್ತು ಇಂಗ್ಲಂಡದೊಳಗಿನ ಕೆಲ ನೀಚಪ್ರಾಣಿಗಳಿಗೂ ಇಂಗ್ಲಂಡದ ವಿಷಯವಾಗಿ ಇಷ್ಟೇ ಗೊತ್ತಿದೆ. ಆದರೆ ಈ ಉಷ್ಣದೇಶಗಳಲ್ಲಿ ಉದಾಸೀನತೆಯು ಹೆಚ್ಚು ಒಡೆದುಕಾಣುತ್ತದೆ. ಮತ್ತು ಈ ಮನುಷ್ಯರೆನ್ನುವವರು ದಣಿದ ಕೂಡಲೆ ಆಳಿಕೆಯ ಸೂತ್ರಗಳನ್ನು ತೆಗೆದುಕೊಳ್ಳಲಿಕ್ಕೆ

ಿಂಗಲಾಚಿ ಮುಂದೆ ಬರುವದೆಂದರೆ ಅಸ್ಪಷ್ಟವಿಚಾರ ಅಸ್ಪಷ್ಟ ಉಚ್ಚಾರ ಮಾಡುವ ಈ ಪ್ರಾಣಿವರ್ಗವೇ. ಯಾಕಂದರೆ ಅದೇ ಮನುಷ್ಯನ ಸಮೀಪ ದಲ್ಲಿದ್ದದ್ದು ಬಂಗ್ಲೆಯ ಒಳಗೆ ಕುಳಿತಾಗ ಬೇಕಾದಂತೆ ಭಿನ್ನಾಭಿಪ್ರಾಯ ಗಳನ್ನು ವ್ಯಕ್ತಪಡಿಸಿದ ಆ ಸಪ್ತಕಮುಹಸೀಯರಿಗೆ, ಬಂಗ್ಲೆಯಿಂದ ಹೊರಗೆ ಬಂದೊಡನೆ ಒಂದೇ ಬಗೆಯ ಯಾವುದೋ ತಲೆಭಾರವೆನಿಸಿತು; 'ಕೆಟ್ಟಗಾಳಿ ಬೀಸಲಿದೆ, ನೋಡಿ!' ಎಂಬ ಬೆದರುಗೋಲು ಎಲ್ಲರನ್ನೂ ಬೆದರಿಸಿತು. ತಾವಿನ್ನು ಕೆಲಸಮಾಡಲಾರೆವೆಂದು ಅವರಿಗನಿಸಿತು. ಮಾಡಿದರೂ ಸಾಕಷ್ಟು ಹಣ ದೊರೆಯದೆಂದೂ ಗೊಣಗುಟ್ಟಿದರು. ಅವರ ಗಾಡಿಗೂ ಅವರಿಗೂ ನಡುವಿದ್ದ ಅವಕಾಶವು ಕೂಡ ತೆರಪಿರದೆ ಅವರ ರಕ್ತವನ್ನು ಕುದಿಸುವಂತಹ ಕಣಗಳಿಂದ ತುಂಬಿಬಿಟ್ಟಿತ್ತು. ಗಾಡಿಯೊಳಗಿನ ಗಾದಿಗಳು ಅವರ ಚೆಣ್ಣ ವನ್ನು ಸುಡುತ್ತಿದ್ದವು; ಹೊರಗಿನ ಗಾಳಿಯು ಅವನ ಕಣ್ಣುಗಳನ್ನು ಚಿವುರಿ ಕೊಳ್ಳುತ್ತಿತ್ತು; ತಲೆಯಮೇಲಿನ ಟೊಪ್ಪಿಗೆಯು ಎಸರುನೀರಿನಿಂದ ತುಂಬಿ ತುಳುಕುತ್ತಿತ್ತು; ತುಳುಕಿದ ನೀರು ಕೆನ್ನೆಗಳ ಮೇಲೆ ಹರಿದು ಬರು ತ್ತಿತ್ತು. ಮೆಲ್ಲನೆ ಒಬ್ಬರಿಗೊಬ್ಬರು ಸಲಾಂ ಮಾಡಿ ಇಷ್ಟೊತ್ತಿನ ವರೆಗೆ ಮರೆ ತಿದ್ದ ತಮ್ಮ ಆತ್ಮಗೌರವವನ್ನೂ ಒಬ್ಬರೊಬ್ಬರಕಿಂತ ಶ್ರೇಷ್ಠರೆಂಬ ಭಾವ ವನ್ನೂ ಹೆಚ್ಚಿಸಿಕೊಳ್ಳುವದಕ್ಕಾಗಿ ಅವರು ಬೇರೆ ಬೇರೆ ಬಂಗ್ಲೆಯಲ್ಲಿ ಹೊರಟು ಹೋದರು. ಇಡಿ ಪಟ್ಟಣದ ತುಂಬೆಲ್ಲ—ಅದೇಕೆ, ಇಡಿ ಭಾರತದ ತುಂಬೆಲ್ಲ—ಇದೇ ರೀತಿಯಾಗಿ ಮಾನವಜಾತಿಯು ನೆಲಮನೆಗಳಲ್ಲಿ, ಗುಡ್ಡಹೊದರುಗ ಳಲ್ಲಿ, ಗಿಡಮರಗಳಡಿಯಲ್ಲಿ, ಜೀವನರಂಗದಿಂದ ಕಾಲ್ದೆಗೆದು ಹುದುಗಿಕೊಳ್ಳು ತ್ತಿರುವದು ಕಂಡುಬರುತ್ತಿವೆ. ಭಯಗಳ ಭಟ್ಟಂಗಿಯಂತೆ ಎಪ್ರಿಲ್ ತಿಂಗಳು ತೀರ ಸಮೀಪಕ್ಕೆ ಬಂತು. ಸೂರ್ಯನು ಅತುಲ ಪರಾಕ್ರಮಶಾಲಿಯಾಗಿ ತನ್ನ ರಾಜ್ಯಕ್ಕೆ ಮರಳಿ ಬರುತ್ತಿದ್ದನು. ಆದರೆ ಸೌಂದರ್ಯದೇವತೆಯನ್ನು ಮಾತ್ರ ಕರೆತಂದಿರಲಿಲ್ಲ. ಇದೊಂದೇ ಅವನ ವೈಭವಕ್ಕೆ ಕುಂದಾಗಿತ್ತು. ಅವಳನ್ನೊಂದು ಕರೆತಂದಿದ್ದರೆ ಅವನ ಕಠೋರತನವು ಸಹ್ಯವಾಗುತ್ತಿತ್ತು. ತನ್ನ ಈ ಪ್ರಖರಪ್ರಕಾಶದಿಂದಲೂ ಅವನಿಗೆ ಜಯದೊರಕಿಸುವದಾಗಲಿಲ್ಲ, ಅಂಥವನಿಗೂ ಆಗಲಿಲ್ಲ! ಅವನ ಹೊಂಬಿಸಿಲ ಮಹಾಪೂರದಲ್ಲಿ ಈ ಭೂಮಿ ಯಷ್ಟೆ ಅಲ್ಲ, ಅವನ ಪ್ರಖರತೆಯೂ ಮುಳುಗಿಹೋಯಿತು. ಅವನೇನು ಈ

ಮನುಷ್ಯರ, ಪಕ್ಷಿಗಳ ಅಥವಾ ಇನ್ನುಳಿದ ಸೂರ್ಯರ ಅಗವ್ಯಮಿತ್ರನಲ್ಲ; ಅಥವಾ ಅಮರವಾದ ಅಭಯವಾಣಿಯೂ ಅಲ್ಲ, ಸ್ಫೂರ್ತಿಯೂ ಅಲ್ಲ; ಈ ಸೃಷ್ಟಿಯಲ್ಲಿ ಎಲ್ಲರಂತೆಯೂ ಅವನೊಬ್ಬ ಪ್ರಾಣಿ. ಅಂತೆಯೆ ಅವನ ವೈಭವ ಕೀರ್ತಿಗೂ ಹುಟ್ಟುಂಟು, ಸಾವುಂಟು.

—

## ಪ್ರಕರಣ ೧೧

ಆ ಜನರೆಲ್ಲ ಗಾಡಿಯಲ್ಲಿ ಕುಳಿತುಕೊಂಡು ಹೋದರು. ಆದರೆ ಫೀಲ್ಡಿಂಗನು ಮಾತ್ರ ಅಲ್ಲಿಯೆ ಕಂಪೌಂಡದ ಮೂಲೆಯ ಒಂದು ಚಪ್ಪರದ ಕೆಳಗೆ ನಿಂತಿದ್ದ ತನ್ನ ಕುದುರೆಯನ್ನು ಯಾರಾದರೂ ತಂದುಕೊಡಬಹುದೆಂದು ಸ್ವಲ್ಪ ಹೊತ್ತು ನಿಂತುಕೊಂಡನು. ಯಾರೂ ತಂದುಕೊಡುವ ಲಕ್ಷಣ ಕಾಣಲಿಲ್ಲ. ಅಲ್ಲಿಂದ ತಾನೇ ಅದನ್ನು ತರಲಿಕ್ಕೆ ಹೊರಟನು. ಅಷ್ಟರಲ್ಲಿ ಮನೆಯೊಳಗಿಂದ ಬಂದ ಒಂದು ಕೂಗು ಅವನನ್ನು ನಿಲ್ಲಿಸಿತು. ಅಝೀಜನು ಹಾಸಿಗೆಯ ಮೇಲೆ ಕುಳಿತುಕೊಂಡು ತಲೆಯನ್ನೆಲ್ಲ ಕೆದರಿಕೊಂಡು ವಿಷಣ್ಣನಾಗಿ ಕುಳಿತಿದ್ದನು. ‘ ಇಕಾ, ಇದು ನಿಮ್ಮ ಮನೆಯೇ ಇದೆ. ’ ಎಂದು ಅಳು ತುಂಬಿದ ನಗೆಯಲ್ಲಿ ಹೇಳಿ ‘ ಪೂರ್ವದೇಶದ ಪ್ರಸಿದ್ಧವಾದ ಆದರಾತಿಥ್ಯವಿದು. ಆ ನೊರಜುಗಳ ಕಡೆಗಷ್ಟು ನೋಡಿರಿ; ಮುಟ್ಟಿದರೆ ಮೈಗೆಲ್ಲ ಸುಣ್ಣಬಳಿಯುವ ಆ ಗೋಡೆಗಳನ್ನು ನೋಡಿರಿ; ಇದೆಲ್ಲ ಚೆನ್ನಾಗಿಲ್ಲವೆ? ಪೂರ್ವದೇಶದ ಈ ಒಳಗಿನ ವೈಭವವನ್ನು ನೋಡಿಯೆ ನಿಮಗಿಲ್ಲಿಂದ ಆದಷ್ಟು ಬೇಗ ಜಾರಬೇಕೆಂದೆನಿಸಿರಬೇಕು? ’

‘ ಹೇಗಾದರೂ ಆಯಿತು; ನಿಮಗೀಗ ವಿಶ್ರಾಂತಿ ಬೇಕಾಗಿದೆ? ’

‘ ನಾನು ಇಡೀ ದಿವಸ ವಿಶ್ರಾಂತಿ ಪಡೆಯಬಹುದು. ಮೇಜರ ಕ್ಯಾಲೆಂಡರನ ಗುಪ್ತಚಾರನಂತಿದ್ದ—ಇದು ನಿಮಗೆ ಗೊತ್ತಿರಬೇಕು—ಆ ಡಾಕ್ಟರನು—ಅವನ ಹೊಟ್ಟೆ ತಣ್ಣಗಾಗಲಿ—ನನಗೆ ಜ್ವರ ಇದೆಯೆಂದು ಹೇಳಿ ಪುಣ್ಯ ಕಟ್ಟಿಕೊಂಡ. ಈ ಸಾರೆ ಅವನಾಟ ನಡೆಯಲಿಲ್ಲ. ’

‘ ಕ್ಯಾಲೆಂಡರನು ಯಾರನ್ನೂ ನಂಬುವದಿಲ್ಲ; ಆಂಗ್ಲೇಯನಿದ್ದರೂ ಅಷ್ಟೆ, ಹಿಂದೀ ಇದ್ದರೂ ಅಷ್ಟೆ. ಇದು ಅವನ ಸ್ವಭಾವ. ನೀನು ಅವನ ಕೈಕೆಳಗೆ ಇರಬಾರದಾಗಿತ್ತು. ಆದರೆ ಇದ್ದೀಯೆಂದಮೇಲೆ ಇನ್ನೇನು, ಇರಬೇಕು. ’

‘ ನೀವು ಹೋಗುವ ಮೊದಲು—ನೀವು ಸ್ವಲ್ಪ ಗಡಿಬಿಡಿಯಲ್ಲಿದ್ದಂತೆ ಕಾಣುತ್ತದೆ — ಆ ಡ್ರಾಅರದ ಕೀಲಿಯನ್ನಷ್ಟು ತೆಗೆಯುವಿರಾ ? ಅದರ ಮೇಲ್ಗಡೆ ಒಂದು ‘ ಬ್ರಾವುನ್ ’ ಕಾಗದ ಇದೆ, ಕಾಣುತ್ತಿದೆಯೆ ? ’

‘ ಹೌದು.

‘ ಅದನ್ನು ತೆರೆಯಿರಿ. ’

‘ ಇವರಾರು ? ’

‘ ಅವಳು ನನ್ನ ಹೆಂಡತಿ. ಅವಳು ನೋಡಿದ ಮೊದಲನೆಯ ಇಂಗ್ಲೀಷ ಮನುಷ್ಯರೆಂದರೆ ನೀವೇ. ಇನ್ನು ಆ ಫೋಟೋ ಅತ್ತಕಡೆ ಇಡಿರಿ. ’

ಒಬ್ಬ ಪ್ರವಾಸಿಯು ಉಸುಬಿನರಣ್ಯದ ಮಧ್ಯದಲ್ಲಿ ಕಲ್ಲುಬಂಡೆಗಳೆರಡರ ನಡುವೆ ಅರಳಿದ ಹೂಗಳನ್ನು ಒಮ್ಮೆಲೆ ನೋಡಿದರೆ ದಂಗುಬಡೆದು ನಿಲ್ಲುವಂತೆ ಕಣ್ಣು ಮಿಟುಕಿಸದೆ ನೋಡುತ್ತ ನಿಂತನು. ಆ ಹೂಗಳೇನೊ ಎಂದಿನಿಂದಲೂ ಅಲ್ಲಿಯೆ ಇವೆ. ಆದರೆ ಇವನು ಮಾತ್ರ ನೋಡಿದ್ದು ಒಮ್ಮಿಂದೊಮ್ಮೆ, ಅಕಸ್ಮಾತ್ತಾಗಿ. ಅವನು ಆ ಫೋಟೋವಿನ ಕಡೆಗೆ ಮತ್ತೊಮ್ಮೆ ನೋಡಬೇಕೆಂದು ಹವಣಿಸಿದನು. ಅದರಲ್ಲಿ ಸೀರೆಯುನ್ನುಟ್ಟ ಸಾದಾ ಹೆಣ್ಣು ಮಗಳೊಬ್ಬಳು ಜಗತ್ತನ್ನು ನೋಡುತ್ತ ನಿಂತಿದ್ದಳು. ‘ ಅಝೀಜ, ನನಗೆ ನೀನು ಈ ದೊಡ್ಡ ಮರ್ಯಾದೆಯುನ್ನು ಮಾಡಿದ್ದೇಕೆ ತಿಳಿಯಲಿಲ್ಲ ? ಆದರೂ ಇದಕ್ಕಾಗಿ ನಾನು ನಿನಗೆ ಕೃತಜ್ಞನಾಗಿದ್ದೇನೆ. ’

‘ ಅದೇನು ಇಲ್ಲ. ಅವಳೇನು ಅಷ್ಟು ಕಲಿತ ಹೆಂಗಸಲ್ಲ, ಅಂಥ ಸುರೂಪಿಯೂ ಅಲ್ಲ. ಇಟ್ಟುಬಿಡಿರಿ ಆಚೆಗೆ ಅದನ್ನು. ನೀವು ಅವಳನ್ನೇ ನೋಡಬಹುದಾಗಿತ್ತೆಂದ ಮೇಲೆ ಅವಳ ಫೋಟೊ ಏಕೆ ನೋಡಬಾರದು ? ’

‘ ನೀನು ಅವಳನ್ನು ನೋಡಗೊಡುತ್ತಿದ್ದೆಯಾ ? ’

‘ ಯಾಕೆ ನೋಡಗೊಡಬಾರದು ? ಘೋಷಾ ಬೇಕೆಬೇಕೆಂದು ನಾನೆನ್ನು

ತ್ತಿದ್ದರೂ ನೀನು ನನ್ನ ಅಣ್ಣನೆಂದು ಅವಳಿಗೆ ಹೇಳುತ್ತಿದ್ದೆ. ಹಪೂಡುಲ್ಲಾ ಅವಳನ್ನು ನೋಡಿದ್ದನು; ಹೀಗೆ ಎಷ್ಟೋ ಜನರೂ ನೋಡಿದ್ದರು.'

'ಅವರು ನಿನ್ನ ಅಣ್ಣತಮ್ಮಂದಿರೆಂದೇ ಅವಳೂ ತಿಳಿದಿದ್ದಳೇನು?'

'ಹಾಗೇನು ಇಲ್ಲ. ಆದರೆ ಆ ರೀತಿ ವ್ಯವಹಾರವಿದೆ. ಮತ್ತು ಅದು ಅನುಕೂಲವಿದೆ. ಎಲ್ಲ ಗಂಡಸರೂ ನನ್ನ ಅಣ್ಣತಮ್ಮಂದಿರೇ. ಯಾವನು ಹಾಗೆ ನಡೆದುಕೊಳ್ಳುತ್ತಾನೋ ಅವನು ಅವಳನ್ನು ನೋಡಬಹುದು.'

'ಇಡೀ ಜಗತ್ತೇ ಹಾಗೆ ನಡೆದುಕೊಂಡರೆ ಈ ಘೋಷಾ ಪದ್ಧತಿಯೇ ಇಲ್ಲದಾಗುವದು!'

'ಇಂತಹ ಮಾತು ನೀವೇ ಆಡಬಲ್ಲಿರಿ, ಮತ್ತು ನೀವೇ ಹಾಗೆ ಭಾವಿಸಬಲ್ಲಿರಿ. ಅಂತೇ ನಾನು ನಿಮಗೆ ಫೋಟೊ ತೋರಿಸಿದೆ ಎಷ್ಟೋ ಜನರಿಗೆ ಹಾಗಿರುವದಾಗಲಿ ಹಾಗೆ ಭಾವಿಸುವದಾಗಲಿ ಅವರ ಶಕ್ತಿಯಾಚೆಗಿನ ಮಾತಾಗಿದೆ. ಈಗ ನಿಮ್ಮ ನಡತೆ ಚೆನ್ನಾಗಿದೆ, ನನ್ನ ನಡತೆ ಚೆನ್ನಾಗಿಲ್ಲ; ಅಂತೇ ನಾನು ನಿಮಗೆ ಅದನ್ನು ತೋರಿಸಿದ್ದು .. ನಾನು ಕರೆದೊಡನೆ ನೀವು ತಿರುಗಿ ಬರುವಿರೆಂದು ನಾನು ಅಪೇಕ್ಷಿಸಿರಲಿಲ್ಲ. . . . 'ಆಯಿತು, ಅವನಿನ್ನು ನನ್ನೊಡನೆ ಎಲ್ಲ ಸಂಬಂಧವನ್ನು ನಿಲ್ಲಿಸುವನು ; ನಾನು ಅವನಿಗೆ ಅವಮಾನ ಮಾಡಿದೆನು' ಎಂದು ನಾನು ತಿಳಿದಿದ್ದೆ ...ಎಂ ಫೀಲ್ಡಿಂಗ! ಈ ಹಿಂದೀಜನರಿಗೆ ಎಷ್ಟು ಅಂತಃಕರಣವನ್ನು ತೋರಿಸಬೇಕಾಗುತ್ತದೆಂಬುದರ ಕಲ್ಪನೆಯೇ ಒಬ್ಬ ರಿಗೂ ಇಲ್ಲ. ಅಂತಃಕರಣವನ್ನು ಬೇಡುವ ನಮಗೇ ಅದು ಗೊತ್ತಾಗಿಲ್ಲ. ಆದರೆ ಇನ್ನೊಬ್ಬರು ತೋರಿಸಿದಾಗ ಮಾತ್ರ ನಮಗೆ ತಿಳಿಯುವದು. ಅದನ್ನು ಮರೆತವರಂತೆ ನಾವು ಕಂಡರೂ ಹಾಗೆಂದೂ ನಾವು ಮಾಡುವದಿಲ್ಲ. . ಹೆಚ್ಚು ಮಮತೆ. . ಇನ್ನೂ ಹೆಚ್ಚು ಮಮತೆ. . ಅದಕ್ಕೂ ಹೆಚ್ಚು ಮಮತೆ. . ತೋರ ಬೇಕು!. . ನಮ್ಮನ್ನು ಮುಂದೆ ನಡೆಯಿಸಲು ಅದೊಂದೇ ಆಶಾಕಿರಣ ಉಳಿ ದಿದೆ.' ಎಂದು ಅಝೀಜನು ಗಂಭೀರವಾಗಿ ನುಡಿದನು ಅವನ ದನಿ ಕನಸಿನೊ ಳಗಿಂದ ಬಂದಂತೆ ಕೇಳಿಸಿತು. ಅದನ್ನು ಸ್ವಲ್ಪ ಬದಲು ಮಾಡಿದನು; ಆದರೂ ಅದು ದಿನದಕಿಂತಲೂ ಕೆಳಗಿನ ಆಳದಿಂದ ಬರಹತ್ತಿತು. 'ನಮಗನಿಸಿದ್ದರ ಮೇಲಿಂದಿಷ್ಟೇ ನಾವು ಭಾರತವನ್ನು ಕಟ್ಟಲಾರೆವು. ಈ ಎಲ್ಲ ಸುಧಾರಣೆ ಗಳು, ಮೋಹರಮ್ಮದ ಒಪ್ಪಂದಸಭೆಗಳು, ಆ ಡೋಲಿಗಳು ಸಣ್ಣವಿರಬೇಕೊ,

ದೊಡ್ಡವಿರಬೇಕೊ; ಈ ದಾರಿಯಿಂದಲೊ ಆ ದಾರಿಯಿಂದಲೊ; ದೇಶಭಕ್ತರ ಸಂಘ, ಅಧಿಕಾರಿಗಳ ಪಾರ್ಟಿ, ಅದರಲ್ಲಿ ನಮ್ಮ ಕರಿದೊಗಲನ್ನು ನೋಡಿ ಹೀಯಾಳಿಸುವದು,—ಇವೆಲ್ಲ ಏನು ಪ್ರಯೋಜನ ? ' ಎಂದು ಕೇಳಿದನು.

' ಹೌದು. ಇವೆಲ್ಲ ತಪ್ಪುಹಾದಿಯನ್ನು ಹಿಡಿದೇ ಪ್ರಾರಂಭವಾಗಿದೆ, ಅಲ್ಲವೇ ? ಇದು ನನಗೆ ಗೊತ್ತಾಗುವಂತೆ ಸಂಸ್ಥೆಗಳಿಗೂ ಸರಕಾರಕ್ಕೂ ಗೊತ್ತಾಗುವದಿಲ್ಲ. ' ಎಂದು ಅವನು ಮತ್ತೆ ಆ ಫೋಟೊದ ಕಡೆಗೆ ನೋಡಿ ದನು. ಗಂಡನ ಅಪ್ಪಣೆಯಿಂದ, ತನ್ನ ಇಚ್ಛೆಯಿಂದ ಆ ಹೆಣ್ಣುಮಗಳು ಜಗ ತ್ತನ್ನು ನೋಡುತ್ತ ನಿಂತಿದ್ದಳು. ಆದರೆ ಎಲ್ಲವನ್ನೂ ಕನ್ನಡಿಸುವ ಈ ವಿಚಿತ್ರ ವಿಸಂಗತ ಜಗತ್ತನ್ನು ನೋಡಿ ಅವಳೆಷ್ಟು ತಲ್ಲಣಗೊಂಡಿರಬೇಕು!

' ಇದು ಅವಳನ್ನಾಚೆಗೆ. ಅವಳಿಂದೇನಾಗಬೇಕಾಗಿದೆ? ಈಗ ಅವಳು ಸತ್ತುಹೋಗಿದ್ದಾಳೆ. ನಿಮಗೆ ತೋರಿಸಲಿಕ್ಕೆ ನನ್ನಲ್ಲ ಮತ್ತೇನೂ ಇಲ್ಲ ವೆಂದು ನಾನವಳನ್ನು ನಿಮಗ ತೋರಿಸಿದೆ. ತಾವೆಲ್ಲಕಡೆಗೂ ನೋಡ ಬಹುದು; ನನ್ನಮನೆಯೂ ಬರಿದು; ನನ್ನ ಮನವೂ ಬರಿದು. ನನಗೆ ಇನ್ನಾವ ಗುಪ್ತಮಾತುಗಳೂ ಇಲ್ಲ. ನನ್ನ ಮೂವರು ಮಕ್ಕಳು ತಮ್ಮ ಅಜ್ಜಿಯ ಹತ್ತಿರ ಇರುತ್ತಾರೆ, ಆಯಿತು. '

ಅವನು ತನ್ನಲ್ಲಿಟ್ಟ ವಿಶ್ವಾಸದಿಂದ ಉಬ್ಬಿದರೂ ಖಿನ್ನನಾಗಿ ಫೀಲ್ಡಿಂ ಗನು ಅವನ ಹಾಸಿಗೆಯ ಹತ್ತಿರ ಕುಳಿತನು. ಆಗ ಅವನಿಗೆ ತಾನು ಮುದುಕ ನಾದೆನೆಂದೆನಿಸಿತು. ಮತ್ತು ಭಾವನಾತರಂಗಗಳ ಮೇಲೆ ಲೋಲಾಡಬೇಕೆಂದು ಆಶೆಯಾಯಿತು. ಇನ್ನೊಮ್ಮೆ ಭೆಟ್ಟಿಯಾದಾಗ ಅಝೀಜನು ಜಾಗರೂಕ ನಾಗಿ ದೂರ ಸರಿದು ನಿಲ್ಲಬಹುದೆಂದು ಅವನಿಗನಿಸಿತು. ಇದನ್ನು ನೆನೆದು ಅವನಿಗೆ ಸ್ವಲ್ಪ ಅಸಮಾಧಾನವೂ ಆಯಿತು. ಮಮತೆ. . ಮಮತೆ. . ಇನ್ನೂ ಹೆಚ್ಚು ಮಮತೆ. . ಹೌದು, ಅದನ್ನು ಆತನು ತೋರಿಸಬಲ್ಲನು; ಆದರೆ ಈ ವಿಚಿತ್ರದೇಶಕ್ಕೆ ಬೇಕಾದುದು ಇಷ್ಟೇ ಏನು ? ಒಮ್ಮೊಮ್ಮೆ ಅದು ರಕ್ತದ ಮದವನ್ನೂ ಬೇಡಲಿಕ್ಕಿಲ್ಲವೆ ? ಇಷ್ಟು ಅಝೀಜನ ವಿಶ್ವಾಸಪಾತ್ರನಾಗ ಲಿಕ್ಕೆ ಅವನು ಮಾಡಿದ್ದಾದರೂ ಏನು ? ಮತ್ತು ಅವನು ತನ್ನಲ್ಲಿ ಅಡವಾ ಗಿಟ್ಟ ಈ ವಿಶ್ವಾಸಕ್ಕೆ ಸರಿಯಾದದ್ದನ್ನು ತಾನೇನು ಕೊಡಬೇಕೆಂದು ಯೋಚಿಸ ಹತ್ತಿದನು. ಆಗ ಅವನಿಗೆ ತನ್ನ ಹಿಂದಿನ ಜೀವನದ ನೆನಪು ನುಗ್ಗಿಬಂತು.

ಅವನ ಜೀವನದ ಬೆಳೆಯು ಅಂಗಲಾಗಿ ಮಳೆ, ಗಾಳಿ, ಬೆಳಕು ಇಲ್ಲದೆ ಒಣಕಲಾಗಿ, ಸರಟಾಗಿ ಬೆಳೆದಿತ್ತು. ಅವನ ಜೀವನದಲ್ಲಿ ಗೌಪ್ಯ ಎನ್ನುವದು ಇರಲೇ ಇಲ್ಲ. ಇದ್ದ ಒಂದೆರಡು ಸಂಗತಿಗಳನ್ನೂ ಅವನಾರಿಗೂ ಹೇಳಿದ್ದಿಲ್ಲ. ಹೇಳುವಷ್ಟು ಹುರಳಿನವೆಂದೂ ಅವನು ಭಾವಿಸಿರಲಿಲ್ಲ. ಹೀಗಿದ್ದಾಗ ಸುಮ್ಮನೆ ಮುಚ್ಚಿದ ಪರದೆಯನ್ನು ಮೇಲೆತ್ತಿ ತೋರಿಸುವದರಲ್ಲಿಯಾದರೂ ಏನು ಅರ್ಥವಿದೆಯೆಂದುಕೊಂಡಿದ್ದನು. ಅವನೂ ಒಬ್ಬಳಿಗೆ ಮೋಹಿಸಿದ್ದನು. ಒರಿ ಅಷ್ಟೇ ಅಲ್ಲ; ಮದುವೆಯ ನಿಶ್ಚಯವೂ ಆಗಿಬಿಟ್ಟಿತ್ತು. ಆದರೆ ಅವನ ಆ ಪ್ರಿಯತಮೆಯು ಆ ನಿಶ್ಚಯವನ್ನು ಮುರಿದಳು. ಇದರಿಂದ ನಿರಾಶಿತನಾಗಿ ಸ್ವಲ್ಪದಿವಸಗಳ ವರೆಗೆ ಅವಳನ್ನೇ ನೆನೆಸುತ್ತ, ಅವಳ ವಿಚಾರದಲ್ಲಿಯೆ ಮುಳುಗಿಹೋಗಿ ಇನ್ನೊಬ್ಬರನ್ನು ಮದುವೆಯಾಗುವ ಉಸಾಬರಿಯನ್ನೇ ಬಿಟ್ಟಿದ್ದನು. ಮುಂದೆ ಭೋಗಲಾಲಸೆ ಹೆಚ್ಚಾಯಿತು. ಅಲ್ಲಿಂದ ಪಶ್ಚಾತ್ತಾಪ ಹುಟ್ಟಿತು. ಇದೆಲ್ಲ ಹೊಯ್ದಾಟವಾದಮೇಲೆ ಅವನ ಮನಸು ಒಂದು ಸಮತೆಗೆ ಬಂದಿತ್ತು. ಈ ಸಮತೆಯು ಅವನಿಗೆ ಅಕ್ಷಯಪಾತ್ರವಾಗಿತ್ತು. ಇದನ್ನು ಬಿಟ್ಟರೆ ಅವನಿಗೆ ತನ್ನ ಜೀವನವೆಂದರೆ ಕ್ಷುದ್ರಜೀವನವೆಂದೆನಿಸಿಬಿಡುತ್ತಿತ್ತು. ಅಝೀಜನಿಗೆ ಬೇಕಾದದ್ದೂ ಈ ಸಮತೆಯು. ಅದು ಫೀಲ್ಡಿಂಗನಿಗಷ್ಟೇ ಮೀಸಲಾಗಿರಬಾರದೆಂದು ಅವನ ಬಯಕೆ. ಅಲ್ಲದೆ ಅವನ ಈ ಗುಟ್ಟನ್ನೂ ತಿಳಿದುಕೊಳ್ಳುವ ಲವಲವಿಕೆ ಅವನಿಗೆ. ' ನಾನು ಇವನೊಡನೆ ಎಂದೂ ಸಲುಗೆಯನ್ನು ಬೆಳೆಸಬಾರದು. ' ಎಂದು ಫೀಲ್ಡಿಂಗನು ತನ್ನಲ್ಲಿಯೆ ಒಮ್ಮೆ ವಿಚಾರಿಸಿದನು. ' ಅದೇಕೆ, ಯಾರೊಡನೆಯೂ ಬೆಳೆಸಬಾರದು. ' ಎಂಬುದೂ ಅದರ ಹೊಟ್ಟೆಯೊಳಗಿಂದ ಹುಟ್ಟಿಬಂತು. ಆದರೆ ಪರರಿಗೆ ಉಪಕಾರ ಮಾಡುವದರಲ್ಲಿ, ಅವರನ್ನು—ಅವರೇ ಅಡ್ಡಿಯಾಗದಿದ್ದರೆ—ಪ್ರೀತಿಸುವದರಲ್ಲಿ,—ಒಂದು ವೇಳೆ ಅಡ್ಡಿಯಾದರೆ ಗಂಭೀರವಾಗಿ ಮುಂದೆ ಸಾಗಿದರಾಯಿತು—ತನಗೆ ತೃಪ್ತಿಯಿದೆ, ಆನಂದವಿದೆಯೆನ್ನುವದನ್ನು ಅವನು ಒಪ್ಪಿಕೊಳ್ಳಲೇಬೇಕಾಯಿತು. ತನ್ನ ಅನುಭವವು ತನಗೆ ಬೆಳಕ ಹಿಡಿದಿದೆಯೆಂದೂ ಇಂಗ್ಲಂಡ ಯುರೋಪಗಳಲ್ಲಿ ತಾನು ಕಲಿತದ್ದೆಲ್ಲ ತನ್ನ ಊರುಗೋಲಾಗಿ ಬಂದಿದೆಯೆಂದೂ ತಾನಿನ್ನು ಮುಂದೆ ಸಾಗಬಹುದೆಂದೂ ಅವನು ತಿಳಿದುಕೊಂಡಿದ್ದನು. ಇದರಿಂದ ಅವನ ವಿಚಾರಸರಣಿಗೆ ಒಂದು ರೀತಿಯ ಸ್ಪಷ್ಟತೆ

ಬಂದಿತ್ತು. ಮುಂದೆ ಅವನ ಈ ಸ್ಪಷ್ಟತೆಯೆ ಹೊಸ ಹೊಸ ಅನುಭವ ಪಡೆಯುವದಕ್ಕೆ ಅಡ್ಡಿಯಾಯಿತು.

' ಹೋದ ಗುರುವಾರ ನೀನು ಕಂಡ ಆ ಇಬ್ಬರು ಸ್ತ್ರೀಯರ ವಿಷಯಕ್ಕೆ ನಿನಗೇನೆನಿಸುತ್ತದೆ ?' ಎಂದು ಅವನು ಕೇಳಿದನು.

ಅಝೀಜನಿಗೆ ಈ ಪ್ರಶ್ನೆ ಸ್ವಾರಸ್ಯವೆನಿಸಲಿಲ್ಲ. ಅವನು ಬೇಸರದಿಂದ ತಲೆ ಅಲ್ಲಾಡಿಸಿದನು. ಅಲ್ಲದೆ ಈ ಪ್ರಶ್ನೆಯಿಂದ ಅವನಿಗೆ ಮಾರವಾರ ಗುಹೆಗಳ ವಿಷಯದಲ್ಲಿ ತಾನಾಡಿದ ದುಡುಕಿನ ಮಾತು ಬೇರೆ ನೆನಪಾಯಿತು.

' ಅದು ಹೋಗಲಿ, ಸಾಮಾನ್ಯವಾಗಿ ಇಂಗ್ಲೀಷ ಸ್ತ್ರೀಯರು ನಿನಗೆ ಸೇರುತ್ತಾರೆಯೋ ? '

'ಹಮೀದುಲ್ಲಾನಿಗೆ ಇಂಗ್ಲಂಡದಲ್ಲಿ ಅವರು ಸೇರುತ್ತಿದ್ದರಂತೆ. ಇಲ್ಲಿ ನಾವೆಂದೂ ಅವರನ್ನು ಕಣ್ಣೆತ್ತಿ ನೋಡುವದಿಲ್ಲ. . . . ಓ ! ಸಾಕು, ನಾವು ಬಹಳ ಜಾಗರೂಕರಾಗಿರಬೇಕು. ಇನ್ನು ಬೇರೆ ಏನಾದರೂ ಮಾತಾಡೋಣ.'

' ಹಮೀದುಲ್ಲಾ ಹೇಳಿದ್ದು ಸರಿ ಇದೆ. ಈ ಹೆಣ್ಣು ಇಂಗ್ಲಂಡದಲ್ಲಿಯೆ ಹೆಚ್ಚು ಚೆನ್ನಾಗಿರುತ್ತವೆ. ಇಲ್ಲಿ ಏನಿದೆಯೋ ಏನೋ, ಅವರಿಗಷ್ಟು ಸರಿ ಹೋಗುವದಿಲ್ಲ. '

ಅಝೀಜನು ಮತ್ತೆ ಸ್ವಲ್ಪ ಹೊತ್ತು ಸುಮ್ಮನಿದ್ದು. ' ನೀವು ಮದುವೆ ಏಕೆ ಮಾಡಿಕೊಂಡಿಲ್ಲ ? ' ಎಂದು ಕೇಳಿದನು.

ಅವನು ಕೇಳಿದ್ದನ್ನು ನೋಡಿ ಫೀಲ್ಡಿಂಗನು ಸಂತೋಷಬಟ್ಟನು. 'ಯಾಕಂದರೆ, ಅದು ಇಲ್ಲದೆ ನನ್ನ ಜೀವನ ಹಾಗೇಯೇ ಸಾಗಿದೆಯಲ್ಲ, ಸಾಕು. ' ಎಂದು ಉತ್ತರಕೊಟ್ಟನು. ' ಏದಾದರೊಂದು ದಿನ ನನ್ನ ಬಗ್ಗೆ ಕೆಲ ಮಾತನ್ನು ನಿನಗೆ ಹೇಳಬೇಕಂದೇ ಮಾಡಿದ್ದೆ. ಅದರಲ್ಲಿ ಎಷ್ಟರ ಮಟ್ಟಿಗೆ ಸ್ವಾರಸ್ಯಹುಟ್ಟುತ್ತದೋ ನನಗೆ ಗೊತ್ತಿಲ್ಲ. ನಾನು ಪ್ರೀತಿಸಿದ ಸ್ತ್ರೀಯು ನನ್ನನ್ನು ಮದುವೆಯಾಗಲು ಒಪ್ಪಲಿಲ್ಲ. ಇದೇ ಮುಖ್ಯ ವಿಷಯ. ಆದರೆ ಇದಾದದ್ದು ಹದಿನೈದು ವರ್ಷಗಳ ಹಿಂದೆ. ಈಗ ಅದರಲ್ಲೇನು ಅರ್ಥವೇ ಇಲ್ಲ. '

' ಅಂದರೆ ನಿಮಗೆ ಮಕ್ಕಳೇ ಇಲ್ಲವೇ ? '

' ಇಲ್ಲ. '

'ದಯವಿಟ್ಟು ಹೀಗೆ ಕೇಳಿದ್ದಕ್ಕೆ ಅನ್ಯಥಾಭಾವಿಸಬಾರದು, ಹಾಗಾದರೆ ನಿಮಗೆ ಸೂಳಿಯಮಕ್ಕಳೇನಾದರೂ ಇವೆಯೇ?'

'ಇಲ್ಲ. ಇದ್ದರೆ ಮುಚ್ಚಿಟ್ಟುಕೊಳ್ಳುತ್ತಿದ್ದೆನೇ? ಸಂತೋಷದಿಂದ ಹೇಳಿಬಿಡುತ್ತಿದ್ದೆ'

'ಹಾಗಾದರೆ ನಿಮ್ಮ ಮನೆತನದ ಹೆಸರು ಸಂಪೂರ್ಣವಾಗಿ ಈ ಜಗತ್ತಿನಲ್ಲಿ ಅಳಿದು ಹೋಗುವದಲ್ಲ?'

'ಹೌದು, ಹೋಗಲೇಬೇಕು.'

'ಸರಿ.' ಎಂದು ಅವನು ತಲೆ ಅಲ್ಲಾಡಿಸಿ, 'ಇದೋ, ಈ ನಿಮ್ಮ 'ಬೇಫಕೀರ' ವೃತ್ತಿಯೇ ನಮಗೆ ಅರ್ಥವಾಗದ ಒಗಟವಾಗಿದೆ.'

'ನಾನು ಮಕ್ಕಳು ಬೇಕೆಂದು ಚಿಂತಿಸುವದಿಲ್ಲ.'

'ಚಿಂತೆಗೂ ಅದಕ್ಕೂ ಏನೂ ಸಂಬಂಧವಿಲ್ಲ.' ಎಂದು ಅವನು ಬಳ್ಳೇ ಆತುರನಾಗಿ ನುಡಿದನು.

'ಮಕ್ಕಳಿಲ್ಲದ್ದರಿಂದ ನನಗೇನು ಭಣ ಭಣ ಎನಿಸುವದಿಲ್ಲ. ನನ್ನ ಮರಣಶೈಯ್ಯೆಯ ಸುತ್ತಲು ಕಾಲಿಗೊಂದು ತಲೆಗೊಂದು ಕುಳಿತು, ಬಡ ಬಡಕೊಂಡು ಅಳುವ ತಾಯಿಯನ್ನು ನೋಡಿ, ಉಸಿರಿಲ್ಲದ ನನ್ನನ್ನು ನೋಡಿ, ಬಿಕ್ಕಿ ಬಿಕ್ಕಿ ಅಳುವದು ನನಗೆ ಬೇಕಿಲ್ಲ. ಇದು ನಮ್ಮ ಕಣ್ಣಿಗೆ ಕಾಣುವ ಮಾತಲ್ಲವೇ? ಇಂಥ ಮಕ್ಕಳನ್ನು ಈ ಜಗತ್ತಿಗೆ ಬಿಟ್ಟು ಹೋಗುವದಕ್ಕಿಂತ ಒಂದು ಒಳ್ಳೇ ವಿಚಾರವನ್ನು ಬಿಟ್ಟುಹೋಗುವದು ಎಷ್ಟೋ ಮೇಲೆಂದು ನಾನು ನಂಬುತ್ತೇನೆ. ಹಾಗಾಗಬೇಕೆಂದೂ ನನ್ನ ಆಶೆ ಇದೆ. ಉಳಿದವರಿಗೆ ಬೇಕಾದಷ್ಟು ಮಕ್ಕಳಾಗುತ್ತಿವೆಯಲ್ಲ? ಇಂಗ್ಲಂಡವು ಮಕ್ಕಳಿಂದ ಕಿಕ್ಕಿರಿದು ತುಂಬಿ ಹೊರಸೂಸಿ ಹಿಂದುಸ್ಥಾನಕ್ಕೂ ಹರಿದುಬಂದು ಕಾಲ್ತೊಡಕಾಗಿದೆ. ಅವರಿಗಿದ್ದ ಒಂದು ತುತ್ತು ಅನ್ನದಲ್ಲಿಯೂ ಕೈಯಿಕ್ಕಿದೆ. ನೌಕರಿಯ ಸಲುವಾಗಿ ಹಿಂದುಸ್ಥಾನವನ್ನು ಮುತ್ತಿದೆ.'

'ನೀನು ಮಿಸ್ ಕ್ವೆಸ್ಟೆಡ್‌ಳನ್ನೇಕೆ ಮದುವೆಯಾಗಬಾರದು?'

'ಅಯ್ಯೋ ದೇವರೇ! ಆ ಹುಡಿಗಿಯೇ? ಅದು ಜಂಭದ ಕೋಳಿ! ದುರ್ವಿದಗ್ಧೆ!'

'ದುರ್ವಿದಗ್ಧೆ! ಹೀಗೆಂದರೇನು? ಇದು ಕೆಟ್ಟಶಬ್ದವಲ್ಲವೇ ಫೀಲ್ಡಿಂಗ?'

‘ ಓ! ನನಗೆ ಆ ಹುಡುಗಿಯ ಪರಿಚಯವಿಲ್ಲ. ಆದರೆ ಅದೊಂದು ಈ ಪಾಶ್ಚಾತ್ಯಶಿಕ್ಷಣಗಿರಣಿಯಲ್ಲಿ ತಯಾರಾಗಿ ಬಂದ ಅಗ್ಗದ ಮಾಲೆಂದು ನನಗೆನಿಸಿತು. ಅವಳನ್ನು ನೋಡಿದರೆ ಮನಸ್ಸು ಇಳಿಯುತ್ತಿದೆ. ’

‘ ಆದರೆ ದುರ್ವಿದಗ್ಧ? ಫೀಲ್ಡಿಂಗ, ಅದು ಹೇಗೆ? ’

‘ ಹಿಂದುಸ್ಥಾನ ದೇಶವನ್ನೂ ಜೀವನವನ್ನೂ ತಿಳಿದುಕೊಳ್ಳಲಿಕ್ಕೆ ಕಂಡ ಕಂಡಲ್ಲಿ–ವರ್ತಮಾನಪತ್ರದ ಸ್ವಂತಸುದ್ದಿಗಾರರಂತೆ–ಮಾತು ನಡೆದದ್ದನ್ನೆಲ್ಲ ದೊಡ್ಡದೊಂದು ಉಪನ್ಯಾಸಕ್ಕೆ ಟಿಪ್ಪಣೆ ಬರೆದುಕೊಳ್ಳುವಂತೆ ಒಂದೇಸಮನೆ ಬರೆದುಕೊಳ್ಳುತ್ತಾಳೆ; ಇನ್ನೇನು ಬೇಕು ಹೆಚ್ಚು? ’

‘ ಅವಳು ನಿರ್ವಂಚಕಳೂ ಒಳ್ಳೇಯವಳೂ ಇದ್ದಾಳೆಂದು ನಾನು ತಿಳಿದಿದ್ದೆ. ’

‘ ಇರಬಹುದು. ’ ಎಂದು ಫೀಲ್ಡಿಂಗನು ಆಗಲೇ ತಾನು ಸ್ವಲ್ಪ ಒರಟು ಮಾತನಾಡಿದ್ದಕ್ಕೆ ನಾಚಿ ನುಡಿದನು. ಮದುವೆಯಾಗಬೇಕೆಂದು ಆ ಬ್ರಹ್ಮಚಾರಿಗೆ ಯಾರಾದರೂ ಸೂಚಿಸಿದರೆ ಸಾಕು, ಕೂಡಲೆ ಈ ಹುಚ್ಚುಚ್ಚಾರವೆಲ್ಲ ಸುರುವಾಯಿತೆಂದೇ ತಿಳಿಯಬೇಕು. ಅವನಿಗೆ ಅದರಿಂದ ಕಿವಿಯಲ್ಲಿ ಗಾಳಿ ಊದಿದಂತಾಗುತ್ತಿತ್ತು; ಮನಸ್ಸು ಎಲ್ಲೆಲ್ಲಿಯೊ ಹರಿದಾಡುತ್ತಿತ್ತು. ‘ ಆದರೆ ನನಗೆ ಬೇಕಿದ್ದರೂ ನಾನೀಗ ಅವಳನ್ನು ಮದುವೆಯಾಗುವಂತಿಲ್ಲ. ಯಾಕಂದರೆ ಸಿಟಿಮ್ಯಾಜಿಸ್ಟ್ರೇಟರೊಡನೆ ಅವಳ ಮದುವೆಯು ಆಗಲೆ ಗೊತ್ತಾಗಿದೆ. ’

‘ ಹೌದೇನು? ಅವಳದಕ್ಕೆ ಒಪ್ಪಿದಳೇನು? ಆದರೆ ಬಹಳ ಸಂತೋಷ. ’ ಎಂದು ಮಾರವಾರ ಗುಹೆಗಳಿಗೆ ಅವರನ್ನು ಕರೆದುಕೊಂಡು ಹೋಗುವ ಭಾರವು ಇಳಿದಂತಾಗಿ ಮತ್ತು ಆ ಪಕ್ಕಾ ಆ್ಯಂಗ್ಲೋಇಂಡಿಯನ್ನರು ತಾನು ಅವರಿಗೆ ಮೇಜವಾನಿ ಕೊಡಬಹುದೆಂದು ಇನ್ನಾದರೂ ಅಪೇಕ್ಷಿಸಲಿಕ್ಕಿಲ್ಲೆಂದು ಬಗೆದನು.

‘ ಇದು ಆ ಮುದುಕಿಯ ತಂತ್ರವೆಂದೇ ತೋರುತ್ತದೆ. ಎಲ್ಲಿ ತನ್ನ ಮಗನು ಸಿಕ್ಕಸಿಕ್ಕವರನ್ನು ಮದುವೆಯಾದಾನೋ ಎಂಬ ಭಯದಿಂದ ಈ ಹುಡುಗಿಯನ್ನು ಅಲ್ಲಿಂದಲೇ ಜೊಂಚುಹಾಕಿ ಕರೆದುಕೊಂಡು ಬಂದು, ಒಬ್ಬರನ್ನೊಬ್ಬರು ವರಿಸುವವರೆಗೆ ಕೂಡಿಟ್ಟಂತೆ ಕಾಣುತ್ತದೆ! ’

' ಮಿಸೆಸ್ ಮೂರಳು ಉಳಿದದ್ದರಂತೆ ತನ್ನೀ ಹಂಚಿಕೆಯನ್ನು ನನಗೆ ಹೇಳಿರಲಿಲ್ಲ ! '

' ನನಗೆ ತಿಳಿದದ್ದೇ ತಪ್ಪಿರಬಹುದು. ಯಾಕಂದರೆ ನನಗೆ ಕ್ಲಬ್ಬಿನ ಸುದ್ದಿಯೇ ಗೊತ್ತಿರುವದಿಲ್ಲ. ಏನೇ ಆಗಲಿ, ಅವರಿಬ್ಬರ ಮದುವೆಯು ನಿಶ್ಚಯವಾಗಿದೆ. '

' ಅಂದರೆ ? ನಿಮಗೆ ಅವಳು ಇಲ್ಲ ಎಂದಹಾಗಾಯಿತಲ್ಲ ! ಅಡೀಲಾ ಫೀಲ್ಡಿಂಗನಿಗಿಲ್ಲ ! ಹೋಗಲಿ ಬಿಡಿ, ಅವಳೇನು ಚೆಲುವೆಯಿದ್ದಿಲ್ಲ. ಹಾಗೆ ನೋಡಿದರೆ ಅವಳಿಗೆ ಮೊಲೆಗಳೇ ಇದ್ದಿಲ್ಲ. '

ಅವನೂ ನಕ್ಕನು. ಆದರೆ ಒಬ್ಬ ಸ್ತ್ರೀಯ ಮೊಲೆಗಳ ವಿಷಯಕ್ಕೆ ಮಾತೆತ್ತಿದ್ದಕ್ಕಾಗಿ ಅದು ಸ್ವಲ್ಪ ತುಚ್ಛಶೃಂಗಾರಕ್ಕಿಳಿದು ಅವನ ಕೀಳು ರುಚಿಯನ್ನು ತೋರಿಸಿತೆಂದು ಅವನು ಭಾವಿಸಿದನು.

' ಸಿಟಿಮ್ಯಾಜಿಸ್ಟ್ರೇಟರಿಗೆ ಅವೇ ಸಾಕಾಗಬಹುದು. ಅವನೂ ಅವಳಿಗೆ ತಕ್ಕವನೇ ಇದ್ದಾನೆ. ಅಝೀಜ, ನಿನ್ನ ಸಲುವಾಗಿ ಮಾತ್ರ ಮಾವಿನ ಕಾಯಷ್ಟು ಇದ್ದವಳನ್ನು ನಾನು ತಂದುಕೊಡುತ್ತೇನೆ. . '

' ಬೇಡ, ಬೇಡ. '

' ಅಂದರೆ ನಾನು ನಿಜವಾಗಿಯೂ ತಂದುಕೊಡುತ್ತೇನೆಂದು ತಿಳಿದಿರೇನು ? ಛೇ, ಇಲ್ಲ. ಹಾಗೆ ಮಾಡಿದರೆ ನಿನ್ನ ದೊಡ್ಡಿಸ್ತಿಕೆಗೇ ಒಂದು ಗಂಡಾಂತರವೊದಗುವದು. '

ಈ ಮದುವೆಯ ಮಾತು ಹೊರಟದ್ದರಿಂದ ಅಝೀಜನ ಮನಸ್ಸು ಕಲಕತ್ತೆಯ ಕಡೆಗೆ ಓಡಿತು. ಅವನ ಮುಖವು ಗಂಭೀರವಾಯಿತು. ಆ ಪ್ರಿನ್ಸಿಪಾಲನನ್ನೂ ಮನವೊಲಿಸಿ ತನ್ನೊಡನೆ ಅಲ್ಲಿಗೆ ಕರೆದುಕೊಂಡು ಹೋಗಿ ತೊಡಕಿನಲ್ಲಿ ಹಾಕಿದ್ದರೆ ಏನಾಗಬಹುದಾಗಿತ್ತು ! ಒಮ್ಮೆಂದೊಮ್ಮೆ ಅವನು ಗೆಳೆಯನ ವಿಷಯಕ್ಕಿದ್ದ ತನ್ನ ಮನೋವೃತ್ತಿಯನ್ನೇ ಬದಲಾಯಿಸಿಬಿಟ್ಟನು. ತಾನೊಬ್ಬ ಭಾರತದೇಶದಲ್ಲಿಯ ಕುತ್ತುಗಳನ್ನರಿತ ಸಂರಕ್ಷಕನಂತೆ ಅವನು ವರ್ತಿಸಹತ್ತಿದನು.

' ಫೀಲ್ಡಿಂಗ, ನೀವು ಎಲ್ಲ ಕಡೆಯಲ್ಲಿಯೂ ಎಲ್ಲ ರೀತಿಯಿಂದಲೂ ಜಾಗರೂಕರಾಗಿರುವದು ಸಾಧ್ಯವಿಲ್ಲ. ಯಾಕಂದರೆ ನೀವು ಆಡುವದು,

ಮಾಡುವದು, ನಡೆಯುವದು, ನೋಡುವದು ಇದೆಲ್ಲದರ ಮೇಲೂ ಯಾವನಾದರೊಬ್ಬ ಹೊಟ್ಟೆಕಿಚ್ಚಿನವನು ಕಣ್ಣಿಟ್ಟೇಬಿಟ್ಟಿರುತ್ತಾನೆಂದು ನೀವು ತಿಳಿಯಲೇಬೇಕು. ಈಗ ಹೇಳಿದರೆ ನಿಮಗೆ ಆಶ್ಚರ್ಯವಾಗಬಹುದು; ನೀವಿಲ್ಲಿ ವಿಚಾರಿಸಲಿಕ್ಕೆ ಬಂದಾಗ ಇಲ್ಲಿ ಕನಿಷ್ಟ ಮೂವರು ಗುಪ್ತಚಾರರಿದ್ದರು. ನೀವು ಆ ರೀತಿಯಾಗಿ ದೇವರ ವಿಷಯಕ್ಕೆ ಮಾತಾಡಿದ್ದನ್ನು ನೋಡಿ ನನ್ನ ಮನಸ್ಸೇ ಅಸ್ತವ್ಯಸ್ತವಾಗಿ ಹೋಯಿತು. ಅದನ್ನವರು ರಿಪೋರ್ಟಮಾಡದೆ ಬಿಡುವದಿಲ್ಲ.'

'ಯಾರಿಗೆ?'

'ಉಳಿದದ್ದೆಲ್ಲ ಚೆನ್ನಾಗಿಯೆ ಇತ್ತು. ಆದರೆ ನೀವು ನೀತಿಯ ವಿರುದ್ಧ ಮಾತನಾಡಿದ್ದೂ ನೀವಿಲ್ಲಿ ಎರಡನೇಯವರ ಕೆಲಸ ಕಸಿದುಕೊಳ್ಳಲಿಕ್ಕೆ ಬಂದಿದ್ದೀರೆಂದು ಹೇಳಿದ್ದೂ ಬಹಳ ದಡ್ಡತನ. ಇಲ್ಲದ ಸುಳ್ಳುಸುದ್ದಿ ಹುಟ್ಟಿಸಲಿಕ್ಕೆ ಇದು ಮಹಾಪ್ರಸಿದ್ಧ ಸ್ಥಳ. ಇಷ್ಟೆಲ್ಲ ಯಾಕೆ, ನಿಮ್ಮ ಸಾಕ್ಷಾತ್ ಶಿಷ್ಯರ ಪೈಕಿ ಒಬ್ಬನು ಇದನ್ನೆಲ್ಲ ಕೇಳುತ್ತಿದ್ದನು.'

'ನೀನಿದನ್ನು ಹೇಳಿದ್ದರಿಂದ ನನ್ನಮೇಲೆ ಬಹಳ ಉಪಕಾರವಾಡಿದಂತಾಯಿತು. ನಾನಿನ್ನು ಹೆಚ್ಚು ಜಾಗರೂಕನಾಗಿರಬೇಕು. ಒಮ್ಮೆ ನನಗೆ ಮಾತನಾಡುವ ರುಚಿ ಹತ್ತಿತೆಂದರೆ ನಾನು ನನ್ನನ್ನೇ ಮರೆತುಬಿಡುತ್ತೇನೆ. ಇಷ್ಟಾಗಿಯೂ ನನಗೇನಾಗಬೇಕಾಗಿದೆ? ಎಲ್ಲ ಬಿಟ್ಟಿದ್ದೇನೆ.'

'ಆದರೆ ಮನಬಿಚ್ಚಿ ಎಲ್ಲವನ್ನೂ ಮಾತಾಡುವದರಿಂದ ಸುಮ್ಮನೆ ತೊಂದರೆಗೊಳಗಾಗುವಿರಿ.'

'ಹಿಂದೆ ಎಲ್ಲಾ ಹೀಗೆಯೆ ಆಗಿದೆ.'

'ಆಗೊ, ಅದನ್ನು ಕೇಳಿ!..ಅದರ ಪರಿಣಾಮವೆಂದರೆ ನಿಮ್ಮ ನೌಕರಿಗೆ ಚಕ್ಕರ ಬರಬಹುದು.'

'ನಾನು ಹಾಗೆ ಮಾಡಿದರಲ್ಲವೆ ಹೀಗಾಗುವದು....ಓ! ಅದನ್ನೆಲ್ಲ ನಾನು ನೋಡಿಕೊಳ್ಳುತ್ತೇನೆ. ಇಷ್ಟೂವಿೂರಿ ನೌಕರಿ ಹೋದರೆ ಹೋಯಿತು. ಒಂದು ರೀತಿಯಿಂದ ನಿರಂಬಳಾದಂತಾಯಿತು. ಅಲ್ಲಿಂದೇನು, ಹೊರಡುತ್ತೇನೆ ನಿರಂಬಳಜೀವನಯಾತ್ರೆಗೆ.'

'ನಿರಂಬಳಜೀವನಯಾತ್ರೆ! ಏನಿದು? ನಿಮ್ಮ ಜಾತಿಯೇ ವಿಲಕ್ಷಣ

ಜಾತಿ!' ಎಂದು ಆಯ್ಲೀಜನು ಆಶ್ಚರ್ಯದಿಂದ ನುಡಿದು ನಿದ್ದೆಮಾಡುವದ ಕ್ಕಾಗಿ ಬೆನ್ನು ಹೊರಳಿಸಿದನು; ಆದರೆ ಮತ್ತೆ ತಿರುಗಿ 'ನೀವು ಹೀಗಾಗ ಲಿಕ್ಕೆ ಕಾರಣೇನು, ನಿಮ್ಮ ಭೂಮಿಯ ಗುಣವೋ, ಗಾಳಿಯ ಗುಣವೋ, ಯಾವ ಗುಣ?' ಎಂದು ಕುತೂಹಲದಿಂದ ಕೇಳಿದನು.

'ಯಾಕೆ, ನಿಮ್ಮ ಹಿಂದೀ ಜನರಲ್ಲಿಯೆ ಬೇಕಾದಷ್ಟು ಜನ ಹೀಗಿದ್ದಾ ರಲ್ಲ, ಬಾವಾ-ಬೈರಾಗಿ, ಸಾಧು-ಸಂತರು; ನಿಮ್ಮ ದೇಶದ ಬಗ್ಗೆ ನನ್ನಲ್ಲೇ ನಾದರೂ ಆದರ ಹುಟ್ಟಿದ್ದರೆ ಅದು ಇದಕ್ಕಾಗಿಯೆ. ಹೆಂಡರು-ಮಕ್ಕಳು ಆಗು ವತನಕ ಬೇಕಾದವನು ಈ ನಿರಂಬಳಜೀವನವನ್ನು ನಡೆಯಿಸಬಹುದು. ಇದನ್ನು ಕಳೆಯುವದೊಂದು ಮದುವೆಯಲ್ಲಿಯ ಮಹಾದೋಷವೆಂದು ನನ್ನ ಮತ. ಹಾಗೆ ನೋಡಿದರೆ ನಾನೊಬ್ಬ ಪವಿತ್ರತೆಯಿಲ್ಲದ ಮಹಾಪವಿತ್ರ ಮನುಷ್ಯ. ಇದನ್ನು ಬೇಕಾದರೆ ಆ ನಿನ್ನ ಗುಪ್ತಚಾರರಿಗೆ ತಿಳಿಸು. ಬೇಕಾ ದಲ್ಲಿ ಅವರದನ್ನೂದಲಿ.'

ಆಯ್ಲೀಜನು ಅದನ್ನು ಕೇಳಿ ಮುಗ್ಧನಾದನು, ಮನಸೋತನು; ಈ ಹೊಸ ವಿಚಾರದ ಗುಂಗು ಅವನ ಮನಸ್ಸಿನಲ್ಲಿ ಹೊಕ್ಕಿತು. ಇದಕ್ಕಂತೇ ಫೀಲ್ಡಿಂಗ ಮತ್ತು ಫೀಲ್ಡಿಂಗಸಂಥ ಇನ್ನು ಕೆಲರು ನಿರ್ಭಯರಾಗಿದ್ದರು. ಅವರಿಗೇನೂ ಹಾನಿ ತಟ್ಟುವಂತಿರಲಿಲ್ಲ. ಆದರೆ ಆಯ್ಲೀಜನು ಮಾತ್ರ ತನ್ನ ಸಮಾಜದಿಂದ, ತನ್ನ ಇಸ್ಲಾಂ ಧರ್ಮದಿಂದ ಬದ್ಧನಾಗಿದ್ದನು. ಒಂದು ಸಂಪ್ರದಾಯವನ್ನೊಪ್ಪಿ ಅದಕ್ಕೇ ಅಂಟಿಕೊಂಡಿದ್ದನು; ಮುಂದಿನ ಸಮಾಜ ದಲ್ಲಿ ಬಾಳುವದಕ್ಕಾಗಿ ಮಕ್ಕಳನ್ನು ಹಡೆದಿಟ್ಟಿದ್ದನು; ಅವನೇನೊ ಹೀಗೆ ಗೊತ್ತುಗುರಿಯಿಲ್ಲದೆ ಹೊಲಸು ಬಂಗ್ಲೆಯಲ್ಲಿದ್ದರೂ ಅವನಾಗಲೆ ಸಮಾಜದ ಆಧಾರಸ್ತಂಭನಾಗಿದ್ದನು.

'ಈ ನನ್ನ ಕೆಲಸದಿಂದ ನನ್ನನ್ನು ತಳ್ಳುವದು ಸಾಧ್ಯವಿಲ್ಲ. ಯಾಕಂದರೆ ನನ್ನ ಕೆಲಸ ಶಿಕ್ಷಣಕೊಡುವದು, ಜನರಿಗೆ ತಮ್ಮ ವ್ಯಕ್ತಿತ್ವವನ್ನು ಕಾಯ್ದು ಕೊಳ್ಳಲಿಕ್ಕೂ ಎರಡನೆಯವರ ವ್ಯಕ್ತಿತ್ವವನ್ನು ತಿಳಿದುಕೊಳ್ಳಲಿಕ್ಕೂ ಕಲಿಸು ವದು. ಮೇಲಾಗಿ ಇದರಲ್ಲಿ ನನಗೆ ವಿಶ್ವಾಸವಿದೆ. ಗವ್ಹರ್ನಮೆಂಟ್ ಕಾಲೇಜ ದಲ್ಲಿರುವಾಗ ನಾನು ಇದನ್ನೇ ತ್ರಿಕೋನಮಿತಿ ಮೊದಲಾದವುಗಳೊಡನೆ

ಬೆರಸಿ ಹೇಳುವೆನು; ಅಲ್ಲಿಂದ ಹೊರಬಿದ್ದು ಸಾಧುವಾದರೆ ಅದನ್ನೇ ಬೇರೆ ಯಾವುದರೊಡನೆಯೊ ಬೆರಸಿ ಹೇಳುವೆನು.'

ಫೀಲ್ಡಿಂಗನು ತನ್ನ ಈ ಪ್ರಕಟನೆಯಂತಿದ್ದ ಮಾತನ್ನು ಮುಗಿಸಿದ ಮೇಲೆ ಇಬ್ಬರೂ ಸುಮ್ಮನಾದರು. ನೊರಜುಗಳು ಮೊದಲಿನಕಿಂತ ಹೆಚ್ಚಾಗಿ ಅವರನ್ನು ಮುತ್ತಿದವು; ಕಣ್ಣುಗಳ ಎದುರಿನಲ್ಲಿಯೆ ಕುಣಿದಾಡಿದವು; ಕಿವಿಗಳಲ್ಲಿ ಒಳಹೊಕ್ಕು ಹಾಡಿದವು; ಕಣ್ಣರೆಪ್ಪೆಯು ಕೂಡ ಆಡಿದವು. ಫೀಲ್ಡಿಂಗನು ಹುಚ್ಚೆದ್ದು ಅವನ್ನು ಹೊಡೆಯಬೇಕೆಂದು ಹೋಗಿ ತನ್ನ ಮುಖಕ್ಕೇ ಹೊಡೆದುಕೊಂಡನು. ಹೀಗೆ ನೊರಜಿನ ಕೂಡ ಕುಸ್ತಿಯಾಡಿ ಅವನ ಮೈಯಲ್ಲಿ ಸ್ವಲ್ಪ ಕಾವು ಹುಟ್ಟಿತು. ಅದರಿಂದಲೆ ಅವನು ಮನೆಗೆ ಹೊರಡಲಿಕ್ಕೆ ಸಿದ್ಧನಾದನು.

'ನನ್ನ ಕುದುರೆಯನ್ನಷ್ಟು ತರಲಿಕ್ಕೆ ನಿನ್ನ ಚಾಕರನಿಗೆ ಹೇಳು. ನಾನು ಆಡುವ ಉರ್ದು ಅವನಿಗೆ ತಿಳಿಯುವದಿಲ್ಲೆಂದು ತೋರುತ್ತದೆ.'

'ನನಗೆ ಗೊತ್ತಿದೆ. ನಾನೇ ಬೇಡೆಂದು ಅವನಿಗೆ ಅಪ್ಪಣೆ ಕೊಟ್ಟಿದ್ದೆ. ನಿಮ್ಮ ಜನಕ್ಕೆ ನಾವು ಹೀಗೇ ಮೋಸಹಾಕುತ್ತಿರುತ್ತೇವೆ. ಪಾಪ! ನೀವು ನಮ್ಮ ಫೀಲ್ಡಿಂಗ್ ಅಲ್ಲವೆ! ಆಗಲಿ ನಾನು ನಿಮ್ಮನ್ನು ಹೋಗಗೊಡುತ್ತೇನೆ. ಆದರೆ‥ಓ! ನಿಮ್ಮನ್ನೂ ಹಮೀದುಲ್ಲಾನನ್ನೂ ಬಿಟ್ಟರೆ ನನಗಿಲ್ಲಿ ಮಾತನಾಡಲಿಕ್ಕೆ ಯಾರೂ ಇಲ್ಲದಂತಾಗುವದು. ಹಮೀದುಲ್ಲಾ ನಿಮ್ಮ ಮನಸ್ಸಿಗೆ ಬಂದನೇ?'

'ಓಹೋ! ಚೆನ್ನಾಗಿ!'

'ನೀವು ತೊಂದರೆಯಲ್ಲೇನಾದರೂ ಬಂದರೆ ಒಮ್ಮೆಲೆ ನಮ್ಮ ಕಡೆಗೇ ಬರಬೇಕು ಮತ್ತೆ...ಹಾಗೆ ವಚನ ಕೊಡುತ್ತೀರಾ?'

'ನಾನೆಂದೂ ತೊಂದರೆಯಲ್ಲಿಯೆ ಬರುವದಿಲ್ಲ.'

'ಎಂಥ ವಿಚಿತ್ರ ವ್ಯಕ್ತಿಯಿದು! ಇವನಿಗೆಂದೂ ತೊಂದರೆ ಬರದಿರಲೆಂದೇ ನಾನು ಹಾರೈಸುತ್ತೇನೆ.' ಎಂದು ಅಝೀಜನು ತಾನೊಬ್ಬನೆ ಉಳಿದ ಮೇಲೆ ಆಲೋಚಿಸಿದನು. ಅವನ ಆದರಬುದ್ಧಿಯು ಕಡಿಮೆಯಾದಮೇಲೆ ಅದು ಉದಾರಾಶ್ರಯ ಕೊಡುತ್ತೇನೆಂಬ ಭಾವದ ಕಡೆಗೆ ದುಡುಕಿತು. ಯಾವನು ಇಷ್ಟೊತ್ತಿನ ವರೆಗೆ ತನ್ನದೆಲ್ಲವನ್ನೂ ಹೊರಗಿಟ್ಟು ಬಯಲು

ಬಂಗಾರವಾಗಿ ನಡೆದನೊ ಅವನ ವಿಷಯಕ್ಕೂ ಕೂಡ ಬಹಳ ಹೊತ್ತು ಆದರ ಉಳಿಯುವದು ಅಗ್ನೀಜನಿಗೂ ಕಠಿಣವಾಯಿತು.

ಫೀಲ್ಡಿಂಗನ ಪರಿಚಯವು ಹೆಚ್ಚಾದಂತೆ ಅವನು ಒಳ್ಳೆ ಅಂತಃಕರಣಿ ಯೆಂದೂ ಸಂಪ್ರದಾಯದ ಡಾಂಭಿಕತನವಿಲ್ಲದವನೆಂದೂ ಆದರೆ ಸ್ವಲ್ಪ ಬುದ್ಧಿಯೂ ಇಲ್ಲದವನೆಂದೂ ಅವನಿಗೆ ಕಂಡುಬಂತು. 'ರಾಮ್‌ಚಂದ, ರಫಿ, ಮತ್ತು ಕಂಪನಿ'ಯ ಎದುರಿಗೆ ಅವನ ಆ ಸ್ಪಷ್ಟೋಕ್ತಿಯೂ ಕೂಡ ಅಪಾಯಕರವಾದದ್ದೂ ಅಸಭ್ಯತನದ್ದೂ ಆಯಿತಲ್ಲದೆ ಅದರಿಂದ ವಿಶೇಷ ಕಾರ್ಯವೇನೂ ಆಗಲಿಲ್ಲ.

ಆದರೆ ಅವರು ಗೆಳೆಯರು, ಅಣ್ಣತಮ್ಮಂದಿರು ಎಂಬುದು ಮಾತ್ರ ನಿಶ್ಚಿತ ವಾಯಿತು. ಈ ಒಪ್ಪಂದಕ್ಕೆ ಅವರು ಕೂಡಿ ಫೋಟೊ ತೆಗೆಸಿದ್ದೇ ದೊಡ್ಡ ಆಧಾರವಾಯಿತು. ಒಬ್ಬರೊಬ್ಬರಲ್ಲಿ ನಂಬಿಗೆ ಹುಟ್ಟಿತು. ಒಂದು ರೀತಿ ಯಲ್ಲಿ ಪ್ರೇಮವೆ ಜಯಶಾಲಿಯಾಯಿತು ಎನಬಹುದು. ಈ ಎರಡು ತಾಸು ಗಳಲ್ಲಿಯ ಸುಖಸ್ಮರಣೆಯಲ್ಲಿಯೆ—ಘಾಲೀಬನ ಕಾವ್ಯ, ಸ್ತ್ರೀ ಸೌಂದರ್ಯ, ಹಳೇಮಿತ್ರ ಹಮೀದುಲ್ಲಾ, ಗುಣವಂತ ಫೀಲ್ಡಿಂಗ, ತನ್ನ ಪ್ರೇಮದ ಹೆಂಡತಿ—ಮಕ್ಕಳು—ಮಲಗಿಕೊಳ್ಳಬೇಕೆಂದು ಅವನು ಹಾಸಿಗೆಯ ಮೇಲೆ ಬಿದ್ದುಕೊಂಡನು. ಕೂಡಲೆ ಅವನು ತನ್ನ ಆ ಆನಂದದ ಮೊಗ್ಗೆಯು ಕಮರುವ ಭಯವಿಲ್ಲದ, ಅನಂತವಾದ ಉದ್ಯಾನದಲ್ಲಿ ಅಖಂಡವಾಗಿ ಅರಳಿ ಅಮರವಾಗಿ ಉಳಿಯುವ, ಒಂದು ದಿವ್ಯಲೋಕವನ್ನೆ ಪ್ರವೇಶಿಸಿದನು.

—

## ಪ್ರಕರಣ ೧೨

ಗಂಗೆಯು ವಿಷ್ಣುವಿನ ಪಾದದಿಂದ, ಶಿವನ ಜಡೆಯಿಂದ ಹರಿದುಬರುತ್ತದೆಂದು ಹೇಳಿದರೂ ಅದು ಅಷ್ಟು ಪ್ರಾಚೀನ ಹೊಳೆಯಲ್ಲ. ಭೂಗರ್ಭಶಾಸ್ತ್ರವು ಧರ್ಮದಕಿಂತಲೂ ದೂರದ ವರೆಗೆ ಹೋಗಿ, ಒಂದು ಕಾಲದಲ್ಲಿ ಈ ಗಂಗೆಯೂ ಇದನ್ನು ಪೋಷಿಸುವ ಈ ಹಿಮಾಲಯಪರ್ವತವೂ ಇದ್ದಿದ್ದಿಲ್ಲವೆಂದೂ ಹಿಂದುಸ್ತಾನದ ಈಗಿನ ಪವಿತ್ರಸ್ಥಳಗಳೆಲ್ಲ ಸಮುದ್ರದಲ್ಲಿ ಮುಳುಗಿದ್ದವೆಂದೂ ಶೋಧಿಸಿ ಹೇಳುತ್ತಿದೆ. ಪರ್ವತಗಳು ಮೇಲೆದ್ದು ಅವುಗಳ ಚೂರುಗಳು ಸಮುದ್ರವನ್ನು ಹುಗಿದುಬಿಟ್ಟವು. ಅಲ್ಲಿಂದ ಈ ದೇವತೆಗಳು ಅವುಗಳ ಮೇಲೆ ಕುಳಿತುಕೊಂಡು ಈ ನದಿಯನ್ನು ತಂದರು. ಮತ್ತು ಈಗ ನಾವು ಅತಿ ಪ್ರಾಚೀನವೆಂದು ಹೇಳುವ ಭಾರತದೇಶವು ಆಗ ಅಸ್ತಿತ್ವಕ್ಕೆ ಬಂದಿತು. ಆದರೂ ಈ ಭಾರತದೇಶವು ನಿಜವಾಗಿಯೂ ಬಹಳ ಹಳೆಯದು. ಐತಿಹಾಸಿಕಯುಗಕ್ಕಿಂತ ಪ್ರಾಚೀನವಾಗಿದ್ದ ಸಮುದ್ರವಿದ್ದಾಗ ಈ ದ್ವೀಪಕಲ್ಪದ ದಕ್ಷಿಣಭಾಗವು ಆವಾಗಲೇ ಅಸ್ತಿತ್ವದಲ್ಲಿತ್ತು. ಮತ್ತು ದ್ರವಿಡರ ಎತ್ತರವಾದ ಪ್ರದೇಶಗಳು ಈ ಭೂಮಿ ಹುಟ್ಟಿದಾಗಿನಿಂದಲೂ ಅಚ್ಚಳಿಯದೆ ಇವೆ. ಇವು ಇತ್ತ ಒಂದು ಮಗ್ಗಲಿಗೆ ತಮ್ಮನ್ನು ಆಫ್ರಿಕಾಖಂಡಕ್ಕೆ ಮುಟ್ಟಿಸಿದ ಭೂಮಿಯೆಲ್ಲ ಮುಳುಗುವದನ್ನೂ ಅತ್ತ ಇನ್ನೊಂದು ಮಗ್ಗಲಿಗೆ ಹಿಮಾಲಯಪರ್ವತವು ಸಮುದ್ರದಿಂದ ಏಳುವದನ್ನೂ ಕಣ್ಣಾರೆ ನೋಡಿವೆ. ಜಗತ್ತಿನಲ್ಲಿಯೆ ಎಲ್ಲಕ್ಕೂ ಪ್ರಾಚೀನವಾದ ಪ್ರದೇಶಗಳಿವು! ಇವನ್ನು ಯಾವ ಸಮುದ್ರವೂ ಮುಳುಗಿಸಿಲ್ಲ; ಯಾವ ಬಿರುಗಾಳಿಯೂ ತೂರಿ ಒಗೆದಿಲ್ಲ. ಅಸಂಖ್ಯ ಯುಗಗಳಿಂದ ಇವನ್ನು ನೋಡುತ್ತ ಬಂದಿದ್ದ ಸೂರ್ಯನು ತನ್ನ ಹೊಟ್ಟೆಯನ್ನೆ ಹರಿದುಬಂದಾಗಿದ್ದ ಈ ಪೃಥ್ವಿಗೋಲದ ಗುರುತನ್ನು ಇವೇ ಆಕೃತಿಗಳಿಂದ, ರೂಪರೇಖೆಗಳಿಂದ ಈಗಲೂ ಹಿಡಿಯುತ್ತಾನೆ. ಸೂರ್ಯನ ದೇಹಸಂಬಧವೆಲ್ಲಿಯಾದರೂ ಕಂಡುಬರುತ್ತಿದ್ದರೆ ಅದು ಇಲ್ಲಿಯ ಈ ಅಗಮ್ಯ ಪ್ರಾಚೀನ ಗುಡ್ಡಗಳಲ್ಲಿ ಕಂಡುಬರುತ್ತಿದೆ.

ಇಷ್ಟಿದ್ದರೂ ಅವು ಕೂಡ ಈಗೆಷ್ಟೋ ಬದಲಾಗಹತ್ತಿವೆ. ಇತ್ತ ಈ

ಹಿಮಾಲಯದ ಹಿಂದುಸ್ಥಾನವು ಮೇಲಕ್ಕೆ ಬಂದಂತೆ ಅತ್ತ ಆ ಪ್ರಾಚೀನ ಹಿಂದುಸ್ಥಾನವು ಕೆಳಗಿಳಿಯುತ್ತಿಳಿಯುತ್ತ ಮೆಲ್ಲಗೆ ಭೂಮಿಯ ಹೊಟ್ಟೆಯನ್ನೇ ಸೇರಹತ್ತಿದೆ. ಇನ್ನು ಮುಂದೆ ಬರುವ ಯುಗಗಳಲ್ಲಿ ಸಮುದ್ರವೊಂದು ಇವುಗಳ ಮೇಲೂ ಹಾಯ್ದು ಹೋಗಿ ಸೂರ್ಯನಿಂದ ಹುಟ್ಟಿದ ಆ ಬಂಡೆಗಲ್ಲುಗಳನ್ನೆಲ್ಲ ಕೆಸರಿನಲ್ಲಿ ಮುಚ್ಚಿಬಿಡಬಹುದು. ಅಷ್ಟರಲ್ಲಿ ಗಂಗೆಯ ಬೈಲುಪ್ರದೇಶವೇ ಇವುಗಳ ಮೇಲೆ ಹಬ್ಬಿಬಿಡುವದು. ಅಂತೂ ಹೊಸ ದೇಶಗಳ ಕೆಳಗೆ ಅವು ಅಡಗಹತ್ತಿವೆಯೆನ್ನಬೇಕು. ಹಾಗೇ ಆದರೂ ಅವುಗಳ ಮುಖ್ಯಭಾಗವು ನೀರು ಮುಟ್ಟದೆ ಹಾಗೆ ಉಳಿಯಬಹುದು. ಆದರೆ ದಂಡೆಗುಂಟಿದ್ದ ಅವುಗಳ ಕೊನೆಗಾವಲುಗಳು ಕತ್ತರಿಸಿಹೋಗಿ ಹಬ್ಬಿದ ಪ್ರದೇಶದಲ್ಲಿಯ ಮಣ್ಣಲ್ಲಿ ಮೊಣಕಾಲುಮಟ, ಕುತ್ತಿಗೆಮಟ ದೂರ ಮುಳುಗುವವು. ಇವು ಜಗತ್ತಿನಲ್ಲೆಲ್ಲ ವಿಲಕ್ಷಣವಾಗಿವೆ. ಮತ್ತು ಇವುಗಳನ್ನು ನೋಡುವದರಿಂದ ಮನುಷ್ಯನು ಬೆಪ್ಪಾಗುತ್ತಾನೆ. ಕಡಿದಾಗಿ ಹುಚ್ಚಾಪಟ್ಟೆಯಾಗಿ ಆಳತೆಗೆಟ್ಟು ಅವು ಮತ್ತೆ ಒಮ್ಮೆಲೆ ಬಂದಿಲ್ಲೊಂದು ದಿನ ಮೇಲೇಳುತ್ತವೆ. ಕಣ್ಣಿಗೆ ಕಂಡ, ಕನಸಿನಲ್ಲಿ ನೋಡಿದ ಯಾವುದಕ್ಕೂ ಅವುಗಳ ಸಂಬಂಧವಿರುವದಿಲ್ಲ. ಹಿಂದೂ ಧರ್ಮವು ಆ ಬಂಡೆಗಲ್ಲುಗಳಲ್ಲಿ ಮೂರ್ತಿಗಳನ್ನು ಕೊರೆದಿದೆ; ಅವಕ್ಕೆ ಗುಡಿಗಳನ್ನು ಕಟ್ಟಿದೆ; ಗುಡಿಗಳಿಗೆ ಸಾರಣೆ ಕಾರಣೆ ಮಾಡಿದೆ; ಆದರೆ ಗುಡಿಗಳಿಗೇ ಯಾರೂ ಹೋಗುವದಿಲ್ಲ. ಬಹುಶಃ ಅಗಾಧತೆಯನ್ನು ಹುಡುಕುವ ಯಾತ್ರಿಕರು ಇಲ್ಲಿ ಅದನ್ನು ಅತಿಯಾಗಿ ಕಂಡಿರಬಹುದು. ಕೆಲ ಸಾಧುಗಳು ಈ ಗುಹೆಗಳಲ್ಲಿ ಒಮ್ಮೆ ವಾಸಿಸಿರಬಹುದು. ಆದರೆ ಅವರನ್ನು ಹೊಗೆ ಹಾಕಿ ಹೊರಗೆ ಹಾಕಿರಬೇಕು. ಬುದ್ಧದೇವನು ಸಹ ಗಯೆಯಲ್ಲಿಯ ಬೋಧಿಪುರಕ್ಕೆ ಹೋಗುವಾಗ ಈ ದಾರಿಯಿಂದಲೇ ಹೋಗಿರಬೇಕು. ಅವನು ತನ್ನಕಿಂತಲೂ ಪೂರ್ತಿಯಾದ ನಿವೃತ್ತಿಯನ್ನು ದೂಷಿಸಿದನು. ಮತ್ತು ಈ ಮಾರವಾರದಲ್ಲಿ ತನ್ನ ಒದ್ದಾಟವನ್ನಾಗಲಿ ಗೆಲುವನ್ನಾಗಲಿ ತೋರಿಸುವ ಯಾವ ಕಥೆಗಳನ್ನೂ ಬಿಟ್ಟುಹೋಗಲಿಲ್ಲ.

ಆ ಮಾರವಾರ ಗುಹೆಗಳನ್ನು ವರ್ಣಿಸುವದಾದರೆ ಹೀಗೆ ವರ್ಣಿಸಬಹುದು: ಎಂಟು ಫೂಟು ಉದ್ದ, ಐದು ಫೂಟು ಎತ್ತರ, ಮೂರು ಫೂಟು ಅಗಲ ಇದ್ದ ಒಂದು ಸುರಂಗಮಾರ್ಗವು ಇಪ್ಪತ್ತು ಫೂಟು ವ್ಯಾಸವುಳ್ಳ

ಒಂದು ದುಂಡನ್ನ ಕೋಣೆಗೆ ಒಯ್ಯುತ್ತದೆ. ಇದೇ ರೀತಿಯ ರಚನೆಯು ಎಲ್ಲ ದಿನ್ನೆಗಳಲ್ಲಿಯೂ ಒಂದೇ ಪ್ರಕಾರವಾಗಿ ಕಂಡುಬರುತ್ತದೆ. ಮಾರವಾರ ಗವಿಯೆಂದರೆ ಇಷ್ಟೇ; ತೀರಿತು. ಪ್ರವಾಸಿಗನಿಗೆ ಇಂಥ ಒಂದು, ಎರಡು, ಮೂರು, ನಾಲ್ಕು, ಹದಿನಾಲ್ಕು, ಇಪ್ಪತ್ತನಾಲ್ಕು ಗುಹೆಗಳನ್ನು ನೋಡಿಯೂ ತಿರುಗಿ ಬಂದಮೇಲೆ ಅವನಿಗೆ ತನಗೇನು ಅವನ್ನು ನೋಡಿದ್ದರಿಂದ ಆನಂದವೆನಿಸಿತೊ, ದುಃಖವೆನಿಸಿತೊ ಅಥವಾ ಏನೂ ಅನಿಸಲೇ ಇಲ್ಲವೊ ಯಾವದೂ ತಿಳಿಯದಂತಾಗುತ್ತದೆ. ಆದುದರಿಂದ ಅವುಗಳ ವಿಷಯಕ್ಕೆ ಚರ್ಚೆಮಾಡುವದೂ ಅವನಿಗೆ ಅಸಾಧ್ಯ; ಮನಸ್ಸಿನಲ್ಲಿಯಂತೂ ಇಟ್ಟುಕೊಳ್ಳುವದು ಮೊದಲೇ ಅಸಾಧ್ಯ. ಯಾಕಂದರೆ ಗುಹೆಗಳ ಆ ಪಡಿಯಚ್ಚು—ಜೇನಹುಟ್ಟು, ತೊಗಲಬಾವಲಿ ಮೊದಲುಮಾಡಿಕೊಂಡು ಕೆತ್ತಿಗೆಯ ಕೆಲಸದ ವರೆಗೆ ಒಂತು—ಒದಲೇ ಆಗುವಂತಿಲ್ಲ. ಹೀಗಾಗಿ ಒಂದನ್ನು ನೋಡಿಬಿಟ್ಟರೆ ಎರಡನೆಯದನ್ನು ನೋಡುವದೇ ಬೇಡ. ಆ ಗುಹೆಗಳಿಗೆ ಏನೂ ಹತ್ತಿಕೊಂಡಿಲ್ಲ. ಅವುಗಳ ಕೀರ್ತಿಯು ಮನುಷ್ಯನ ನಾಲಿಗೆಯನ್ನು ಅವಲಂಬಿಸಿಲ್ಲ. ಸುತ್ತಲಿನ ಆ ರಮ್ಯಬೈಲುಪ್ರದೇಶವೂ ಅಲ್ಲಿಯ ಹಾರಾಡುವ ಪಕ್ಷಿಗಳೂ ಕೂಡಿ ಅದಕ್ಕೆ ಈಗಿದ್ದ ಈ ಕೀರ್ತಿಕಳಸವನ್ನಿಟ್ಟವು. ಅವು ಕೊಟ್ಟ ಆ ಕೀರ್ತಿಯು ದಿಗಂತದಲ್ಲೆಲ್ಲ ಹಬ್ಬಿ, ಅಲ್ಲಿಯ ಗಾಳಿಯಲ್ಲಿಯೂ ಬೆರೆತು ಈ ಮನುಷ್ಯನಿಗೆ ತಿಳಿಯದೆ ಅವನ ಉಸಿರಿನೊಂದಿಗೆ ಅದು ಒಳಹೊಕ್ಕಿರಬೇಕು.

ಅವು ಕತ್ತಲೆಗವಿಗಳು. ಅವುಗಳ ಮುಖವು ಸೂರ್ಯನಿಗೆ ದೂರಾಗಿದ್ದರೂ ತೀರ ಸ್ವಲ್ಪ ಬೆಳಕು ಆ ಸುರಂಗಮಾರ್ಗದಿಂದ ದುಂಡನ್ನ ಕೋಣೆಗೆ ಹೋಗುತ್ತದೆ. ಅಲ್ಲಿ ನೋಡುವದೇನೂ ಇಲ್ಲ. ಇದ್ದರೂ ನೋಡಲಿಕ್ಕೆ ಕಣ್ಣೂ ಇಲ್ಲ. ಕೊನೆಗೆ ಈ ಒಂದು ಐದು ನಿಮಿಷದ ನೋಟಕ್ಕಾಗಿ ಅಲ್ಲಿಂದಿಲ್ಲಿಗೆ ಬಂದ ಪ್ರವಾಸಿಗನು ಆ ಕತ್ತಲೆಯಲ್ಲಿ ಒಂದು ಬೆಂಕಿಕಡ್ಡಿಯನ್ನು ಕೊರೆಯುವನು. ಆಗ ಮತ್ತೊಂದು ಜ್ವಾಲೆಯು ಬಂಡೆಗಲ್ಲಿನ ಮಧ್ಯದಿಂದ ಎದ್ದು ಅದರ ಮೇಲ್ಮೈಕಡೆಗೆ ಸೆರೆಯಲ್ಲಿದ್ದ ಭೂತದಂತೆ ಸರಿಯಹತ್ತುವದು. ಆ ದುಂಡುಕೋಣೆಯ ಗೋಡೆಗಳು ಅತ್ಯಂತ ನುಣುವಾಗಿವೆ. ಆ ಎರಡೂ ಜ್ವಾಲೆಗಳು ಒಂದನ್ನೊಂದು ಸಮೀಪಿಸಿ ಐಕ್ಯವಾಗಲಿಕ್ಕೆ ಹೆಣಗಾಡುತ್ತವೆ.

ಅದು ಸಾಧ್ಯವಾಗುವದಿಲ್ಲ. ಯಾಕಂದರೆ ಒಂದು ಹವೆಯನ್ನು ಸಿರಾಡಿಸುತ್ತದೆ; ಇನ್ನೊಂದು ಕಲ್ಲನ್ನು ಸಿರಾಡಿಸುತ್ತದೆ. ಮನೋಹರವಾದ ವರ್ಣಗಳಿಂದೊಡಗೂಡಿದ ಕನ್ನಡಿಯೊಂದನ್ನು ಕಾಮಿಗಳ ಮಧ್ಯದಲ್ಲಿಟ್ಟಂತಾಗಿದೆ. ಕೋಮಲವಾದ ಕೆಂಪು, ಬಿಳಿ ಚುಕ್ಕಿಗಳು ನಡುನಡುವೆ ಮೂಡಿವೆ. ಅತಿ ಹೃದಯಂಗಮವಾದ ತಾರಾರಾಶಿಯು, ಧೂಮಕೇತುವಿನ ಬಾಲದಕಿಂತ ಅಥವಾ ಮಧ್ಯಾಹ್ನದ ಚಂದ್ರನಕಿಂತ ತಿಳಿಯಾದ ಛಾಯೆಗಳು, ಕರೆಶಿಲೆಯು ಎಲ್ಲ ನಶ್ವರ ಜೀವನವೂ ಇಲ್ಲಿ ದೃಗ್ಗೋಚರವಾಗಿದೆ. ಮುಂದೆ ಮುಂದೆ ಬಹುದೂರ ಸಾಗುವ ಬೈಲಿನಲ್ಲಿ ಕೈಮುಟ್ಟಿಗೆಗಳು, ಬೆರಳುಗಳು, ಎದ್ದು ನಿಂತಿವೆ. ಈ ಗುಹೆಯ ಒಳಭಾಗವು ಆ ಮುಟ್ಟಿಗೆಗಳ ಹೊರವನ್ನೇಯಿದ್ದಂತೆ. ಎಂಥ ಪ್ರಾಣಿಯ ಮೈಗಿಂತಲೂ ಮೃದುವಾಗಿದೆ; ಗಾಳಿಯು ಧಡಿಕೆಯಿಲ್ಲದ ನೀರಿನಂತೆ ಸಾಪಾಗಿದೆ. ಕಾಮದಕಿಂತಲೂ ಹೆಚ್ಚಾಗಿ ಉದ್ರೇಕಗೊಳಿಸುತ್ತದೆ. ಪ್ರಕಾಶವು ಹೆಚ್ಚಿತು; ಜ್ವಾಲೆಗಳು ಒಂದಕ್ಕೊಂದು ಮುಟ್ಟಿದವು; ಮುದ್ದಿಟ್ಟವು; ಮಾಯವಾದವು. ಗುಹೆಯು ಮತ್ತೆ ಎಲ್ಲ ಗುಹೆಗಳಂತೆ ಕತ್ತಲೆಯಿಂದ ತುಂಬಿತು.

ದುಂಡನ್ನ ಕೋಣೆಯ ಗೋಡೆಗಳು ಮಾತ್ರ ನುಣುಪಾಗಿದ್ದು ಸುರಂಗದ ಮಗ್ಗಲುಗಳು ಹುರಬರಕಾಗಿವೆ. ಅವು ಆ ಒಳಗಿದ್ದ ಪೂರ್ಣತೆಯ ಮೇಲೆ ಮರೆತ ವಿಚಾರದಂತೆ ಏರಿಬೀಳುತ್ತವೆ. ಆ ಕೋಣೆಗಳಿಗೆ ಪ್ರವೇಶ ಬೇಕೆನಿಸಿತು ; ಮನುಷ್ಯ ಮಾಡಿಬಿಟ್ಟ. ಉಳಿದೆಡೆಗೆ ಕರೆಕಲ್ಲುಗಳ ಒಳಗೊಳಗೆ ಪ್ರವೇಶವಿಲ್ಲದೆಷ್ಟೋ ಕೋಣೆಗಳಿವೆ ! ದೇವತೆಗಳ ಆಗಮನದ ಕಾಲದಿಂದಲೂ ಮುದ್ರೆಯನ್ನೊಡೆಯದ ಕೋಣೆಗಳವು ! ಅವು ಈ ಪ್ರವಾಸಿಗರು ಬಂದು ನೋಡಿ ಹೋಗುವ ಗುಹೆಗಳಿಗಿಂತ—ಬದುಕಿದವರಕಿಂತ ಸತ್ತವರೆ ಹೆಚ್ಚಿರುವ ಹಾಗೆ—ನಾಲ್ಕು ನೂರು, ನಾಲ್ಕು ಸಾವಿರ, ನಾಲ್ಕು ಲಕ್ಷಗಟ್ಟಲೆ ಹೆಚ್ಚಿವೆಯೆಂದು ಅಲ್ಲಿಯವರು ಹೇಳುವದುಂಟು. ಅವುಗಳೊಳಗೂ ಏನೂ ಇಲ್ಲ. ದ್ರವ್ಯವನ್ನಾಗಲಿ ರೋಗವನ್ನಾಗಲಿ ಹುಟ್ಟಿಸುವ ಮೊದಲು ಅವುಗಳಿಗೆ ಮುದ್ರೆ ಹಾಕಿದ್ದಾರೆ. ಮನುಷ್ಯರು ಕುತೂಹಲಿಗಳಾಗಿ ಅವನ್ನು ಅಗಿದು ತೆಗೆದರೆ, ಪಾಪಕ್ಕಾಗಲಿ ಪುಣ್ಯಕ್ಕಾಗಲಿ ಏನೂ ಹೆಚ್ಚು ಕೂಡಿಸಿದಂತಾಗುವದಿಲ್ಲ. ಇದೇ ಜಾತಿಯದೊಂದು ಗುಹೆಯು ಅತ್ಯಂತ ಎತ್ತರವಾದ ದಿನ್ನೆಯ

ಮೇಲಿದ್ದ ತೂಗುವ ದುಂಡು ಬಂಡೆಯಲ್ಲಿ ಇವೆಯೆಂದು ಜನವಾರ್ತೆಯಿದೆ. ಅದು ನೆಲ ಮಾಳಿಗೆ ಇಲ್ಲದ ಅನಂತ ದಿಕ್ಕುಗಳಲ್ಲಿ ಅನಂತವಾಗಿ ತನ್ನೊಳಗಿನ ಕತ್ತಲೆಯನ್ನೆ ಕನ್ನಡಿಸುವ ಒಂದು ನೀರ್‌ಗುಳ್ಳೆಯ ಮಾಟದ ಗವಿಯಂತೆ. ಆ ಬಂಡೆ ಬಿದ್ದು ಒಡೆದರೆ ಗುಹೆಯೂ ಬರಿದಿದ್ದ ತತ್ತಿಯಂತೆ ಒಡೆದುಹೋಗುವದು. ಆ ಬಂಡೆ ಪೊಳ್ಳಾಗಿದ್ದುದರಿಂದ ಗಾಳಿಗೆ ಕೂಡ ತೂಗಾಡುತ್ತಿದೆ; ಒಂದು ಕಾಗೆಯು ಕುಳಿತರೂ ಸಹ ಅಲುಗಾಡುತ್ತಿದೆ. ಆದುದರಿಂದಲೆ ಅದಕ್ಕೆ, ಆ ಭವ್ಯವಾದ ಪೀಠಕ್ಕೆ, ' ಕಾವಾದೋಲ್ ' ಎಂಬ ಹೆಸರು.

—

## ಪ್ರಕರಣ ೧೩

ಕೆಲವೊಂದು ತರಹದ ಪ್ರಕಾಶದಲ್ಲಿ ಯೋಗ್ಯ ಅಂತರದ ಮೇಲಿಂದ ಈ ಗುಡ್ಡಗಳು ಅದ್ಭುತರಮ್ಯವಾಗಿ ತೋರುತ್ತವೆ. ಸಂಜೆಯ ಹೊಂಬಿಸಿಲಲ್ಲಿ ಕ್ಲಬ್ಬಿನ ಮೇಲಟ್ಟದ ಬೈಲುಮಾಳಿಗೆಯ ಮೇಲೆ ನಿಂತು ನೋಡಿದಾಗ ಮಿಸ್ ಕ್ವೆಸ್ಟೆಡ್‌ಳಿಗೆ ಅವನ್ನು ಅಲ್ಲಿಯವರೆಗೆ ಹೋಗಿ ನೋಡಬೇಕೆಂದು ಬಲವಾದ ಆಶೆಹುಟ್ಟಿತು. ತನ್ನ ಈ ಆಶೆಯನ್ನು ಅಲ್ಲಿಯೆ ಮುಗ್ಗುಲಲ್ಲಿ ನಿಂತಿದ್ದ ಡೆರೆಕ್ಕಳಿಗೆ ತನ್ನ ಮಾತುಕತೆಯಲ್ಲಿ ಒಮ್ಮೆ ತಿಳಿಸಿದಳು. ಅಲ್ಲದೆ ಡಾ. ಅಝೀಜನು ಅಲ್ಲಿಗೆ ತಮ್ಮನ್ನು ಕರೆದುಕೊಂಡು ಹೋಗುವ ವ್ಯವಸ್ಥೆಮಾಡುವೆನೆಂದು ಫೀಲ್ಡಿಂಗನ ಮನೆಯಲ್ಲಿ ಹೇಳಿದ್ದಾನೆಂಗೂ ಆದರೆ ಹಿಂದೀಜನರು ಸ್ವಲ್ಪ ಮರಗೂಳಿಗಳೆಂದೂ ಆಡಿಸ್ಯಾಡಿದ್ದಳು. ಇದನ್ನೆಲ್ಲ ಒಬ್ಬ ನೌಕರನು ಅವರಿಗೆ ಪೇಯಗಳನ್ನು ಕೊಡಲಿಕ್ಕೆ ಹೋದಾಗ ಕೇಳಿದನು. ಆ ನೌಕರನಿಗೆ ಇಂಗ್ಲೀಷು ತಿಳಿಯುತ್ತಿತ್ತು. ಅವನೇನು ಗುಪ್ತಚಾರನಲ್ಲದಿದ್ದರೂ ಎರಡನೆಯವರ ಮಾತುಗಳಿಗೆ ತನ್ನ ಕಿವಿ ತೆರೆದಿಡುತ್ತಿದ್ದನು. ಮುಹಮ್ಮದಲಿಯು ಅವನಿಗೆ ಲಂಚವನ್ನೇನೂ ಕೊಟ್ಟಿರದಿದ್ದರೂ ತನ್ನ ಮನೆಯ ನೌಕರರ ಕೂಡ ಒಂದು ಕುಳಿತು ಹರಟೆ ಹೊಡೆಯುವದಕ್ಕೆ ಅವನನ್ನು ಹುರಿದುಂಬಿಸುತ್ತಿದ್ದನು. ಅಲ್ಲಿ ಮೊದಲು ಈ ಸುದ್ದಿ ಹೊರಬಿತ್ತು. ಅಲ್ಲಿಂದ ಒಬ್ಬರೊಬ್ಬರಿಗೆ ಹೋಗಿ ಕತೆಯಾಯಿತು; ಇಲ್ಲದ ವಿಪರೀತ ಅರ್ಥವು ಹುಟ್ಟಿಕೊಂಡಿತು. ಅಝೀಜನಿಗೆ

ಮುಟ್ಟಿದಾಗ ಆ ಸ್ತ್ರೀಯರು ಅಪಮಾನವೆಂದು ತಿಳಿದುಕೊಂಡು ಬಹಳ ಮನಸ್ಸಿಗೆ ಹಚ್ಚಿಕೊಂಡಿದ್ದಾರೆಂದೂ ಪ್ರತಿನಿತ್ಯ ಆಮಂತ್ರಣದ ದಾರೀನೋಡು ತ್ತಿದ್ದಾರೆಂದೂ ರೂಪ ತಾಳಿತ್ತು. ಆರ್ಥಿಜನು ಇದನ್ನು ಕೇಳಿ ಗಾಬರಿ ಯಾದನು. ತಾನು ಹರಟೆಯಲ್ಲಿ ಸುಮ್ಮನೆ ದೊಡ್ಡಿಸ್ತಿಕೆಗಾಗಿ ಕೊಟ್ಟ ಆಮಂತ್ರಣವನ್ನು ಅವರು ಮರೆತುಬಿಟ್ಟಿರಬೇಕೆಂದು ತಿಳಿದಿದ್ದನು. ಅವನ ಸ್ಮೃತಿಶಕ್ತಿಯೂ ಎರಡುವಿಧವಾಗಿತ್ತು; ಒಂದು ತಾತ್ಕಾಲಿಕ, ಇನ್ನೊಂದು ಶಾಶ್ವತ. ತಾನು ಅವರನ್ನು ಆಮಂತ್ರಿಸಿದ ವಿಷಯವನ್ನು ಮೊದಲಿನ ಜಾತಿ ಯಲ್ಲಿ ಹಾಕಿಬಿಟ್ಟಿದ್ದನು. ಆದರೆ ಈಗ ಅವನು ಎಲ್ಲವನ್ನೂ ಹಿಂದೆ ಮುಂದೆ ಮಾಡಿ ಅವರನ್ನು ಕರೆದುಕೊಂಡು ಹೋಗುವದಕ್ಕೆ ಒಳ್ಳೇ ಜೋರಿನಿಂದ ಸಿದ್ಧತೆ ನಡೆಯಿಸಬೇಕಾಯಿತು. ಆಗಲೆ ತನ್ನ ಚಿತ್ತದಲ್ಲಿ ಚಾಹಾಪಾರ್ಟಿಯ ಭವ್ಯಚಿತ್ರಗಳನ್ನು ಬರೆದನು. ಮೊದಲು ಫೀಲ್ಡಿಂಗನನ್ನೂ ಮುದುಕ ಗೋಡ ಬೊಲೆಯವರನ್ನೂ ತನ್ನ ಕೆಲಸಕ್ಕೆ ಒದಗಿಸಿಕೊಂಡನು; ಆ ಮೇಲೆ ಮಿಸೆಸ್ ಮೂರ ಮತ್ತು ಮಿಸ್ ಕ್ವೆಸ್ಟೆಡ್ ಇವರನ್ನು ಏಕಾಂತವಾಗಿ ಕಾಣಲಿಕ್ಕೆ ಫೀಲ್ಡಿಂಗನನ್ನು ಕಳುಹಿಕೊಟ್ಟನು. ಇದರಿಂದ ಅವರ ಸಂರಕ್ಷಣಾಧಿಕಾರಿ ಯಾದ ರೋನಿಯ ಕಾಟವನ್ನು ತಪ್ಪಿಸಿದಂತಾಗುವದೆಂದು ಬಗೆದನು. ಫೀಲ್ಡಿಂಗನಿಗೆ ಈ ಕೆಲಸಮಾಡುವದು ಅಷ್ಟು ಸೇರಲಿಲ್ಲ; ಅಲ್ಲದೆ ಅವನಿಗೆ ಕೆಲಸವೂ ಬಹಳವಿತ್ತು. ಮೇಲಾಗಿ ಗವಿಗಳೆಂದರೆ ಅವನಿಗೆ ಬೇಜಾರ. ಇಷ್ಟೊಮೊರಿ ಹೋದರೆ ಇಲ್ಲದ ತಿಕ್ಕಾಟ, ಖರ್ಚು ಬರಬಹುದೆಂದು ಅವನ ಮುಂಧೋರಣೆಯಿತ್ತು. ಆದರೆ ತನ್ನ ಗೆಳೆಯನು ಕೇಳಿದ ಮೊದಲಿನ ಮಾತನ್ನು ನಡೆಯಿಸಿಕೊಡಲು ಒಲ್ಲೆನ್ನಲಾರದೆ ಆ ಕೆಲಸಕ್ಕೆ ಒಪ್ಪಿಕೊಂ ಡನು ; ಮತ್ತು ಅದರಂತೆ ಮಾಡಿದನು. ಆ ಸ್ತ್ರೀಯರೂ ಬರುವದಕ್ಕೆ ಒಪ್ಪಿ ದರು. ಈಗ ಅವರಿಗೂ ಮೊದಲೇ ಗೊತ್ತಾಗಿದ್ದ ಕೆಲವೊಂದು ಕಾರ್ಯ ಕ್ರಮವಿದ್ದುದರಿಂದ ಇದು ಸ್ವಲ್ಪ ಅನಾನುಕೂಲವೇ ಇತ್ತು. ಆದರೂ ಮಿ. ಹೆಸ್ಲೋಪನನ್ನು ಕೇಳಿ ಅದೆಲ್ಲವನ್ನೂ ಅವರು ಸರಿಪಡಿಸಬೇಕೆಂದು ಗೊತ್ತು ಮಾಡಿಕೊಂಡರು. ಅದರಂತೆ ರೋನಿಯನ್ನು ಕೇಳಿದಾಗ ಅವನೂ ಪುಣ್ಯಾಕ್ಕೆ ಏನೂ ವಿರೋಧಮಾಡಲಿಲ್ಲ; ಆದರೆ ಫೀಲ್ಡಿಂಗನು ಮಾತ್ರ ಅವರಿಗೇನೂ ತೊಂದರೆಯಾಗದಂತೆ ನೋಡಿಕೊಳ್ಳಲಿಕ್ಕೆ ಅವರ ಸಂಗಡ ಇರಬೇಕೆಂದನು.

ಅಝೀಜನೂ ಈ ವನಭೋಜನಕ್ಕೆ ಅಷ್ಟು ಆತುರನಾಗಿದ್ದಿಲ್ಲ; ಆ ಸ್ತ್ರೀಯರಿಗೂ ಅಷ್ಟು ಆತುರತೆಯಿದ್ದಿಲ್ಲ; ಯಾರಿಗೂ ಅದು ವಿಶೇಷವಾಗಿ ಬೇಕಾಗಿದ್ದಿಲ್ಲ; ಆದರೂ ಹೋಗುವದು ಗೊತ್ತಾಯಿತು.

ಅಝೀಜನಿಗೆ ಮಾತ್ರ ಬಹಳ ಪೀಕಲಾಟಕ್ಕಿಟ್ಟಿತು. ಅದೇನು ಅಷ್ಟು ದೂರದ ಪ್ರವಾಸ ಅಲ್ಲ, ನಿಜ. ಚಂದ್ರಪುರದಿಂದ ಒಂದು ಗಾಡಿ ಬೆಳಗಿನ ಜಾವದಲ್ಲಿ ಹೊರಟು, ತಿರುಗಿ ಇನ್ನೊಂದು ಗಾಡಿ ಫಲಾಹಾರದ ಹೊತ್ತಿಗೆ ಅಲ್ಲಿಗೆ ತಂದುಬಿಡುತ್ತಿತ್ತು. ಆದರೆ ಅಝೀಜನಿನ್ನೂ ತನ್ನ ಅಧಿಕಾರಸ್ಥಾನ ಮರ್ಯಾದೆಯ ದೃಷ್ಟಿಯಿಂದಲೇ ನೋಡಿ, ಅದಕ್ಕೆಲ್ಲಿ ಕುಂದುಹತ್ತಿ ಅವ ಮರ್ಯಾದಿತನಾಗುವೆನೋ ಎಂದು ಬೆದರಿ ರಾಜಶೀವಿಯನ್ನೇ ಇಡಬೇಕೆಂದನು. ಮೇಜರ ಕ್ಯಾಲೆಂಡರನ ಹತ್ತಿರ ಹೋಗಿ ಅರ್ಧದಿವಸದ ರಜೆಯನ್ನು ಬೇಡಿದನು. ಆದರೆ ಮೊನ್ನೆ ಮೊನ್ನೆ ಜಡ್ಡಿನ ನೆವದಿಂದ ಕೆಲಸ ತಪ್ಪಿಸಿದ್ದರಿಂದ ಅವನು ರಜೆ ಕೊಡುವದಿಲ್ಲೆಂದನು. ನಿರಾಶೆಯಾಯಿತು. ಮತ್ತೆ ಫೀಲ್ಡಿಂಗನ ಹತ್ತಿರ ಹೋಗಿ ಅವನ ಮುಖಾಂತರ ಮೇಜರ ಕ್ಯಾಲೆಂಡರನಿಗೆ ಹೇಳಿಸಿ ರಜೆ ಪಡೆಯುವದಾಯಿತು. ಇಷ್ಟಾಗಿಯೂ ಕೊಡುವಾಗ ಮತ್ತೆ ತುಚ್ಛಮಾಡಿ ಕೌವುಕ್ಕೆಂದು ಹರಿದುಬಿದ್ದು ನಾಯಿಗೆಂಜಲೆಸೆಯುವಂತೆ ರಜೆಯನ್ನೆಸೆದನು. ಆಯಿತು; ಅಲ್ಲಿಂದ ಮುಹಮ್ಮದಲಿಯ ಕಡೆಗೆ ಹೋಗಿ ಅವನನ್ನು ಬರಲಿಕ್ಕೆ ಆಮಂತ್ರಿಸದೆ ಅವನ ಚಾಕು-ಚೂರಿಗಳನ್ನು ಬೇಡಿ ತಂದನು. ಆ ಮೇಲೆ ಪೇಯಗಳ ಪ್ರಶ್ನೆಬಂತು. ಫೀಲ್ಡಿಂಗನಿಗೂ ಆ ಸ್ತ್ರೀಯರಿಗೂ ಕುಡಿಯಲಿಕ್ಕೆ ಸರಾಯಿ ಕೊಡಬೇಕಾಗುವದು. ಅವರಿಗೇನು ವಿಸ್ಕಿ, ಸೋಡಾ, ಪೋರ್ಟಗಳ ವ್ಯವಸ್ಥೆಯನ್ನು ಮಾಡಬೇಕಾಗುವದೋ ಏನೊ? ಆಮೇಲೆ ಮಾರವಾರ ಸ್ಟೇಶನ್ನದಿಂದ ಆ ಗುಹೆಗಳ ವರೆಗೆ ಅವರನ್ನು ಕರೆದುಕೊಂಡು ಹೋಗಲಿಕ್ಕೆ ವಾಹನಗಳ ವ್ಯವಸ್ಥೆ ಹೇಗೆ ಮಾಡಬೇಕು? ಇನ್ನು ಪ್ರೊ. ಗೋಡಬೊಲೆ ಮತ್ತು ಅವರ ಊಟದ ವ್ಯವಸ್ಥೆ? ಪ್ರೊಫೆಸರರು ಅಂಥ ಕಟ್ಟಾಹಿಂದುಗಳೇನೂ ಅಲ್ಲ; ಅವರು ಚಹಾ, ಹಣ್ಣು, ಸೋಡಾವಾಟರ, ಮತ್ತು ಮಿಠಾಯಿಗಳನ್ನು ಯಾರು ತಯಾರಿಸಿದರೂ ತೆಗೆದುಕೊಳ್ಳುತ್ತಾರೆ; ಆದರೆ ಅನ್ನ, ಪಲ್ಲೆಗಳನ್ನು ಮಾತ್ರ ಬ್ರಾಹ್ಮಣರು ಮಾಡಿದರೇ ತೆಗೆದುಕೊಳ್ಳುತ್ತಾರೆ; ಮಾಂಸ, ಕೇಕುಗಳು—ತತ್ತಿಯುಲ್ಲಿ ಮಾಡಿ

ರುವವೆಂಬ ಭಯದಿಂದ—ತೆಗೆದುಕೊಳ್ಳುವದೇ ಇಲ್ಲ; ಗೋಮಾಂಸವನ್ನು ತಾವು ತೆಗೆದುಕೊಳ್ಳುವದಿಲ್ಲ ಇಷ್ಟೇ ಅಲ್ಲ, ಇನ್ನೊಬ್ಬರು ತೆಗೆದುಕೊಂಡರೂ ಸಹಿಸುವದಿಲ್ಲ; ಯಾರದಾದರೂ ತಾಟಿನಲ್ಲಿ ಅದು ಕಂಡಿತೆಂದರೆ ಸಾಕು, ಅವರಿಗೆ ತಲೆತಿರುಗಿಹೋಗುವದು; ಇನ್ನು ಕುರಿಮಾಂಸವನ್ನೂ ಹಂದಿಮಾಂಸವನ್ನೂ ತಿನ್ನಬಹುದು; ಆದರೆ ಹಂದಿಮಾಂಸಕ್ಕೆ ಸ್ವತಃ ಅಝೀಜನ ಧರ್ಮದ ವಿರೋಧ. ಇನ್ನೊಬ್ಬರು ಹಂದಿಮಾಂಸ ತಿನ್ನುತ್ತಾರೆಂಬ ಕಲ್ಪನೆಯೆ ಅವನಿಗಿಲ್ಲ; ಹೀಗೆ ಒಂದರ ಮೇಲೊಂದು ತೊಡಕುಗಳು, ಸಂಕಟಗಳು ಒಂದು ಅವನನ್ನು ಮುತ್ತಿದವು. ಇದಕ್ಕೆ ಕಾರಣವೆಂದರೆ, ಜನವನ್ನು ಬೇರೆ ಬೇರೆಯಾಗಿ ಹರಿದು ಹಂಚಿ ಬೇರೆಬೇರೆಯಾಗಿರಿಸುವ ಈ ಭಾರತದೇಶದ ಆಚಾರಗಳ ರಹಸ್ಯವನ್ನೆ ಅವನು ಎದುರಿಸಬೇಕಾಗಿ ಬಂದಿತ್ತು.

ಕೊನೆಗೆ ಆ ಹೊತ್ತು ಬಂತು.

ಆ ಇಂಗ್ಲೀಷ ಹೆಣ್ಣುಮಕ್ಕಳನ್ನು ಹಚ್ಚಿಕೊಂಡದ್ದು ಮೂರ್ಖತನವೆಂದೂ ಮತ್ತು ಹೊತ್ತು ಮೀರದಂತೆ ಮುಂಜಾಗ್ರತೆಯನ್ನು ತೆಗೆದುಕೊಳ್ಳಬೇಕೆಂದೂ ಅವನ ಮಿತ್ರರು ಎಚ್ಚರಕೊಟ್ಟರು. ಅದನ್ನು ಕೇಳಿಕೊಂಡು ಅವನು ಹಿಂದಿನ ರಾತ್ರಿಯನ್ನೆಲ್ಲ ಸ್ಟೇಶನ್ನದಲ್ಲಿಯೇ ಕಳೆದನು. ಆಳುಗಳನ್ನೆಲ್ಲ 'ಪ್ಲ್ಯಾಟಫಾರ್ಮ'ನ ಮೇಲೆ ಕಲೆಹಾಕಿ ಅವರಿಗೆ ಅಲ್ಲಿಂದ ಕದಲಬಾರದೆಂದು ಕಟ್ಟಪ್ಪಣೆ ಮಾಡಿದ್ದನು. ಮುದುಕ ಮುಹಮ್ಮದ ಲತೀಫನೆ ಅಲ್ಲಿಯ ಮುಖ್ಯವ್ಯವಸ್ಥಾಪಕನು; ಇವನೊಡನೆ ಅಝೀಜನು ಅಲ್ಲಿಯೆ ಅತ್ತಿಂದಿತ್ತ ಅಡ್ಡಾಡಹತ್ತಿದನು. ಅಝೀಜನಿಗೆ ಅವರಿನ್ನೂ ಬರುವರೊ ಇಲ್ಲೊ ಎಂಬ ಸಂಶಯವಿತ್ತು. ಅಷ್ಟರಲ್ಲಿ ಒಂದು ಕಾರು ಬಂತು. ಅದರೊಳಗಿಂದ ಫೀಲ್ಡಿಂಗನು ಇಳಿದುಬರಬಹುದೆಂದು ಅವನು ತಿಳಿದಿದ್ದನು. ಆದರೆ ನೋಡಲಾಗಿ ಅದರಲ್ಲಿ ಮಿಸೆಸ್ ಮೂರ, ಮಿಸ್ ಕ್ವೆಸ್ಟೆಡ್ ಮತ್ತು ಒಬ್ಬ ಗೋವಾನಿ ನೌಕರ ಇಷ್ಟೇ ಇದ್ದರು. ಅಝೀಜನು ಸಂತೋಷದಿಂದ ಅವರನ್ನು ಎದುರಾಗಲಿಕ್ಕೆ ಧಾವಿಸಿದನು. 'ಅಂತೂ ನೀವು ಬಂದಿರಿ! ಬಹಳ ಉಪಕಾರವಾಯಿತು! ನನ್ನ ಜೀವನದಲ್ಲೆಲ್ಲ ಒಳ್ಳೆ ಆನಂದದ ದಿವಸವಿದು!' ಎಂದು ಹೇಳಿದನು.

ಆ ಸ್ತ್ರೀಯರೂ ವಿನೀತರಾಗಿದ್ದರು. ಹಾಗೆ ನೋಡಿದರೆ ಇದು ಅವರ ಜೀವನದಲ್ಲಿ ಅಂತಹದೇನೂ ಆನಂದನಿಮಿಷವಲ್ಲ. ಆದರೂ ಈ ಬೇಗನೆ

ಹೊರಡಬೇಕೆನ್ನುವ ಕಾಟವೊಂದು ತಪ್ಪಿತೆಂದರೆ ಮುಂದೆ ತಾವು ಸೌಖ್ಯವನ್ನು ಕಾಣಬಹುದೆಂದು ಅವರು ಆಶಿಸಿದ್ದರು. ಈ ಪ್ರವಾಸದ ಮಾತು ಹೊರಟಂದಿನಿಂದ ಅವರು ಅಝೀಜನನ್ನು ಕಂಡಿರಲೇ ಇಲ್ಲ. ಈಗ ಭೆಟ್ಟಿಯಾದೊಡನೆ ತಮ್ಮ ಕೃತಜ್ಞತೆಗಳನ್ನು ಮೊದಲು ವ್ಯಕ್ತಮಾಡಿದರು.

'ಆ ನಿಮ್ಮ ಸೇವಕನನ್ನು ತಡೆಯಿರಿ. ನೀವೇನು ಇಲ್ಲಿ ಟಿಕೀಟು ತೆಗೆದುಕೊಳ್ಳಬೇಕಾಗುವದಿಲ್ಲ. ಈ ಮಾರವಾರ ಬ್ರ್ಯಾಂಚ ಲೈನದ ಮೇಲೆ ಟಿಕೀಟಿನ ಪದ್ಧತಿಯೇ ಇಲ್ಲ. ಇದೇ ಅದರ ವೈಶಿಷ್ಟ್ಯ. ಫೀಲ್ಡಿಂಗನು ಬಂದು ನಮ್ಮನ್ನು ಕೂಡುವ ವರೆಗೆ ನೀವು ಡಬ್ಬಿಯಲ್ಲಿ ಹೋಗಿ ವಿಶ್ರಮಿಸಿರಿ. ನೀವು ಹೆಣ್ಣುಮಕ್ಕಳ ಡಬ್ಬಿಯಲ್ಲಿ ಪ್ರವಾಸಮಾಡಬೇಕಾಗುತ್ತದೆಂಬುದು ನಿಮಗೆ ಗೊತ್ತಿತ್ತೇನು? ನಿಮಗದು ಸೇರುವದಲ್ಲವೇ?'

ತಮಗದು ಸೇರುವದೆಂದು ಅವರು ಹೇಳಿದರು. ಗಾಡಿಯು ಆಗಲೆ ಒಳಗೆ ಬಂದಿತ್ತು. ಆಳುಗಳ ಗುಂಪು ಜಾಗೆಯ ಸಲುವಾಗಿ ನಾ ಮುಂದೆ ನೀ ಮುಂದೆಯೆಂದು ಕೋತಿಗಳಂತೆ ಗಾಡಿಯನ್ನು ಮುತ್ತಿತು. ಅಝೀಜನು ತನ್ನ ಮನೆಯ ಮೂವರು ಚಾಕರರಲ್ಲದೆ ತನ್ನ ಮಿತ್ರರಿಂದ ಕೆಲವರನ್ನೂ ಕೈಗಡ ತಂದಿದ್ದನು. ಅವರಲ್ಲಿ ಕಿಡಿಕಿಗಳ ಸಲುವಾಗಿ ಆಗಲೆ ಬಡಿದಾಟ ನಡೆದಿತ್ತು. ಅವರ ಆ ಗೋವಾನಿಯು ಮಾತ್ರ ಇವರ ಈ ಬಡಿದಾಟವನ್ನೆಲ್ಲ ನೋಡಿ ಮುಖದ ಮೇಲೆ ಹೇಯಭಾವವನ್ನು ತೋರಿಸುತ್ತ ಕಡೆಗೇ ನಿಂತಿದ್ದನು. ಪೃಥ್ವಿಪ್ರದಕ್ಷಿಣೆಗಾಗಿಯೆಂದು ಹೊರಟು ಮುಂಬೈಗೆ ಬಂದಾಗ ಆ ಗೋವಾನಿಯನ್ನು ಅವರು ಮೊದಲು ಸಂಬಳಕ್ಕಿಟ್ಟುಕೊಂಡರು. ಹೊಟೆಲ್ಲದಲ್ಲಾಗಲಿ ವ್ಯವಸ್ಥಿತ ಜನರಲ್ಲಿಯಾಗಲಿ ಅವನು ಬಹಳ ಚೆನ್ನಾಗಿ ನಡೆದುಕೊಳ್ಳುತ್ತಿದ್ದನು. ಆದರೆ ಕಡಿಮೆಯವರೆಂದು ತಾನು ತಿಳಿದುಕೊಂಡವರಲ್ಲಿ ತನ್ನನ್ನು ಬಿಟ್ಟರೆ ಕೂಡಲೆ ಅವರಿಂದ ಸಿಡಿದುನಿಂತು, ಅವರನ್ನು ಅವರ ಪಾಡಿಗೆ ಬಿಡುತ್ತಿದ್ದನು.

ಇನ್ನೂ ಕತ್ತಲೆಯಿತ್ತು. ಆದರೆ ಅದು ಮುಗಿತಕ್ಕೆ ಬಂದಿರುವ ಹಾಗೆ ಒಂದು ಕ್ಷಣ ತೋರಿತು. ಗುಡಿಸಲಿನ ಚಪ್ಪರದ ಮೇಲೆ ಕುಳಿತಿದ್ದ ಸ್ಟೇಶನ್ ಮಾಸ್ತರನ ಕೋಳಿಗಳು ಗೂಬೆಗಳ ಬದಲು ಹದ್ದುಗಳ ಕನಸನ್ನು ಕಂಡು 'ಕೂಹೂಹೂSS' ಎಂದು ಕೂಗಿದವು. ಬೆಳಗಾದ ಮೇಲೆ ಹೋಗಿ ದೀಪ

ಗಳನ್ನು ಶಾಂತಮಾಡುವ ಶ್ರಮವನ್ನು ಉಳಿಸಿಕೊಳ್ಳುವದಕ್ಕಾಗಿ ಈಗಲೆ ಅವನ್ನು ತೆಗೆದುಬಿಟ್ಟರು. ಮೂರನೆಯ ವರ್ಗದ ಡಬ್ಬಿಯೊಳಗಿನ ಕತ್ತಲೆ ಮೂಲೆಯೊಳಗಿಂದ ತಂಬಾಕದ ವಾಸನೆಯೂ ಉಗುಳುವ ಸಪ್ಪಳವೂ ಬರ ಹತ್ತಿದವು. ಬಕ್ಕತಲೆ ಮಾಡಿಕೊಂಡು ಗಿಡದ ಟೊಂಗಿಗಳಿಂದ ಹಲ್ಲುಜ್ಜುವದು ಪ್ರಾರಂಭವಾಯಿತು. ಸೂರ್ಯನು ಬಾರದೆ ಇರನೆಂಬ ಭರವಸೆಯಿಂದ ಒಬ್ಬ ಪೋರ್ಟರನು ಗಂಟೆ ಹೊಡೆದುಬಿಟ್ಟನು. ಇದರಿಂದ ಸೇವಕರಲ್ಲಿ ಗೊಂದಲವೆದ್ದಿತು. ಗಾಡಿಯು ಹೊರಟಿತೆಂದು ಅವರು ಕಿರಿಚಿದರು; ಮತ್ತು ಗಾಡಿಯನ್ನು ನಿಲ್ಲಿಸಬೇಕೆಂದು ಅದರ ಎರಡೂ ತುದಿಗೂ ಓಡಿದರು. ಹೆಣ್ಣುಮಕ್ಕಳ ಡಬ್ಬಿಯಲ್ಲಿ ಇನ್ನೂ ಬಹಳ ಸಾಮಾನುಗಳನ್ನು ಇಡಬೇಕಿತ್ತು—ಹಿತ್ತಾಳಿಯ ಕಟ್ಟುಹಾಕಿದ ಪೆಟ್ಟಿಗೆ, ಒಂದು ಫೆಜ್ ಟೊಪ್ಪಿಗೆಯನ್ನು ಧರಿಸಿದ ಕಲ್ಲಂಗಡಿ, ಪೇರಲಹಣ್ಣುಗಳನ್ನು ಕಟ್ಟಿದ ಟಾವೆಲ್ಲಿನ ಗಂಟು, ಒಂದು ಕಿರಿಸಿಚ್ಚಣಿಕೆ, ಬಂದೂಕು. ಆ ಸ್ತ್ರಿಯರೇನೊ ತಮ್ಮ ಕೆಲಸವನ್ನು ಬಹಳ ಉತ್ಸಾಹದಿಂದ ಮಾಡಿದರು. ತಾವು ಉಚ್ಚಜಾತಿಯವರೆಂಬ ಭಾವನೆಯನ್ನೇ ತರದೆ—ಮಿಸೆಸ್ ಮೂರಳು ಹಣ್ಣಾದ ಮುದುಕಿ, ಮಿಸ್ ಕ್ವೆಸ್ಟೆಡ್ ಇನ್ನೂ ಮಿಡಿ—ತಮ್ಮ ದೇಶದಲ್ಲಿ ತಮಗೆ ಸಹಾಯಮಾಡಿದ ತರುಣ ಮನುಷ್ಯನೊಡನೆ ಯಾವರೀತಿಯಿಂದ ನಡೆದುಕೊಳ್ಳಬೇಕೊ ಆ ರೀತಿಯಾಗಿ ಅಝೀಜನೊಡನೆ ನಡೆದುಕೊಂಡರು. ಇದು ಅಝೀಜನ ಮನಸ್ಸನ್ನು ಅರಳಿಸಿತು ಅವರು ಫೀಲ್ಡಿಂಗನೊಡನೆಯೆ ಬರುವರೆಂದು ಅವನ ಕಲ್ಪನೆಯಿತ್ತು. ಹಾಗೆ ಮಾಡದೆ ಅವರು ಕೆಲಹೊತ್ತಿನ ಮಟ್ಟಿಗಾದರೂ ತಾವಿಷ್ಟೇ ಇವನೊಡನೆ ಇರಬಹುದೆಂದು ವಿಶ್ವಾಸವಿಟ್ಟರಲ್ಲ, ಅಷ್ಟೇ ಸಾಕೆಂದನು.

'ನಿಮ್ಮ ಚಾಕರನನ್ನು ತಿರುಗಿ ಕಳಿಸಿಬಿಡಿರಿ. ಅವನ ಅಗತ್ಯವಿಲ್ಲ. ಆ ಮೇಲೆ ನಾವೆಲ್ಲ ಮುಸಲ್ಮಾನರೇ, ಕೂಡೇ ಇರುವೆವು.' ಎಂದು ಸೂಚಿಸಿದನು.

'ಅವನು ಭಯಂಕರ ಇದ್ದಾನೆ. ಅಂಟೊನಿ, ನೀನು ಹೋಗಬಹುದು. ನೀನು ನಮಗೆ ಬೇಕಿಲ್ಲ.' ಎಂದು ಆ ಹುಡುಗಿಯು ಉತಾವಳಿಯಿಂದ ಹೇಳಿಯೆಬಿಟ್ಟಳು.

'ಯಜಮಾನರು ಹೋಗೆಂದು ಹೇಳಿದ್ದಾರೆ'

‘ ನಿನಗೀಗ ಯಜಮಾನತಿಯು ಹೋಗೆಂದು ಹೇಳುತ್ತಾಳೆ. ’

‘ ಯಜಮಾನರು ಹೇಳಿದ್ದಾರೆ, ಯಾವಾಗಲೂ ಹೆಣ್ಣುಮಕ್ಕಳ ಹತ್ತಿರ ಇರೆಂದು. ’

‘ ಒಳ್ಳೇದು ; ಆ ಹೆಣ್ಣುಮಕ್ಕಳೇ ನಿನ್ನನ್ನು ತಮ್ಮ ಸಂಗಡ ಇರಗೊಡುವದಿಲ್ಲೀಗ. ’ ಎಂದು ಅವಳು ಅಝೀಜನ ಕಡೆಗೆ ತಿರುಗಿ ‘ ಅಝೀಜ, ಹೇಗಾದರೂ ಮಾಡಿ ಇವನ ಕಾಟವನ್ನಷ್ಟು ತಪ್ಪಿಸಿರಿ. ’ ಎಂದು ಹೇಳಿದಳು.

‘ ಮಹಮ್ಮದ ಲತೀಫ್ ! ’ ಎಂದು ಅವನು ಕರೆದನು.

ಲತೀಫನು ಕಲ್ಲಂಗಡೀಹಣ್ಣು ಕೊಟ್ಟು ಫೆಜ್ ಟೊಪ್ಪಿಗೆಯನ್ನು ಇಸಕೊಂಡು ರೇಲ್ವೆಡಬ್ಬಿಯ ಕಿಡಿಕಿಯ ಹೊರಗೆ ಹಣಿಕಿಹಾಕಿದನು. ಅವನು ಗೊಂದಲದಲ್ಲಿ ಬಿದ್ದದ್ದನ್ನು ಅಝೀಜನು ನೋಡುತ್ತಿದ್ದನು. ‘ ಲತೀಫ್, ಇಲ್ಲಿ ನೋಡು, ನಮ್ಮ ಚಿಕ್ಕಪ್ಪನ ಮಗನಿದ್ದಾನೆ—ಓ ! ಬೇಡ, ಅವನೊಡನೆ ಕೈಕುಲುಕುವದು ಬೇಡ. .ಅವನು ಹಳೆಯ ತರಹದ ಹಿಂದೂ ಮನುಷ್ಯ, ಅವನಿಗೆ ಸಲಾಂ ಮಾಡುವದೇ ಹೆಚ್ಚು ಸೇರುತ್ತದೆ—ನಾನು ನಿನಗೆ ಮೊದಲೇ ಹೀಗೆ ಹೇಳಿದ್ದೇನೆ. .ಲತೀಫ್, ನೀನೆಷ್ಟು ಚೆನ್ನಾಗಿ ಸಲಾಂ ಮಾಡುತ್ತೀ ! . . ನೋಡು, ಅವನಿಗೆ ತಿಳಿಯಲಿಲ್ಲ; . .ಅವನಿಗೆ ಇಂಗ್ಲೀಷ ಬರುವದಿಲ್ಲ. .’

‘ ನೀನು ಸುಳ್ಳಾಡುತ್ತೀ. ’ ಎಂದು ಆ ಮುದುಕನು ಇಂಗ್ಲೀಷಿನಲ್ಲಿ ಮೆಲ್ಲಗೆ ನುಡಿದನು.

‘ ನಾನು ಸುಳ್ಳಾಡುತ್ತೇನೆಯೆ ! ಓಹೊ, ಬಹಳ ಸಂತೋಷ. ಇವನು ಒಳ್ಳೇ ತಮಾಷೆಯ ಮುದುಕನಲ್ಲವೇ ? ಮುಂದೆ ಇವನೊಡನೆ ಬೇಕಾದಷ್ಟು ಚೇಷ್ಟೆಮಾಡೋಣ . . ಎಲ್ಲ ಸಣ್ಣಪುಟ್ಟ ಕೆಲಸಗಳನ್ನು ಮಾಡುತ್ತಾನೆ. ನೀವು ತಿಳಿದುಕೊಂಡಷ್ಟು ಇವನು ಹುಚ್ಚನಿಲ್ಲ ; ಬಹಳ ಬಡವನಿದ್ದಾನೆ. ನಮ್ಮ ಬಳಗವು ದೊಡ್ಡದಿದೆಯೆಂದು ನೆಟ್ಟಗಾಗಿದೆ. . . .’ ಎಂದು ಅವನ ಹೊಲಸು ಕುತ್ತಿಗೆಯ ಮೇಲೆ ಕೈಹಾಕಿದನು. ‘ ನೀವಿನ್ನು ಗಾಡಿ ಹತ್ತಿರಿ; ಆರಾಮಾಗಿ ಕುಳಿತುಕೊಳ್ಳಿರಿ ; ಬೇಕಾದರೆ ಸ್ವಲ್ಪ ಮಲಗಿಕೊಳ್ಳಿರಿ. ’ ಅಂತೂ ಪ್ರಸಿದ್ಧವಾದ ಆ ಪೌರ್ವಾತ್ಯ ಆದರೋಪಚಾರದ ಸಂಭ್ರಮವು ಒಮ್ಮೆ ಮುಗಿಯಿತು. ‘ ಕ್ಷಮಿಸಿರಿ, ಈಗ ನಾನು ನಮ್ಮ ಇನ್ನಿಬ್ಬರು ಅತಿಥಿಗಳಿಗೆ ಭೆಟ್ಟಿಯಾಗಬೇಕು. ’

ಅಝೀಜನು ಮತ್ತೆ ಈಗ ಗಾಬರಿಯಾಗಹತ್ತಿದನು. ಯಾಕಂದರೆ ಗಾಡಿ ಬಿಡಲಿಕ್ಕೆ ಇನ್ನು ಹತ್ತೇ ನಿಮಿಷಗಳು ಉಳಿದಿದ್ದವು. ಫೀಲ್ಡಿಂಗನು ಇಂಗ್ಲೀಷ ಮನುಷ್ಯನಿದ್ದುದರಿಂದ ಎಂದೂ ಗಾಡೀ ತಪ್ಪಿಸಿಕೊಳ್ಳಲಿಕ್ಕಿಲ್ಲ. ಇನ್ನು ಗೋಡಬೋಲೆ ಹಿಂದೂ ಇದ್ದುದರಿಂದ ತಪ್ಪಿಸಿಕೊಂಡರೂ ಅಷ್ಟೇನು ಮಹತ್ವದ್ದಲ್ಲ, ಎಂದುಕೊಂಡು ಗಾಡೀ ಬಿಡುವ ಹೊತ್ತು ಸಮೀಪಿಸಿದಂತೆ ಇನ್ನೂ ಶಾಂತನಾದನು. ಲತೀಫನು ಅಂಟೋನಿಗೆ ಲಂಚಕೊಟ್ಟು ಬರದಂತೆ ಮಾಡಿದ್ದನು. ಅವರು ಪ್ಲ್ಯಾಟ್‌ಫಾರ್ಮಿನ ಮೇಲೆ ಬೇಕಾದ ಹಾಗೆ ಹರಟೆ ಹೊಡೆಯುತ್ತ ಓಡಾಡುತ್ತಿದ್ದರು. ಹೆಚ್ಚು ಜನ ಚಾಕರರನ್ನು ತಂದಿದ್ದರಿಂದ ಇಬ್ಬರು ಮೂವರನ್ನು ಆ ಮಾರವಾರ ಸ್ಟೇಶನ್ನದಲ್ಲಿಯೆ ಬಿಟ್ಟು ಹೋಗ ಬೇಕೆಂದು ಗೊತ್ತಾಯಿತು. ಅತಿಥಿಗಳನ್ನು ಖುಷಿಮಾಡುವದಕ್ಕಾಗಿ ಗುಹೆ ಗಳಲ್ಲಿ ಬೇಕಾದರೆ ಈ ಮುದುಕನೊಡನೆ ಬರಿ ಚೇಷ್ಟೆಯಾಡುವದರ ಬದಲು ಚೇಷ್ಟೆ ಮಾಡಬಹುದೆಂದೂ ಅವನಿಗೆ ಅಝೀಜನು ತಿಳಿಸಿದನು. ಅದಕ್ಕೆ ಆ ಮುದುಕನೂ ತಲೆಯಲ್ಲಾಡಿಸಿ ತನ್ನ ಒಪ್ಪಿಗೆ ಕೊಟ್ಟನು. ಚೇಷ್ಟೆ ಮಾಡಿಸಿಕೊಳ್ಳಲಿಕ್ಕೆ ಯಾವಾಗಲೂ ಅವನು ಸಿದ್ಧನೇ ಇದ್ದನು. ಮತ್ತು ಅದಕ್ಕೆ ಎಷ್ಟೂ ಅನುಮಾನವಮಾಡಬಾರದೆಂದೂ ಅಝೀಜನಿಗೆ ಅವನು ಹೇಳಿದನು. ಅಲ್ಲಿಂದ ತನಗಿಷ್ಟು ಮಹತ್ವ ಕೊಟ್ಟದ್ದನ್ನು ನೋಡಿ ಉಬ್ಬಿ ಅವನು ಅಸಹ್ಯವಾದ ಸಂಗತಿಗಳನ್ನು ಹೇಳಲು ಪ್ರಾರಂಭಿಸಿದನು.

'ಅಣ್ಣಾ, ನನಗೆ ಹೆಚ್ಚು ಅವಕಾಶವಿದ್ದಾಗ ಮತ್ತೊಮ್ಮೆ ಅವನ್ನು ಹೇಳುವಿಯಂತೆ. ಈಗ ನಾನು ಮುಸಲ್ಮಾನರಲ್ಲದವರಿಗೂ ಸಂತೋಷಪಡಿಸ ಬೇಕಾಗಿದೆ, ಮೂವರು ಯುರೋಪಿಯನ್ನರು, ಒಬ್ಬ ಹಿಂದೂ—ಇದನ್ನು ಮರೆಯಬಾರದು. ಪ್ರೊ. ಗೋಡಬೋಲೆಯವರ ಕಡೆಗೂ ಬಹಳ ಲಕ್ಷ್ಯ ಕೊಡಬೇಕು. ಇಲ್ಲದಿದ್ದರೆ ತಾವು ಉಳಿದ ಅತಿಥಿಗಳಕಿಂತ ಕಡಿಮೆಯವ ರಾದೆವೆಂದು ಅವರೆಂದುಕೊಂಡಾರು.'

'ಅವರೊಡನೆ ವೇದಾಂತದ ಮಾತು ಆಡುತ್ತ ಕುಳಿತರಾಯಿತು; ಅದನ್ನು ನಾನು ಮಾಡುತ್ತೇನೆ.'

'ಅದು ಬಹಳ ಒಳ್ಳೇದು. ಆದರೆ ಈಗ ಈ ಚಾಕರರಿಗೂ ಮಹತ್ವ ಬಂದಿದೆ. ನಮ್ಮಲ್ಲಿ ಶಿಸ್ತು ಸಂಘಟನೆ ಇಲ್ಲವೆಂದು ಅವರಿಗೆನಿಸಿರಬಾರದು,

ಹಾಗೆ ನಾವು ನಡೆಯುಕೊಳ್ಳಬೇಕು. ಅದು ಸಾಧ್ಯವಿದೆ; ನೀನೇ ಅದನ್ನು ಸಾಧಿಸಬಲ್ಲಿಯೆಂಬುದು ನನ್ನ ನಂಬಿಗೆಯಿದೆ. . . .'

ಹೆಣ್ಣುಮಕ್ಕಳ ಡಬ್ಬಿಯಿಂದ ಯಾರೋ ಕಿರಿಚಿಕೊಂಡಂತೆ ಕೇಳ ಬಂತು. ಅಷ್ಟರಲ್ಲಿ ಗಾಡಿಯು ಬಿಟ್ಟಿತ್ತು.

' ಅರೆ ಅಲ್ಲಾ ! ' ಎಂದು ಲತೀಫನು ಗಾಡಿಯ ಮೇಲೆ ಸಾಗರ ಬಿದ್ದು ಒಂದು ಡಬ್ಬಿಯ ಕಬ್ಬಿಣ ಹಿಡಿಕೆಯನ್ನು ಹಿಡಿದು ಮೇಲಕ್ಕೆ ಜಿಗಿದನು. ಅಝೀಜನೂ ಹಾಗೆಯೆ ಮಾಡಿದನು. ಹೀಗೆಲ್ಲ ಕಸರತ್ತು ಮಾಡುವದು ಶ್ರೀಮದ್ಗಾಂಭೀರ್ಯದ ನಡಿಗೆಯಿಂದ ಸಾವಕಾಶವಾಗಿ ಈ ಗಾಡಿಗಳು ಓಡಾಡುವ ಈ ' ಬ್ರ್ಯಾಂಚು ಲೈನ 'ದ ಮೇಲೆ ಬಹಳ ಸುಲಭ. ' ನಾವು ಕೋತಿಗಳಂತಿದ್ದೇವೆ; ನೀವು ತಲೆ ಕೆಡಿಸಿಕೊಳ್ಳಬೇಡಿರಿ. ' ಎಂದು ಕಬ್ಬಿಣ ಬಾರಿಗೆ ಜೋತುಬಿದ್ದು ನಗುತ್ತ ನುಡಿದನು. ಆಮೇಲೆ ಒಮ್ಮೆಲೆ ' ಮಿ. ಫೀಲ್ಡಿಂಗ್ ! ಫೀಲ್ಡಿಂಗ್ ! ' ಎಂದು ಕೂಗಿದನು.

ಫೀಲ್ಡಿಂಗ ಮತ್ತು ಗೋಡಬೊಲೆ ಇಬ್ಬರೂ ಹಳೀದಾಟುವ ಗೇಟಿನ ಹತ್ತರ ತಡೆದು ನಿಲ್ಲಿಸಲ್ಪಟ್ಟಿದ್ದರು. ಎಲ್ಲ ಅನರ್ಥವಾಯಿತು ! ಗೇಟಿನ ಬಾಗಿಲುಗಳನ್ನು ದಿನದಕಿಂತ ಬೇಗ ಹಾಕಿದ್ದರು. ಇದನ್ನು ನೋಡಿ ಅವರು ಟಾಂಗಾದೊಳಗಿಂದ ಹೊರಗೆ ಹಾರಿದರು. ಕೈಸನ್ನೆ ಮಾಡಿದರು. ಆದರೆ ಅದರ ಉಪಯೋಗವೇನು ? ಬಹಳ ಸಮೀಪ ! ಆದರೂ ಬಹಳ ದೂರ ! ಗಾಡಿಯು ಗಡಗಡ ಎಂದು ಹಾಯ್ದುಹೋಗುವಾಗ ಉದ್ವೇಗದ ಈ ಮಾತುಗಳು ಹೊರಬಿದ್ದವು.

' ಕೆಟ್ಟಿತು, ಕೆಟ್ಟಿತು ! ನೀವು ಹಾಳುಮಾಡಿದಿರಿ ! '

' ಗೋಡಬೊಲೆಯವರ ಪೂಜೆಯು ಇಷ್ಟೆಲ್ಲ ಮಾಡಿತು. ' ಎಂದು ಫೀಲ್ಡಿಂಗನು ಉತ್ತರವಿತ್ತನು. ಆ ಬ್ರಾಹ್ಮಣನು ತನ್ನ ಧರ್ಮದಿಂದ ಆದ ಈ ಅನರ್ಥವನ್ನು ನೆನೆದು ನಾಚಿ ಮುಖವನ್ನು ತಗ್ಗಿಸಿದನು. ಅದು ಆಗುವದೂ ಹಾಗೆಯೆ ಆಗಿತ್ತು. ಅವನಿಗೆ ತನ್ನ ಪೂಜೆಗೆಷ್ಟೊತ್ತು ಹಿಡಿಯುತ್ತದೆಂಬುವರ ಅಂದಾಜೇ ಇದ್ದಿಲ್ಲ.

' ಹಂ, ಮೇಲೆ ಹಾರು ! ನೀನು ನಮಗೆ ಬೇಕೇ ಬೇಕು. ' ಎಂದು ಅಝೀಜನು ಮೈಮರೆತು ಕೂಗಿದನು.

‘ ಸರಿ, ಆಗಲಿ ; ಕೈ ಕೊಡು. ’

‘ ಅಯ್ಯೋ ! ಬೇಡ ! ವ್ಯರ್ಥ ಜೀವ ಕೊಡುತ್ತಾನೆ. ’ ಎಂದು ಮಿಸೆಸ್ ಮೂರಳು ತಡೆಯಲು ಹವಣಿಸಿದಳು. ಆದರೆ ಅವನು ಜಿಗಿದೇಬಿಟ್ಟನು. ತಪ್ಪಿದನು ! ಅಝೀಜನ ಕೈ ಹೊತ್ತಿಗೆ ಸಿಗಲಿಲ್ಲ. ಹಿಂದಕ್ಕೆ ಪುಟಿದು ನೆಲಕ್ಕೆ ಬಿದ್ದನು. ಗಾಡಿಯು ದಡದಡ ಮುಂದೆ ಹೊರಟು ಹೋಯಿತು. ಅಷ್ಟರಲ್ಲಿ ಫೀಲ್ಡಿಂಗನು ತಡವರಿಸಿ ಮೇಲೆದ್ದು ‘ ನನಗೇನೂ ಆಗಿಲ್ಲ, ನೀನು ಸರಿಯಾಗಿ ದ್ದೀಯಷ್ಟೇ ? ತೊಂದರೆ ಪಡಬೇಡ. ’ ಎಂದು ಕೂಗಿ ಹೇಳಿದನು. ಆದರೆ ಅವನ ದನಿಯು ಕೇಳದಷ್ಟು ದೂರ ಅವರಾಗಲೆ ಹೋಗಿದ್ದರು.

‘ ಮಿಸೆಸ್ ಮೂರ್ ! ಮಿಸ್ ಕ್ವೆಸ್ಟೆಡ್ ! ನಮ್ಮ ಪ್ರವಾಸವು ಹಾಳಾ ಯಿತು. ’ ಎಂದು ಅಝೀಜನು ‘ ಫುಟ್‌ಬೋರ್ಡಿನ ’ ಮೇಲೆ ನಿಂತು ಜೋಲಿ ಹೊಡೆಯುತ್ತ ಕಣ್ಣೀರು ತಂದು ನುಡಿದನು.

‘ ಒಳಕ್ಕೆ ಬಾ ಅಝೀಜ, ಒಳಕ್ಕೆ ಬಾ, ನೀನೂ ಸಾಯುವಿ, ಫೀಲ್ಡಿಂಗ ನನ್ನೂ ಕೊಲ್ಲುವಿ. ಇದರಲ್ಲೇನು ಹಾಳಾಯಿತು ? ಏನೂ ಆಗಿಲ್ಲ. ’

‘ ಅದು ಹೇಗೆ ? ನನಗೆ ಹೇಳಿ. ’ ಎಂದು ಸಣ್ಣ ಕೂಸಿನಂತೆ ಕರುಣಾ ಜನಕ ದನಿಯಲ್ಲಿ ಕೇಳಿದನು. .

‘ ನಾವೆಲ್ಲರೂ ಮುಸಲ್ಮಾನರೇ ಆಗಿ ಕೂಡಿರುವೆವು ಎಂದು ನೀನೇ ಹೇಳಿದ್ದೆಯಲ್ಲ ? ’

ಮಿಸೆಸ್ ಮೂರಳು ಯಾವಾಗಲೂ ಚೊಕ್ಕಾಗಿಯೆ ಇದ್ದಳು. ಮಸೀದೆ ಯಲ್ಲಿ ಮೊದಲು ಕಂಡಾಗ ಅವಳ ವಿಷಯಕ್ಕಿದ್ದಷ್ಟು ಪ್ರೇಮವೆಲ್ಲ ಈಗ ಮತ್ತೆ ಉಕ್ಕಿಬಂತು. ಮರೆವಿನ ಕಿಚ್ಚು ಅದನ್ನು ಶುದ್ಧಮಾಡಿ ಅದಕ್ಕೆ ಹೊಸತೊಂದು ರೂಪವನ್ನೇ ಕೊಟ್ಟಿತ್ತು. ಅವಳ ಸಲುವಾಗಿ ಅವನು ಏನು ಮಾಡಲಿಕ್ಕೂ ಸಿದ್ಧನಾದನು.

‘ ಡಾ. ಅಝೀಜ, ಒಳಕ್ಕೆ ಬನ್ನಿ. ನಿಮ್ಮನ್ನು ನೋಡಿ ನಮ್ಮ ಕಣ್ಣು ಸಹ ತಿರುಗುತ್ತವೆ. ಗಾಡೀ ತಪ್ಪಿಸಿಕೊಳ್ಳುವಷ್ಟು ಅವರು ಮೂರ್ಖರಾದರೆ ಅದು ಅವರಿಗೇ ನಷ್ಟ, ನಮಗಲ್ಲ. ’ ಎಂದು ಅಡೀಲಾ ಧೈರ್ಯಕೊಟ್ಟಳು.

‘ ಏನೇ ಆದರೂ ಅದು ನನ್ನ ತಪ್ಪು. ನಾನು ಯಜಮಾನನಲ್ಲವೆ ! ’

‘ ನೀವು ಹಾಗೆ ತಿಳಿಯುವದು ಶು ತಪ್ಪು. ದ್ಧನಿಷ್ಮ ಗಾಡಿಯಲ್ಲಿ

ಹೋಗಿ ಕುಳಿತುಕೊಳ್ಳಿ. ಅವರನ್ನು ಬಿಟ್ಟುಕೂಡ ನಾವು ಸುಖವಾಗಿ ಪ್ರವಾಸಮಾಡಬಲ್ಲೆವು. '

ಮಿಸೆಸ್ ಮೂರಳಷ್ಟು ಪರಿಪೂರ್ಣಳಲ್ಲದಿದ್ದರೂ ಅವಳು ನಿರ್ವಂಚಕಳು, ಅಂತಃಕರುಣಿ. ಇಂತಹ ಅದ್ಭುತ ಸ್ತ್ರೀರತ್ನಗಳೆರಡು ಇಂದು ತನಗೆ ಅತಿಥಿಗಳಾಗಿ ದೊರಕಿದ್ದೊಂದು ಅಪರೂಪವೆಂದೇ ಅವನು ಬಗೆದನು. ಇದರಿಂದ ಅವನಿಗೆ ಶಕ್ತಿಯೂ ಮಹತ್ವವೂ ಬಂದಂತೆನಿಸಿತು. ಫೀಲ್ಡಿಂಗನು ತನ್ನ ಗೆಳೆಯನಾದುದರಿಂದ ಅವನು ಬಾರದೆ ಇದ್ದದ್ದು ಅವನ ಸ್ವತಃಕ್ಕೇನೊ ಸ್ವಲ್ಪ ಕೆಡಕೆನಿಸಿತ್ತು. ಆದರೆ ಫೀಲ್ಡಿಂಗನು ಬಂದಿದ್ದರೆ ಯಾವಾಗಲೂ ಅವನದೆ ಮೋಟು ಮೇಲಾಗಿ ಅಝೀಜನೆ ಮರೆಯಲ್ಲುಳಿಯಬಹುದಾಗಿತ್ತು. 'ಹಿಂದೀ ಜನರು ಜವಾಬ್ದಾರಿಗೆ ಯೋಗ್ಯರಲ್ಲ' ಎಂದು ಮೇಲಧಿಕಾರಿಗಳೆನ್ನುತ್ತಿದ್ದೂದೂ ಹಮೀದುಲ್ಲಾನೂ ಅದಕ್ಕೆ ದನಿಗೂಡಿಸಿದ್ದೂ ಅವನನ್ನು ಕೆರಳಿಸಿತು. ಈ ನಿರಾಶಾವಾದಿಗಳಿಗೆ ಅವರದು ತಪ್ಪೆಂದು ತೋರಿಸಿಕೊಡಬೇಕೆಂದು ಅವನು ನಿಶ್ಚಯಮಾಡಿ ಅಭಿಮಾನದಿಂದ ನಗುತ್ತ ಹೊರಗೆ ಭೂಮಿಯನ್ನು ನೋಡಿದನು; ಅದಿನ್ನೂ ಕತ್ತಲೆಯ ಮುಸುಕಿನಲ್ಲಿಯೆ ಮಲಗಿತ್ತು. ಆಕಾಶದ ಕಡೆಗೆ ನೋಡಿದನು; ತಲೆಕೆಳಗಾಗಿದ್ದ ವೃಶ್ಚಿಕವು ಕಳೆಗುಂದಿತ್ತು. ಆಮೇಲೆ ಕಿಡಿಕಿಯೊಳಗಿಂದ ಎರಡನೇ ವರ್ಗದ ಡಬ್ಬಿಯಲ್ಲಿ ಒಳನುಗ್ಗಿದನು.

'ಲತೀಫ ! ಅಲ್ಲಿ, ಆ ಗುಹೆಗಳಲ್ಲಿ ಇದೆಯಾದರೂ ಏನು ? ನಾವೆಲ್ಲರೂ ಅವುಗಳನ್ನು ನೊಡಲಿಕ್ಕೆ ಯಾಕೆ ಹೋಗುತ್ತೇವೆ ?'

ಈ ಪ್ರಶ್ನೆಗೆ ಉತ್ತರಕೊಡುವದು ಆ ಬಡಪ್ರಾಣಿಗೆ ಸಾಧ್ಯವಿದ್ದಿಲ್ಲ. ದೇವರಿಗೆ, ಅಲ್ಲಿಯ ಹಳ್ಳೀಜನರಿಗೆ ಅದೆಲ್ಲ ಗೊತ್ತಿದೆಯೆಂದೂ ಅವರು ಸಂತೋಷದಿಂದ ಅವನ್ನು ತೋರಿಸಲಿಕ್ಕೆ ಬರುವರೆಂದೂ ಇಷ್ಟೆ ಅವನು ಉತ್ತರ ಕೊಡಬಲ್ಲವನಾಗಿದ್ದನು.

—

## ಪ್ರಕರಣ ೧೪

ಜೀವನದ ಬಹುಭಾಗವು ನೀರಸವಾಗಿರುತ್ತದೆ. ಅಂತೇ ಅದರ ವಿಷಯ ಏನೂ ಹೇಳಲಿಕ್ಕೆ ಬರುವದಿಲ್ಲ. ಅದು ಒಳ್ಳೆ ಸ್ವಾರಸ್ಯಪೂರ್ಣವಾಗಿದೆಯೆಂದು

ವರ್ಣಿಸುವ ಗ್ರಂಥಗಳಾಗಲಿ ಮಾತುಗಳಾಗಲಿ— ತಾವು ಹುಟ್ಟಿದ್ದರ ಸಾರ್ಥ ಕತೆಯನ್ನು ಹೇಳಿಕೊಳ್ಳುವದಕ್ಕಾಗಿ—ಕಡ್ಡಿ ಬಯ್ಯ ಗುಡ್ಡಮಾಡುವವು. ರೇಶ್ಮೆಯ ಹುಳದಂತೆ ತನ್ನ ಸುತ್ತಲೂ ಜಾಳಿಗೆಯನ್ನು ಹಣೆದುಕೊಂಡು ತನಗೇ ಕೈಕಾಲು ಆಡಿಸಲಿಕ್ಕೆ ಬಾರದಂತೆ ಮಾಡಿಕೊಂಡು ಕೊನೆಗೆ ತಾನೆ ಕಟ್ಟಿದ ಮನೆಯಿಂದಲೆ ತನ್ನ ಪ್ರಾಣಕಳೆದುಕೊಳ್ಳುವಂತೆ ಈ ಮಾನವ ಜೀವವು ಕೂಡ ತಾನು, ತನ್ನ ಮನೆ, ತನ್ನ ಸಮಾಜ ಎಂದು ತನ್ನ ಸುತ್ತಲೂ ಜಾಳಿಗೆ ಯನ್ನು ಹೆಣೆದುಕೊಂಡು ಅದರಿಂದಲೇ ತನ್ನ ಮರಣವೆಂಬುದರರಿವಿಲ್ಲದೆ ಅದ ರಲ್ಲಿಯೆ ಮಲಗಿಕೊಂಡಿದೆ. ಅದಕ್ಕೆ ಎಚ್ಚರವೆಂದೋ ಏನೋ! ನಾವು ತಿಳಿದುಕೊಂಡಷ್ಟು ಅದಿನ್ನೂ ಜಾಗ್ರತವಾಗಿಲ್ಲ. ಅದೀಗ ಕೇವಲ ಸುಖ ದುಃಖದ ತಾರತಮ್ಯವನಿಷ್ಟೆ ನೋಡಬಲ್ಲದು. ಈಗ ನಮ್ಮ ಜೀವನದಲ್ಲಿಯು— ನಾವು ತಿಳಿದುಕೊಂಡ—ಯಾವುದೊ ಒಂದು ಅತ್ಯಂತ ರಮ್ಯ ಅನುಭವದ ಅಥವಾ ದುಃಖಾನುಭವದ ದಿವಸವನ್ನು ನೋಡಿದರೆ ಆ ದಿವಸದ ಬಹು ಭಾಗದಲ್ಲಿ ನಮ್ಮ ಜೀವಕ್ಕೆ ಏನೂ—ಸುಖವಾಗಲಿ, ದುಃಖವಾಗಲಿ— ಎನಿಸಿರುವದೇ ಇಲ್ಲ. ಆದರೆ ನಾವು ಮಾತ್ರ 'ನಾನು ಸುಖ ಅನುಭವಿಸು ತ್ತೇನೆ' ಅಥವಾ 'ನಾನು ದುಃಖ ಅನುಭವಿಸುತ್ತೇನೆ' ಎಂದು ತಿಳಿದು ಕೊಂಡಿರುತ್ತೇವೆ. ಇಲ್ಲಿ ನಾವು ನಮ್ಮ ಒಳಜೀವವನ್ನು ವಂಚಿಸುತ್ತೇವೆ. ಹಾಗೆ ನೋಡಿದರೆ ಅದಕ್ಕೆ ಈ ನಮ್ಮ 'ಸುಖ ದುಃಖ' ಯಾವುದೂ ಇಲ್ಲದೆ ಅದು ಸುಮ್ಮನಿರುವದು.

ಮಿಸೆಸ್ ಮೂರ ಮತ್ತು ಮಿಸ್ ಕ್ವೆಸ್ಟೆಡ್ ಇವರಿಗೆ ಈಗ ಹದಿನೈದು ದಿವಸಗಳಿಂದ ಅವರ ಮನಸ್ಸನ್ನು ವಿಶೇಷವಾಗಿ ಎಳೆಯುವಂತಹದಾವುದೂ ಸಂಭವಿಸಿರಲಿಲ್ಲ. ಪ್ರೊ. ಗೋಡಬೊಲೆಯವರ ಆ ಸಣ್ಣಹಾಡನ್ನು ಕೇಳಿದ ಮೇಲೆ ಅವರು ಹೆಚ್ಚುಕಡಿಮೆ ರೇಶಿಮೆ ಹುಳದಂತೆ ತಮ್ಮ ಜಾಳಿಗೆ-ಮನೆ ಯಲ್ಲಿ ಇದ್ದಂತೆಯೆ ಇದ್ದರು. ಆದರೆ ಅವರಿಬ್ಬರಲ್ಲಿ ಅಂತರವಿಷ್ಟೆ: ಹಿರಿಯಳು ತನಗೆ ಬಂದ ಉದಾಸೀನಭಾವವನ್ನು ಅಂಗೀಕರಿಸಿದ್ದಳು; ಕಿರಿಯಳು ಆ ಭಾವದಿಂದಲೆ ಕೆರಳಿದ್ದಳು. ಆದರೆ ಸಂಗತಿಗಳ ಸಮಗ್ರಪ್ರವಾಹದಲ್ಲಿ ಅವಳ ಅಚಲವಾದ ವಿಶ್ವಾಸ, ಮತ್ತು ಅದನ್ನು ನೋಡುವ ಅವಳ ಸಮಗ್ರದೃಷ್ಟಿ, ಇವೆ ಅವಳನ್ನು ಮನಸ್ಸಿನ ತೂಕ ತಪ್ಪದಂತೆ ಹಿಡಿದಿದ್ದವು. ತನಗೆ ಬೇಜಾರ

ಒಂದರೆ ಆ ತಪ್ಪನ್ನು ತನ್ನ ಮೇಲೆಯೆ ಹಾಕಿಕೊಳ್ಳುವಳು. ಮತ್ತು ಅದನ್ನು ಮುದುಗಿಟ್ಟುಕೊಂಡು ಮುಖದಿಂದ ಮಾತ್ರ ಉತ್ಸಾಹದ ಮಾತುಗಳನ್ನೆ ಸುರಿಸುವಳು. ಅವಳ ನಿರ್ವಂಚನೆಯ ಸ್ವಭಾವದಲ್ಲಿ ಇದೊಂದೇ ವಂಚನೆಯ ಕಲಂಕ; ಅದೂ ಕೂಡ ಅವಳ ತಾರುಣ್ಯದ ಭಾವನಾಮಯತೆಗೆ ಹಾಕಿದ ಬುದ್ಧಿಯ ಒಪ್ಪವೆ ಹೊರತು ನಿಜವಾದ ಕಲಂಕವಲ್ಲ. ಹಿಂದುಸ್ಥಾನದಲ್ಲಿದ್ದದ್ದೊಂದು, ಮೇಲೆ ಮದುವೆಯ ನಿಶ್ಚಯವಾದದ್ದೊಂದು, ಈ ಉಭಯ ಸಂಗತಿಗಳು ಅವಳ ಜೀವನದಲ್ಲಿಯೆ ಪ್ರತಿಯೊಂದು ಕ್ಷಣವನ್ನೂ ರಸನಿಮಿಷವನ್ನಾಗಿ ಮಾಡಿ ಅವಳ ಮನಸ್ಸನ್ನು ಉನ್ನತಗೊಳಿಸಬೇಕಾಗಿತ್ತು; ಆದರೆ ಹಾಗೆ ಮಾಡದೆ ಅವಳ ಮನಸ್ಸನ್ನು ಕುಗ್ಗಿಸಿಬಿಟ್ಟವು.

ಹಿಂದೀ ಜನರೇ ಹಿಂದುಸ್ಥಾನವನ್ನು ತೋರಿಸುವ ಏರ್ಪಾಡು ಮಾಡಿದ್ದರೂ ಅದು ಈ ಹೊತ್ತು ಎದ್ದು ಕಾಣದೆ ಮಸುಕಾಗಿತ್ತು. ಗುಹೆಗಳನ್ನು ನೋಡಬೇಕೆಂಬ ಅವಳ ಇಚ್ಛೆಯೇನೊ ನೆರವೇರಿತು; ಆದರೆ ಆ ಕಾವು ಇಳಿದ ಮೇಲೆ. ಆಯ್ಲೋಜನ ಮತ್ತು ಅವನ ವ್ಯವಸ್ಥೆಗಳ ಸಲುವಾಗಿ ಕೆರಳುವಂತಹ ಪರಿಸ್ಥಿತಿಯಲ್ಲೇನು ಅವಳ ಮನಸ್ಸು ಇರಲಿಲ್ಲ; ಅವಳ ಸುತ್ತುವರಿದಿದ್ದ ಆ ವಿಚಿತ್ರ ಪದಾರ್ಥಗಳಿಂದ ಅದೇನು ಅಳುಕಲಿಲ್ಲ, ಕುಗ್ಗಲಿಲ್ಲ. ನೋಡಿದರೆ ನಗೆಬರುವಂತಹ ಆ ಹೆಣ್ಣುಮಕ್ಕಳ ಡಬ್ಬಿಯೇನು—ಆ ರಗ್ಗುದಿಂಬುಗಳ ರಾಶಿಯೇನು—ಗುಡುಗುಡು ಉರುಳಾಡುವ ಕಲ್ಲಂಡಿಗಳೇನು—ಒಳ್ಳೆಣ್ಣೆಯ ವಾಸನೆಯೇನು—ನಿಚ್ಚಣಿಕೆಯೇನು—ಮಹಮ್ಮದಲಿಯ ಬಟ್ಲರನು ಒಮ್ಮಿಂದೊಮ್ಮೆ ಪಾಯಖಾನೆಯೊಳಗಿಂದ ಚಹಾದ ತಾಟು ತೆಗೆದುಕೊಂಡು ಬರುವದೇನು—ಇದೆಲ್ಲ ಅವಳಿಗೆ ಹೊಸದು ಮತ್ತು ನೋಡಲಿಕ್ಕೆ ಬಹಳ ತಮಾಷೆಯಾಗಿತ್ತು. ಆಗಾಗ ಹೊತ್ತು ಸಾಧಿಸಿ ಅವಕ್ಕೆಲ್ಲ ಮಾತಿನೇಟನ್ನೂ ಕೊಡುತ್ತಿದ್ದಳು. ಇಷ್ಟಾದರೂ ಅವಳ ಒಳಮನಸ್ಸಿನ ಶಾಂತತೆ ಏನು ಹೊಯ್ದಾಡಲಿಲ್ಲ. ಅಂತೆಯೆ ಅವಳಿಗೆ ತನ್ನ ರೋನಿಯನ್ನೇ ಮುಖ್ಯ ವಿಷಯವನ್ನಾಗಿ ಮಾಡಿಕೊಂಡು ಅವನ ಬಗ್ಗೆ ಏನೇನೋ ಕಲ್ಪಿಸಿಕೊಂಡು ಆ ಕಲ್ಪನೆಗಳಿಂದಲೆ ತನ್ನ ಮನಸ್ಸನ್ನು ರಮಿಸಿಕೊಳ್ಳುವದಕ್ಕೆ ಸಾಧ್ಯವಾಯಿತು.

'ಏನು 'ದಿಲ್‌ಖುಷ್' ಇದ್ದಾನೆ ಈ ಆಳು! ಯಾವಾಗಲೂ ನಗೆ ಮುಖ! ಆ ಖೋಡಿ ಅಂಟೊನಿ ಹೋದಾಗಿನಿಂದ ಎಷ್ಟು ಹಗುರೆನಿಸಿದೆ!'

'ಅದೆಲ್ಲ ನಿಜ. ಆದರೆ ನೋಡಿದವರನ್ನು ದಂಗುಬಡಿಸಿಬಿಡುವದೂ ಸುಳ್ಳಲ್ಲ! ನೋಡಿದಿಯಾ, ಚಹಾ ಮಾಡಲಿಕ್ಕೆ ಎಂಥ ದಿವ್ಯ ಜಾಗ ಹುಡುಕಿದ್ದ?' ಎಂದು ತನ್ನ ನಿದ್ರಾಭಂಗವಾದದ್ದಕ್ಕಾಗಿ ಮಿಸೆಸ್ ಮೂರಳು ಒಳಗೆ ಕೆರಳಿದ್ದರೂ ಹೊರಗೆ ನಗೆಯಾಡಿದಳು.

'ತಿರುಗಿ ಹೋದಮೇಲೆ ಆ ಅಂಟೊನಿಗೊಮ್ಮೆ ನಾನು ಚೆನ್ನಾಗಿ ಕೈತೋರಿಸಬೇಕಾಗಿದೆ. ಪ್ಲ್ಯಾಟ್‌ಫಾರ್ಮಿನ ಮೇಲಿನ ಅವನ ನಡತೆಯನ್ನು ನೋಡಿ ನಾನಿದನ್ನು ಗೊತ್ತೇ ಮಾಡಿದ್ದೇನೆ.'

ಅಂಟೊನಿಯಲ್ಲಿಯ ಒಳ್ಳೆಯ ಗುಣಗಳೆಲ್ಲ ಇಲ್ಲಿ ಗೊತ್ತಾಗುವದಿಲ್ಲ; ಸಿಮ್ಲಾದಲ್ಲಿ ಹೊರಬೀಳುವವೆಂದು ಮಿಸೆಸ್ ಮೂರಳು ಬಗೆದಳು. ಅಡೀಲಾಳ ಮದುವೆ ಸಿಮ್ಲಾದಲ್ಲಿಯೆ ಆಗತಕ್ಕದ್ದಿತ್ತು. ಅವಳ ಚಿಕ್ಕಪ್ಪನ ಮಕ್ಕಳು ಅಲ್ಲಿ ಒಂದು ದೊಡ್ಡ ಬಂಗ್ಲೆಯನ್ನು ಹಿಡಿದು ಅವಳನ್ನು ಆಮಂತ್ರಿಸಿದ್ದರು.

'ಏನೇ ಆಗಲಿ, ನಾವು ಇನ್ನೊಬ್ಬ ಸೇವಕನನ್ನು ದೊರಕಿಸಲೇಬೇಕು. ಯಾಕಂದರೆ ಸಿಮ್ಲಾದಲ್ಲಿ ನೀವು ಹೋಟೆಲ್ಲದಲ್ಲಿಳಿದುಕೊಳ್ಳುವವರು—ಮತ್ತು ನನಗನಿಸುವದಿಲ್ಲ, ಅಲ್ಲಿ ನಿಮ್ಮ ರೋನಿಯು ಈ ಬಲದೇವನು....' ಅವಳಿಗೆ ಹೀಗೆ ಇಲ್ಲದ ಹಂಚಿಕೆ ಹಾಕುವದೆಂದರೆ ಬಹಳ ಹುರುಪು.

'ಆಗಲಿ, ನೀನು ಇನ್ನೊಬ್ಬ ಸೇವಕನನ್ನು ತೆಗೆದುಕೊಳ್ಳಬಹುದು. ನಾನು ಮಾತ್ರ ಆ ಅಂಟೊನಿಯನ್ನೆ ಇಟ್ಟುಕೊಳ್ಳುತ್ತೇನೆ. ಅವನ ಸಮಾಧಾನವಾದ—ತಡವಾದರೂ ಅಡ್ಡಿಯಿಲ್ಲ-ಪದ್ಧತಿಯು ನನಗೆಲ್ಲ ರೂಢಿಯಾಗಿದೆ. ಇಲ್ಲಿಯ ಉರಿಗಾಳಿ-ದಿವಸಗಳಲ್ಲಿ ಅವನು ನನಗೆ ಸಹಾಯಮಾಡುವನು.'

'ಏನು, ಉರಿಗಾಳಿ; ಉರಿಗಾಳಿ. ನನಗದರಲ್ಲಿ ನಂಬಿಗೆಯೆ ಇಲ್ಲ. ಇನ್ನು ಮೇಜರ ಕ್ಯಾಲೆಂಡರನಂಥವನು ಅದರ ವಿಷಯ ಯಾವಾಗಲೂ ಮಾತನಾಡುತ್ತಾನೆಂದರೆ ಅದಕ್ಕೊಂದು ಅರ್ಥವಿರಬೇಕು, ಸ್ವಾರ್ಥವಿರಬೇಕು. ಅವನಿಗೆ ಇನ್ನೊಬ್ಬರು ಅನನುಭವಿಕರು, ತನ್ನಕಿಂತ ಸಣ್ಣವರು, ತಾನೇ ದೊಡ್ಡವನು, ಎಂದು ತೋರಿಸಿಕೊಳ್ಳುವದಕ್ಕೆ ಅವನ ಆ 'ನಾನು ಈ ದೇಶ

ದಲ್ಲಿದ್ದು ಇಪ್ಪತ್ತು ವರ್ಷವಾಯಿತು.' ಎಂಬ ಮಾತಿನಂತೆಯೆ ಈ ಮಾತೂ ಅನುಕೂಲವಾಗುತ್ತದೆ ಅಷ್ಟೆ.'

'ನನಗೇಕೋ ಆ ಉರಿಗಾಳಿ, ಉರಿಬಿಸಿಲಿನ ವಿಷಯದಲ್ಲಿ ನಂಬಿಗೆ ಯಿದೆ. ಆಗರೆ ಬಾಟ್ಲಿಯಲ್ಲಿ ಹಾಕಿ ಬಾಯಿಮುಚ್ಚಿದಂತೆಯೇನು ಈ ಸಲ ಆಗಲಿಕ್ಕಿಲ್ಲೆಂದೂ ನನಗನಿಸುತ್ತದೆ.'

ರೋನಿ ಮತ್ತು ಅಡೀಲಾ ಇಬ್ಬರೂ ಸಾಧುಗಳಂತೆ ನಿಧಾನವೃತ್ತಿ ಯವರಿದ್ದುದರಿಂದ ತಮ್ಮ ಮದುವೆಗಾಗಿ ಅಷ್ಟೇನು ಆತುರರಾಗಿರಲಿಲ್ಲ. ಅಂತೇ ಅದು ಮೇ ತಿಂಗಳ ವರೆಗೆ ಮುಂದೆ ಬಿದ್ದಿತ್ತು. ಆದರಿಂದ ಮದುವೆ ಆದೊಡನೆ ಇಂಗ್ಲೆಂಡಕ್ಕೆ ಮರಳಿ ಬಿಡಬೇಕೆಂಬ ಮೂರಳ ಲೆಕ್ಕವು ತಪ್ಪಿತು. ನಿರ್ವಾಹವಿಲ್ಲದೆ ಮತ್ತೆ ಹವೆಯಲ್ಲಿ ತಂಪು ಹುಟ್ಟುವ ವರೆಗೆ-ಹಿಂದುಸ್ಥಾನದ ಸುತ್ತಲೂ ಕಾಳ್ಗಿಚ್ಚು ಹರಹಿದಂತಿರುವ ಉರಿಬಿಸಿಲನ್ನು ತಪ್ಪಿಸಿಕೊಳ್ಳುವ ದಕ್ಕಾಗಿ—ಹಿಮಾಲಯದಲ್ಲಿಯೊ, ಎಲ್ಲಿಯೊ ಬಾಯಿಬಿಡುತ್ತ ಕುಳಿತುಕೊಳ್ಳ ಬೇಕಾಯಿತು.

'ನನಗೇನು ಅಷ್ಟೆನಿಸುವದಿಲ್ಲ. ತಮ್ಮ ಗಂಡಂದಿರನ್ನು ಈ ಬಯಲ ಉರಿಬಿಸಿಲಲ್ಲಿ ಕುದಿಯಲಿಕ್ಕೆ ಬಿಟ್ಟು ತಾವು ಇಂಗ್ಲೆಂಡಕ್ಕೆ ಹೋಗುವ ಇಲ್ಲಿಯ ಈ ಹೆಣ್ಣುಮಕ್ಕಳಷ್ಟೇನು ನನಗೆ ಸಹನೆಯಿಲ್ಲ. ಇದೇ ಮಿಸೆಸ್ ಮ್ಯಾಕ್‌ಬ್ರಾಯಿಡಳನ್ನು ನೋಡಿರಿ! ಮದುವೆಯಾದಂದಿನಿಂದ ಒಮ್ಮೆಯೂ ಆವಳಿಲ್ಲಿ ಬೇಸಿಗೆಯ ಕಾಲಕ್ಕೆ ನಿಂತಿಲ್ಲ. ಅಲ್ಲದೆ ತನ್ನ ಆ ಶಾಂತಸ್ವಭಾವದ ಗಂಡನನ್ನು ಆರಾರು ತಿಂಗಳು ಬಿಟ್ಟು ಹೋಗಿ ಆಮೇಲೆ ಅವನ ಸಂಬಂಧವೇ ತಪ್ಪಿದವರಂತೆ ಆಶ್ಚರ್ಯಬಡುತ್ತಾಳೆ.'

'ಆದರೂ ಅವಳಿಗೆ ಮಕ್ಕಳಿದ್ದಾರೆ, ಗೊತ್ತಿದೆಯಲ್ಲವೇ?'

'ಓಹೊ! ಗೊತ್ತಿರದೆ ಏನು?' ಎಂದು ಅಡೀಲಾ ಗಾಬರಿಯಾಗಿ ನುಡಿದಳು.

'ಮಕ್ಕಳಾದರಾಯಿತು. ಅದೇ ಮುಖ್ಯ. ಅಂತೇ ಮೊದಲು ಮಕ್ಕಳ ವಿಚಾರ; ಆದೂ ಅವರು ದೊಡ್ಡವರಾಗಿ ಮದುವೆಯಾಗುವವರೆಗೆ. ಅದಾದ ಮೇಲೆ ಮುಗಿಯಿತು; ಮತ್ತೆ ಒಬ್ಬರೇ ಇರಲಿಕ್ಕೆ ಹಕ್ಕು ಹುಟ್ಟಿದಂತಾ

ಗುವದು. ಆಗ ಮಾತ್ರ ತಮಗೆ ಬೇಕಾದಲ್ಲಿ—ಬೈಲೆಂದರೆ ಬೈಲು, ಪರ್ವತದ ತುದಿಯ ಮೇಲೆಂದರೆ ಪರ್ವತದ ತುದಿಯ ಮೇಲೆ— ಇರಬಹುದು ! '

' ಹೌದು ! ಅದೂ ಸಂಪೂರ್ಣ ನಿಜವೇ. ನಾನೆಂದೂ ಇದನ್ನು ವಿಚಾರಿಸಿದ್ದೇ ಇಲ್ಲ ! '

' ಸರಿ, ಹುಚ್ಚರು, ಸಾವು ಸಮೀಪಿಸಿದ ಮುದುಕಿಯರು ಮಾತ್ರ ಆ ವಿಚಾರ ಮಾಡದಿರಬಹುದು. ' ಎಂದು ತನ್ನ ತೆರವಾದ ' ಕಪ್ಪ 'ನ್ನು ಚಾಕರನ ಕೈಯಲ್ಲಿ ಕೊಟ್ಟಳು.

' ನನ್ನ ಕಲ್ಪನೆ ಹೀಗಿದೆ: ನನ್ನ ಚಿಕ್ಕಪ್ಪನ ಮಕ್ಕಳು ಅಲ್ಲಿ ನನ್ನ ಮದುವೆ ಮುಗಿಯುವವರೆಗೆ ನನಗೆ ಒಬ್ಬ ಸೇವಕನನ್ನು ಕೊಟ್ಟೇಕೊಡ ಬಹುದು. ಆಮೇಲೆ ರೋನಿ ತನ್ನ ಚಾಕರರ ಪುನರ್ವ್ಯವಸ್ಥೆ ಮಾಡಿಯೆ ಮಾಡುವನು. ಅದು ಅವನ ಬ್ರಹ್ಮಚಾರಿ ಜೀವನಕ್ಕೆ ಎಲ್ಲ ಸರಿ ಹೋಗು ತ್ತದೆ. ಆದರೆ ಮದುವೆಯಾದ ಮೇಲೆ ಅವನು ಅದರಲ್ಲಿ ಅನೇಕ ಬದಲಾವಣೆ ಗಳನ್ನು ಮಾಡಬೇಕಾಗುವದು. ಅವನ ಮೊದಲಿನ ನೌಕರರು ನನ್ನ ಮಾತು ಕೇಳಲಿಕ್ಕಿಲ್ಲ; ನಾನೇನು ಅದು ತಪ್ಪು ಎನ್ನುವದಿಲ್ಲ '

ಮಿಸೆಸ್ ಮೂರಳು ಮುಚ್ಚಿದ ಕಿಡಿಕಿಗಳನ್ನು ತೆರೆದು ಹೊರಗೆ ನೋಡಿ ದಳು. ರೋನಿ ಮತ್ತು ಅಡೀಲಾ ಇವರನ್ನು ಅವಳು ಅವರಿಬ್ಬರ ಇಚ್ಛೆ ಯಂತೆಯೆ ಕೂಡಿಸಿದ್ದಳು. ಆದರೆ ಇನ್ನು ಮುಂದೆ ಏನು ಹೇಳಬೇಕೆಂಬುದು ಅವಳಿಗೆ ತಿಳಿಯದಾಯಿತು. ಜನರು ಎಷ್ಟೇ ದೊಡ್ಡವರಿದ್ದರೂ ಅವರ ಆಪ್ತತ್ವ ಪಾತ್ರ ಅಷ್ಟು ದೊಡ್ಡದಿರುವದಿಲ್ಲ. ಮತ್ತು ಮದುವೆಯ ವಿಷಯದಲ್ಲಿಯಂತೂ ಮಂತ್ರದಕಿಂತ ಉಗುಳೇ ಹೆಚ್ಚಾಗಿದೆಯೆಂದು ಅವಳು ಭಾವಿಸಿದಳು. ( ಇದೇನು ಕಣಸೊ, ಕನಸೊ ? ) ಅಪ್ಪುವದು, ಮುದ್ದಾಡುವದು, ಸುರುವಾಗಿ ಎಷ್ಟೋ ಶತಮಾನಗಳು ಉರುಳಿಹೋಗಿದ್ದರೂ ಮಾನವನಿನ್ನೂ ಪರಸ್ಪರರನ್ನು ನಿರ್ಮ ಲಾಂತಃಕರಣದಿಂದ ತಿಳಿದುಕೊಳ್ಳುವ ಮಟ್ಟಕ್ಕೆ ಬಂದಿಲ್ಲ. ಇದೇ ವಿಷಯಕ್ಕೆ ಒಳ್ಳೇ ಜೋರಿನಿಂದ ವಿಚಾರನಡೆದು ಅದೇ ಒಂದು ಆಪ್ತತ್ವ ಸಂಬಂಧ ವಾಯಿತು, ಅದೇ ಒಂದು ಮೂರ್ತಸ್ವರೂಪ ಹೊಂದಿ ಅವಳ ಕೈಯನ್ನು ಹಿಡಿಯಲು ಹವಣಿಸಿತು.

' ಆ ಗುಡ್ಡಗಳೇನಾದರೂ ಕಾಣುತ್ತಿವೆಯೇ ? '

‘ ಇನ್ನೂ ಕತ್ತಲೆಯ ಬೇರೆ ಬೇರೆ ಛಾಯೆಗಳು ಮಾತ್ರ ಕಾಣುತ್ತಿವೆ.’

‘ ನನಗೆ ಕತ್ತೆಕಿರುಬ ಭೆಟ್ಟಿಯಾದ ಸ್ಥಳದಿಂದ ನಾವೇನು ಅಷ್ಟು ದೂರ ಇರಲಿಕ್ಕಿಲ್ಲ? ’ ಎಂದು ಕಾಲರಹಿತವಾದ ಆ ಸಂಧಿಪ್ರಕಾಶದಲ್ಲಿ ದಿಟ್ಟಿಸಿ ನೋಡಿದಳು. ಅಷ್ಟರಲ್ಲಿ ಗಾಡಿಯು ಒಂದು ಹಳ್ಳವನ್ನು ದಾಟಿತು. ಅಲ್ಲಿಂದ ಒಂದು ನೂರು ಯಾರ್ಡು ಮುಂದೆ ಹೋಗುವಷ್ಟರಲ್ಲಿ ಮತ್ತೊಂದು ಹಳ್ಳ ಬಂತು; ಆಮೇಲೆ ಮೂರನೆಯದು ಬಂತು. ಹೀಗೆ ಇವೆಲ್ಲ ಎತ್ತರವಾದ ಆ ಪ್ರದೇಶವು ಸಮೀಪಿಸಿತೆಂದು ಸೂಚಿಸಿದವು. ‘ ಒಂದು ವೇಳೆ ಇದೇ ಅದಾಗಿರಬಹುದು. ಯಾಕೆಂದರೆ ಆ ರಸ್ತೆಯೂ ಈ ರೇಲ್ವೆಯೂ ಒಂದಕ್ಕೊಂದು ಸಮಾನಾಂತರವಾಗಿ ಸಾಗಿವೆ.’ ಎಂದು ಆ ಅಪಘಾತವನ್ನೇ ನೆನೆದು ನುಡಿದಳು. ಅದೊಂದು ಈಗ ಅವಳಿಗೆ ಸುಖಸ್ಮರಣೆಯಾಗಿತ್ತು. ಅದರಲ್ಲಿ ಚೆನ್ನಾಗಿ ಢಕ್ಕಾಢಿಕ್ಕಿಯಾಗಿದ್ದರಿಂದಲೆ ತನಗೆ ರೋನಿಯ ನಿಜವಾದ ಬೆಲೆಯು ತಿಳಿಯಿತೆಂದುಕೊಂಡಳು. ಇದಾದ ಮೇಲೆ ಅವಳು ಮತ್ತೆ ತನ್ನ ಭವಿಷ್ಯಜೀವನದ ಹಂಚಿಕೆಗಳನ್ನು ಹಾಕಹತ್ತಿದಳು. ಅವಳಿಗೆ ಚಿಕ್ಕತನದಿಂದಲೂ ಹೀಗೆ ಹಂಚಿಕೆ ಹಾಕುವದೊಂದು ಹುಚ್ಚೆ ಹಿಡಿದಿತ್ತೆನ್ನಬಹುದು. ಆಗೀಗ ವರ್ತಮಾನಕ್ಕೂ ತನ್ನ ಮರ್ಯಾದೆ ಸಲ್ಲಿಸುವಳು— ‘ ಅಝೀಜನು ಎಂಥ ಅಂತಃಕರಣಿಯು! ಎಷ್ಟು ಬುದ್ಧಿವಂತನು! ’ ಎಂದು ಒಂದು ಪೇರಲಹಣ್ಣು ತಿಂದಳು—ಕರಿದ ಒಂದು ಪದಾರ್ಥವನ್ನು ತಿನ್ನಲಿಕ್ಕೆ ಯತ್ನಿಸಿದಳು, ಬರಲಿಲ್ಲ—ತನ್ನ ಉರ್ದು ಅಭ್ಯಾಸದ ಪ್ರಯೋಗವನ್ನು ನೌಕರರ ಮೇಲೆ ಮಾಡಿದಳು—ಇಷ್ಟೆಲ್ಲ ಆದರೂ ಅವಳ ವಿಚಾರಗಳೆಲ್ಲ ತನ್ನ ಭವಿಷ್ಯದ ಕಡೆಗೂ ತಾನು ಸ್ವೀಕರಿಸಲು ನಿಶ್ಚಯಿಸಿದ ಆ್ಯಂಗ್ಲೋ ಇಂಡಿಯನ್ ಜೀವನದ ಕಡೆಗೂ ಹರಿಯುತ್ತಿದ್ದವು. ಅವಳು ತನ್ನ ಆ ಜೀವನದ ಬೆಲೆಯನ್ನು ಅದರ ಅನುಬಂಧಿಗಳಾದ ಟರ್ಟನ್–ಬರ್ಟನ್ನರ ಜೀವನದೊಡನೆ ಹೋಲಿಸಿ ನೋಡಿಕೊಳ್ಳುತ್ತಿರುವಾಗ ಅವಳ ಪ್ರತಿಶಬ್ದಕ್ಕೂ ಗಾಡಿಯು ‘ ಪಂಪರ್, ಪಂಪರ್ ’ ಎಂದು ಶ್ರುತಿ ಹಿಡಿದಿತ್ತು. ಈ ಅರ್ಧ ತೂಕಡಿಸುತ್ತ, ನಿಧಾನವಾಗಿ, ನಿರ್ದಿಷ್ಟಗುರಿಯಿಲ್ಲದೆ, ಎತ್ತೋ ಎಲ್ಲಿಗೋ ಹೊರಟ, ಯಾವ ಡಬ್ಬಿಗಳಲ್ಲಿ ಹುಡುಕಿದರೂ ಮಹತ್ವದ ಪ್ರವಾಸಿಗರಿಲ್ಲದ—ಈ ಬ್ರ್ಯಾಂಚು ಲೈನದ ಒಡ್ಡರಬಂಡಿಯಂತಹ ಗಾಡಿಯು ಎರಡೂ ಮಗ್ಗಲು ಸಪ್ಪಗಿನ ಹೊಲಗಳ ಒಡ್ಡಿನಲ್ಲಿ ಅಡಗಿತ್ತು. ಅದರ ಸಂದೇಶವು—

ಅದಕ್ಕೂ ಒಂದಿತ್ತು—ಅವಳ ತುಂಬಿದ ಮನಸ್ಸಿಗೆ ಹೊಳೆಯದೆ ಹೋಯಿತು. ಅವಳ ಹಿಂದೆ ದೂರದಲ್ಲಿ, ತನ್ನ ಕಾರ್ಯಗೌರವವನ್ನು ಕೂಗಿನ ಅಬ್ಬರದಿಂದ ತೋರಿಸುತ್ತ, ಮೇಲ್ಗಾಡಿಯು ಮಹತ್ವದ ಸಂಗತಿಗಳು ಜರಗುವ, ಮಹಾ ವ್ಯಕ್ತಿಗಳು ಹುಟ್ಟಿಬೆಳೆಯುವ, ಕಲಕತ್ತಾ ಲಾಹೋರ ಮೊದಲಾದ ಪಟ್ಟಣ ಗಳನ್ನು ಜೋಡಿಸಿ ಆರ್ಭಟದಿಂದ ಓಡುತ್ತಿತ್ತು. ಇದು ಮಾತ್ರ ಅವಳಿಗೆ ತಿಳಿಯಿತು. ದುರ್ದೈವದಿಂದ ಹಿಂದುಸ್ತಾನದಲ್ಲಿ ದೊಡ್ಡ ಪಟ್ಟಣಗಳು ಬಹಳ ಕಡಿಮೆ ಇವೆ. ಇಲ್ಲಿದ್ದದ್ದು ಬರಿ ಹೊಲಗಳು, ಗುಡ್ಡಗಳು, ಅಡವಿಗಳು, ಇವಿಷ್ಟೇ. ಬ್ರ್ಯಾಂಚು ಲೈನು ಮುಗಿಯಿತು. ಸ್ವಲ್ಪ ದೂರದವರೆಗೆ ಹಾದಿಯು ಬರಿ ಕಾರುಗಳಿಗೆ ಮಾತ್ರ ಉಪಯೋಗವಿತ್ತು ; ಎತ್ತಿನ ಬಂಡಿಗಳು ಮಗ್ಗಲಿಗೆ ಮೆಲ್ಲಗೆ ನಡೆದಿದ್ದವು ; ಮುಂದೆ ಅದೇ ದಾರಿಯು ಸೀಳೊಡೆದು ಕಾಲುದಾರಿ ಗಳಾಗಿ ಬೆಳೆಗಳಲ್ಲಿ ಹೋಗಿ ಮಸಾರಿಯ ಮರಡಿಯಲ್ಲಿ ಕಾಣದಾಗುತ್ತಿದ್ದವು; ಇಂಥ ದೇಶವು ಮನಸ್ಸಿಗೆ ಹೇಗೆ ಹಿಡಿಯಬೇಕು? ಪರದೇಶಿಯರು ಒಬ್ಬರ ಹಿಂದೊಬ್ಬರಂತೆ ಈ ದೇಶಕ್ಕೆ ದಾಳಿಯಿಟ್ಟು ಇದನ್ನು ತಮ್ಮದನ್ನಾಗಿ ಮಾಡಿ ಕೊಳ್ಳಬೇಕೆಂದು ಎಂದಿನಿಂದಲೊ ಪ್ರಯತ್ನ ಮಾಡುತ್ತಿದ್ದಾರೆ; ಆದರೆ ಅವರೆ ಲ್ಲರೂ ಕೊನೆಗೆ ದೇಶಭ್ರಷ್ಟರಾಗಿದ್ದಾರೆ. ಅವರು ಇಲ್ಲಿ ಕಟ್ಟಿದ ಮಹಾ ಅರಮನೆ ಗಳೆಲ್ಲ ಅವರಿಗೆ ಧರ್ಮಶಾಲೆಗಳಂತಾಗಿವೆ ; ಅವರ ಪೌರುಷದ ಯುದ್ಧಗಳೆಲ್ಲ ತಮ್ಮ ಮನೆಗೆ ದಾರಿ ಹುಡುಕುವದಕ್ಕಾಗಿ ಮಾಡಿದ ಮಕ್ಕಳ ಬಡಿದಾಟ ಗಳಂತಾಗಿವೆ; ಭಾರತದೇವಿಗೆ ಅವರ ತೊಂದರೆ ಗೊತ್ತಿದೆ. ಅವಳು ತನ್ನ ಶತಮುಖಗಳಿಂದ, ತನ್ನಲ್ಲಿಯ ಉಚ್ಚನೀಚ ಪದಾರ್ಥಗಳಿಂದ 'ಬನ್ನಿ !' ಎಂದು ಎಲ್ಲರನ್ನೂ ಕರೆಯುತ್ತಾಳೆ. ಆದರೆ ಏತಕ್ಕೆ ಬರಬೇಕು ? ಅವಳೆಂದೂ ಅದನ್ನು ಸ್ಪಷ್ಟ ಮಾಡಿಲ್ಲ. ಅವಳ ಕರೆಯಲ್ಲಿ ದೈನ್ಯವಿದೆ, ಧೈರ್ಯವಿಲ್ಲ.

'ಸಾಕಷ್ಟು ತಂಪು ಹುಟ್ಟಿತೆಂದರೆ ನಿನ್ನನ್ನು ಸಿಮ್ಲಾದಿಂದ ಕರೆಯಿಸು ತ್ತೇನೆ. ನಿನ್ನನ್ನು ಆಗ ಬಾಟ್ಲಿಯೊಳಗಿಂದ ಹೊರಗೆಡಹುತ್ತೇನೆ; ನಾವು ಆಗ ಈ ಮೊಗಲರ ಕಲೆಗಳನ್ನು ನೋಡೋಣವಂತೆ—ತಾಜಮಹಾಲನ್ನು ನೋಡಲಿಕ್ಕೆ ನಿನ್ನನ್ನು ಬಿಟ್ಟುಹೋದರೆ ಹೇಗೆ?—ಆಮೇಲೆ ಮುಂಬಯಿಯ ವರೆಗೆ ನಿನ್ನನ್ನು ಕಳಿಸಲಿಕ್ಕೆ ಬರುತ್ತೇನೆ—ಈ ದೇಶವನ್ನು ನೋಡುವ ಕೊನೆ ಕಡೆಯ ನೋಟವು ನಿಜವಾಗಿಯೂ ನಿನಗೇ ರಮ್ಯವೆನಿಸುವದು.' ಎಂದು

ಆ ಹುಡುಗಿಯು ಹೇಳುತ್ತಿರುವಾಗಲೆ ಆ ಮುದಕಿಯು-ಬೆಳಗಿನಲ್ಲಿ ಬೇಗನೇ ಎದ್ದುದರಿಂದ—ನಿದ್ರೆಹೋಗಿತ್ತು. ಅವಳ ಆರೋಗ್ಯವು ಬಹಳ ಸೂಕ್ಷ್ಮ ವಾಗಿದ್ದುದರಿಂದ ಅವಳು ಈ ಪ್ರವಾಸವನ್ನೇ ಮಾಡಬಾರದಾಗಿತ್ತು. ಆದರೆ ಎರಡನೆಯವರ ಸುಖಕ್ಕೆ ತಾನೇಕೆ ಅಡ್ಡಬರಬೇಕಂದು ಹೇಗೋ ಸಾವರಿಸಿ ಕೊಂಡು ಬಂದಿದ್ದಳು. ಅವಳ ಕನಸಿನ ನೆಯ್ಗೆಯೂ ಅಡೀಲಾಳ ಮಾದರಿ ಯದೇ ಆಗಿತ್ತು. ಆದರೆ ಎಳೆಗಳು ಮಾತ್ರ ಬೇರೆ; ಅಂದರೆ ಅವಳ ಮಕ್ಕಳು-ಸ್ಟೇಲಾ ಮತ್ತು ರಾಲ್ಫರು; ಆ ಹುಡುಗರಿಗೆ ಏನೋ ಬೇಕಾಗಿತ್ತು; ಈ ಮುದುಕಿಯು ಅವರಿಗೆ ತಾನು ಒಂದೇ ಕಾಲಕ್ಕೆ ಎರಡು ಕಡೆಗೆ ಇರುವದು ಶಕ್ಯವಿಲ್ಲವೆಂದು ತಿಳಿಹೇಳುತ್ತಿದ್ದಳು. ಅವಳು ತನ್ನ ಈ ಕನಸಿನಿಂದ ಎಚ್ಚ ತ್ತಾಗ ಅಡೀಲಾ ಹಂಚಿಕೆ ಹಾಕುವದನ್ನು ಬಿಟ್ಟು ಕಿಡಿಕಿಯಲ್ಲಿ ಹಣಿಕಿ ಹಾಕಿ 'ಅವು ಅದ್ಭುತ ಇವೆ!' ಎಂದೆನ್ನುತ್ತಿದ್ದಳು.

ಸಿವ್ಹಿಲ್ ಸ್ಟೇಶನ್ನದ ಎತ್ತರದಿಂದ ಅದ್ಭುತವಾಗಿ ತೋರುವ ಮಾರ ವಾರವು ಈಗ ಒಂದು ದೇವತೆಯಾಗಿತ್ತು. ಈ ದೇವತೆಗೆ ಭೂಮಿಯೊಂದು ಭೂತದಂತಾಗಿತ್ತು. ಕಾವಾದೋಲವು ತೀರ ಸಮೀಪದಲ್ಲಿದ್ದಂತೆ ಕಾಣಿಸಿತು. ಒಂದೇ ಒಂದು ಬಂಡೆಗಲ್ಲು ಮ್ಯೇಲಕ್ಕೆ ಜಿಗಿದೆದ್ದಿತ್ತು; ಅದರ ತಲೆಯಮೇಲೆ ಇನ್ನೊಂದು ಬಂಡೆಗಲ್ಲು—ಇಷ್ಟು ದೊಡ್ಡದಕ್ಕೆ ಒಂದೇ ಕಲ್ಲು ಎನ್ನಬಹು ದಾದರೆ!—ಒಳ್ಳೇ ತೂಕದಿಂದ ನಿಂತಿತ್ತು. ಅದರ ಹಿಂದೆ ಉಳಿದ ಗುಡ್ಡಗಳು ಬೈಲು ಪ್ರದೇಶಗಳಿಂದ ಬೇರೆ ಬೇರೆಯಾಗಿ ಮಲಗಿದ್ದವು; ಈ ಗುಡ್ಡಗಳ ಗುಂಪು ಗಾಡಿಯು ಸಮೀಪ ಹೋದಕೂಡಲೆ ಅದನ್ನು ನೋಡಲಿಕ್ಕೇ ಎನ್ನುವ ಹಾಗೆ ಒಂದು ಸ್ವಲ್ಪ ಸ್ಥಳಾಂತರ ಮಾಡಿತು.

'ಏನು ಕೊಟ್ಟರೂ ನಾನಿದನ್ನು ತಪ್ಪಿಸಿಕೊಳ್ಳುತ್ತಿದ್ದಿಲ್ಲ.' ಎಂದು ಅಡೀಲಾ ತನ್ನ ಉತ್ಸಾಹವನ್ನು ಹೆಚ್ಚಾಗಿ ತೋರಿಸಿದಳು. 'ಅಹಾ! ಅದು ನೋಡಿರಿ! ಸೂರ್ಯನೂ ಮೂಡುತ್ತಿದ್ದಾನೆ—ಇದೆಲ್ಲ ಆಗ ನಿಜವಾಗಿಯೂ ಅತ್ಯಂತ ರಮಣೀಯವಾಗುವದು—ಬೇಗನೆ ಬನ್ನಿ, ನೋಡಬನ್ನಿ--ಹಿಂದು ಗಡೆ ಏನು ಕೊಟ್ಟರೂ ಸಿಗಲಿಕ್ಕಿಲ್ಲ—ನಾವು ಟರ್ಟನ್ನರನ್ನೂ ಅವರ ಆನೆ ಗಳನ್ನೂ ಗಂಟುಹಾಕಿಕೊಂಡಿದ್ದರೆ ಇವುಗಳನ್ನು ನೋಡುವದು ನಮಗೆ ಎಂದಿಗೂ ಆಗುತ್ತಿರಲಿಲ್ಲ—'

ಅವಳು ಹೀಗೆ ಮಾತಾಡಿದ್ದನ್ನು ಕೇಳಿಯೊ ಏನೊ ಅವಳ ಎಡಕ್ಕಿದ್ದ ಆಕಾಶದ ಮುಖವು ಸಿಟ್ಟಿನಿಂದ ಕೆಂಪೇರಿತು. ತಿಳಿನೀಲಿಬಣ್ಣವು ಗಿಡದ ಗುಂಪುಗಳ ಹಿಂದೆ ಕುಣಿಯುತೊಡಗಿತು. ಮೆಲ್ಲಗೆ ಅದು ಹೆಚ್ಚು ತೀಕ್ಷ್ಣವಾಯಿತು. ಅಲ್ಲಿಂದ ತಿಳಿಯಾಯಿತು. ಕೊನೆಗೆ ಬೆಳ್ಳಗಾಯಿತು; ಬೆಳಕಾಯಿತು.

ಅವರೆಲ್ಲರೂ ಮುಂದೆ ಬರುವ ಅದ್ಭುತವನ್ನೇ ಎದುರುನೋಡುತ್ತಿದ್ದರು. ಆದರೆ ರಾತ್ರಿಯನ್ನು ಬಿರಿದು ಬೆಳಗು ಬರುವ ಆ ಮಹತ್ವದ ಕ್ಷಣದಲ್ಲಿ ಏನೂ ಸಂಭವಿಸಲಿಲ್ಲ ಸತ್ಯಕ್ಕೇ ಸೋಲು ಬಂದಂತಾಗಿ, ಬೆಳಕು ತೂರುವ ಆಕಾಶದ ದಿವ್ಯ ಕಾರಂಜಿಯು ಒಮ್ಮೆಲೆ ಒತ್ತಿದಂತಾಯಿತು. ಪೂರ್ವದಿಕ್ಕಿನಲ್ಲಿಯ ಬಣ್ಣಗಳು ತಿಳಿಯಾದವು. ಗುಡ್ಡಗಳಿನ್ನೂ ಮಸುಮಸುಕಾಗಿಯೆ ಕಾಣುತ್ತಿದ್ದವು. ಜಡವಾದ ನಿರಾಶೆಯು ಆ ಬೆಳಗಿನ ಗಾಳಿಯೊಡನೆ ಪ್ರವೇಶಿಸಿತು. ಯಾಕೆ ಗೊತ್ತೇ? ಲಗ್ನಮಂಟಪವು ಸಿದ್ಧವಾಗಿ ಕಹಳೆ ಸನಾದಿ ಮೊದಲಾದ ಶುಭವಾದ್ಯಗಳು ಕರೆಯುತ್ತಿರುವಾಗ, ಕೂಡಿದವರೆಲ್ಲರೂ ಆತುರತೆಯಿಂದ ನಿರೀಕ್ಷಿಸುತ್ತಿರುವಾಗ ವರನೇ ಬರಲಿಲ್ಲವೋ ಏನೋ! ಸೂರ್ಯದೇವನು ವೈಭವದ ಆಡಂಬರವಿಲ್ಲದೆ ಉದಯಿಸಿದನು. ಕೂಡಲೆ ಅವನು ತಿಳಿ ಹಳದಿಯಲ್ಲಿ ಗಿಡಗಳ ಹಿಂದೆ ನಿಸ್ಸಾರವಾದ ಆಕಾಶದ ಮೇಲೆ ಕಾಲೆಳೆಯುತ್ತ, ಆಗಲೆ ಹೊಲಗಳಲ್ಲಿ ಬಂದು ದುಡಿಯುವವರ ದೇಹಗಳನ್ನು ಮುಟ್ಟುತ್ತ ನಡೆದನು.

'ಓಹೊ! ಇದು ಸುಳ್ಳು ಅರುಣೋದಯವಾಗಿರಬೇಕು! ರಾತ್ರಿಯಲ್ಲಿ ಧೂಳಿಯ ಕಣಗಳು ಭೂಮಿಗೆ ಬಂದು ಮುಟ್ಟಲಿಕ್ಕೆ ಸಾಧ್ಯವಾಗದೆ ಹವೆಯ ಮೇಲಿನ ಥರಗಳ ಮೇಲೆ ನಿಂತು ಹೀಗಾಗಿರಬಹುದೇನು? ಮಿ. ಮ್ಯಾಕ್‌ಬ್ರಾಯಿಡನೂ ಹೀಗೇ ಹೇಳಿದಂತೆ ನನಗೆ ನೆನಪಿದೆ. ಈ ತರಹದ ಉದಯಗಳು ಇಂಗ್ಲೆಂಡದಲ್ಲಿ ಆಗುವವೆಂದು ನಾನೊಪ್ಪತಕ್ಕ ಮಾತೇ. ನಿನಗೆ 'ಗ್ಯಾಸ್ಮಿಯರ್' ನೆನಪಿದೆಯೇ?'

'ಆಹಾ! ಅದು ನನ್ನ ಅತ್ಯಂತ ಪ್ರೀತಿಯದು, ಅದನ್ನು ಮರೆಯಬಹುದೇ? ಅದರ ಸಣ್ಣ ಸರೋವರಗಳು, ಪರ್ವತಗಳು, ಎಲ್ಲರಿಗೂ ಪ್ರೀತ್ಯಾಸ್ಪದವಾಗಿದ್ದವು. ಅದು ಅದ್ಭುತವಾಗಿದ್ದರೂ ಅಚ್ಚುಕಟ್ಟಾಗಿತ್ತು. ಅದೊಂದು

ದಿವ್ಯ ಕರುಣಾಳು ಗ್ರಹದಿಂದ ಒಡೆದು ಬಂದಿರಬೇಕು ಇಲ್ಲಿ ಈ ಭೂಲೋಕಕ್ಕೆ! ಆದರೆ ಇಲ್ಲಿ ಆ ಅಚ್ಚುಕಟ್ಟಿಲ್ಲದ ಬೈಲು ಭೂಮಿಯು ಅಸ್ತವ್ಯಸ್ತವಾಗಿ ಮಾರವಾರದವರೆಗೆ ಬಿದ್ದುಕೊಂಡಿದೆ.

'ನಮಸ್ಕಾರ, ನಮಸ್ಕಾರ! ನಿಮ್ಮ ಟೊಪ್ಪಿಗೆಗಳನ್ನು ಹಾಕಿಕೊಳ್ಳಿ; ಬೇಗನೆ ಹಾಕಿಕೊಳ್ಳಿ. ಈ ಮುಂಜಾವಿನ ಸೂರ್ಯನ ಬಿಸಿಲು ಬಕ್ಕತಲೆಗೆ ಬಹಳ ಅಪಾಯಕಾರಕ. ನಾನಿದನ್ನು ನಿಮಗೆ ಡಾಕ್ಟರನೆಂದು ಹೇಳುತ್ತೇನೆ.' ಎಂದು ಅಝೀಜನು ಗಾಡಿಯ ಆಚೆಯ ತುದಿಯಿಂದ ಕೂಗಿದನು.

'ನಮಸ್ಕಾರ, ನಮಸ್ಕಾರ! ನಿಮ್ಮ ಟೊಪ್ಪಿಗೆಯನ್ನು ಮೊದಲು ಹಾಕಿಕೊಳ್ಳಿ.'

'ನನ್ನ ದಪ್ಪತಲೆಗೆ ಬೇಕಾಗುವದಿಲ್ಲ.' ಎಂದು ಅವನು ತನ್ನ ತಲೆಯನ್ನು ಅಲ್ಲಾಡಿಸಿ ಕೂದಲುಗಳ ಜುಡುಪನ್ನು ಮೇಲೆತ್ತಿ ಹಿಡಿದು ಖೊಳ್ಳನೆ ನಕ್ಕನು.

'ಎಂಥ ಚೆಲುವ ಪ್ರಾಣಿ ಇದು!' ಎಂದು ಅಡೀಲಾ ಬೆರಗಾದಳು.

'ಕೇಳಿರಿ, ಇನ್ನು ನಿಮಗೆ ಲತೀಫನು ನಮಸ್ಕಾರ ಮಾಡತಕ್ಕವನಿದ್ದಾನೆ.'

ಅಲ್ಲಿಂದ ಅನೇಕ ಸಂಬಂಧ ಸೂತ್ರವಿಲ್ಲ ಹುಡುಗಾಟಿಗೆಗಳು ನಡೆದವು.

'ಅಝೀಜ, ನಿಮ್ಮ ಗುಡ್ಡಗಳಿಗೇನಾಗಿದೆ? ಇನ್ನೂ ಬರಲಿಲ್ಲ? ಗಾಡಿ ಅಲ್ಲಿ ನಿಲ್ಲಲು ಮರೆತೇಬಿಟ್ಟಿತೇನು?'

'ಬಹುತರ ಅದು ದುಂಡುತಿರುಗುವ ಗಾಡಿಯಿರಬೇಕು. ಮತ್ತೆ ಹೀಗೆಯೆ ಹೋದರೆ ತಿರುಗಿ ಚಂದ್ರಪುರವನ್ನೇ ಮುಟ್ಟುತ್ತಿರಬಹುದು, ಯಾರು ಬಲ್ಲರು!'

ಆ ಬೈಲಿನಲ್ಲಿ ಒಂದು ಮೈಲು ಸುತ್ತಾಡಿದ ಮೇಲೆ ಗಾಡಿಯು ಒಂದು ಆನೆಯ ಎದುರಿಗೆ ಬಂದು ಸಾವಕಾಶವಾಗಿ ನಿಂತಿತು. ಅಲ್ಲಿ ಒಂದು ಪ್ಲ್ಯಾಟ್‌ಫಾರ್ಮ ಇತ್ತು. ಆದರೆ ಅದರ ಮಹತ್ವವೇನೂ ಉಳಿದಿದ್ದಿಲ್ಲ. ಆನೆಯೊ ಹಣೆಯ ಮೇಲೆ ಬಣ್ಣ ಬಳಿದುಕೊಂಡು ಸೊಂಡಿಲನ್ನು ಅಲುಗಾಡಿಸುತ್ತ ನಿಂತಿತ್ತು. 'ಓಹೊ! ಏನು ಆಶ್ಚರ್ಯವಿದು!' ಎಂದು ಸ್ತ್ರೀಯರು

ಎದುವಾಗಿ ದನಿ ತೆಗೆದರು ಅಝೀಜನು ಏನೂ ಮಾತನಾಡಲಿಲ್ಲ. ಅವನಲ್ಲಿ ಆತ್ಮಗೌರವದ ಅಭಿಮಾನವು ಉಕ್ಕೇರಿಬಂದಿತ್ತು; ಅವನ ಮನಸ್ಸೀಗ ಸಮಾಧಾನದಲ್ಲಿ ನೆಲೆಯೂರಿತ್ತು. ಅವನ ಈ ಹೆಮ್ಮೆ ಅಭಿಮಾನಗಳಿಗೆ ಕಳೆ ಕಟ್ಟಿದ್ದು ಆ ಆನೆಯಿಂದ. ಅದನ್ನು ದೊರಕಿಸಲಿಕ್ಕೆ ಅವನೆಷ್ಟು ಕಷ್ಟಬಟ್ಟಿದ್ದನೋ ದೇವರಿಗೇ ಗೊತ್ತು! ಮೊದಲು ನೂರುದ್ದೀನನಿಗೆ ಎಷ್ಟೋ ಪತ್ರ ಬರೆದನು. ಅದಕ್ಕೆ ಉತ್ತರವೇ ಬರಲಿಲ್ಲ. ಅಲ್ಲಿಂದ ನೂರುದ್ದೀನನ ತಾಯಿಗೆ–ಅವನು ಅವಳ ಮಾತು ಮೀರುತ್ತಿದ್ದಿಲ್ಲವಾದ್ದರಿಂದ–ತನ್ನ ಮೇಲೆ ಅಂತಃಕರಣ ಇದ್ದ ಅವಳ ಗೆಳತಿಯಾದ ಹಮಿದುಲ್ಲಾ ಬೇಗಮ್ಮಳಿಂದ ಹೇಳಿಸಿ, ಅಲ್ಲಿಂದ ಅವನ ಮುಖಾಂತರವಾಗಿ ನವಾಬಬಹದ್ದೂರರಿಗೆ ವಶೀಲಿ ಹಚ್ಚಿ, ಅವರ ಮುಖಾಂತರವಾಗಿ ಆನೆಯನ್ನು ದೊರಕಿಸತಕ್ಕವನು. ಹಮೀದುಲ್ಲಾ ಬೇಗಮ್ಮಳು ಕಲಕತ್ತೆಯಿಂದ ತಮ್ಮ ಪರ್ದಾಡಬ್ಬಿಯ ಮುರಿದ ಕಿಡಿಕಿಯು ಬಾಗಿಲು ಅಷ್ಟರಲ್ಲಿ ನೆಟ್ಟಗಾಗಿ ಬಂತೆಂದರೆ ಸ್ವತಃ ಹೋಗಿ ಅವಳನ್ನು ಭೆಟ್ಟಿಯಾಗುವೆನೆಂದು ವಚನಕೊಟ್ಟಳು. ಆನೆಯು ಇಷ್ಟು ದೂರದಿಂದ ಎಷ್ಟೋ ಜನರ ಪುಣ್ಯ ಖರ್ಚಾಗಿ ಬರಬೇಕು! ಆದರೂ ಅಝೀಜನು ಅವಳ ಇಂಥ ಅತಂತ್ರ ಮಾತಿನ ಮೇಲೆಯೂ ಅವಲಂಬಿಸಿಕೊಂಡು ಬಹಳ ಸಂತೋಷಪಟ್ಟನು. ಯಾವ ದೇಶದಲ್ಲಿ ಗೆಳೆಯರು, ಗೆಳೆಯರ ಗೆಳೆಯರು ಎಲ್ಲರೂ ಗೆಳೆಯರೇ ಆಗಿ ಒಬ್ಬರೊಬ್ಬರ ಕೆಲಸಗಳನ್ನು ಹೊತ್ತು ಸಾಧಿಸಿ ಮಾಡಿಕೊಡುತ್ತಾರೊ ಮತ್ತು ಎಲ್ಲಿ ಪ್ರತಿಯೊಬ್ಬನೂ ತನ್ನ ಸುಖದ ಪಾಲನ್ನು ನಿಶ್ಚಯವಾಗಿ ಪಡೆಯುತ್ತಾನೊ ಅಂತಹ ಈ ಪೂರ್ವದೇಶವನ್ನೀಗ ಅಝೀಜನು ತನ್ನ ಮನದಲ್ಲಿ ಬಹಳವಾಗಿ ಕೊಂಡಾಡಿದನು. ಇವನಂತೆ ಲತೀಫನಿಗೂ ಇಬ್ಬರು ಅತಿಥಿಗಳು ಗಾಡಿತಪ್ಪಿಸಿಕೊಂಡದ್ದರಿಂದ ಬಹಳ ಸಂತೋಷವಾಗಿತ್ತು. ಯಾಕಂದರೆ ಅವರು ಬಾರದ್ದರಿಂದ ತಾನು ಎತ್ತಿನ ಬಂಡಿಯಲ್ಲಿ ಹೋಗುವ ಬದಲು ಈಗ ಆನೆಯ ಅಂಬಾರಿಯಲ್ಲಿ ಹೋಗುವೆನೆಂದುಕೊಂಡನು. ಸೇವಕರಿಗೂ ಇದೇ ಹಾಡಾಗಿತ್ತು. ಆನೆಯು ಅವರ ಮರ್ಯಾದೆಯನ್ನು ಹೆಚ್ಚಿಸಿತ್ತು. ಅವರು ಸಾಮಾನುಗಳೊಳಗಿಂದ ಧೂಳಿಯಲ್ಲಿ ಎಡವಿಬಿದ್ದರು; ಹೊಡತ ತಿಂದರು; ಹೊಡತ ಕೊಟ್ಟರು; ಕೂಗಾಡಿದರು; ಜಗಿದಾಡಿದರು; ಒಬ್ಬರ ಮೇಲೊಬ್ಬರು ಅಧಿಕಾರ ನಡೆಸಿದರು; ಅಂತೂ ಉಲ್ಹಾಸದ ಉನ್ಮಾದದಲ್ಲಿ ಮೈಮರೆತರು.

'ಅಲ್ಲಿಗೆ ಮುಟ್ಟಲಿಕ್ಕೆ ಒಂದು ತಾಸು, ತಿರುಗಿ ಬರಲಿಕ್ಕೆ ಒಂದು ತಾಸು; ಗುಹೆಗಳನ್ನು ನೋಡಲಿಕ್ಕೆ ಎರಡು ತಾಸು ; ಎಲ್ಲಾ ಕೂಡಿದರೆ ಮೂರಾಯಿತೆನ್ನೋಣ. ' ಎಂದು ಆಝೀಜನು ಮುಗುಳುನಗೆಯುರಳಿಸಿ ಹೇಳಿದನು. ಈಗ ಅವನಲ್ಲೇನೊ ಒಂದು ತರಹದ ರಾಜಗಾಂಭೀರ್ಯವು ಕಂಡುಬಂದಿತು. 'ತಿರುಗಿ ಗಾಡಿಯು ಇಲ್ಲಿಗೆ ಹನ್ನೊಂದುವರೆ ಗಂಟೆಗೆ ಬರುತ್ತದೆ. ನೀವು ಚಂದ್ರಪುರದಲ್ಲಿ ಮಿ. ಹೆಸ್ಲೊಪರೊಡನೆ ನಿಮ್ಮ ನಿತ್ಯದ ಚಹಾದ ಹೊತ್ತಿಗೆ ಸರಿಯಾಗಿ ಇರುವಿರಿ. ಅದೆಂದರೆ ಒಂದೂಕಾಲುಗಂಟೆ ಅಷ್ಟೆ. ನಿಮ್ಮ ವಿಷಯ ನನಗೆಲ್ಲ ಗೊತ್ತಿದೆ. ನಾಲ್ಕೇ ತಾಸುಗಳು—ಸಣ್ಣ ಪ್ರವಾಸ—ಬೇಕಾದರೆ ಒಂದು ತಾಸು ಹೆಚ್ಚು ಹಿಡಿಯಿರಿ, ನಮ್ಮ ಜನರಿಂದ ಹೆಚ್ಚಾಗಿ ಸಂಭವಿಸುವ ಸಂಕಟಗಳಿಗೋಸುಗ–ನಿಮಗೆ ಹೇಳದೆ ಕೇಳದೆ ಎಲ್ಲ ಕಾರ್ಯಕ್ರಮವನ್ನೂ ನಾನೇ ಗೊತ್ತುಮಾಡಿದ್ದೇನೆ–ಆದರೆ ನೀವು ನಿಮ್ಮ ಮನಸಿಗೆ ಬಂದಂತೆ ಬೇಕಾದಾಗ್ಗೆ ಬೇಕಾದಂತೆ ಅದನ್ನು ಬದಲುಮಾಡಬಹುದು—ಗುಹೆಗಳಿಗೆ ಹೋಗಬೇಕೋ ಬೇಡವೊ, ಅದನ್ನು ಸಹಿತ ನೀವೇ ನಿರ್ಧರಿಸಬಹುದು—ನೀವಿದಕ್ಕೆ ಒಪ್ಪುತ್ತೀರಾ? ಹಾಗಿದ್ದರೆ ಈ ಕಾಡಪಶುವನ್ನು ಹತ್ತಿರಿ.'

ಆನೆಯು—ಅದೂ ಒಂದು ಗುಡ್ಡವೇ!—ಮೊಳಕಾಲೂರಿತು. ಅವರು ಒಬ್ಬೊಬ್ಬರಾಗಿ ನಿಚ್ಚಣಿಕೆಯಿಂದ ಹತ್ತಿದರು. ಆಝೀಜನು ಮಾತ್ರ ಶಿಕಾರಿಯು ಹತ್ತುವಂತೆ ಮೊದಲು ಅದರ ಹುರುಬರಕಾದ ಕಾಲಿನ ಮೇಲೆ ತನ್ನ ಪಾದವನ್ನಿಟ್ಟು, ಗಂಟುಹೊಡೆದ ಬಾಲವನ್ನು ಹಿಡಿದುಕೊಂಡು ಹತ್ತಿದನು. ಅವನ ಹಿಂದೆಯೆ ಲತೀಫನು ಹತ್ತುವದಕ್ಕೆ ಬಂದನು. ಕೂಡಲೆ ಮೊದಲೆ ಗೊತ್ತುಮಾಡಿಕೊಂಡಂತೆ ಒಬ್ಬನು ಆ ಬಾಲದ ಗಂಟನ್ನು ಸಡಿಲಿಸಿಬಿಟ್ಟನು. ಆ ಬಡಪ್ರಾಣಿಯು ಜಾರಿ ಅದರ ತಿಗದ ಮೇಲಿನ ಜಾಳಿಗೆಗೆ ಜೋತುಬಿದ್ದನು. ಆ ಸ್ತ್ರೀಯರನ್ನು ಬಿಟ್ಟು ಉಳಿದವರೆಲ್ಲರೂ ನೋಡಿ ನಕ್ಕರು. ಈ ಚೇಷ್ಟೆಯಿಂದ ಆ ಸ್ತ್ರೀಯರು ನಗುವದರ ಬದಲು ಬಹಳ ನೊಂದುಕೊಂಡರು. ಅವರಿಬ್ಬರಿಗೂ ಈ ರೀತಿಯ ಪ್ರಾಣಹಿಂಡುವ ಚೇಷ್ಟೆಮಾಡುವದು ಸೇರುತ್ತಿರಲಿಲ್ಲ. ಆಮೇಲೆ ಆನೆಯು ಮೇಲೆ ಕುಳಿತವರ ಮಗ್ಗಲು ಮುರಿಯುವಂತಹ ಎರಡು 'ಝೂಟ್ಕೆ' ಹೊಡೆದು ಎದ್ದು ಅವರನ್ನು ಸೆಲಬಿಟ್ಟು ಹತ್ತು

ಘೂಟು ಎತ್ತರದ ಮೇಲೆ ಬಿಯ್ಯಿತು. ಕೆಳಗೆ ಅದರ ಕಾಲಸುತ್ತಲೂ ನೆರೆಯುವ ಜೀವರಾಶಿಗಳ ಗುಂಪೆಂದರೆ ಹಳ್ಳಿಗರು ಮತ್ತು ಹುಡುಗರು. ಆಳುಗಳು ಪಾತ್ರೆಪಡಗಗಳನ್ನು ಟಾಂಗಾದಲ್ಲಿ ಒಗೆದರು. ಹಸನನು ಅಫ್ಘೀಜನ ಸಲುವಾಗಿ ತಂದ ಕುದುರೆಯನ್ನೆ ಅದಕ್ಕೆ ಹೂಡಿದನು. ಮತ್ತು ತಾನು ಅದರ ಮೇಲೆ ಕುಳಿತು ಮಹಮ್ಮದಲಿಯ ಮನುಷ್ಯನಿಗೆ 'ನೋಡು, ನಾನು ಹೇಗೆ ಕುಳಿತಿದ್ದೇನೆ.' ಎಂದು ತನ್ನ ದೊಡ್ಡಿಸ್ತಿಕೆಯನ್ನು ತೋರಿಸಿ ಅವನನ್ನು ಹೀಯಾಳಿಸಿದನು. ಪ್ರೊ. ಗೋಡಬೋಲೆಯವರ ಸಲುವಾಗಿ ಅಡಿಗೆಮಾಡಲಿಕ್ಕೆಂದು ಕರೆತಂದ ಬ್ರಾಹ್ಮಣನು ಮಾತ್ರ ಇವರು ತಿರುಗಿ ಬರುವ ವರೆಗೆ ಒಂದು ಗಿಡದ ಕೆಳಗೆ ದಾರೀ ನೋಡುತ್ತ 'ಕಟಬೋ' ಎಂದು ಕೂಡಬೇಕಾಯಿತು. ಅಲ್ಲಿಂದ ಅವರು ಬಂದಿದ್ದ ಗಾಡಿಯು ಸಹ ತಿರುಗಿ ಬರುವ ಆಶೆಯಿಂದ ಶತಪದಿಯಂತೆ ತಲೆಯನ್ನು ಅತ್ತಿತ್ತ ಹೊರಳಿಸುತ್ತ, ಹೊಲಗಳಲ್ಲಿ ಹೊರಳಾಡುತ್ತ ಹೊರಟುಹೋಯಿತು. ಮುಂಜಾವಿನ ಶಾಂತ ತಂಪು ಹವೆಯಲ್ಲಿ ಅಲ್ಲಿಯ ದೃಶ್ಯವು ಬಳ್ಳಿ ಹಿತವಾಗಿತ್ತು. ಮನೋಹರವಾಗಿತ್ತು; ಆದರೆ ಆದರಲ್ಲಿ ರಂಗೂ ಇರಲಿಲ್ಲ; ಜೀವವೂ ಇರಲಿಲ್ಲ. ಆನೆಯು ಗುಡ್ಡಗಳ ಕಡೆಗೆ ಸಾಗಿದಾಗ ನಿಸ್ತೇಜನಾದ ಸೂರ್ಯನು ಗುಡ್ಡಗಳ ಪಾದಕ್ಕೆ ಶರಣಾಗತನಾಗಿ ಬಿದ್ದಂತಿತ್ತು; ಭೂಮಿಯು ಮೈಮಡಿಕೆಗಳಂತಿದ್ದ ಅಲ್ಲಿಯ ಕೊರಕಲುಗಳಲ್ಲಿ ನೆಳಲು ಚಾಚಿಕೊಂಡಿತ್ತು. ಆಧ್ಯಾತ್ಮಿಕ ಮೌನವು ಕಣ್‌ಕಿವಿಗಳನ್ನಷ್ಟೆ ಅಲ್ಲದೆ ಉಳಿದ ಇಂದ್ರಿಯಗಳನ್ನೂ ಮುತ್ತಿತ್ತು. ಆದರೂ ಜೀವನವು ಕಾರ್ಯಫಲ ಬಿಡದಿದ್ದರೂ ಬದುಕಿ ನಿಂತಿತು. ಅದರ ಧ್ವನಿಗೆ ಪ್ರತಿಧ್ವನಿಯಿಲ್ಲ; ವಿಚಾರಗಳಿಗೆ ಬೆಳಿಗೆಯಿಲ್ಲ. ಎಲ್ಲದರಲ್ಲಿಯೂ 'ಮೂಲೇ ಕುಠಾರ:' ಎನ್ನುವಂತೆ ಆಯಿತು. ಇದರಿಂದಲೆ 'ಈ ಜಗತ್ತು ಸುಳ್ಳು' ಎಂಬ ಭಾವವು ಬೆರೆತುಕೊಂಡಿತು. ಆ ದಾರಿಯ ದಂಡೆಗೆ ದಿಬ್ಬಗಳು ಕರಗಸದಂತೆ ನಿಂತಿದ್ದವು. ಈ ದಿಬ್ಬಗಳೇನು ಗೋರಿಗಳೋ, ಅಥವಾ ಪಾರ್ವತಿದೇವಿಯ ಮೊಲೆಗಳೋ ? ಕೆಳಗಿದ್ದ ಹಳ್ಳಿಗರು ಇದಕ್ಕೆ ಎರಡೂ ರೀತಿಯಾಗಿ ಉತ್ತರ ಕೊಟ್ಟರು. ಅಷ್ಟರಲ್ಲಿ ಒಂದು ಹಾವಿನ ಸಲುವಾಗಿ ಗೊಂದಲವೆದ್ದು ಕೊನೆಯವರೆಗೂ ಅದು ತಿಳಿಯಲೆ ಇಲ್ಲ. ಮಿಸ್ ಕ್ವೆಸ್ಟೆಡ್‌ಳು ತುದಿಯ ಮೇಲೆ ಎದ್ದು ನಿಂತ ಒಂದು ಕಪ್ಪು ತೆಳ್ಳಗಿನ ಪದಾರ್ಥವನ್ನು ಪ್ರವಾಹದ ಆಚೆಯ ದಂಡೆಗೆ

ನೋಡಿ 'ಹಾವು!' ಎಂದು ಕೂಗಿದಳು. ಹಳ್ಳಿಗರೂ ಅದಕ್ಕೆ ಹೌದೆಂದರು. ಅರ್ಖೀಜನೂ 'ಹೌದು, ಅದು ಕರೇ ಕಾಳಿಂಗ! ಮಹಾ ವಿಷಾರಿ; ಆನೆ ಹೋಗುವದನ್ನು ನೋಡಲಿಕ್ಕೆಂದು ಹಾಗೆ ತಲೆಯೆತ್ತಿ ನಿಂತಿದೆ.' ಎಂದು ಆ ವಿಷಯದಲ್ಲಿ ಒಳ್ಳೆ ಬಲ್ಲಿದನಂತೆ ತಿಳಿಸಿ ಹೇಳಿದನು. ಆದರೆ ಅಡೀಲಾ ರೋನಿಯರು ದುರ್ಬಿಣಿಯಿಂದ ನೋಡಿದ ಕೂಡಲೆ ಅದು ಹಾವಲ್ಲೆಂದೂ ಅದೊಂದು ಒಣಗಿದ ಈಚಲದ ಬೊಡ್ಡೆಯೆಂದೂ ಗೊತ್ತಾಯಿತು. ಕೂಡಲೆ ಅವಳು 'ಅದು ಹಾವಲ್ಲ.' ಎಂದು ಹೇಳಿದಳು. ಹಳ್ಳಿಗರು ಅದನ್ನು ವಿರೋಧಿಸಿದರು. ಅವಳೇ ಮೊದಲು ಅವರ ಮನಸ್ಸಿನಲ್ಲಿ ಅದು ಹಾವೆಂದು ತುಂಬಿದ್ದಳು; ಈಗ ಅವರು ಆ ಕಲ್ಪನೆಯನ್ನು ಅಷ್ಟು ಸುಲಭವಾಗಿ ಬಿಡಲಿಕ್ಕೆ ಒಪ್ಪಲಿಲ್ಲ. ಅರ್ಖೀಜನೂ ದುರ್ಬಿಣಿಯೊಳಗಿಂದ ನೋಡುವ ವರೆಗೆ ಅದು ಬೊಡ್ಡೆಯೆಂದು ಒಪ್ಪಿದರೂ ಆ ಮೇಲೆ ಮತ್ತೆ ಅದು ಹಾವೇ ಎಂದು ವಾದಿಸಿದನು. ಮತ್ತು ತಾನಂದಿದ್ದನ್ನು ಸಾಧಿಸುವದಕ್ಕಾಗಿ ಇಲ್ಲದ ಹುಚ್ಚುಚ್ಚು ಕತೆಗಳನ್ನೂ ಹುಟ್ಟಿಸಿ ಹೇಳಿದನು. ಇದರಿಂದ ಯಾವುದೂ ಗೊತ್ತಿಗೆ ಮುಟ್ಟಲಿಲ್ಲ. ಆ ಮಾತಿನಲ್ಲೀಗ ಕುತೂಹಲವೆ ಉಳಿದಿದ್ದಿಲ್ಲ. ಉಷ್ಣತೆಯ ಜಾಲವು ಕಾವಾದೋಲದ ಕಡಿದಾದ ಬಂಡೆಗಳಿಂದ ಹೊರಟು ಈ ಭ್ರಮೆಯನ್ನು ಇನ್ನೂ ಹೆಚ್ಚಿಸಿತು. ಅದು ಅನಿಯತ ಕಾಲಕ್ಕೆ ಬಂದು ಮನಬಂದತ್ತ ಹೋಗುತ್ತಿತ್ತು. ಭೂಮಿಯ ತುಂಡುಗಳು ಕಾಯ್ದ ಹಂಚಿನಲ್ಲಿಯ ರೊಟ್ಟಿಯಂತೆ ಒಮ್ಮೆಲೆ ಉಬ್ಬಿ ಮತ್ತೆ ಚಪ್ಪಟೆಯಾಗಿ ಬೀಳುತ್ತಿದ್ದವು. ಅವರು ಸಮೀಪಕ್ಕೆ ಬಂದ ಹಾಗೆ ಆ ಬಿಸಿಲುರಿಯು ಕಡಿಮೆಯಾಯಿತು.

ಆನೆಯು ನೇರವಾಗಿ ಕಾವಾದೋಲದ ಕಡೆಗೆ ತನ್ನ ತಲೆಯಿಂದ ತಿವಿದು ಪ್ರವೇಶವನ್ನು ದೊರಕಿಸುವಂತೆ ಯಮಕಿನಿಂದ ಸಾಗಿತು. ಆಮೇಲೆ ತಿರುಗಿ ಗುಡ್ಡವನ್ನು ಸುತ್ತುವ ದಾರಿಯನ್ನು ಹಿಡಿಯಿತು. ಅಲ್ಲಿಯ ಆ ಬಂಡೆಗಲ್ಲುಗಳು ಸಮುದ್ರದಲ್ಲಿ ಒಳನುಗ್ಗಿದಂತೆ ಭೂಮಿಯಲ್ಲಿ ನೆಟ್ಟಗೆ ಸೇರಿದ್ದವು. ಮಿಸ್ ಕ್ವೆಸ್ಟೆಡ್‌ಳು ಇದನ್ನೆ ಮಾತಾಡುತ್ತಿದ್ದಾಗ ಮತ್ತು ಇದೆಲ್ಲ ಒಳ್ಳೆ ವಿಚಿತ್ರವಾಗಿದೆಯೆಂದು ಹೇಳುತ್ತಿದ್ದಾಗ ಆ ಬೈಲು ಮೆಲ್ಲನೆ ಕಣ್ಮರೆಯಾಯಿತು; ಸುಲಿದೊಗೆದಂತೆ ಆಯಿತು. ಎರಡೂ ಮಗ್ಗಲಿಗೂ ಆ ನಿರ್ಜೀವ ಕರೆಕಲ್ಲು

ಗಳನ್ನು ಬಿಟ್ಟು ಬೇರೆ ಯಾವುದೂ ಕಾಣಲಿಲ್ಲ. ಇಲ್ಲಿಯೂ ಮತ್ತೆ ಆಕಾಶವೇ ಹೆಚ್ಚು ಪ್ರಬಲವಾಗಿತ್ತು; ಆದರೆ ಕಡಿದಾದ ಬಂಡೆಗಳಿಗೆ ಚಪ್ಪರದಂತೆ ಸಿಗಿಬಿದ್ದು ಅದು ತೀರ ಎದೆಗುಕ್ಕಿಸುವಂತೆ ಸಮೀಪಕ್ಕೆ ಬಂದಿತ್ತು. ಅದರಲ್ಲಿ ಯಾವ ತರಹದ ಬದಲಾವಣೆಯೂ ಆಗಿರಲಿಲ್ಲ. ಅಝೀಜನು ತನ್ನ ಔದಾರ್ಯದಲ್ಲಿಯೆ ಮುಳುಗಿ ಏನನ್ನೂ ನೋಡಲಿಲ್ಲ. ಅವನ ಅತಿಥಿಗಳು ಸ್ವಲ್ಪ ನೋಡಿದರು. ಆದರೂ ಅವರಿಗೇನು ಇದೊಂದು ಒಳ್ಳೆ ಮನೋಹರವಾದ, ನೋಡಲರ್ಹವಾದ ಸ್ಥಳವೆಂದೆನಿಸಲಿಲ್ಲ. ಇದೊಂದು ಮುಸಲ್ಮಾನರಿಗೆ ಸಂಬಂಧಪಟ್ಟ ಮಸೀದೆಯೋ ಮತ್ತೇನೋ ಆಗಬೇಕಿತ್ತು; ಆಂದರೆ ಅಝೀಜನು ಅದರ ಗುಣಗ್ರಹಣಮಾಡಿ ಇವರಿಗೆ ವರ್ಣಿಸುತ್ತಿದ್ದನು. ಈಗ ಅವನ ಅಜ್ಞಾನವು ಸ್ಪಷ್ಟವಾಗಿ ಹೊರಬಿತ್ತು. ಅಲ್ಲದೆ ಇದರಿಂದ ಅವನಿಗೆ ಹಿಡಿತಡಿಯಾಗಹತ್ತಿತು. ಆದರೂ ಅವನು ಉಲ್ಹಾಸದಿಂದ, ವಿಶ್ವಾಸದಿಂದ ಮಾತುಗಳನ್ನಾಡುತ್ತಿದ್ದರೂ ಹಿಂದುಸ್ತಾನದ ಈ ಭಾಗವನ್ನು ಹೇಗೆ ಅವರಿಗೆ ತೋರಿಸಬೇಕೆಂಬುದು ಅವನಿಗೇ ಗೊತ್ತಿರಲಿಲ್ಲ. ಪ್ರೊ. ಗೋಡಬೋಲೆ ಇಲ್ಲದ್ದರಿಂದ ಅವರಂತೆ ಇವನೂ ತೀರ ಹೊಸಬನಾದನು.

ಪ್ರವೇಶವು ಮೊದಲು ಸಣ್ಣದಾಗುತ್ತಾಗುತ್ತ ಆಮೇಲೆ ಒಂದು ಹರಿವಾಣದಂತೆ ಹರವಾಯಿತು. ಹೆಚ್ಚು ಕಡಿಮೆ ಇದೇ ಅದರ ಮುಖ್ಯಸ್ಥಳವೆಂದು ಕಂಡಿತು. ಹಾಳಾದ ಒಂದು ಕೆರೆಯಲ್ಲಿ ಸ್ವಲ್ಪ ನೀರಿದ್ದವು; ಅವೂ ದನಗಳಿಗಷ್ಟೇ ಉಪಯೋಗ. ಆ ಕೆಸರಿನ ಮೇಲ್ಗಡೆಗೆ ಒಂದು ಕರೆ ತೂತು ಕಾಣಿಸಿತು; ಅದೇ ಮೊದಲನೆಯ ಗವಿ. ಆ ಹರಿವಾಣದ ಸುತ್ತಲೂ ಮೂರು ಗುಡ್ಡಗಳಿದ್ದವು. ಅವುಗಳಲ್ಲಿ ಎರಡರಿಂದ ಊಷ್ಣತೆಯು ಹೊರಬೀಳುತ್ತಿತ್ತು. ಮೂರನೆಯದು ನೆರಳಲ್ಲಿತ್ತು; ಇಲ್ಲಿಯೆ ಅವರು ಇಳಿದುಕೊಂಡರು.

'ಇದೇನು ಸ್ಥಳ! ಭಯಂಕರ! ಕುತ್ತಿಗೆ ಹಿಚುಕಿದಂತಾಗುತ್ತದೆ!' ಎಂದು ಮೂರಳು ತನ್ನಷ್ಟಕ್ಕೆ ತಾನೇ ಗುಣಗುಟ್ಟಿದಳು.

'ನಿಮ್ಮ ಆಳುಗಳು ಬಹಳ ಚುರುಕು ಇದ್ದಾರೆ!' ಎಂದು ಅಡೀಲಾ ಅವರನ್ನು ಉಬ್ಬಿಸಿದಳು. ಅವರಾಗಲೆ ಅಲ್ಲಿ ಒಂದು ಅರಿವೆಯನ್ನು ಹಾಸಿ, ಮಧ್ಯದಲ್ಲಿ ಕಾಗದದ ಹೂ-ಗೊಂಚಲಿದ್ದ ಒಂದು ಕಲಶವನ್ನಿಟ್ಟಿದ್ದರು.

ಮುಹಮ್ಮದಲಿಯು ಬಟ್ಲರನು ಅವರಿಗೆ ಬೇಯಿಸಿದ ತತ್ತಿಗಳನ್ನೂ ಚಹವನ್ನೂ ಎರಡನೆಯ ಸಲ ತಂದುಕೊಟ್ಟನು.

'ನಾನು ತಿಳಿದಿದ್ದೆ, ಇದನ್ನು ಆ ಗುಹೆಗಳೆದುರಿಗೇ ನಾವು ತಿನ್ನಬಹುದು, ಮತ್ತು ಆಮೇಲೆ ಮುಂಜಾನೆಯ ನ್ಯಾರಿಯನ್ನು ಮಾಡಬಹುದು ಎಂದು.' ಅಝೀಜನು ಹೇಳಿದನು.

'ಹಾಗಾದರೆ ಇದು ನ್ಯಾರಿಯಲ್ಲವೇನು?'

'ಛೇ! ಇದು ನ್ಯಾರಿಯೇ? ನಿಮ್ಮನ್ನಿಷ್ಟು ಅಗ್ಗವಾಗಿ ತಿಳಿಯುತ್ತೇನೆಂದು ನೀವು ಕಲ್ಪಿಸಿದಿರೇನು?'

ಇಂಗ್ಲೀಷರು ತಿನ್ನಲಿಕ್ಕೆ ಹತ್ತಿದರೆ ತಿಂದೇ ತಿನ್ನುವರೆಂದೂ ಅದಕ್ಕೆ ಅವರಿಗೆ ಪ್ರತಿ ಎರಡು ತಾಸಿಗೊಮ್ಮೆ ಏನಾದರೂ ತಿನಿಸಿಯೇ ತೀರಬೇಕೆಂದೂ ಯಾರೊ ಒಬ್ಬ ಬುದ್ಧಿವಂತರು ಅವನಿಗೆ ಎಚ್ಚರ ಕೊಟ್ಟಿದ್ದರು.

'ಇದೆಲ್ಲ ಎಷ್ಟು ಚೆನ್ನಾಗಿ ವ್ಯವಸ್ಥೆ ಮಾಡಿದ್ದೀರಲ್ಲ!'

'ಅದನ್ನು ನೀವು ಚಂದ್ರಪುರಕ್ಕೆ ತಿರುಗಿ ಹೋಗ ಮೇಲೆ ಹೇಳಬೇಕು. ನನ್ನ ಮೇಲೆ ಯಾವ ತರಹದ ಅಪವಾದಗಳು ಬಂದರೂ ಅಡ್ಡಿಯಿಲ್ಲ, ನೀವು ನನ್ನ ಅತಿಥಿಗಳಾಗಿದ್ದೀರಿ ಇಷ್ಟೇ ಸಾಕು' ಎಂದು ಅವನು ಗಂಭೀರವಾಗಿ ಹೇಳಿದನು. ಈ ಪ್ರವಾಸ ಮುಗಿಯುವ ಹೊತ್ತಿನ ವರೆಗಂತೂ ಅವರು ಅವನನ್ನೇ ಅವಲಂಬಿಸಿದ್ದರು; ಮತ್ತು ಇದಕ್ಕಾಗಿ ಅವನು ಅವರಿಗೆ ಕೃತಜ್ಞನಾಗಿದ್ದನು ಇಲ್ಲಿಯ ವರೆಗೆ ಎಲ್ಲವೂ ಸರಿಯಾಗಿಯೆ ನಡೆಯಿತು. ಆನೆಯು ಹೊಸದೊಂದು ಟೊಂಗಿಯನ್ನು ಮುರಿದುಕೊಂಡು ತನ್ನ ಬಾಯಿಗಿಟ್ಟಿತು; ಟಾಂಗಾದ ತೋಳುಗಳೆರಡೂ ಆಕಾಶಕ್ಕೆ ಮುಖ ಮಾಡಿದವು; ಅಡಿಗೆಯ ಹುಡುಗನು ಬಟಾಟೆಗಳನ್ನು ಸುಲಿದನು; ಹಸನನು ಚೀರಾಡಿದನು; ಲತೀಫನು ತನ್ನದೇ ಆದ ಒಂದು ವಿಚಿತ್ರ ರೀತಿಯಿಂದ ಕೈಯಲ್ಲಿ ಒಂದು ಸುಲಿದಸೆಳ್ಳನ್ನು ಹಿಡಿದುಕೊಂಡು ನಿಂತನು. ಒಟ್ಟಿಗೆ ಹಿಂದೀ ಜನರೊಂದಿಗಿದ್ದರೂ ಪ್ರವಾಸವು ಚೆನ್ನಾಗಿ ಆಯಿತು. ಎಲ್ಲಿಯವನೋ ಯಾವನೊ ಒಬ್ಬ ತರುಣನಿಗೆ ಈ ಪರದೇಶದ ಪ್ರವಾಸಿಗಳಿಗೆ ಆತಿಥ್ಯವನ್ನು ಕೊಡುವ ಭಾಗ್ಯ ಬಂದದ್ದು—ಎಲ್ಲ ಹಿಂದೀ ಜನರೂ ಇಂತಹ ಭಾಗ್ಯಕ್ಕೇ ಆತುರರಾಗಿ ಎತ್ತಾರೆ, ಇದರಲ್ಲೇನು ಸಂಶಯವಿಲ್ಲ—ಮುಹಮ್ಮದಲಿಯಂಥ ಸೆಡಕಿನವ

ನಿಗೂ ಬಾಯಲ್ಲಿ ನೀರು ಒಡಿಸಬಹುದಾಗಿತ್ತು. ಆದರೆ ಅವರಾರಿಗೂ ಈ ಸುಸಂಧಿಯು ದೊರೆಯಲಿಲ್ಲ. ಆತಿಥ್ಯವನ್ನು ಅವರೇ ಆಗಲೆ ಸಂಪಾದಿಸಿದ್ದರು. ಅವರೀಗ 'ಅವನ' ಅತಿಥಿಗಳು; ಅವನ ಮಾನಾಪಮಾನವೆಲ್ಲ ಅವರ ಸುಖ ದುಃಖದ ಮೇಲೆಯೆ ಅವಲಂಬಿಸಿತ್ತು. ಅವರಿಗೇನಾದರೂ ತೊಂದರೆಯಾದರೆ ತೀರಿತು, ಅವನೆದೆಯು ಸೀಳಿದಂತಾಗುವದು. ಬಹುತರ ಈ ಎಲ್ಲ ಪೌರ್ವಾತ್ಯ ಜನರಂತೆ ಅಝೀಜನೂ ಅತಿಥಿಸತ್ಕಾರಕ್ಕೆ ಅತಿ ಮಹತ್ವ ಕೊಟ್ಟಿದ್ದನು. ಅತಿಥಿಸತ್ಕಾರವೆಂದರೆ ಅತಿ ಸಲಿಗೆ ಎಂದು ಭ್ರಮಿಸಿ, ಆ ಭ್ರಮೆಯಲ್ಲಿ ಅದಕ್ಕೆ ಸ್ವಾಮಿತ್ವದ ಕಲಂಕ ಹತ್ತುತ್ತಿರುವದನ್ನು ಅವನು ತಿಳಿಯದೆ ಹೋದನು. ಮಿಸೆಸ್ ಮೂರಳಾಗಲಿ, ಫೀಲ್ಡಿಂಗನಾಗಲಿ, ಹತ್ತಿರ ಇದ್ದರೇನೇ ಅವನಿಗೆ ಹುರುಪು; ಆ ಹುರುಪಿನ ಅಮಲು ತಲೆಗೇರಿದಾಗ ಅತಿಥಿಸತ್ಕಾರ ಮಾಡಿಸಿ ಕೊಳ್ಳುವದಕ್ಕಿಂತ ಮಾಡುವದೇ ಮೇಲೆಂದು ನಂಬಿಬಿಡುವನು. ಇವರು ಇಬ್ಬರೂ ಅವನಮೇಲೆ ವಿಚಿತ್ರ ಆದರೂ ಒಳಿತಾದ ಪರಿಣಾಮ ಮಾಡಿದ್ದರು. ಅವನ ಮನದಲ್ಲಿ ಅವರು ಎಂದೆಂದಿಗೂ ಅವನ ಗೆಳೆಯರಾದರು; ಅವನೂ ಅವರ ಗೆಳೆಯನಾದನು; ಅವರನ್ನು ಅತ್ಯಂತ ಪ್ರೀತಿಸಿದನು; ಆ ಪ್ರೇಮ ದುನ್ಮಾದದಲ್ಲಿ ಅವನಿಗೆ ಆ ಸತ್ಕಾರಮಾಡುವದೂ ಮಾಡಿಸಿಕೊಳ್ಳುವದೂ ಎರಡೂ ಒಂದೇ ಆಗಿ ಕಂಡವು. ಅವರ ಮೂರ್ತಿಗಳು ಅವನ ಹೃದಯದಲ್ಲಿ ಅವನು ಸಾಯುವ ವರೆಗೆ ಚಿರಸ್ಥಾಯಿಯಾಗಿ ಉಳಿದವು. ಕುರ್ಚಿಯ ಮೇಲೆ ಕುಳಿತಿದ್ದ ಅವಳನ್ನು ಅಝೀಜನು ಚಹಾ ಕುಡಿಯುತ್ತ ಮತ್ತೊಮ್ಮೆ ನೋಡಿದನು. ನೋಡಿ ಒಂದು ಕ್ಷಣ ಹಿಗ್ಗಿದನು. ಆ ಹಿಗ್ಗಿನ ಹೊಟ್ಟೆ ಯಲ್ಲಿಯೆ ಕುಗ್ಗಿನ ಬೀಜಗಳು ಸೇರಿಕೊಂಡಿದ್ದವು. ಅದರಿಂದ ಅವನು 'ಇವಳಿಗೋಸುಗ ನಾನು ಮತ್ತೇನು ಮಾಡಬೇಕು?' ಎಂದು ಚಿಂತಿಸಿ ಚಿಂತಿಸಿ ಕೊನೆಗೆ ಮತ್ತೆ ಆತಿಥ್ಯದ ಆ ನೀರಸ ಚಕ್ರದಲ್ಲಿ ತಿರುಗಹತ್ತಿದನು. ಅವನ ಕಪ್ಪು ಕಣ್ಣುಗಳು ಏನೋ ಒಂದು ಅರ್ಥಸೂಚಕವಾದ ಮೃದು ಪ್ರಕಾಶದಿಂದ ತುಂಬಿದವು. ಅವನು 'ಮಿಸೆಸ್ ಮೂರ್! ನಿಮಗೆ ನಮ್ಮ ಮಸೀದೆಯು ನೆನಪಿದೆಯೆ?' ಎಂದು ಕೇಳಿದನು.

'ಇದೆ; ಇದೆ. ಇರದೆ ಏನು?' ಎಂದು ತರುಣಿಯಂತೆ ಒಳ್ಳೆ ಉತ್ಸಾಹ ದಿಂದ ಉತ್ತರ ಕೊಟ್ಟಳು.

'ಓ! ಆಗ ನಾನೆಷ್ಟು ಹುಂಬನಂತೆ ನಡದುಕೊಂಡೆ! ಆದರೂ ನೀವು ಬಹಳ ವಿನಯದಿಂದ ನಡೆದುಕೊಂಡಿರಿ!'

'ಇಷ್ಟಾಗಿಯೂ ನಾವಿಬ್ಬರೂ ಆಗ ಸುಖಿಯಾಗಿದ್ದೆವು!'

'ಹಾಗೆ ಸುರುವಾದ ಗೆಳೆತನವೇ ಹೆಚ್ಚು ದಿನ ಬಾಳುತ್ತದೆಂದು ನನಗೆ ಎನಿಸುತ್ತಿದೆ. ಆ ಸಿಮ್ಮ ಉಳಿದ ಮಕ್ಕಳನ್ನೂ ಸ್ವಾಗತಿಸುವ ಸಂಯೋಗವು ನನಗೆ ಎಂದಾದರೂ ಬರಬಹುದೇ?'

'ನಿಮಗೆ ಅವರ ಆ ಉಳಿದ ಮಕ್ಕಳದೂ ಗೊತ್ತಿದೆಯೇ? ನನ್ನೆದುರಿಗೆ ಮಾತ್ರ ಅವಳೆಂದೂ ಅವರ ಹೆಸರೂ ಕೂಡ ಎತ್ತಿಲ್ಲ.' ಎಂದು ಹೇಳಿ ಮಿಸ್ ಕ್ವೆಸ್ಟೆಡ್‌ಳು ತಿಳಿಯದೆ ಅವರ ಆ ಮಾತಿನ ಮೋಹಜಾಲವನ್ನು ಹರಿದು ಬಿಟ್ಟಳು.

'ರಾಲ್ಫ ಮತ್ತು ಸ್ಟೆಲಾ, ಹೌದಲ್ಲೋ? ನನಗೆ ಅವರದೆಲ್ಲ ಗೊತ್ತಿದೆ. ಅದಿರಲಿ, ನಾವೀಗ ಗುಹೆಗಳನ್ನು ನೋಡುವದು ಮರೆಯಬಾರದು. ನನ್ನ ಜೀವನದ ಹಿರಿಯಾಸೆಯೊಂದು ಈ ಹೊತ್ತು ನೀವು ನನ್ನ ಅತಿಥಿಗಳಾಗಿ ಬಂದಿದ್ದರಿಂದ ಕೈಗೂಡಿದಂತಾಗಿದೆ. ನೀವು ನನಗೆಷ್ಟು ಮರ್ಯಾದೆ ಮಾಡಿದಿರೆಂಬುದರ ಕಲ್ಪನೆ ಇಲ್ಲ ನಿಮಗೆ. ನೀವು ಕೊಟ್ಟ ಆ ಗೌರವದಿಂದ ನಾನು ಸಾರ್ವಭೌಮ ಬಾಬರನೆಂದು ನನಗೆನಿಸುತ್ತಿದೆ.'

'ಅವನಂತೆಯೇ ಏಕೆ?' ಎಂದು ಏಳುತ್ತ ಅವಳು ಕೇಳಿದಳು.

'ಯಾಕಂದರೆ, ನನ್ನ ಪೂರ್ವಜರು ಅವನೊಡನೆ ಅಫಗಾನಿಸ್ತಾನದಿಂದ ಇಲ್ಲಿಗೆ ಬಂದರು. ಅವರು ಅವನನ್ನು ಹಿರಾತದಲ್ಲಿ ಕೂಡಿದರು. ಅವನಿಗೂ ಕೂಡ ಒಂದಾನೆಯಕಿಂತ ಹೆಚ್ಚಿಗೆ ಇರುತ್ತಿದ್ದಿಲ್ಲ. ಒಮ್ಮೊಮ್ಮೆ ಅದೂ ಇರುತ್ತಿದ್ದಿಲ್ಲ. ಆದರೂ ಅವನು ಅತಿಥಿಸತ್ಕಾರವನ್ನೆಂದೂ ಬಿಡಲಿಲ್ಲ. ಯುದ್ಧ ಮಾಡುವಾಗ, ಬೇಟೆಯಾಡುವಾಗ, ಓಡಿಹೋಗುವಾಗ ಅವನೂ ಸ್ವಲ್ಪು ಹೊತ್ತು ನಮ್ಮಂತೆ ಗಡ್ಡಗಳಲ್ಲಿ, ಅಡವಿಗಳಲ್ಲಿ ಇರುತ್ತಿದ್ದನು; ಮತ್ತು ಇದ್ದ ಸ್ವಲ್ಪು ಅನ್ನವನ್ನೂ ಸರಿಯಾಗಿ ನೀಡುವ ವ್ಯವಸ್ಥೆ ಮಾಡುತ್ತಿದ್ದನು; ಅವನದೊಂದು ವಾದ್ಯವಿತ್ತು; ಅದರೊಳಗಿಂದ ಅವನು ಮಂಜುಳವಾದ ರಾಗವನ್ನು ಹೊರಡಿಸುತ್ತಿದ್ದನು; ಅವನು ನನಗೆ ಆದರ್ಶಪುರುಷನು; ಬಡವನಾಗಿದ್ದವನು ರಾಜನಾದನು.'

'ಇವನಲ್ಲದೆ ಇನ್ನೊಬ್ಬನಾರೊ—ಅವನ ಹೆಸರೇ ಮರೆತುಹೋಗಿದೆ—ನಿಮ್ಮ ಪ್ರೀತಿಯವನೆಂದು ನಾನು ತಿಳಿದುಕೊಂಡಿದ್ದೆ; ಹಂs, ನೀವು ಅವನ ಹೆಸರನ್ನು ಫೀಲ್ಡಿಂಗನ ಮನೆಯಲ್ಲಿ ಹೇಳಿದ್ದಿರಿ; ನನ್ನ ಪುಸ್ತಕದಲ್ಲಿ ಅವನಿಗೆ ಔರಂಗಜೇಬನೆಂದು ಹೆಸರಿದೆ'

'ಅಲಂಗೀರ? ಹೌದು, ಹೌದು; ಅವನೊಂದಿಷ್ಟು ಹೆಚ್ಚು ಧಾರ್ಮಿಕನು. ಆದರೆ ಬಾಬರನು ತನ್ನ ಇಡಿ ಆಯುಷ್ಯದಲ್ಲಿ ತಾನೊಪ್ಪಿಕೊಂಡ ಗೆಳೆಯನನ್ನೆಂದೂ ಮೋಸಗೊಳಿಸಲಿಲ್ಲ; ಅಂತೆಯೆ ಈ ಹೊತ್ತು ಮುಂಜಾನೆ ನಾನವನನ್ನು ನೆನೆಸಿದೆ. ಅವನು ಹೇಗೆ ಸತ್ತನೆಂಬುದು ನಿಮಗೆ ಗೊತ್ತಿದೆಯಲ್ಲವೆ? ತನ್ನ ಮಗನ ಸಲುವಾಗಿ ಒಂದು ವಿಚಿತ್ರ ರೀತಿಯಲ್ಲಿ ಅವನು ಪ್ರಾಣಕೊಟ್ಟನು. ಯುದ್ಧದಲ್ಲಿ ಸಾಯುವದು ಬೇಕು, ಇದು ಬೇಡ. ಅವರಿತ್ತ ಹೊರಟಾಗ ದಾರಿಯಲ್ಲಿ ಬಿಸಿಲುರಿಗೆ ಸಿಕ್ಕರು. ಆಗ ಅವರು ತಿರುಗಿ ಕಾಬೂಲಕ್ಕೆ ಹೋಗಬಹುದಾಗಿತ್ತು. ಆದರೆ ರಾಜಕಾರಣದ ಸಲುವಾಗಿ ಹಾಗೆ ಹೋಗಲಿಕ್ಕೆ ಬರುವಂತಿರಲಿಲ್ಲ. ಹಾಗೆಯೆ ಮುಂದೆ ಹೊರಟರು. ಆಗ್ರಾದಲ್ಲಿ ಹುಮಾಯೂನನು ಜಡ್ಡಿಗೆ ಬಿದ್ದನು. ಬಾಬರನು ಅವನ ಹಾಸಿಗೆಯ ಸುತ್ತಲೂ ಮೂರು ಸಲ ಪ್ರದಕ್ಷಿಣೆ ಹಾಕಿ, 'ನಾನದನ್ನು ತೆಗೆದುಕೊಂಡಿದ್ದೇನೆ' ಎಂದು ನುಡಿದನು. ಅದರಂತೆ ಅವನು ತೆಗೆದುಕೊಂಡೇಬಿಟ್ಟನು. ಜ್ವರ ಮಗನನ್ನು ಬಿಟ್ಟು ತಂದೆಗೇ ಬಂದವು; ಅದರಲ್ಲಿಯೇ ಅವನು ಸತ್ತನು. ಈ ಕಾರಣದಿಂದ ನಾನು ಅಲಂಗೀರನಕಿಂತ ಬಾಬರನನ್ನು ಹೆಚ್ಚು ಪ್ರೀತಿಸುತ್ತೇನೆ. ಹಾಗೆ ಮಾಡಬಾರದೇನೊ ನಿಜ; ಆದರೆ ಹಾಗೆ ಮಾಡುತ್ತೇನೆ. ಅದೇನೆ ಇರಲಿ, ನೀವು ಹೊರಡಲಿಕ್ಕೆ ಸಿದ್ಧರಾಗಿದ್ದೀರಲ್ಲ?'

'ಏನೂ ಅವಸರವಿಲ್ಲ.' ಎಂದು ಅಡೀಲಾ ಮೂರಳ ಹತ್ತಿರ ಕುಳಿತುಕೊಳ್ಳುತ್ತ ನುಡಿದಳು. 'ನಮಗೆ ಇಂಥ ಮಾತಿನಿಂಡ ಬಹಳ ಸಂತೋಷವೆನಿಸುತ್ತದೆ.'

ಅಝೀಜನೀಗ ತನಗೆ ತಿಳಿದದ್ದನ್ನೂ ತಿಳಿಯದಿದ್ದುದ್ದನ್ನೂ, ಅನಿಸಿದ್ದನ್ನೂ ಅನಿಸದಿದ್ದದ್ದನ್ನೂ ಕೂಡಿಸಿ ಹೇಳಹತ್ತಿದ್ದರಿಂದ ಅವರಿಗೆ ವಿನೋದವೆನಿಸಿತು. 'ನನಗೆ ಮೊಗಲರ ವಿಷಯ ಮಾತಾಡುವದೆಂದರೆ ಬಹಳ ಹುರುಪು. ಈ ಮೊಗಲರಲ್ಲಿ ಮೊದಲಿನ ಆರು ಜನ ರಾಜರೆಂದರೆ ಬಹಳ ವಿಲಕ್ಷಣ ಮನು-

ಷ್ಯರು. ಅವರಲ್ಲಿ ಯಾರ ಹೆಸರು ತೆಗೆದುಹಾಕಿದರೂ ಉಳಿದ ಐವರನ್ನು ಬಿಟ್ಟು ಜಗತ್ತಿನೊಳಗಿನ ಎಲ್ಲರನ್ನೂ ನಾನು ಮರೆತುಬಿಡುತ್ತೇನೆ. ಜಗತ್ತಿನ ಯಾವ ದೇಶದಲ್ಲಿಯೂ ಇಂಥ ಆರು ಜನ ಅರಸರು—ಒಂದೇ ಸಮನೆ ಒಬ್ಬರ ಮೇಲೊಬ್ಬರಂತೆ—ನಿಮಗೆ ದೊರೆಯುವದಿಲ್ಲ.'

' ಅಕಬರನ ವಿಷಯ ಸ್ವಲ್ಪ ಹೇಳಬಹುದೇ ? '

' ಓಹೋ. ಹೆಸರಂತೂ ನಿಮಗೆ ಗೊತ್ತಿದೆಯಲ್ಲ, ಸಾಕು. ಹಮಿೂ-ದುಲ್ಲಾ—ಇವನದಿನ್ನೂ ನಿಮಗೆ ಭೆಟ್ಟಿಯಾಗಿಲ್ಲ; ಅವನೇ ಭೆಟ್ಟಿಯಾಗುವನು—ನಿಮಗೆ ಅಕಬರನೆಂದರೆ ಎಲ್ಲರಲ್ಲಿಯೂ ದೊಡ್ಡವನೆಂದು ಹೇಳುವನು. ಆದರೆ ' ಹೌದು, ಅವನೇನೊ ನಿಜವಾಗಿ ಅದ್ಭುತ ಪುರುಷನು; ಆದರೆ ಅವನು ಅರ್ಧ ಹಿಂದು; ಅವನು ನಿಜವಾದ ಮುಸಲ್ಮಾನನೇ ಅಲ್ಲ.' ಎಂದು ಅವನಿಗೆ ನಾನು ಉತ್ತರ ಕೊಟ್ಟರೆ ಅವನು ' ಹಾಗಾದರೆ ಬಾಬರನೂ ಮುಸಲ್ಮಾನನಲ್ಲ; ಯಾಕಂದರೆ ಅವನು ಸರಾಯಿ ಕುಡಿಯುತ್ತಿದ್ದನು ' ಎಂದು ಕೂಗಾಡುವನು. ಬಾಬರನು ಕುಡಿದದ್ದಕ್ಕಾಗಿ ಆಮೇಲೆ ಪಶ್ಚಾತ್ತಾಪ ಪಟ್ಟನು ಆದರೆ ಅಕಬರನು ಹಾಗೆ ಮಾಡಲಿಲ್ಲ; ಇಷ್ಟೇ ಅಲ್ಲ, ತಾನು ಮಾಡಿದ್ದೇ ಒಂದು ಹೊಸ ಧರ್ಮವೆಂದು ಭಾವಿಸಿದನು. ಇದೇ ಅವರಿಬ್ಬರಲ್ಲಿಯ ಮುಖ್ಯ ಭೇದ.'

' ಆದರೆ ಅಕಬರನ ಆ ಹೊಸ ಧರ್ಮ ಚೆನ್ನಾಗಿದ್ದಿಲ್ಲವೇ ? ಅದು ಇಡಿ ಹಿಂದುಸ್ತಾನವನ್ನೇ ವ್ಯಾಪಿಸುವಂತಿತ್ತು!

' ಮಿಸ್. ಕ್ವೆಸ್ಟೆಡ್ ! ಅದು ಚೆನ್ನಾಗಿದ್ದರೂ ಮೂರ್ಖತನದ್ದು. ನಿಮ್ಮ ಧರ್ಮ ನಿಮಗೆ, ನನ್ನದು ನನಗೆ. ಇದೇ ಬಹಳ ಒಳ್ಳೆಯದು. ಇಡಿ ಹಿಂದುಸ್ತಾನವನ್ನು ವ್ಯಾಪಿಸುವಂತಹ ಧರ್ಮ ಯಾವುದೂ ಇಲ್ಲ, ಇಲ್ಲ, ಇಲ್ಲ. ಇದೇ ಆ ಅಕಬರನು ಮಾಡಿದ ತಪ್ಪು.

' ಅಝೀಜ ! ನಿಮಗೆ ನಿಜವಾಗಿಯೂ ಹೀಗೆನಿಸುತ್ತಿದೆಯೆ ? ನಿಮ್ಮದು ಸರಿಯಲ್ಲೆಂದು ನನಗೇನೊ ಎನಿಸುತ್ತಿದೆ. ಈ ದೇಶದಲ್ಲಿ ಯಾವುದಾದರೂ ಒಂದು ಸರ್ವವ್ಯಾಪಕವಾಗುವಂತಹ —ಹೆಸರು ಏನೇ ಇರಲಿ— ಧರ್ಮ-ವೊಂದು ಬೇಕೇ ಬೇಕು; ನೀವು ತಿಳಿದುಕೊಂಡಂತಹ ಧರ್ಮ ಮಾತ್ರ ಅಲ್ಲ.

ಯಾಕಂದರೆ ನಾನೇ ಮೊದಲು ಆ ಅರ್ಥದಲ್ಲಿ ಧಾರ್ಮಿಕಳಲ್ಲ. ಅಂತಹ ಒಂದು ಧರ್ಮವಿಲ್ಲದಿದ್ದರೆ ಈ ತುಂಡುತುಂಡಾದ ನಾಡು ಒಂದಾಗುವುದು ಹೇಗೆ?'

ತಾನೂ ಯಾವಾಗಾದರೊಮ್ಮೆ ಕನಸಿನಲ್ಲಿ ಕನವರಿಸುತ್ತಿರುವಂತೆ ಇವಳೂ ಆ ವಿಶ್ವಬಂಧುತ್ವವನ್ನಷ್ಟೇ ಮುಂದೆ ಮಾಡುತ್ತಿದ್ದಾಳೆಂದು ಅಝೀಜನು ಬಗೆದನು. ಆದರೆ ಅದೆಲ್ಲ ಹೊರಗೆ ಈ ಜಗತ್ತಿನಲ್ಲಿ ವ್ಯವಹಾರದ ಮಾತಿಗೆ ಬಂದೊಡನೆಯೆ ಕನಸಿನಂತೆಯೆ ಸುಳ್ಳಾಗಿ ಬಿಡುತ್ತಿತ್ತು.

'ನನ್ನದೇ ತಕ್ಕೊಳ್ಳಿ' ಎಂದು ಸುರುವುಮಾಡಿದಳು. ನಿಜವಾಗಿ ನೋಡಿದರೆ ಅವಳಿಗೆ ತನ್ನ ಅನುಭವದಿಂದಲೆ ಅಷ್ಟು ಉತ್ಸಾಹ ಬಂದಿತ್ತು. 'ನೀವು ಕೇಳಿದ್ದೀರೋ ಇಲ್ಲವೋ ನನಗೆ ಗೊತ್ತಿಲ್ಲ, ಆದರೆ ನಾನು ಹೆಸ್ಲೊಪರನ್ನು ಮದುವೆಯಾಗತಕ್ಕವಳಿದ್ದೇನೆ.'

'ಅದಕ್ಕಾಗಿ ನಾನು ತಮ್ಮನ್ನು ಮನಃಪೂರ್ವಕವಾಗಿ ಅಭಿನಂದಿಸುತ್ತೇನೆ.'

'ಮಿಸೆಸ್, ಮೂರ್! ನಾನು ಆ ತೊಡಕನ್ನು—ನಮ್ಮ ಆ್ಯಂಗ್ಲೊ ಇಂಡಿಯನ್ನರದು—ಡಾ. ಅಝೀಜರೆದುರಿಗೆ ಇಡಬಹುದೇ?'

'ಅದು ನಿನ್ನ ತೊಡಕು; ನನ್ನದಲ್ಲ, ಮಗು!'

'ಹೌದು, ಅದು ತೀರ ನಿಜ. ಆದರೆ ಹೆಸ್ಲೊಪರನ್ನು ಮದುವೆಯಾದ ಮೇಲೆ ಎಲ್ಲರಿಗೂ ಗೊತ್ತಿದ್ದಂತೆ ನಾನೂ ಆ್ಯಂಗ್ಲೋ ಇಂಡಿಯನ್ನಳಾಗುವೆ-ನಲ್ಲವೆ?'

ಈ ಮಾತನ್ನು ನಿಷೇಧಿಸಲಿಕ್ಕೆ ಅಝೀಜನು ಕೈಯನ್ನು ಮೇಲೆತ್ತಿ, 'ಅಶಕ್ಯ! ಇಂಥ ಈ ಭಯಂಕರ ಮಾತನ್ನು ನೀವು ತಿರುಗಿ ತೆಗೆದುಕೊಳ್ಳಿರಿ.' ಎಂದು ಹೇಳಿದನು.

'ಆದರೆ ನಾನಾಗಲೇಬೇಕು; ಆಗದೆ ಗತಿಯಿಲ್ಲ. ಆ ಹಣೆಪಟ್ಟಿಯು ಏನು ಮಾಡಿದರೂ ತಪ್ಪುವಂತಿಲ್ಲ. ಅದು ಬಂದರೂ ಅಡ್ಡಿಯಿಲ್ಲ; ಆದರೆ ಅವರ ಈ ಹಣೆಪಟ್ಟಿ ಬಡಿಯುವ ಮನೋವೃತ್ತಿಯಿಂದ ಮಾತ್ರ ಅದಷ್ಟು ತಪ್ಪಿಸಿಕೊಳ್ಳಬೇಕೆಂದು ನನ್ನ ಆಶೆಯಿದೆ....ಆ ಸ್ತ್ರೀಯರೆಂದರೆ......' ಎಂದು ಅವರ ಹೆಸರು ಹೇಳುವದು ಮನಸಿಗೆ ಬಾರದೆ ಅವಳು ಅಷ್ಟಕ್ಕೇ ನಿಂತುಬಿಟ್ಟಳು. ಈಗ ಹದಿನೈದು ದಿನಗಳ ಹಿಂದೆಯಾಗಿದ್ದರೆ ಅವಳು ಧೈರ್ಯ

ದಿಂದ 'ಮಿಸೆಸ್ ಟರ್ಟನ್, ಮಿಸೆಸ್ ಕ್ಯಾಲೆಂಡರ' ಎಂದು ಹೆಸರೆತ್ತಿ ಹೇಳಿ ಬಿಡಬಹುದಾಗಿತ್ತು. 'ಕೆಲವು ಸ್ತ್ರೀಯರೂ ಹಾಗೆಯೆ ಇದ್ದಾರೆ...... ಅಂದರೆ ಹಿಂದೀ ಜನರ ವಿಷಯದಲ್ಲಿ ಸಂಕುಚಿತವೃತ್ತಿಯವರೂ ಜಂಭ ಕೊಚ್ಚಿಕೊಳ್ಳುವವರೂ ಇದ್ದಾರೆ....ನಾನೂ ಅವರಂತೆಯಾಗಲೇ.... ಛೇ! ಬೇಡ....ನನಗೆ ಹೇಳಲಾರದಷ್ಟು ನಾಚಿಕೆಯೆನಿಸುತ್ತದೆ..ಆದರೆ.. ಅದೇ ನನ್ನ ತೊಡಕು....ನನ್ನನ್ನು ಮುತ್ತಿದ ಪರಿಸ್ಥಿತಿಯನ್ನು ಎದುರಿಸಿ ಅದನ್ನು ಗೆದ್ದು ಅವರಂತಾಗದಿರಲು ನನ್ನಲ್ಲಿ ಶಕ್ತಿಯಾಗಲಿ, ಧೈರ್ಯವಾಗಲಿ ಯಾವುದೂ ಇಲ್ಲ....ಇದೇ ನನ್ನಲ್ಲಿಯ ದೋಷ......ಇಲ್ಲಿಯೆ ನಾನು ಅಬಲೆಯಾಗುವೆ..ಅಂತೆಯೆ ನನಗೆ ಅಕಬರನ ಆ ಸರ್ವವ್ಯಾಪಕ ಧರ್ಮ.. ವಿಶ್ವಧರ್ಮ..ಅಥವಾ ಅದಕ್ಕೆ ಸರಿಯಾದದ್ದು ಯಾವುದಾದರೂ ಇರಲಿ.. ನನ್ನನ್ನು ನನ್ನ ವಿವೇಕಕ್ಕೆ ತೋಚಿದಂತೆ, ತಿಳಿವಿಗೆ ಹೊಳೆದಂತೆ ಇರಗೊಡಲು-ಬೇಕು....ನಾನೆನ್ನುವದು ಈಗಾದರೂ ಅರ್ಥವಾಯಿತೇ....'

ಅವಳ ಈ ಮಾತುಗಳು ಅವನನ್ನು ಸಂತೋಷಗೊಳಿಸಿದರೂ ಅವನು ಇನ್ನೂ ತನ್ನ ಮನಸ್ಸಿನ ಬಾಗಿಲನ್ನು ಮುಚ್ಚಿಕೊಂಡೇ ಕುಳಿತಿದ್ದನು. ಅವಳು ತನ್ನ ಮದುವೆಯ ಮಾತನ್ನೆತ್ತಿದ್ದರಿಂದ ಆ ವಿಷಯದ ವಿವರಗಳಲ್ಲಿ ತಾನು ಸಿಗಬಾರದೆಂದು ಅವನು ಗೊತ್ತುಮಾಡಿದ್ದನು. 'ಮಿಸೆಸ್ ಮೂರಳ ಯಾವ ಆಪ್ತರೊಡನೆಯೂ ನೀವು ಸುಖಿಯಾಗುವದು ನಿಶ್ಚಯ.' ಎಂದು ಅವನು ಒಂದು ಔಪಚಾರಿಕ ನಮಸ್ಕಾರ ಮಾಡಿ ನುಡಿದನು.

'ಓಹೋ, ನನ್ನ ಸೌಖ್ಯವೇ....? ಅದು ಮತ್ತೊಂದು ತೊಡಕು. ನಾನೀಗ ನಿಮ್ಮನ್ನು ಆ ಆ್ಯಂಗ್ಲೊ ಇಂಡಿಯನ್ ತೊಡಕಿನ ವಿಷಯ ಕೇಳ ಬೇಕಾಗಿದೆ. ಅದರಲ್ಲಿ ನೀವೇನಾದರೂ ನನಗೆ ದಾರಿತೋರಬಲ್ಲಿರಾ?'

'ನೀವು ಎಲ್ಲರಕಿಂತಲೂ ವಿಲಕ್ಷಣವಾಗಿದ್ದೀರಿ. ನೀವೆಂದೂ ಈ ನಮ್ಮ ಜನರೊಡನೆ ಒರಟುತನದಿಂದಾಗಲಿ, ಸೊಕ್ಕಿನಿಂದಾಗಲಿ ನಡೆಯಲಾರಿರಿ.'

'ಇಲ್ಲ, ಒಂದು ವರ್ಷವಾದ ಮೇಲೆ ನಾನೂ ಉಳಿದವರ ಸಾಲಿಗೇ ಬರುತ್ತೇನೆಂದು ಹೇಳುತ್ತಾರೆ.'

'ಹಾಗಿದ್ದರೆ ನಿಮಗೆ ಸುಳ್ಳು ಹೇಳಿದ್ದಾರೆ.' ಎಂದು ತಟ್ಟನೆ ನುಡಿದನು. ಅವಳು ಇದ್ದದ್ದನ್ನೇ ಹೇಳಿದ್ದಳು. ಆದರೆ ಅದೇ ಅಝೀಜನ ಹೃದ

ಯಕ್ಕೆ ಚುರುಕ್ಕೆಂದು ಹತ್ತಿತು. ಈ ವಿಶಿಷ್ಟ ಪರಿಸ್ಥಿತಿಯಲ್ಲಂತೂ ಅವನು ಆಡಿದ ಮಾತು ಅವಳಿಗೆ ಅಪಮಾನದ್ದಾಗಿತ್ತು. ಅಷ್ಟರಲ್ಲಿ ಅವನೇ ಸಾವರಿಸಿಕೊಂಡು ನಕ್ಕನು. ಆದರೆ ಅವಳ ವೈಮನಸ್ಯವೇ ಅವರ ಮಾತಿನೆಳೆಯನ್ನು ಹರಿದು ಅವರನ್ನು ಗಾಳಿಯಲ್ಲಿ ಎತ್ತೋ ತೂರಿಕೊಂಡು ಹೋಗಿ ಯಾವುದೋ ಗುಡ್ಡಗಳಲ್ಲಿ ಒಯ್ದು ಬಿಟ್ಟಿತು. 'ಬನ್ನಿರಿ ಇನ್ನು' ಎಂದು ಇಬ್ಬರಿಗೂ ಒಂದೊಂದು ಕೈಚಾಚಿ ನುಡಿದನು. ಅವರು ಸ್ವಲ್ಪ ಅರೆಮನಸ್ಸಿನಿಂದ ಎದ್ದು ಸ್ಥಳಗಳನ್ನು ನೋಡಲನುವಾದರು.

ಮೊದಲನೆಯ ಗುಹೆಯನ್ನು ನೋಡುವದು ಸಾಧಾರಣವಾಗಿ ಅನುಕೂಲವೇ ಇತ್ತು. ಆ ಕೆಸರು-ನೀರಿನ ಹೊಂಡವನ್ನು ದಾಟಿದರು; ಸುಮ್ಮನೆ ಬಿದ್ದುಕೊಂಡ ಆ ನಿರ್ಜೀವ ಕಲ್ಲುಗಳನ್ನು ಹತ್ತಿದರು; ಬೆನ್ನ ಮೇಲೆ ಒಂದೇ ಸಮನೆ ಕಿಡಿಬಿಸಿಲು ಸುರಿಯುತ್ತಿತ್ತು. ತಲೆ ಬಗ್ಗಿಸಿಕೊಂಡು ಒಬ್ಬರ ಹಿಂದೊಬ್ಬರು ಗುಡ್ಡಗಳ ಒಳಭಾಗದಲ್ಲಿ ಸೇರಿದರು. ಆ ಸಣ್ಣ ಕರಿ ಕಿಂಡಿಯು ಕೊರಕಲವು ಧುಮ್ಮಿಕ್ಕುವ ನೀರನ್ನು ಸೆಳೆದುಕೊಳ್ಳುವಂತೆ ಆ ವಿವಿಧಾಕೃತಿಗಳನ್ನು ಬಾಯಿ ತೆರೆದು ಸೆಳೆದುಕೊಂಡಿತು. ನುಣುಪಾಗಿ ಮೆತ್ತಗಿದ್ದ ಕಡಿದಾದ ಬಂಡೆಗಳು ಮೇಲಕ್ಕೆ ಆಕಾಶದಲ್ಲಿ ಹೋಗಿದ್ದವು. ಒಂದು ಪ್ರಕಾರದ ಮಿದುವಾದ ಜಿಗಟು ಆ ಬಂಡೆಗಳಿಗೆ ಮೆತ್ತಿಕೊಂಡಿತ್ತು. ದೊಡ್ಡದೊಂದು ಬಿಳಿ ಕಂಕವು ಬಂಡೆಗಳ ನಡುವೆ ಅಸಡ್ಡೆಯಾಗಿ ಪಟಪಟ ರೆಕ್ಕೆಗಳನ್ನು ಬಡಿಯುತ್ತಿತ್ತು; ಸ್ವಲ್ಪ ಹೊತ್ತಾದ ಮೇಲೆ ಅದೂ ಹಾರಿಹೋಯಿತು. ಅಲ್ಲಿಂದ ಆ ಕರಿ ಕಿಂಡಿಯು ತೇಗಿತು; ಆಗ ಈ ಮನುಷ್ಯ ಜಾತಿಯು ತಿರುಗಿ ಬಂತು.

ಮಿಸೆಸ್ ಮೂರಳನ್ನು ಮಾತ್ರ ಮೂರವಾರ ಗುಹೆಯು ತೀರ ಹಣ್ಣು ಮಾಡಿತ್ತು. ಅವಳು ಅದರಲ್ಲಿ ಹೋದಾಗ ಎಚ್ಚರವೇ ತಪ್ಪಿತ್ತು. ಗುಹೆಯಲ್ಲಿ ಹಳ್ಳಿಗರು ಆಳುಮಕ್ಕಳು ಇದೇ ಪರಿವಾರ ಸೇರಿಬಿಟ್ಟಿದ್ದರಿಂದ ಗದ್ದಲವು ಹೆಚ್ಚಾಗಿತ್ತು. ದುರ್ವಾಸನೆಯು ಎಲ್ಲ ಕಡೆಗೂ ತುಂಬಿತ್ತು. ಆ ಕತ್ತಲೆಯಲ್ಲಿ ಅವಳು ಅಝೀಜ ಮತ್ತು ಅಡೀಲಾ ಇವರನ್ನು ತಪ್ಪಿಸಿಕೊಂಡಳು. ಅಷ್ಟರಲ್ಲಿ ಯಾರೋ ಅವಳನ್ನು ತಟ್ಟಿದರು; ಗಾಬರಿಯಿಂದ ಅವಳಿಗಾಗ ಉಸಿರಾಡಿಸಲಿಕ್ಕೇ ಆಗಲಿಲ್ಲ. ಅಷ್ಟರಲ್ಲಿ ಮತ್ತೆ ಏನೋ ಒಂದು ಬರಿಮೈಯ್ಯ ಹೊಲಸು ಪದಾರ್ಥವು ಅವಳ ಮುಖಕ್ಕೆ ರಪ್ಪೆಂದು ಬಡೆದು ಬಾಯಮೇಲೆ

ಥಡಿಯಂತೆ ಕುಳಿತಿತು. ಅವಳು ಚೀರಿದಳು. ಬಂದ ದಾರಿಯಿಂದ ಹೊರಗೆ ಹೋಗಬೇಕೆಂದಳು. ಆದರೆ ಇನ್ನೂ ಒಳಸುಗ್ಗಿ ಬರುತ್ತಿರುವ ಹಳ್ಳಿಗರು ಅವಳನ್ನು ತಿರುಗಿ ದೂಡಿದರು. ಹಣೆ ಹಣೆ ಬಡೆದುಕೊಂಡಳು; ಗೋಡೆ ಗೋಡೆ ಹಾಯ್ದಳು. ಸ್ವಲ್ಪ ಹೊತ್ತು ಅವಳಿಗೆ ಹುಚ್ಚೇ ಹಿಡಿದಂತಾಯಿತು. ಆ ಹುಚ್ಚಿನಲ್ಲಿ ಅವಳು ತೇಕುತ್ತ ಎದೆ ಎದೆ ಬಡೆದುಕೊಳ್ಳುತ್ತ ಸುತ್ತಲೂ ಅಲೆದಾಡಿದಳು. ಇನ್ನೂ ಆ ದುರ್ವಾಸನೆಯು ಅವಳ ಮೂಗಿಗೆ ಕಟ್ಟಿತ್ತು. ತುಳಿದಾಟ ಹಾಗೇ ನಡೆದಿತ್ತು. ಅಷ್ಟೇ ಅಲ್ಲದೆ ಎದೆ ನಡುಗಿಸುವ ಭೀಕರ ವಾದ ಪ್ರತಿಧ್ವನಿಯೊಂದು ಅವಳನ್ನು ಬೆದರಿಸಿಬಿಟ್ಟಿತು.

ಪ್ರೊ. ಗೋಡಬೋಲೆಯವರು ಈ ರೀತಿಯಾಗಿ ಅಲ್ಲಿ ಆಗುವದೆಂದು ಹೇಳಿರಲಿಲ್ಲ; ಅಥವಾ ಹೇಳಲಿಕ್ಕೆ ಅದು ಅವರಿಗೆ ಅಷ್ಟು ನೆನಪೂ ಉಳಿದಿರ ಲಿಕ್ಕಿಲ್ಲ. ಹಿಂದುಸ್ತಾನದಲ್ಲಿ ಕೆಲವು ಅತ್ಯಪೂರ್ವವಾಗಿ ಪ್ರತಿಧ್ವನಿಗೊಡುವ ಸ್ಥಳಗಳಿವೆ. ಬಿಜಾಪುರದ ಗೋಳಗುಮ್ಮಟವು ಕಿವಿಮಾತಿಗೂ ಕೂಡ ಮಾರ್ನುಡಿಯುತ್ತದೆ. ಮಾಂಡುದಲ್ಲಿ ಎಷ್ಟೇ ಉದ್ದುದ್ದ ವಾಕ್ಯಗಳನ್ನಾದರೂ ಅವು ಗಾಳಿಯ ಮೇಲೆ ಎಲ್ಲೆಲ್ಲಿಯೊ ಅಲೆದಾಡಿ ಮತ್ತೆ ಆ ಶಬ್ದಗಳನ್ನು ಹುಟ್ಟಿಸಿದವನನ್ನೇ ತಿರುಗಿ ಬಂದು ಮುತ್ತುತ್ತವೆ. ಆದರೆ ಮಾರವಾರದಲ್ಲಿಯ ಪ್ರತಿಧ್ವನಿಯು ಹಾಗಲ್ಲ. ಆಡಿದ ಮಾತು ಆಡಿದ ಹಾಗೆ, ಏನೂ ವಿಕಾರ ಹೊಂದದೆ ತಿರುಗಿ ಬಂದು, ಆ ಗೋಡೆ ಈ ಗೋಡೆಗಿಷ್ಟು ಹಾಯ್ದಾಡಿ, ಅಲ್ಲಿಂದ ಮೇಲೆ ಕೆಳಗೆ ಹೊಯ್ದಾಡಿ, ಕೊನೆಗೆ ಮಾಳಿಗೆಯಲ್ಲಿ ಅಡಗಿ ಹೋಗು ತ್ತದೆ. ಅಲ್ಲಿ ಹುಟ್ಟುವ ಪ್ರತಿಧ್ವನಿಯನ್ನು ಮನುಷ್ಯನು ಉಚ್ಚರಿಸಬೇಕಾದರೆ 'ಬೋವ್' ಎಂದಾಗಲಿ 'ಭೌಓವ್' ಎಂದಾಗಲಿ 'ಔಬೋವ್' ಎಂದಾ ಗಲಿ ಹೇಳಬಹುದು. ಆದರೆ ಅದು ಶುದ್ಧ ನಿರ್ಜೀವವಾದ ದನಿಯು ಮಾತ್ರ. ಅಲ್ಲಿ ಮನುಷ್ಯನ ಆಶೆ, ಆದರ, ಅವನ ಮೂಗಿನ ಉಸಿರು, ಬೂಟಿನ ಸಪ್ಪಳ ಎಲ್ಲವೂ 'ಬೋವ್' ಎಂಬದನ್ನೇ ಹುಟ್ಟಿಸುತ್ತವೆ.

ಮಿಸೆಸ್ ಮೂರಳು ಹೊರಗೆ ಬಂದ ಮೇಲೆ ಎಲ್ಲರೂ ಹೊರಗೆ ಬಂದರು; ಅವಳೇ ಅವರೆಲ್ಲರಿಗೂ ಹೊರಗೆ ಬರಲು ಸನ್ನೆ ಮಾಡಿದ್ದಳು. ಅಝೀಜ ಮತ್ತು ಅಡೀಲಾ ಇಬ್ಬರೂ ನಗನಗುತ್ತ ಹೊರಬಿದ್ದರು. ತಾನು ಕೊಟ್ಟ ಮೇಜವಾನಿಯು ಸರಿಯಾಗಲಿಲ್ಲವೆಂದು ಅವನಿಗೆನಿಸಿರಬಾರದೆಂದು

ಅವಳೂ ನಗುತ್ತಿದ್ದಳು ಅಷ್ಟೆ. ಪ್ರತಿಯೊಬ್ಬನೂ ಹೊರಗೆ ಬಂದ ಬಂದ ಹಾಗೆ ಮೂರಳು ತನ್ನ ಬಾಯಿಗೆ ಥಡಿ ಹಾಕಿದ ಆ ದ್ರೋಹಿ ಯಾರೆಂದು ಹುಡುಕುತ್ತಿದ್ದಳು. ಅದರಲ್ಲಿ ಯಾರೂ ಸಿಗಲಿಲ್ಲ. ಆ ಮೇಲೆ ಅವಳು ತನ್ನನ್ನು ಗೌರವಿಸುವ ವಿನಯಸಂಪನ್ನರಾದ ಜನರಲ್ಲಿಯೇ ತಾನಿದ್ದೇನೆಂದು ತಿಳಿದುಕೊಂಡಳು. ಅವಳ ಬಾಯಿಗೆ ಬಿದ್ದ ಥಡಿಯು ಮತ್ತೇನೂ ಆಗದೆ ಒಬ್ಬ ತಾಯಿಯ ಕಂಕುಳಲ್ಲಿ ಎದ್ದುನಿಂತ ಸಣ್ಣದೊಂದು ಕೂಸಾಗಿತ್ತು. ಗುಹೆಯಲ್ಲಿ ಅಂಥ ಕೆಟ್ಟದ್ದೇನೂ ಇರದಿದ್ದರೂ ಅವಳೇನು ಸುಖಪಟ್ಟಿರಲಿಲ್ಲ; ಅಂತೆಯೆ ಇನ್ನೊಂದರಲ್ಲಿ ತಾನು ಹೋಗಬಾರದೆಂದು ಅವಳಾಗಲೆ ನಿಶ್ಚಯಿಸಿಕೊಂಡಿದ್ದಳು.

'ನೀನು ಆ ಕಡ್ಡಿ-ದೀಪದ ಪ್ರತಿಬಿಂಬವನ್ನು ನೋಡಿದಿಯಾ? ಬಹಳ ಚೆನ್ನಾಗಿತ್ತು' ಎಂದು ಅಡೀಲಾ ಕೇಳಿದಳು.

'......ನಾನವನ್ನೆಲ್ಲ ಮರೆತಿದ್ದೇ......'

'ಆದರೆ ಇದಿನ್ನೂ ಅಷ್ಟು ಚಲೊ ಗವಿಯಲ್ಲವಂತೆ; ಕಾವಾದೋಲದ ಮೇಲಿದ್ದದ್ದು ಮಾತ್ರ ಅತ್ಯುತ್ತಮವಿದೆಯೆಂದು ಹೇಳುತ್ತಾನೆ....'

'ನಾನೇನು ಅಲ್ಲಿಯ ವರೆಗೆ ಹೋದೆನೆಂದು ನನಗೆನಿಸುವದಿಲ್ಲ.... ಮೇಲೆ ಏರುವದು ನನಗೆ ಅಸಾಧ್ಯ....'

'ಒಳ್ಳೇದು; ಹಾಗಾದರೆ ಊಟ ಸಿದ್ಧವಾಗುವ ವರೆಗೆ ಇಲ್ಲಿಯೆ ನೆರಳಲ್ಲಿ ಕೂಡೋಣ?'

'ಆದರೆ ಅದರಿಂದ ಅಝೀಜನಿಗೆ ಬಹಳ ನಿರಾಶೆಯಾದೀತು. ಅವನು ಇಷ್ಟೆಲ್ಲ ಶ್ರಮ ತೆಗೆದುಕೊಂಡಿದ್ದಾನೆ ನಮಗಾಗಿ. ನೀನು ಹೋಗು; ನಾನಿಲ್ಲಿಯೆ ಇರುತ್ತೇನೆ ಚಿಂತೆ ಮಾಡಬೇಡ.'

'ಹೌದು, ಹೌದು. ನೀನನ್ನುವದೂ ನಿಜವೆ; ನಾನು ಹೋಗಬೇಕಾಗುತ್ತದೆ' ಎಂದು ಆ ಹುಡುಗಿಯು ತಾನು ಏನು ಮಾತಾಡುತ್ತಿದ್ದೇನೆಂಬುದರ ಲಕ್ಷ್ಯವಿಲ್ಲದೆ, ಅವನಿಗೆ ಒಳ್ಳೆಯವಳಾಗಬೇಕೆಂದು ನುಡಿದಳು.

ಆಳುಗಳು ತಿರುಗಿ ವಸ್ತಿ ಹಾಕಿದಲ್ಲಿಗೆ ಬರುತ್ತಿದ್ದರು. ಲತೀಫನು ಅವರಿಗೆಲ್ಲ ಬೈಗಳೇಟನ್ನು ಕೊಡುತ್ತ ಅವರ ಬೆನ್ನುಹಿಂದೆಯೆ ಬರುತ್ತಿದ್ದನು. ಅಝೀಜನು ಬಂಡೆಗಲ್ಲಿನ ಮೇಲೆ ಅತಿಥಿಗಳಿಗೆ ಸಹಾಯ ಮಾಡಲಿಕ್ಕೆ

ಬಂದನು. ಅವನೀಗ ತನ್ನ ಶಕ್ತಿಗಳ ಉನ್ನತ ಶಿಖರಕ್ಕೇರಿದ್ದನು. ಯಾವ ತರಹದ ಟೀಕೆಗೂ ಅವನು ಸಿಟ್ಟಿಗೇಳುತ್ತಿರಲಿಲ್ಲ. ಅವರು ತನ್ನ ಕಾರ್ಯಕ್ರಮದಲ್ಲಿ ಹೆಚ್ಚುಕಡಿಮೆ ಮಾಡುತ್ತಾರೆಂದು ಕೇಳಿ ಉತ್ಸಾಹಿಯಾದ ಅವನಿಗೆ ತನ್ನ ಆತ್ಮವಿಶ್ವಾಸದ ಬಲದಿಂದ ನಿಜವಾಗಿ ಸಂತೋಷವೇ ಆಯಿತು. 'ಕ್ವೆಸ್ಟೆಡ್! ನಾನೂ ನೀವೂ ಕೂಡಿಯೆ ಹೋಗೋಣ. ಮಿಸೆಸ್ ಮೂರಳು ಇಲ್ಲಿಯೆ ಇರಲಿ. ನಾವೇನು ಬಹಳ ಹೊತ್ತು ಹೋಗಬೇಕಾಗಿಲ್ಲ. ಆದರೂ ನಾವು ಸುಮ್ಮನೆ ಗಡಿಗಡಿಯನ್ನೂ ಮಾಡಿಕೊಳ್ಳಬೇಕಾಗಿಲ್ಲ. ಮೂರರ ಇಚ್ಛೆಯೂ ಹೀಗೆಯೆ ಇರಬಹುದು?'

'ಹೌದು, ಹಾಗೆಯೆ ಇದೆ. ನನಗೆ ಬರಲಿಕ್ಕಾಗದ್ದಕ್ಕೆ ಬಹಳ ಕೆಡಕೆನಿಸುತ್ತಿದೆ. ಆದರೆ ನನಗೆ ಅಡ್ಡಾಡಲಿಕ್ಕೆ ತ್ರಾಣವೇ ಇಲ್ಲ.'

'ನೀವೇನು ಅಷ್ಟು ಕೆಡಕೆನಿಸಿಕೊಳ್ಳಬಾರದು; ನೀವು ನನ್ನ ಅತಿಥಿಗಳು. ನೀವು ಬರಲಾರದ್ದನ್ನು ನೋಡಿ ಬಹಳ ಸಂತೋಷವಾಯಿತು. ನಾನು ಹೀಗೆನ್ನುವದು ಬಹಳ ವಿಚಿತ್ರವಾಗಿ ಕಾಣಬಹುದು. ಆದರೆ ನೀವು ನನ್ನನ್ನು ಸಲುಗೆಯಿಂದ ಸರಳತನದಿಂದ, ನಿಮ್ಮೊಬ್ಬ ಗೆಳೆಯನ ಹಾಗೆ ನಡೆಸಿಕೊಂಡಿದ್ದೀರಿ; ಇದು ಅದರ ಪರಿಣಾಮ.'

'ಹೌದು, ಅದು ನಿಜ. ನೀವು ನಮ್ಮ ಗೆಳೆಯರು' ಎಂದು ಅವಳು ಅವನ ಅಂಗಿಯ ತೋಳಿನ ಮೇಲೆ ಕೈಯಿಟ್ಟು ತನಗೆ ದಣುವಾಗಿದ್ದರೂ 'ನಾನೊಂದು ಸೂಚನೆಯನ್ನು ನಿಮಗೆ ಮಾಡಬಹುದೇ? ಈ ಸಲ ನಿಮ್ಮಗೂಡ ಇಷ್ಟು ಜನರನ್ನು ಬರಗೊಡಬಾರದು. ಇದರಿಂದ ನಿಮಗೇ ಹೆಚ್ಚು ತೊಂದರೆಯಾಗುವದು' ಎಂದು ಹೇಳಿದಳು.

'ಹೌದು, ಅದೇ ಸರಿ' ಎಂದು ಒಮ್ಮಿಗಿಲೆ ಆ ಕಡೆಗೆ ನುಗ್ಗಿ ಹೋಗಿ ತನ್ನ ಮತ್ತು ಅಡೀಲಾ ಇವರ ಸಂಗಡ ಕಾವಾದೋಲ ತೋರಿಸಲಿಕ್ಕೆ ಒಬ್ಬನನ್ನು ಬಿಟ್ಟು ಉಳಿದವರಾರೂ ಬರಕೂಡದೆಂದು ಅವರಿಗೆ ಹೇಳಿ 'ಈಗ ಸರಿಯಾಯಿತಲ್ಲವೇ? ಎಂದು ಅವಳನ್ನು ಕೇಳಿದನು.

'ಸರಿಯಾಯಿತು. ನೀವು ತಿರುಗಿ ಬಂದ ಮೇಲೆ ಅಲ್ಲಿ ನೋಡಿದ್ದೆಲ್ಲವನ್ನೂ ಹೇಳಬೇಕು ಮತ್ತೆ?' ಎಂದು ಮತ್ತೆ ಕುರ್ಚಿಯಲ್ಲಿ ಒರಗಿದಳು.

ದೊಡ್ಡ ಗುಹೆಗಳಿಗೆ ಹೋದರೆ ಅವರಿಗೆ ತಿರುಗಿ ಬರಬೇಕಾದರೆ ಕನಿಷ್ಟಕ್ಕೆ ಒಂದು ತಾಸು ಬೇಕಾಗುತ್ತಿತ್ತು. ಈ ಹೊತ್ತನ್ನು ನೂಕುವದಕ್ಕಾಗಿ ಅವಳು ಕಾಗದ ತೆಗೆದುಕೊಂಡು ತನ್ನ ಮಕ್ಕಳಿಗೆ ಪತ್ರ ಬರೆಯಬೇಕೆಂದು ಕುಳಿತು ಕೊಂಡಳು. ಕಾಗದದ ಮೇಲೆ 'ನನ್ನ ಮುದ್ದು ಸ್ಟೇಲಾ ಮತ್ತು ರಾಲ್ಫ!' ಎಂದು ಒಕ್ಕಣಿಕೆ ಕಾಣಿಸಿದಳು. ಮುಂದೆ ಬರೆಯಲಾಗದೆ ಅದನ್ನು ಅಲ್ಲಿಗೇ ನಿಲ್ಲಿಸಿ ಕಣ್ಣೆದುರಿಗೇ ಬಿದ್ದುಕೊಂಡಿದ್ದ ಆ ವಿಲಕ್ಷಣವಾದ ಕೋಳವನ್ನೂ ಅದರಾಚೆ ಅವರು ಇರಿವೆಗಳಂತೆ ಸುತ್ತುತ್ತಿರುವದನ್ನೂ ಇಲ್ಲಿಂದಲೆ ನೋಡಿ ದಳು. ಗುಡ್ಡದಡಿಯಲ್ಲಿ ನಿಂತ ಆನೆಯೂ ಒಂದು ಆಡಿಸಕಿಂತ ಕಿರಿದಾಗಿತ್ತು. ಅಲ್ಲಿಂದ ಅವಳ ಕಣ್ಣುಗಳು ಆ ಸುರಂಗದ ಕಡೆಗೆ ಹೊರಳಿದವು. ಆಗ ಅವಳ ಮನದ ಕಣ್ಣೆದುರಿಗೆ ತಾನು ಅಲ್ಲಿ ಆ ಗುಹೆಯಲ್ಲಿ ಅನುಭವಿಸಿದ ವೇದನೆಯೆಲ್ಲ ಸಜೀವ ರೂಪ ತಾಳಿ ಹಾಯ್ದು ಹೋಯಿತು. ಅದನ್ನು ನೆನೆಯಬಾರದೆಂದು ಅನೇಕ್ಕೋ ಪ್ರಯತ್ನಪಟ್ಟಳು. ಸಾಧ್ಯವಾಗಲಿಲ್ಲ; ಗಾಳಿಗೆ ಸಿಕ್ಕ ತರಗೆಲೆ ಯಂತಾದಳು. ಹೆಚ್ಚೆಚ್ಚು ಅದನ್ನು ನೆನೆಸಿದಂತೆ ಹೆಚ್ಚೆಚ್ಚು ಅಸಹ್ಯವೂ ಭಯಾನಕವೂ ಆಗಿ ತೋರಹತ್ತಿತು. ಪ್ರತ್ಯಕ್ಷ ಅನುಭವಿಸಿದಾಗಿನಕಿಂತ ಈಗಿನ ಉದ್ವೇಗವು ಉಗ್ರವಾಗಿತ್ತು. ಆ ತಿಕ್ಕಾಟವನ್ನೂ ಆ ದುರ್ವಾಸನೆ ಯನ್ನೂ ಮರೆಯುವದು ಅವಳಿಗೆ ಹೇಗೋ ಶಕ್ಯವಾಯಿತು. ಆದರೆ ಆ ಪ್ರತಿಧ್ವನಿಯನ್ನು ಮಾತ್ರ ಮರೆಯುವದಾಗಲಿಲ್ಲ. ಅದು ಒಂದು ರೀತಿಯಿಂದ ಅವಳ ಜೀವವನ್ನೆ ಸೆರೆಹಿಡಿದಿತ್ತು. ಅವಳು ತೀರ ನಿರ್ವಿಣ್ಣಳಾಗಿದ್ದ ಹೊತ್ತಿ ನಲ್ಲಿ ಅದು ಬಂದಿದ್ದರಿಂದ ಅವಳಿಗೆ ಅದು 'ದಯೆ, ಧರ್ಮ, ಧೈರ್ಯ ಇವು ಇವೆ—ಆದರೆ ಇವೆಲ್ಲ ಒಂದೇ ಆಗಿವೆ—ಇದರಂತೆಯೆ ಹೊಲಸೂ ಇದೆ, ಎಲ್ಲವೂ ಇದೆ—ಆದರೆ ಯಾವುದಕ್ಕೂ ಬೆಲೆಯಿಲ್ಲ. . . . ಬೆಲೆಯಿಲ್ಲ—' ಎಂದು ಕಿವಿಯಲ್ಲುಸಿರಿದಂತೆ ಭಾಸವಾಗಿತ್ತು. ಅಲ್ಲಿ ಆ ಗುಹೆಯಲ್ಲಿ ತೀರ ಕೆಟ್ಟ ಮಾತುಗಳನ್ನಾಡಿದರೂ ಅಷ್ಟೆ, ಅಥವಾ ಅತ್ಯುತ್ತಮ ಕಾವ್ಯವನ್ನು ಹೇಳಿ ದರೂ ಅಷ್ಟೆ; ಎರಡಕ್ಕೂ ಪ್ರತ್ಯುತ್ತರ ಒಂದೇ—'ಬೋಮ್'. ಈ ಜಗತ್ತಿ ನಲ್ಲಿ ಹಿಂದೆ ಇದ್ದ, ಈಗಿರುವ, ಮುಂದೆ ಬರುವ ಈ ಅಪಾರ ದುಃಖದ, ತಪ್ಪು ತಿಳಿವಳಿಕೆಯ ಸೆರೆಯಿಂದ ಈ ಮಾನವನನ್ನು ಬಿಡಿಸಬೇಕೆಂದು ಪ್ರತ್ಯಕ್ಷ ದೇವತೆಗಳೇ ಬಂದು ತಮ್ಮ ದಿವ್ಯವಾಣಿಯಿಂದ ವಾದಿಸಿದರೂ ಅದು

ಮತ್ತೆ ಅಲ್ಲಿಗೇ ಬರುವದು; ಎಲ್ಲಕ್ಕೂ 'ಬೋವಮ್' ಎಂದು ಉತ್ತರ ಕೊಡುವದು.

ಮೂರಳು ಮತ್ತೆ ತನ್ನ ಮಕ್ಕಳಿಗೆ ಪತ್ರ ಬರೆಯುವದನ್ನು ಮುಂದೆ ಸಾಗಿಸಬೇಕೆಂದಳು. 'ತಾನೊಬ್ಬ ಮುಪ್ಪಿನ ಹೆಣ್ಣುಮಗಳು; ಬೆಳಿಗ್ಗೆ ಬೇಗನೆ ಎದ್ದು ಇಷ್ಟೆಲ್ಲ ಪ್ರವಾಸ ಮಾಡಿ ದಣಿದವಳು; ತನಗೀಗ ಬಂದ ನಿರಾಶೆಯು ತನ್ನ ಮೂಲಕವೇ ಬಂದದ್ದು; ತನ್ನ ಅಶಕ್ತಿಯಿಂದಲೆ ಇದು ಬಲಗೊಂಡದ್ದು; ತಾನಿಲ್ಲಿಯ ಉರಿಬಿಸಿಲಿನಿಂದ ತಲೆ ಕೆಟ್ಟು ಹುಚ್ಚಳಾದರೂ ಜಗತ್ತೇನು ತನ್ನ ಸಲುವಾಗಿ ನಿಲ್ಲುವದಿಲ್ಲ' ಎಂದೇನೇನೊ ನೆನೆದುಕೊಂಡೇ ಪತ್ರ ಪ್ರಾರಂಭ ಮಾಡಬೇಕೆಂದಿದ್ದಳು. ಅಷ್ಟರಲ್ಲಿ ಅವಳ ಮನದ ಬಾನಂಚಿಗೆ ತನ್ನ ಕ್ರಿಶ್ಚನ್ ಧರ್ಮದ ನಕ್ಷತ್ರವೊಂದು ತುಂಟ ಹುಡುಗನಂತೆ ಕಣ್ಣು ಮಿಟುಕಿಸಿ ಅವಳನ್ನು ಕರೆಯಹತ್ತಿತು. ತನ್ನ ಧರ್ಮದ ದಿವ್ಯಮಂತ್ರಗಳೆಲ್ಲ ಆ ಸರ್ವಭಕ್ಷಿಯಾದ 'ಬೋವಮ್' ದಲ್ಲಿಯೆ ಮುಗಿದವೆಂದು ಅವಳಿಗೆ ಆಗ ಗೊತ್ತಾಯಿತು. ಎಂದೂ ಇಲ್ಲದ ಇಂದಿನ ತನ್ನ ಭಾವವಿಶಾಲತೆಯನ್ನು ನೆನೆದು ಅವಳು ಬೆದರಿದಳು. ಅವಳ ಬುದ್ಧಿಗೆ ಎಂದೂ ನಿಲುಕದ ಈ ವಿಶ್ವವು ಅವಳ ಆತ್ಮಕ್ಕೆ ಶಾಂತಿಯನ್ನೀಯಲಿಲ್ಲ. ತನ್ನ ಮಕ್ಕಳಿಗೆ ಬರೆಯುವದೂ ಇನ್ನು ಬೇಕಾಗಿಲ್ಲವೆಂದೂ ಯಾರೊಡನೆಯೂ—ದೇವರೊಡನೆ ಕೂಡ—ವ್ಯವಹಾರ ಮಾಡಬಾರದೆಂದೂ ಅವಳಿಗೆನಿಸಿತು. ಅವಳು ಭಯಚಕಿತಳಾಗಿ ಕುಳಿತಳು. ಲತೀಫನು ತನ್ನ ಹತ್ತಿರಕ್ಕೆ ಬರುವದನ್ನು ನೋಡಿ ಅವನೆಲ್ಲಿ ತನ್ನಲ್ಲಿಯ ಈ ಬದಲಾವಣೆಯನ್ನು ಗುರುತಿಸುವನೋ ಎಂದು ಸಂಶಯಗೊಂಡಳು. ಆದರೆ ಸ್ವಲ್ಪ ಹೊತ್ತು ತನಗೆ ತಾನೇ ಸಮಾಧಾನ ಹಚ್ಚಿಕೊಳ್ಳುವದಕ್ಕಾಗಿ 'ನನಗೆ ಜಡ್ಡಾಗಿದೆ' ಎಂದುಕೊಂಡಳು. ಇದೇ ಗುಂಗಿನಲ್ಲಿ ಅವಳು ಯಾವುದನ್ನೂ—ಅಝೀಜನನ್ನು ಸಹ—ಹಚ್ಚಿಕೊಳ್ಳಲಿಲ್ಲ. ತಾನು ಇಷ್ಟೊತ್ತಿನ ವರೆಗೆ ನಿರ್ವಂಚನೆಯಿಂದ ಅಂತಃಕರಣದಿಂದ ಅವನೊಡನಾಡಿದ ಮಾತುಗಳು ತನ್ನವಲ್ಲ, ಅಲ್ಲಿಯ ಗಾಳಿಯವು, ಎಂದುಕೊಂಡಳು.

—

## ಪ್ರಕರಣ ೧೫

ಅಝೀಜ, ಅಡೀಲಾ ಮತ್ತು ಒಬ್ಬ ದಾರಿ-ತೋರಿಸುವವ ಹೀಗೆ ಮೂವರೇ ಅಲ್ಲಿಂದ ಹೊರಟರು. ದಾರಿಯಲ್ಲಿ ಯಾರೂ ಹೆಚ್ಚು ಮಾತನಾಡಲಿಲ್ಲ. ಸೂರ್ಯನಾಗಲೆ ನೆತ್ತಿಯ ಮೇಲೆ ಬರಹತ್ತಿದ್ದನು. ಗಾಳಿಯು ಎಸರು ನೀರಿನ ಪ್ರವಾಹದಂತಾಯಿತು. ಸೆಕೆ ಸಂಕಟಪಡಿಸಹತ್ತಿತ್ತು. ಅಲ್ಲಿಯ ಬಂಡೆಗಲ್ಲುಗಳು ಕೂಡ 'ನಾವೂ ಜೀವಂತ ಇದ್ದೇವೆ. ನಮಗೂ ತಾಪವಾಗಹತ್ತಿದೆ' ಎಂದು ಕೂಗಿಕೊಂಡವು. ಸಣ್ಣ ಸಣ್ಣ ಕಲ್ಲುಗಳೂ 'ನಾವೂ ಹಾಗೆಯೇ' ಎಂದು ಹೂಂಗುಟ್ಟಿದವು. ಅವುಗಳ ಸಂದಿಗಳಲ್ಲಿ ಸುಟ್ಟ ಹುಲ್ಲಿನ ಬೂದಿ ತುಂಬಿತ್ತು. ಅವರು ಶಿಖರದ ಮೇಲಿನ ಆ ತೂಗುವ ಕಲ್ಲಿನ ವರೆಗೆ ಹೋಗಬೇಕೆಂದು ಮಾಡಿದ್ದರು. ಆದರೆ ಅದು ಬಹಳ ಎತ್ತರದ ಮೇಲೆ ಇದ್ದುದರಿಂದ ಅವರು ಅಲ್ಲಿಯೆ ಇದ್ದ ಗುಹೆಗಳ ದೊಡ್ಡದೊಂದು ಗುಂಪಿನ ಸುತ್ತಲೂ ತಿರುಗಾಡಹತ್ತಿದರು. ಬಿಡಿಬಿಡಿಯಾಗಿದ್ದ ಅನೇಕ ಗುಹೆಗಳನ್ನು ನೋಡಿದರು. ಯಾವುದರಲ್ಲಿಯೂ ನೋಡುವಂತಹದೇನೂ ಇರಲಿಲ್ಲ. ತಿರುಗಮುರಗ ಕಡ್ಡಿ ಕೊರೆಯುವದು; ಗೋಡೆಯ ನುಣುಪಿನಲ್ಲಿ ಮೂಡುವ ಆ ಬೆಳಕಿನ ಪ್ರತಿಬಿಂಬವನ್ನು ನೋಡುವದು; ಬಹಳಾದರೆ ಪ್ರತಿಧ್ವನಿಯ ಪರೀಕ್ಷೆ ಮಾಡುವದು; ಆ ಮೇಲೆ ಹೊರಗೆ ಬಂದುಬಿಡುವದು. ಇದೇ ರೀತಿಯಾಗಿ ನಡೆಯಿತು. ತಾವಿನ್ನಾದರೂ ಬೇಗನೆ ಹಳೆ ಕೆತ್ತಿಗೆಗಳನ್ನೇನಾದರೂ ನೋಡಬಹುದೆಂದು ಅಝೀಜನಿಗೆ ಬಹಳ ಆಶೆಯಿತ್ತು. ಅಲ್ಲಿ ಅಂತಹವೇನಾದರೂ ಇದ್ದೇ ತೀರಬೇಕೆಂದು ಅವನ ಕಲ್ಪನೆ. ಈ ವಿಚಾರದ ಪರೆಯ ಕೆಳಗೆ ಇನ್ನೊಂದು ವಿಚಾರದ ಪರೆಯಿತ್ತು. ಅದೆಂದರೆ ಮುಂಜಾನೆಯ ಊಟದ ವಿಷಯ. ಅವನು ವಸ್ತಿಹಾಕಿದಲ್ಲಿಂದ ಹೊರಟು ಬರುವಾಗ ಆಗಲೆ ಅವ್ಯವಸ್ಥೆಯ ಚಿನ್ಹೆಗಳು ಕಾಣಹತ್ತಿದ್ದವು. ಊಟಕ್ಕೆ ಮಾಡಿಸಬೇಕೆಂದಿದ್ದ ಪದಾರ್ಥಗಳನ್ನು ಒಂದೊಂದಾಗಿ ನೆನಪು ಮಾಡಿಕೊಂಡನು; ಇಂಗ್ಲಿಶ ಜನರ ಊಟ ಬೇರೆ! 'ಪೋರಿಜಾ'—ಮಾಂಸದ ತುಣುಕುಗಳು—ಮಾತನಾಡುವದಕ್ಕೆ ಏನಾದರೊಂದು ವಿಷಯ ಹುಟ್ಟುವದಕ್ಕಾಗಿ ಕೆಲವು ದೇಶೀ ಪಕ್ವಾನ್ನಗಳು—ಕೊನೆಗೆ ತಾಂಬೂಲ. ಹೀಗೆ ಈ ವಿಚಾರದಲ್ಲಿ

ಮಗ್ನನಾಗಿದ್ದ ಆವನು ಅಡೀಲಾಳ ಕೂಡ ಮಾತನಾಡುವದನ್ನೆ ಕಡಿಮೆ ಮಾಡಿದನು. ಹಾಗೆ ಮಾಡುವದಕ್ಕೆ ಇನ್ನೂ ಒಂದು ಕಾರಣವಿತ್ತು. ಮೊದಲೇ ಅವಳ ರೂಪ ಅವನಿಗಷ್ಟೊಂದು ಸೇರಿರಲಿಲ್ಲ; ಅದರಲ್ಲಿ ಬೇರೆ ಈಗ ಅವಳು ಒಬ್ಬ ಬ್ರಿಟಿಶ್ ಅಧಿಕಾರಿಯನ್ನು ಮದುವೆಯಾಗುವವಳಿದ್ದಳು. ಇದೇ ಅವನ ಮಾತಿನ ಝರಿಯನ್ನು ಕಟ್ಟಿತ್ತು.

ಅಡೀಲಾಳಿಗೂ ಅವನೊಡನೆ ಮಾತನಾಡುವ ಮನಸ್ಸಿರಲಿಲ್ಲ. ಅವಳ ಮನಸ್ಸೆಲ್ಲ ತನ್ನ ಮದುವೆಯ ಕಡೆಗೇ ಹೋಗಿತ್ತು. ಮುಂದಿನ ವಾರ ಸಿಮ್ಲಾಕ್ಕೆ—ಅಲ್ಲಿಂದ ಎಂಟೊನಿಯನ್ನು ತೆಗೆಯುವದು—ಆ ತಿಬೇಟದ ದೃಶ್ಯ ವನ್ನು ನೋಡುವದು—ಕಿವಿಗೆ ಬೇಸರ ಹಿಡಿಸುವಂತೆ ಚರ್ಚಿನ ಆ ಗಂಟೆಯ ಸಪ್ಪಳ—ಮುಂದೆ ಅಕ್ಟೋಬರದಲ್ಲಿ ಆಗ್ರಾಕ್ಕೆ—ಮೂರಳನ್ನು ಮುಂಬಯಿ ವರೆಗೆ ಹೋಗಿ ಕಳಿಸಿ ಬರುವದು—ಹೀಗೆಯೆ ಅದೆಷ್ಟೋ ದೃಶ್ಯಗಳದೊಂದು ಮೆರೆವಣಿಗೆಯೆ ಅವಳ ಕಣ್ಣೆದುರಿಗೆ ಹಾಯ್ದು ಹೋಯಿತು. ಇದಾದ ಮೇಲೆ ಅವಳ ಮನಸ್ಸು ಚಂದ್ರಪುರದಲ್ಲಿಯ ತನ್ನ ಮುಂದಿನ ನಿತ್ಯಸಂಸಾರಜೀವನದ ಕಡೆಗೆ ಹೊರಳಿತು; ಆ ಜೀವನದಲ್ಲಿಯ ತೊಡಕುಗಳನ್ನು ನೆನೆದು ಅವುಗಳನ್ನು ಎದುರಿಸುವ ಯುಕ್ತಿಗಳನ್ನು ಹುಡುಕಹತ್ತಿತು. ತನ್ನ ದಾಂಪತ್ಯಜೀವನವು ರಸಮಯವಾಗಬೇಕಾದರೆ ಸಮರಸಭಾವವು ಹುಟ್ಟಬೇಕೆಂದೂ ತನ್ನ ಸೀಡಕುತನವು ಹೋಗಬೇಕೆಂದೂ ತನ್ನ ತಿಳಿವಳಿಕೆ ಹೆಚ್ಚಾಗಬೇಕೆಂದೂ ತಾನೇ ಸೋತುನಡೆಯಬೇಕೆಂದೂ ಅವಳು ಬಯಸಿದಳು.

ಡಬ್ಬ ಹಾಕಿದ ಹರಿವಾಣದಂತಿದ್ದ ಆ ಬಂಡೆಗಲ್ಲಿನ ಮೇಲೆ ಉಬ್ಬಸ ಬಡುತ್ತ ಏರಿ ಹೋಗುತ್ತಿರುವಾಗ ಅವಳು 'ಹಾಗಾದರೆ ಈ ಪ್ರೇಮದ ಗತಿ ಏನು?' ಎಂಬುವನ್ನೇ ಆಳವಾಗಿ ಯೋಚಿಸುತ್ತಿದ್ದಳು. ಇದೇ ಹೊತ್ತಿಗೆ 'ನಾನು ನಿಮ್ಮನ್ನು ಬಹಳ ಅವಸರವಾಗಿ ಕರೆದೊಯ್ಯುತ್ತಿರುವೆನೇನು?' ಎಂದು ಅವಳು ತನ್ನ ಮುಖದ ಮೇಲೆ ಒಂದು ಸಂದಿಗ್ಧಭಾವವನ್ನು ಮೂಡಿಸಿ ನಿಂತುದನ್ನು ನೋಡಿ ಅಝೀಜನು ಕೇಳಿದನು.

ಏಣಿ ಏರುವಾಗ ಏಣಿ ಕತ್ತರಿಸಿದಂತಾಯಿತು ಅಝೀಜನ ಈ ಪ್ರಶ್ನೆ ಯಿಂದ ಅವಳಿಗೆ.

ತಾನು ಮದುವೆಯಾಗಲಿರುವ ಮನುಷ್ಯನನ್ನು ಪ್ರೀತಿಸದೆ ಇರುವದೇ? ಆ ವಿಷಯವಾಗಿ ಒಮ್ಮೆಯಾದರೂ ತನ್ನನ್ನು ತಾನೇ ಕೇಳಿಕೊಳ್ಳದೆ ಇರುವದೇ? ಆ ಮಾತನ್ನೆ ಹುಗಿದು ಬೇರೆ ವಿಚಾರ ಮಾಡುವದೇ? ಎಂದು ಗಾಬರಿಗಿಂತ ಹೆಚ್ಚು ಖತಿಗೊಂಡು ಅವಳು ಆ ಹೊಳೆಹೊಳೆವ ಬಂಡೆಗಲ್ಲಿನ ಮೇಲೆಯೆ ದೃಷ್ಟಿಯನ್ನಿಟ್ಟು ಸುಮ್ಮನೆ ನಿಂತಿದ್ದಳು. ಅಂದಿನಂತೆ ಹಾಗೆಯೆ ಮೂರುಸಂಜೆ ಇದೆ; ಅವನ ಬಗ್ಗೆ ಅಂದಿನ ಅದೇ ಗೌರವಭಾವ ಇದೆ; ಆ ಶರೀರಸ್ಪರ್ಶದ ನೆನಪೂ ಅಚ್ಚಳಿಯದಿದೆ; ಆದರೆ ಇವಷ್ಟನ್ನೂ ಸಂಯೋಜಿಸುವ ಆ ರಸಭಾವವು ಮಾತ್ರ ಮಾಯವಾಗಿದೆ. ಈಗೇನು ಅವಳು ತನ್ನ ಮದುವೆಯ ನಿಶ್ಚಯವನ್ನು ಮುರಿದುಕೊಳ್ಳಬೇಕೇ? ಹಾಗೆ ಮಾಡಿದರೆ ಸುಮ್ಮನೆ ಎರಡನೆಯವರಿಗೆ ತೊಂದರೆಯಾಗುವದೆಂದೂ ಮೇಲಾಗಿ ಮದುವೆಗೆ ಪ್ರೇಮವು ಬೇಕೇಬೇಕೆಂದು ಅವಳಿಗಿನ್ನೂ ಮನವರಿಕೆಯಾಗದ್ದರಿಂದಲೂ ಒಂದು ವೇಳೆ ಹಾಗೆ ಏನಾದರೂ ಇದ್ದರೆ ಈ ಮದುವೆಗಳ ಬಂಧನವು ಶೋಭನವನ್ನು ದಾಟುತ್ತಲೆ ಇರಲಿಲ್ಲವೆಂದು ಅವಳ ತಿಳಿವಳಿಕೆ ಇದ್ದುದರಿಂದಲೂ ಅವಳ ಮನಸ್ಸು ಹೀಗೊಮ್ಮೆ ಹಾಗೊಮ್ಮೆ ಹೊಯ್ದಾಡಿ ಕೊನೆಗೆ ಮದುವೆಯನ್ನು ಮುರಿದುಕೊಳ್ಳಬಾರದೆನ್ನುವದರ ಕಡೆಗೇ ಒಲಿದು ನಿಂತಿತು.

'ಇಲ್ಲ, ಇಲ್ಲ; ನನಗೇನೂ ಆಯಾಸವಾಗಿಲ್ಲ' ಎಂದು ಅವಳು ಅಝೀಜನ ಪ್ರಶ್ನೆಗೆ ಉತ್ತರ ಕೊಟ್ಟು ತನ್ನ ಮನಸ್ಸಿನಲ್ಲಿಯ ತೂಗಾಟವನ್ನು ನಿಲ್ಲಿಸಿ ಮತ್ತೆ ಮೇಲಕ್ಕೇರಹತ್ತಿದಳು. ಅಝೀಜನು ಅವಳಿಗೆ ತನ್ನ ಕೈಯ ಆಸರವನ್ನು ಕೊಟ್ಟನು. ಆ ಹಾದಿ-ತೋರಿಸುವವನು ಹಲ್ಲಿಯಂತೆ ನೆಲಕ್ಕೆ ಅಂಟಿಕೊಂಡು ಸರಸರ ಮುಂದೆ ಓಡಹತ್ತಿದನು.

'ಡಾಕ್ಟರ ಅಝೀಜ! ನಿಮಗೆ ಮದುವೆಯಾಗಿದೆಯೇ?' ಎಂದು ಮತ್ತೆ ನಿಂತು ಸ್ವಲ್ಪ ಮೋರೆ ಗಂಟುಹಾಕಿ ಕೇಳಿದಳು.

'ಹೌದು; ಆಗಿದೆ. ನನ್ನ ಹೆಂಡತಿಯನ್ನು ನೋಡಲಿಕ್ಕೆ ನೀವು ಬರಲೇಬೇಕು' ಎಂದು ತನ್ನ ಸತ್ತ ಹೆಂಡತಿಯು ಜೀವಂತ ಇರುವಳೆಂದೇ ಕಲ್ಪಿಸಿಕೊಂಡು ಉತ್ತರವಿತ್ತನು.

'ಒಳ್ಳೆಯದು, ಆಗಲಿ' ಎಂದು ಲಕ್ಷ್ಯವಿಲ್ಲದೆ ನುಡಿದುಬಿಟ್ಟಳು.

'ಅವಳೀಗ ಚಂದ್ರಪುರದಲ್ಲಿಲ್ಲ.'

'ನಿಮಗೆ ಮಕ್ಕಳಿವೆಯೇ ?'

'ಇವೆ; ಮೂರು.'

'ನಿಮಗೆ ಅವರಿಂದ ಸುಖವಿದೆಯೇ ?'

'ಇರದೆ ಏನು! ಇರುವದು ಸ್ವಾಭಾವಿಕವೇ.'

'ನಾನೂ ಹಾಗಿರಬೇಕೆಂದೇ ತಿಳಿದುಕೊಂಡಿದ್ದೆ.'

'ಇವನು ಎಂತಹ ಚೆಲುವ! ಇವನ ಹೆಂಡಿರುಮಕ್ಕಳೂ ನಿಶ್ಚಯ ವಾಗಿ ಚೆಲುವರಿರಲಿಕ್ಕೇ ಬೇಕು. ಯಾಕಂದರೆ ಸಾಧಾರಣವಾಗಿ ಅವರವರ ತಕ್ಕಂತೆ ಅವರವರ ಒಳಗ ಇರುತ್ತದೆ' ಹೀಗೆಂದುಕೊಂಡು ಅವಳು—ತೀರ ತನ್ನ ಅಂತಃಪ್ರೀತಿಯಿಂದಲ್ಲದಿದ್ದರೂ— ತನ್ನ ಜಾತಿಯ ಮತ್ತು ಸ್ಥಿತಿಯ ಹೆಂಗಸರನ್ನೂ ಅವನು ಆಕರ್ಷಿಸಬಹುದೆಂಬ ಭಾವದಿಂದ ಅವನನ್ನು ಗೌರವಿ ಸಿದಳು. ಮತ್ತು ತನ್ನಲ್ಲಿಯೂ ರೋನಿಯಲ್ಲಿಯೂ ಆ ತರಹದ ರೂಪ ಸೌಂದರ್ಯವಿಲ್ಲದ್ದನ್ನು ಕಂಡುಕೊಂಡು ಒಳಗಿಂದೊಳಗೇ ಚಡಪಡಿಸಿದಳು. 'ಏನು ಇವನ ಚೆಲುವು! ಕಪ್ಪು ದಟ್ಟ ಕೂದಲು; ನಗೆಮುಖ; ಅಂದವಾದ ಮೈಬಣ್ಣ; ವಿಲಾಸದ ನಡಿಗೆ; ಬಹುಶಃ ಇವನಿಗೆ ಬಹಳ ಜನ ಹೆಂಡಂದಿರ ಬೇಕು. ಮುಸಲ್ಮಾನರಲ್ಲಿ ನಾಲ್ಕು ಮಂದಿ ಹೆಂಡಂದಿರನ್ನು ಮಾಡಿಕೊಳ್ಳು ತ್ತಾರೆಂದು ಮಿಸೆಸ್ ಟರ್ಟನ್ನಳು ಹೇಳುತ್ತಿದ್ದಳು....' ಎಂದು ಮನ ದಲ್ಲಿಯೆ ಮಾತನಾಡಿಕೊಂಡು ತಾವು ನಿಂತ ಆ ಅಜರಾಮರ ಬಂಡೆಗಲ್ಲಿನ ಮೇಲೆ ಮತ್ತಾರೂ ಇಲ್ಲದ್ದರಿಂದ ಅವಳು ಅದೇ ಮದುವೆಯ ವಿಷಯವನ್ನೇ ಮುಂದರಿಸುವ ಕುತೂಹಲದಿಂದ 'ನಿಮಗೆ ಒಬ್ಬಳೇ ಹೆಂಡತಿ ಇದ್ದಾಳೋ ಅಥವಾ ಹೆಚ್ಚು ಇದ್ದಾರೋ ?' ಎಂದು ಕೇಳಿದಳು.

ಈ ಪ್ರಶ್ನೆಯು ಆ ತರುಣನಿಗೆ ಗುಂಡಿನಂತೆ ಹೋಗಿ ತಾಗಿತು. ಅವನಲ್ಲಿ ತನ್ನ ಸಮಾಜದ ಒಗ್ಗೆ ಹೊಸದಾಗಿ ಹುಟ್ಟಿದ್ದ ಹೊಸ ನಂಬಿಕೆಯ ಬುಡವನ್ನೇ ಇದು ಅಲುಗಾಡಿಸಿತು. ಅವಳು ಹಾಗೆ ಕೇಳುವದರ ಬದಲು 'ನೀನು ಒಬ್ಬ ದೇವನನ್ನು ಪೂಜಿಸುತ್ತೀಯಾ? ಇಲ್ಲವೆ ಅನೇಕ ದೇವರನ್ನು ಪೂಜಿಸು ತ್ತೀಯಾ?' ಎಂದು ಕೇಳಿದ್ದರೆ ಅವನ ಅಡ್ಡಿಯಿರಲಿಲ್ಲ. ಆದರೆ ಒಬ್ಬ ಸುಶಿಕ್ಷಿತ ಹಿಂದೀ ಮುಸಲ್ಮಾನನಿಗೆ 'ನಿನಗೆ ಎಷ್ಟು ಮಂದಿ ಹೆಂಡಂದಿರು?' ಎಂದು ಕೇಳುವದು ಅವನನ್ನು ಅವಮಾನ ಮಾಡಿದಂತೆ, ಛೇಡಿಸಿದಂತೆ! ಅಝೀಜನು

ತನ್ನ ಮನಸ್ಸಿನ ಉದ್ವೇಗವನ್ನು ತಡೆಹಿಡಿಯಲು ಹವಣಿಸಿದನು. 'ನನಗೆ ಮಾತ್ರ ಒಬ್ಬಳೇ' ಎಂದು ತಡವರಿಸುತ್ತ ಹೇಳಿ ಅವಳ ಕೈಯನ್ನು ಬಿಡಿಸಿಕೊಂಡು ಆ ದಾರಿಯ ತುದಿಗಿದ್ದ ಗುಹೆಯೊಂದರಲ್ಲಿ 'ಎಷ್ಟು ಒಳ್ಳೆಯವರಿದ್ದೇನು? ಈ ಇಂಗ್ಲೀಷರ ಮುಖಕ್ಕೆ ಬೆಂಕಿ ಹಚ್ಚಲಿ!' ಎಂದುಕೊಳ್ಳುತ್ತ ತನ್ನ ತೂಕ ತಪ್ಪಿದ ಮನಸ್ಸನ್ನು ಸರಿಮಾಡಿಕೊಳ್ಳುವದಕ್ಕಾಗಿ ಹೊಕ್ಕನು. ಅವಳೂ ಸಾವಕಾಶವಾಗಿ—ತಾನು ಅವನಿಗೆ ಆಡಬಾರದ್ದನ್ನು ಆಡಿದೆನೆಂಬ ಪರಿವೆಯಿಲ್ಲದೆ—ಅವನ ಬೆನ್ನ ಹಿಂದೆಯೇ ಹೋದಳು. ಅಲ್ಲಿ ಅವನನ್ನು ಕಾಣದೆ ಇನ್ನೊಂದು ಯಾವುದೋ ಗುಹೆಯಲ್ಲಿ ಅರ್ಧಮನಸ್ಸಿನಿಂದ 'ಈ ನೋಡುವುದು ಸಾಕಾಯಿತು!' ಎಂದೂ ಇನ್ನರ್ಧಮನಸ್ಸಿನಿಂದ ತನ್ನ ಮದುವೆಯ ವಿಷಯವನ್ನೆಲ್ಲ ನೆನೆಸುತ್ತಲೂ ಹೊಕ್ಕಳು.

—

## ಪ್ರಕರಣ ೧೬

ಅಝೀಜನು ತಾನು ಹೊಕ್ಕಿದ್ದ ಗುಹೆಯಲ್ಲಿ ಒಂದು ನಿಮಿಷ ನಿಂತು 'ಈ ಬೇಸರದ ಬಲೆಯಿಂದ ಪಾರಾಗಲಿಕ್ಕೆ ಅಲ್ಲಿ ಓಡಿಹೋಗಿದ್ದೆ' ಎಂದೊ ಅಥವಾ ಹೀಗೆಯೆ ಏನೋ ಒಂದು ನೆವ ಹೇಳಲಿಕ್ಕೆ ಅವಕಾಶವಿರಲೆಂದು ಒಂದು ಸಿಗರೇಟು ಹಚ್ಚಿದನು. ಸೇದುವದನ್ನು ಮುಗಿಸಿ ಮುಖ ಕೆಳಗೆ ಮಾಡಿಕೊಂಡು ನಿಂತಿದ್ದ ಆ ದಾರಿ-ತೋರಿಸುವವನನ್ನು ನೋಡಿದನು. ಅವನು ಯಾವುದೋ ಒಂದು ಸಪ್ಪಳವನ್ನು ಕೇಳುತ್ತಿರುವಂತೆ ಕಂಡಿತು. ಅಷ್ಟರಲ್ಲಿ ಅಝೀಜನಿಗೂ ಆ ಸಪ್ಪಳ ಕೇಳಿಸಿತು. ಒಂದು ಕ್ಷಣದ ಮೇಲೆ ಅದು ಮೋಟರ ಕಾರಿನ ಸಪ್ಪಳವೆಂದು ಅವನಿಗೆ ಗೊತ್ತಾಯಿತು. ನೋಡಬೇಕೆಂದು ಹೊರಗೆ ಬಂದನು. ಒಮ್ಮೆಲೆ ಕಾಣಿಸಲಿಲ್ಲ. ಒಂದು ಇಪ್ಪತ್ತು ಯಾರ್ಡು ಮುಂದೆ ಹೋಗಲಾಗಿ ಅವನಿಗೆ ಕೆಳಗಿನ ಆ ಇಡಿ ವಿಸ್ತಾರವಾದ ಬೈಲೇ ಕಾಣಿಸಿತು. ಚಂದ್ರಪುರದ ದಾರಿಯಿಂದ ತಾವಿದ್ದ ಗುಡ್ಡದ ಕಡೆಗೇ ಒಂದು ಕಾರು ಬರುತ್ತಿತ್ತು. ಕಡಿದಾದ ಬಂಡೆಗಲ್ಲೊಂದು ಮುಂದೆ ಚಾಚಿ ಬಂದಿದ್ದರಿಂದ ಅದು ಅವನಿಗಷ್ಟು ಸ್ಪಷ್ಟವಾಗಿ ಕಾಣಿಸಲಿಲ್ಲ. 'ಕಾರು' ಗುಡ್ಡದ ತೀರ ಸಮೀಪಕ್ಕೆ ಬಂದ ಹಾಗೆ ಕಾಣದಾಯಿತು. ಅದು ಸರಿಯಾಗಿ ಅವನು

ನಿಂತಿದ್ದ ಬಂಡೆಯು ಕೆಳಗೇ ಬಂದು ನಿಲ್ಲುವದಿತ್ತು. ಯಾಕಂದರೆ ಅಲ್ಲಿಗೇ ಆ ಪಕ್ಕಾ ರಸ್ತೆ ಮುಗಿದು ಕಾಲುದಾರಿ ಸುರುವಾಗುತ್ತಿತ್ತು.

ಅಝೀಜನು ಈ ಸುದ್ದಿಯನ್ನು ಅಡೀಲಾಳಿಗೆ ತಿಳಿಸಬೇಕೆಂದು ಹಿಂದಕ್ಕೆ ತಾವು ನಿಂತಲ್ಲಿಗೆ ಓಡಿದನು. ಅಲ್ಲಿ ಅವಳಿರಲಿಲ್ಲ. ದಾರಿ-ತೋರಿಸುವವನು 'ಅವಳು ನಿಮ್ಮ ಬೆನ್ನಹಿಂದೆಯೆ ನೀವು ಹೊಕ್ಕ ಗುಹೆಯಲ್ಲಿಯೆ ಹೊಕ್ಕಳು' ಎಂದು ಹೇಳಿದನು.

'ಯಾವ ಗುಹೆ?'

ಅವನು ಅಸ್ಪಷ್ಟವಾಗಿ ಆ ಗುಹೆಗಳ ಸಾಲನ್ನೇ ತೋರಿಸಿದನು.

'ನೀನು ಯಾವಾಗಲೂ ಅವಳ ಕಣ್ಣಳತೆಯಲ್ಲಿರಬೇಕಾಗಿತ್ತಲ್ಲವೇ?' ಎಂದು ಅಝೀಜನು ಒಗರಿನಿಂದ ಹೇಳಿ 'ಇಲ್ಲಿ ಕನಿಷ್ಟಕ್ಕೆ ಹನ್ನೆರಡು ಗುಹೆಗಳಿವೆ. ಇವುಗಳಲ್ಲಿ ಅವಳು ಇದ್ದದ್ದು ಯಾವುದು, ನಾನು ಹೋಗಿದ್ದು ಯಾವುದು, ಎಂಬುದು ನನಗೆ ಹೇಗೆ ಗೊತ್ತಾಗಬೇಕು?' ಎಂದು ಕೇಳಿದನು.

ಮತ್ತೆ ಅವನು ಮೊದಲಿನಂತೆ ಅಸ್ಪಷ್ಟವಾಗಿ ಅತ್ತ ಕಡೆಗೆ ಕೈಮಾಡಿ ತೋರಿಸಿದನು. ಅಝೀಜನು ಅತ್ತ ಕಡೆಗೆ ನೋಡಿದನು. ಅವನಿಗೆ ತಾನು ಹೊಕ್ಕಿದ್ದ ಗುಹೆಯು ಗುರುತು ಸಿಗಲಿಲ್ಲ. ಅವನಿಗೆ ಎಲ್ಲ ದಿಕ್ಕಿನಲ್ಲಿಯೂ ಗುಹೆಗಳೇ ಕಂಡವು; ನೋಡಿದರೆ ಅವೆಲ್ಲ ಒಂದೇ ಮಾದರಿಯವು ಬೇರೆ. 'ಪರವರದಿಗಾರ! ಕ್ವೆಸ್ಟೆಡ್‌ಳು ತಪ್ಪಿಸಿಕೊಂಡಳು!' ಎಂದು ಧೈರ್ಯಗೆಟ್ಟು ಅತ್ತ ಇತ್ತ ಅಲೆದಾಡಿ ಅವಳನ್ನು ಹುಡುಕಹತ್ತಿದನು. ಮತ್ತು 'ಕೂಗಿರಿ' ಎಂದು ಆಳಿಗೆ ಆಜ್ಞೆಮಾಡಿದನು.

ಸ್ವಲ್ಪ ಹೊತ್ತು ಹೀಗೆ ಕೂಗಾಡುವದಾದ ಮೇಲೆ ಆ ದಾರಿ-ತೋರಿಸುವವನು 'ಯಪ್ಪಾ, ಇದೆಲ್ಲ ಯಾತಕ್ಕೂ ಮುಟ್ಟೂದಿಲ್ಲರಿ; ಈ ಗುಡ್ಡದಾಗಿನ ಗವಿ ತಮ್ಮದು ಬಿಟ್ಟು ಯಾರ ಮಾತೂ ಕೇಳಾಣಿಲ್ಲರೀ' ಎಂದು ಹೇಳಿದ. ಅಝೀಜನು ಅತ್ತ ಕಡೆಗೆ ಲಕ್ಷ್ಯಕೊಡದೆ ತನ್ನ ತಲೆಬೆವರನ್ನೊರಿಸಿಕೊಂಡನು. ಎಷ್ಟು ಒರಸಿಕೊಂಡರೂ ಬೆವರಿನ ನೀರು ಅವನ ಅರಿವೆಯೊಳಗಿಂದ ಇನ್ನೂ ಹರಿಯುತ್ತಿತ್ತು. ಯಾವ ಗುಹೆಯಲ್ಲಿ ಹೋದರೂ ಅವನಿಗೆ ದಿಕ್ಕು ತಪ್ಪಿಹೋಗುತ್ತಿತ್ತು. ಎಷ್ಟೋ ಹೊತ್ತಿನವರೆಗೆ ಹೀಗೆಯೆ ಅಲೆದಾಡಿ ಕೊನೆಗೆ ಬೇಸತ್ತು ಆ ಆಳನ್ನು 'ಇಲ್ಲಿ ಬಾ' ಎಂದು ಕರೆದನು. ಆಳವಿನಲ್ಲಿ

ಬಂದ ಕೂಡಲೆ ಅವನ ಕೆನ್ನೆಗೊಂದು ಬಿಗಿದನು. ಕೂಡಲೆ ಅವನು ಅಲ್ಲಿಂದ ಓಡಿಯೆ ಹೋದನು. ಮತ್ತೆ ಅಝೀಜನು ಒಬ್ಬನೇ ಆದನು. 'ಆಯಿತು, ಇದ್ದೇ ನನ್ನ ಜೀವನದ ಕೊನೆ! ನನ್ನ ಅತಿಥಿ ಅಡೀಲಾ ತಪ್ಪಿಸಿಕೊಂಡು ಹೋಗಿಬಿಟ್ಟಳು! ಇನ್ನೇನು ಮಾಡಬೇಕು?' ಎಂದು ಗಾಬರಿಯಿಂದ ಅವನು ನಡುಗಹತ್ತಿದನು. ಅಷ್ಟರಲ್ಲಿ ಕೆಳಗೆ ಕೊರಕಲದಲ್ಲಿ ಒಂದು ಹೆಣ್ಣಿನ ರೂಪ ಚಮಕ್ಕೆಂದು ಅವನಿಗೆ ಹೊಳೆದಂತಾಯಿತು. ಕುತೂಹಲದಿಂದ ಬಾಗಿ ನೋಡಿದ. ಅಡೀಲಾ ಇನ್ನೊಬ್ಬ ಯಾವುದೋ ಸ್ತ್ರೀಯೊಡನೆ ಮಾತನಾಡುತ್ತ ನಿಂತಿದ್ದಳು. ಆಗ ಅವನಿಗೆ ತನ್ನ ತಲೆಭಾರ ಇಳಿದಷ್ಟು ಹಗುರೆನಿಸಿತು. ಅಲ್ಲಿಂದ ನಿಧಾನವಾಗಿ ಅವನು ತಮ್ಮ ವಸ್ತಿಯಿದ್ದ ಕಡೆಗೆ ಹೊರಟನು. ದಾರಿಯಲ್ಲಿ ಒಂದು ಗುಹೆಯ ಹತ್ತಿರ ಕ್ವೆಸ್ಟೆಡ್‌ಳ ದುರ್ಬಿಣಿಯು ಅಸ್ತವ್ಯಸ್ತ ವಾಗಿ ಬಿದ್ದುದನ್ನು ಕಂಡನು. ಕೂಡಲೆ ಅದನ್ನು ತನ್ನ ಹೆಗಲ ಮೇಲೆ ಜೋತುಹಾಕಿಕೊಳ್ಳಬೇಕೆಂದು ಹವಣಿಸಿದನು. ಆದರೆ ಅದರ ತೊಗಲ ಪಟ್ಟಿಯು ಹರಿದುಹೋಗಿದ್ದರಿಂದ ಅದನ್ನು ಜೇಬಿನಲ್ಲಿಯೆ ಇಟ್ಟುಕೊಂಡನು. ಸ್ವಲ್ಪ ಮುಂದೆ ಹೋಗುವಷ್ಟರಲ್ಲಿ ಅವನಿಗೆ ಅವಳು ಮತ್ತೇನಾದರೂ ಬಿಟ್ಟಿರ ಬಹುದೆಂಬ ವಿಚಾರ ಹೊಳೆದು ಅವನು ಮತ್ತೆ ಹಿಂದಕ್ಕೆ ತಿರುಗಿದನು. ಆದರೆ ಅವನಿಗೆ ಮತ್ತೆ ಮೊದಲಿನ ತೊಡಕೇ ಬಂದು ನಿಂತಿತು; ಯಾವ ಗುಹೆ ಯೆಂಬುದು ಗೊತ್ತಾಗಲಿಲ್ಲ. ಅದೇ ಹೊತ್ತಿಗೆ ಕೆಳಗಿನ ಬೈಯಲಿನಿಂದ ಕಾರು ಹೊರಡುವ ಸಪ್ಪಳವು ಅವನಿಗೆ ಕೇಳಬಂತು. ನೋಡಬೇಕೆಂದರೆ ಅವನ ಕಣ್ಣಿಗೇನು ಅದು ಮತ್ತೊಮ್ಮೆ ಬೀಳಲಿಲ್ಲ. ಅಲ್ಲಿಂದ ಅವನು ಆ ಕೊರಕಲ ಗುಂಟ ಇಳಿದು ಮಿಸೆಸ್ ಮೂರಳಿದ್ದ ಕಡೆಗೆ ಸಾಗಿದನು.

ಅಲ್ಲಿ ಬಂದು ನೋಡಲಾಗಿ 'ಕ್ಯಾಂಪಿ'ನ ಸ್ವರೂಪವೇ ಬದಲಾಗಿ ಹೋಗಿತ್ತು. ನಾಲ್ಕಾರು ಜನರ ಮಧ್ಯದಲ್ಲಿ ಇಂಗ್ಲೀಷ ಮನುಷ್ಯನ ಟೊಪ್ಪಿಗೆಯೊಂದು ಅವನಿಗೆ ಕಾಣಿಸಿತು. ಹತ್ತಿರ ಹೋಗಿ ನೋಡಲಾಗಿ ಆ ಟೊಪ್ಪಿಗೆಯೊಳಗಿಂದ ಫೀಲ್ಡಿಂಗನ ಮುಗುಳು ನಗೆಯ ಮುಖವು ಹೊರ ಬಿದ್ದು ಹೆಸ್ಲೊಪನೇ ಇರಬಹುದೆಂಬ ಅವನ ಊಹೆಯನ್ನು ತಪ್ಪಿಸಿತು.

'ಫೀಲ್ಡಿಂಗ್! ಓ! ನಿನ್ನ ಅಗತ್ಯವೆಷ್ಟಿತ್ತೆನ್ನಲಿ!' ಎಂದು 'ರಿ' ಬಿಟ್ಟೇ ಕೂಗಿದನು.

ಫೀಲ್ಡಿಂಗನೂ ಉಲ್ಲಾಸದಿಂದ, ಏನೂ ಆಶ್ಚರ್ಯ ತೋರಿಸದೆ, ತನಗೆ ಗಾಡೀ ತಪ್ಪಿದ್ದರ ಸಂಬಂಧದಲ್ಲಿ ಕಾರಣ ಹೇಳುತ್ತಲೂ ಅದಕ್ಕಾಗಿ ಕ್ಷಮೆ ಬೇಡುತ್ತಲೂ ಅವನ ಕಡೆಗೆ ಓಡಿಬಂದನು.

'ಫೀಲ್ಡಿಂಗ್! ಹೇಗೆ ಬಂದೆ?'

'ಮಿಸ್ ಡೆರೆಕ್ಕಳ ಕಾರಿನಲ್ಲಿ.'

ಅವರ ಊಟಿನ ಕಟಪಟ ಕಟಪಟ ಸಪ್ಪಳಕ್ಕೆ ಅಡಿಗೆಯವರು ಅಡಿಗೆ ಮಾಡುವದನ್ನು ಬಿಟ್ಟು ಹೊರಕ್ಕೆ ಬಂದರು.

'ಡೆರೆಕ್ಕಳು ಪೋಸ್ಟ ಆಫೀಸಿನಲ್ಲಿ ನನ್ನನ್ನು ಅಕಸ್ಮಾತ ಕಂಡಳು. 'ಯಾಕೆ ಮಾರವಾರಕ್ಕೆ ಹೋಗಲಿಲ್ಲ?' ಎಂದು ಕೇಳಿದಳು. ನಾನು ಗಾಡೀ ತಪ್ಪಿಸಿಕೊಂಡ ಕಥೆಯನ್ನೆಲ್ಲ ಹೇಳಿದೆ. ಅದನ್ನು ಕೇಳಿ ತಾನೇ ಇಲ್ಲಿಯವರೆಗೆ ಕರೆದುಕೊಂಡು ಬರುವದಾಗಿ ಹೇಳಿದಳು. ನಾನೂ ಹುಂ ಎಂದೆ.'

'ಒಳ್ಳೆಯ ಹೆಣ್ಣುಮಗಳು ಪಾಪ! ಅವಳೀಗ ಎಲ್ಲಿದ್ದಾಳೆ?'

'ಕಾರು ನಿಂತಲ್ಲಿ ಶಾಫರನೊಟ್ಟಿಗಿದ್ದಾಳೆ. ನಾನೊಬ್ಬನೇ ಇತ್ತ ಬಂದಿದ್ದೇನೆ. ಕಾರಂತೂ ಮೇಲೆ ಬರುವ ಹಾಗೆಯೇ ಇಲ್ಲ.'

'ಸಹಜವಿದೆ; ಹೇಗೆ ಬರಬೇಕು ಡೆರೆಕ್ಕಳಿರುವಾಗ? ಶಕ್ಯವೇ ಇಲ್ಲ. ಅವಳನ್ನೇ ಇಲ್ಲಿಗೆ ತರಬೇಕಾದರೆ ನೂರಾರು ಜನ ಬೇಕಾಗಬಹುದು; ಯಾಕಂದರೆ ಆನೆಯೇ ಅದೂ ಒಂದು!....'

'ಅಝೀಜ, ಕುಡಿಯಲಿಕ್ಕೇನಾದರೂ....?'

'ಓಹೋ!' ಎಂದು ತರಲಿಕ್ಕೆ ತಾನೇ ಒಳಕ್ಕೆ ಹೋದನು.

'ಮಿ. ಫೀಲ್ಡಿಂಗ್!' ಎಂದು ನೆರಳಲ್ಲಿ ಕುಳಿತಿದ್ದ ಮಿಸೆಸ್ ಮೂರಳು ಕರೆದಳು. ಬಂದು ಇಷ್ಟೊತ್ತಾಗಿದ್ದರೂ ಅವರಿನ್ನೂ ಮಾತಾಡಿರಲಿಲ್ಲ.

'ಓ! ನಮಸ್ಕಾರ' ಎಂದು ಉತ್ತರ ಕೊಟ್ಟನು.

'ಮಿ. ಫೀಲ್ಡಿಂಗ್! ನೀವು ಕ್ವೆಸ್ಟೆಡ್‌ಳನ್ನು ಕಂಡೀರೇನು?'

'ನಾನಿನ್ನೂ ಈಗ ಬಂದಿದ್ದೇನೆ. ಅವಳೆಲ್ಲಿದ್ದಾಳೆ?'

'ನನಗೆ ಗೊತ್ತಿಲ್ಲ; ಅಂತೇ ಕೇಳಿದೆ.'

'ಅಝೀಜ! ನೀನು ಕ್ವೆಸ್ಟೆಡ್‌ಳನ್ನು ಎಲ್ಲಿ ಬಿಟ್ಟು ಬಂದೆ?'

ಕೈಯಲ್ಲಿ ಪೇಯವನ್ನು ತೆಗೆದುಕೊಂಡು ಬರುತ್ತಿರುವ ಅಝೀಜನು

ಈ ಪ್ರಶ್ನೆಗೆ ಸ್ವಲ್ಪ ವಿಚಾರ ಮಾಡಬೇಕಾಯಿತು. ಅವನ ಅಂತಃಕರಣವೆಲ್ಲ ಹೊಸ ಸುಖದಿಂದ ತುಂಬಿ ಹೋಗಿತ್ತು. ತಾನು ಮಾಡಿಸಿದ ವನಭೋಜನವು ಮೊದಮೊದಲು ಸಪ್ಪೆಯಾದರೂ ಈಗೀಗ ರಂಗು ತುಂಬಹತ್ತಿದೆಯೆಂದು ಅವನಿಗೆನಿಸಿತು. ಫೀಲ್ಡಿಂಗನು ತಾನು ಬಂದನಿಷ್ಟೇ ಅಲ್ಲ, ಇನ್ನೊಬ್ಬರನ್ನೂ ಕರೆದುಕೊಂಡು ಬಂದನೆಂದು ಅವನಿಗೆ ಹಿಗ್ಗು.

' ಅವಳೆಲ್ಲಿಯೂ ಹೋಗಿಲ್ಲ; ಅವಳಿಗೇನೂ ಆಗಿಲ್ಲ; ಕೆಳಗೆ ಮಿಸ್ ಡೆರೆಕ್ಕಳನ್ನು ಕಾಣಲಿಕ್ಕೆ ಹೋಗಿದ್ದಾಳೆ ' ಎಂದು ಮೂರಳಿಗೆ ಉತ್ತರ ಕೊಟ್ಟೇ ಫೀಲ್ಡಿಂಗನ ಕಡೆಗೆ ಸಾಗಿದನು. ಅದೇ ಹೊತ್ತಿಗೆ ಡೆರೆಕ್ಕಳ ಶಾಫರನು ಬಂದು ತನ್ನ ಮಾಲಕಳು ಯಾವುದೋ ಒಬ್ಬ ಸ್ತ್ರೀಯೊಡನೆ ಮೋಟರಿನಲ್ಲಿ ಕೂತು ಚಂದ್ರಪುರಕ್ಕೆ ತಿರುಗಿ ಹೋದಳೆಂದೂ ಆ ಸುದ್ದಿಯನ್ನು ತಿಳಿಸಲಿಕ್ಕೇ ತನ್ನನ್ನು ಕಳಿಸಿದ್ದಾಳೆಂದೂ ಹೇಳಿದನು.

' ಹೌದು, ಹಾಗೆಯೆ ಆಗಿರಬೇಕು. ಅವರು ಒಂದು ಸುತ್ತು ಹಾಕಿಕೊಂಡು ಬರಲಿಕ್ಕೇ ಹೋಗಿರಬೇಕು ' ಎಂದು ಅಝೀಜನು ತನ್ನ ಊಹೆಯೇ ಸರಿಯಾಯಿತೆಂದು ಸಮಾಧಾನ ಮಾಡಿಕೊಂಡನು.

' ಚಂದ್ರಪುರಕ್ಕೆ ? ಹಾಗಿರಲಿಕ್ಕಿಲ್ಲ. ಇವನೇ ತಪ್ಪು ಹೇಳುತ್ತಿರಬೇಕು ' ಎಂದು ಫೀಲ್ಡಿಂಗನು ಸುರಿದನು.

' ಇ–ಲ್ಲ; ಏ–ನು ? ಯಾ–ಕೆ ? ' ಎಂದು ಅಝೀಜ ತಡವರಿಸಹತ್ತಿದ. ಅವನಿಗೆ ಫೀಲ್ಡಿಂಗನ ಮಾತಿನಿಂದ ಬಹಳ ನಿರಾಶೆಯಾಗಿತ್ತು. ಅದನ್ನು ಹೊರಗೆ ತೋರಗೊಡಬಾರದೆಂದು ಅವನು ಸುಮ್ಮನೆ ಒಳಗೆ ಅಡಿಗೆಯನ್ನು ನೋಡುವ ನೆವದಿಂದ ಹೊರಟುಹೋದನು.

' ಏನೋ ಆಗಿದೆ ! ' ಎಂದು ಫೀಲ್ಡಿಂಗನೂ ಇಷ್ಟರಿಂದಲೆ ಕಳೆಹಿಡಿದು ತನಗೆ ತಾನೆ ಎಂದುಕೊಂಡನು. ಮಿಸ್ ಡೆರೆಕ್ಕಳು ದಾರಿಯುದ್ದಕ್ಕೂ ಈ ವನಭೋಜನದ ವಿಷಯವನ್ನೇ ಮಾತನಾಡುತ್ತ ಬಂದಿದ್ದಳು. ಔತಣ ಕೊಟ್ಟವರಕಿಂತ ಔತಣ ಕೊಡದಿದ್ದ ಹಿಂದೀ ಜನರ ಕಡೆಗೆ ಹೋಗುವದೇ ತನಗೆ ಹೆಚ್ಚು ಸೇರುತ್ತದೆಂದೂ ಅವಳು ಹೇಳಿದ ಮಾತು ಅವನ ತಲೆಯಲ್ಲಿನ್ನೂ ತಿರುಗಾಡುತ್ತಿತ್ತು. ಅವನು ಮೂರಳ ಕಡೆಗೆ ಮತ್ತೆ ತಿರುಗಿದನು. ಅವಳು ಕುರ್ಚಿಯಲ್ಲಿ ಕಾಲನ್ನಲುಗಾಡಿಸುತ್ತ ಬಹಳ ಖಿನ್ನಮುದ್ರೆಯಿಂದ ದಿಗಿಲು

ಬಡಿದವರಂತೆ ಕುಳಿತಿದ್ದಳು. ಫೀಲ್ಡಿಂಗನು ತನ್ನ ಕಡೆಗೆ ತಿರುಗುವದೊಂದೇ ತಡ ಅವಳು 'ಮಿಸ್ ಡೆರೆಕ್ಕಳು ಮಾಡುವದು ಒಂದೂ ನನ್ನ ಮನಸಿಗೆ ಬರುವದಿಲ್ಲ; ಅವಳು ಯಾವಾಗಲೂ ಗಡಿಬಿಡಿಯಲ್ಲಿಯೆ ಇರುತ್ತಾಳೆ; ಯಾವಾಗಲೂ ಅವಳಿಗೇನಾದರೊಂದು ಹೊಸದು ಬೇಕೇಬೇಕು; ಅವಳು ಈ ಜಗತ್ತಿನಲ್ಲಿ ಬೇಕಾದಲ್ಲಿಗೆ ಹೋಗಿ ಏನು ಬೇಕಾದ್ದನ್ನೂ ಮಾಡಬಲ್ಲಳು; ಆದರೆ ಸಂಬಳ ಕೊಡುವ ಆ ಹಿಂದೀ ಸ್ತ್ರೀಯನ್ನು ಮಾತ್ರ ಬಿಡಲಾರಳು' ಎಂದು ತನ್ನ ಪುರಾಣವನ್ನೇ ಓದಿದಳು.

ಫೀಲ್ಡಿಂಗನೇನು ಮೂರಳಂತೆ ಡೆರೆಕ್ಕಳನ್ನು ಕಂಡರೆ ಅಸಹ್ಯಪಡುತ್ತಿರಲಿಲ್ಲ. ಅಂತೆಯೆ 'ನಾನವಳನ್ನು ಬಿಟ್ಟು ಬಂದಾಗ ಅವಳೇನು ಅಷ್ಟು ಗಡಿಬಿಡಿಯಲ್ಲಿರಲಿಲ್ಲ; ಚಂದ್ರಪುರಕ್ಕೆ ತಿರುಗಿ ಹೋಗುವ ಮಾತೂ ಹೊರಟಿರಲಿಲ್ಲ; ಆದರೆ ಅವಳ ಬದಲು ಮಿಸ್ ಕ್ವೆಸ್ಟೆಡ್‌ಳೇ ಗಡಿಬಿಡಿಯಲ್ಲಿದ್ದಂತೆ ನನಗೆ ತೋರುತ್ತದೆ' ಎಂದು ಅವಳ ಮಾತನ್ನು ಅವಳ ಮೇಲೆಯೆ ಹೊರಳಿಸಿದನು.

'ಅಡೇಲಾಳೇ? ಎಂದೂ ಇಲ್ಲ. ಅವಳು ತನ್ನ ಇಡಿ ಆಯುಷ್ಯದಲ್ಲಿ ಎಂದೂ ಗಡಿಬಿಡಿ ಮಾಡಿಲ್ಲ' ಎಂದು ಮುದುಕಿಯು ಸ್ವಲ್ಪ ತೀಕ್ಷ್ಣವಾಗಿಯೆ ಉತ್ತರ ಕೊಟ್ಟಳು.

'ನಾನು ಹೇಳುವದು, ಮಿಸ್ ಕ್ವೆಸ್ಟೆಡ್‌ಳ ಇಚ್ಛೆ ಹಾಗಿರಬಹುದೆಂದು; ಅದೇಕೆ, ಹಾಗೆಯೆ ಇದೆ ಎಂದೂ ನನಗೆ ಗೊತ್ತಿದೆ' ಎಂದು ಫೀಲ್ಡಿಂಗನೂ ಛಲ ಹಿಡಿದನು. ಅವನಿಗೆ ಮೊದಲೇ ನೋವಾಗಿತ್ತು. ಗಾಡೀ ತಪ್ಪಿಸಿಕೊಳ್ಳುವದರಿಂದ—ಇಂಥ ಪಾಪವನ್ನು ಅವನೆಂದೂ ಮಾಡಿರಲಿಲ್ಲ—ಅದು ಮೊದಲಾಗಿ, ಈಗ ಇಲ್ಲಿಗೆ ಬಂದ ಮೇಲೂ ಅಝೀಜನ ವ್ಯವಸ್ಥೆಯಲ್ಲಿ ಮತ್ತೆ ಅವ್ಯವಸ್ಥೆ ಹುಟ್ಟಿಸುವದರಲ್ಲಿ ಕೊನೆಗಂಡಿತು. ಈ ತನ್ನ ತಪ್ಪಿನಲ್ಲಿ ತನಗೆ ಯಾರಾದರೂ ಪಾಲುಗಾರರು ಇರಬೇಕೆಂದು ಅವನು ಮಿಸೆಸ್ ಮೂರಳ ಮೇಲೆ ಈ ರೀತಿಯಾಗಿ ಹರಿಹಾಯ್ದನು. ಕೊನಗೆ 'ಅಝೀಜ ಬಹಳ ಒಳ್ಳೆಯ ಹುಡುಗ!' ಎಂದು ಮಾತು ಮುಗಿಸಿದನು.

'ಅದೆಲ್ಲ ನನಗೆ ಗೊತ್ತಿದೆ' ಎಂದು ಆಕಳಿಸುತ್ತ ಉತ್ತರ ಕೊಟ್ಟಳು.

'ಈ ವನಭೋಜನವು ಚೆನ್ನಾಗಿ ಆಗಬೇಕೆಂದು ಅವನು ಅನಂತ ಶ್ರಮವನ್ನು ತೆಗೆದುಕೊಂಡಿದ್ದಾನೆ?'

ಅವರಿಬ್ಬರಿಗೂ ಪರಸ್ಪರರ ಪರಿಚಯವು ಸಾಕಷ್ಟಿರಲಿಲ್ಲ. ಆದರೆ ತಾವು ಒಬ್ಬ ಹಿಂದೀಯನ ಮುಖಾಂತರವಾಗಿ ಪರಿಚಿತರಾಗುವದಕ್ಕೆ ಅವರಿಗೆ ಏನೋ ಒಂದು ತರಹದ ಎದೆಗುಕ್ಕೆನಿಸಿತು. ಜಾತೀಯ ಪ್ರಶ್ನೆಯು ಎಂತಹ ಸೂಕ್ಷ್ಮದಲ್ಲಿಯೂ ರೂಪ ತಾಳಬಹುದು. ಅದೀಗ ಅವರಲ್ಲಿ ಅಸೂಯೆ ಸಂಶಯಗಳನ್ನು ಹುಟ್ಟಿಸಿತು. ಫೀಲ್ಡಿಂಗನು ಅವಳಲ್ಲಿ ಉತ್ಸಾಹವನ್ನು ಹುಟ್ಟಿಸಲಿಕ್ಕೆ ಎಷ್ಟೋ ಯತ್ನಿಸಿದನು. ಸಾಧ್ಯವಾಗಲಿಲ್ಲ. ಅವಳು ಮಾತ ನಾಡುವದನ್ನೇ ಕಡಿಮೆ ಮಾಡಿಬಿಟ್ಟಳು. ಅಷ್ಟರಲ್ಲಿ ಅಝೀಜನು ಬಂದು ಅವರನ್ನು ಊಟಕ್ಕೆ ಕರೆದೊಯ್ದನು.

ಅಝೀಜನು ಅವರ ಮಾತಿನ ಒಗರು, ಚುರುಕು ಕಡಿಮೆ ಮಾಡುವ ದಕ್ಕಾಗಿ 'ಮಿಸ್ ಕ್ವೆಸ್ಟೆಡ್‌ಳು ಹೀಗೆ ಮಾಡಿದ್ದು ತೀರ ಸ್ವಾಭಾವಿಕ. ನಾವು ದಾರಿ-ತೋರಿಸುವವನೊಡನೆ ಹರಟೆಹೊಡೆಯುತ್ತ ನಿಂತಿರುವಾಗ ಅವಳು ಈ ಕಾರನ್ನು ನೋಡಿದಳು. ಮತ್ತು ಕೆಳಗೆ ಬಂದು ತನ್ನ ಆ ಗೆಳತಿಯನ್ನು ಕಾಣಬೇಕೆಂದು ನಿಶ್ಚಯಿಸಿದಳು' ಎಂದು ತಾನು ಊಹಿಸಿದ್ದೆ ನಿಜವೆಂದು ತಿಳಿದು, ತನ್ನ ಮಾತಿಗೆ ಕಣ್ಣಾರೆ ಕಂಡವರ ಒಪ್ಪಹಾಕಿ ಹೇಳಿದನು. ಇದರಿಂದ ಅವನಿಗೆ ತಾನು ಮಾಡುತ್ತಿರುವ ತಪ್ಪೇ ಗೊತ್ತಾಗಲಿಲ್ಲ. ಹೀಗಾಗಲಿಕ್ಕೆ ಅವನ ಸೂಕ್ಷ್ಮಹೃದಯವೇ ಕಾರಣ. ತನ್ನಲ್ಲಿಯ ಈ ಅಳುಕಿನಿಂದಲೆ ಅವನು ಕ್ವೆಸ್ಟೆಡ್‌ಳು ತನ್ನನ್ನು 'ನಿಮಗೆಷ್ಟು ಹೆಂಡಿರು?' ಎಂದು ಕೇಳಿದ ಪ್ರಶ್ನೆಯನ್ನು ನೆನೆಸಲಿಕ್ಕೆ ಹಿಂಜರಿದದ್ದು. ಅಲ್ಲದೆ ಅವನೀಗ ಇದ್ದ ಸಂಗತಿ ಗಳನ್ನೆಲ್ಲ ಒಟ್ಟುಗೂಡಿಸಿ—ರೈತನು ಕಳೆ ಕಿತ್ತಿ ಭೂಮಿಯನ್ನು ಹದಮಾಡು ವಂತೆ ಅವರ ಮನಸಿಗೆ ಒಪ್ಪಿಗೆಯಾಗುವಂತೆ ಹದಮಾಡಿ—ತೋರಿಸಬೇಕಾ ಗಿತ್ತು. ಅಂತೆಯೆ ಅವನು ಇನ್ನೂ ಅನೇಕ ಇಂತಹ ಸುಳ್ಳುಗಳನ್ನು ಹೇಳಿ ದನು. 'ಅವಳು ತನ್ನ ಗೆಳತಿಯ ಕಡೆಗೆ ಓಡಿದಳು; ನಾನು ನನ್ನ ಗೆಳೆಯನ ಕಡೆಗೆ ಓಡಿ ಬಂದೆ. ಈಗ ನಾನು ನನ್ನ ಗೆಳೆಯನ ಹತ್ತಿರ ಇದ್ದೇನೆ; ಅವಳು ತನ್ನ ಗೆಳತಿಯ ಹತ್ತಿರ ಇದ್ದಾಳೆ; ಹೀಗೆಯೆ ಅವರವರು ಅವರವರ ಗೆಳೆಯ ರೊಡನೆ ಇದ್ದಾರೆ. ಇದೇ ಸುಖವಲ್ಲವೇ?' ಎಂದು ಏನೇನೋ ಹೇಳಿದನು.

ಆದರೆ ಇತ್ತ ಫೀಲ್ಡಿಂಗನು ತ್ವೇಷದಿಂದ 'ಈ ಹೆಣ್ಣುಮಕ್ಕಳು ಇಲ್ಲದ ತೊಂದರೆ ತರುತ್ತಾರೆಂದು ನನಗೆ ಮೊದಲೇ ಗೊತ್ತು' ಎಂದು ಗೊಣಗುವನು.

ಅತ್ತ ಮಿಸೆಸ್ ಮೂರಳೂ 'ಈ ಮನುಷ್ಯನು ತಾನು ಗಾಡೀ ತಪ್ಪಿಸಿಕೊಂಡು ಅದರ ತಪ್ಪನ್ನು ನಮ್ಮ ಮೇಲೆ ಹಾಕಲು ಹವಣಿಸುತ್ತಾನಲ್ಲವೆ!' ಎಂದು ಸಿಡಿಮಿಡಿಗೊಳ್ಳುವಳು. ಗುಹೆಯಲ್ಲಿ ಮೂರ್ಛೆ ಹೋದಾಗಿನಿಂದ ಅವಳ ವಿಚಾರಶಕ್ತಿಯೆ ಕುಗ್ಗಿಹೋಗಿತ್ತು. ಅವಳೀಗ ಒಂದು ಬಗೆಯ ಉದಾಸೀನತೆಯಲ್ಲಿ ವಿರಕ್ತಿಯಲ್ಲಿ ಮುಳುಗಿಹೋಗಿದ್ದಳು. ಅವಳು ಈ ದೇಶಕ್ಕೆ ಹೊಸದಾಗಿ ಬಂದಾಗ ತೋರಿದ ಆ ಅಗಾಧವಾದ ಹಿಂದುಸ್ತಾನವೂ ಅದರ ತಂಪು ಬೆಳದಿಂಗಳೂ ಮತ್ತು ಅನಂತದ ಭಾವನೆಯನ್ನು ಕಣ್ಣಿಗೆ ಕಟ್ಟುವ ಅದರ ಚದುರೂ ಎಲ್ಲವೂ ಈಗ ಮಾಯವಾದವು.

ಫೀಲ್ಡಿಂಗನೂ ಒಂದು ಗುಹೆಯನ್ನು ನೋಡಿ ಬರಬೇಕೆಂದು ಮೇಲೆ ಓಡಿದನು; ನೋಡಿದನು. ಮನಸ್ಸಿನ ಮೇಲೇನೂ ಪರಿಣಾಮ ಮಾಡಲಿಲ್ಲ ಅವು. ತಿರುಗಿದನು. ಅಲ್ಲಿಂದ ಎಲ್ಲರೂ ಕೂಡಿ ಆನೆಯನ್ನೇರಿ ಬಂದ ದಾರಿಯಿಂದ ಸ್ಟೇಶನ್ ಕಡೆಗೆ ಹೊರಟರು. ಬಿಸಿಲಿನ ಝಳವು ಅವರ ಮಾರಿಗೆ ಇನ್ನೂ ಉಗ್ಗುತ್ತಿತ್ತು. 'ಕಾರು' ಬಿಟ್ಟಿದ್ದ ಸ್ಥಳಕ್ಕೆ ಬಂದಾಗ ಫೀಲ್ಡಿಂಗನಿಗೆ ಒಂದು ಕೆಟ್ಟ ವಿಚಾರವು ಒಮ್ಮೆಂದೊಮ್ಮೆ ಹೊಳೆಯಿತು. ಅವನು 'ಅಝೀಜ! ನೀನು ಕ್ವೆಸ್ಟೆಡ್‌ಳನ್ನು ಹೇಗೆ ಮತ್ತು ಎಲ್ಲಿ ಬಿಟ್ಟೆ?' ಎಂದು ಕೇಳಿದನು.

'ಅಕಾ, ಅಲ್ಲಿ, ಮೇಲೆ.' ಎಂದು ಅವನು ಉಲ್ಹಾಸದಿಂದ ಕಾವಾದೋಲಿನ ಕಡೆಗೆ ಕೈಮಾಡಿ ತೋರಿಸಿದನು.

'ಆದರೆ ಹೇಗೆ....?' ಎಂದು ಆ ಬಂಡೆಗಲ್ಲುಗಳ ಮಧ್ಯದ ಕೊರಕಲಿನಲ್ಲಿ ದಟ್ಟವಾಗಿ ಬೆಳೆದು ನಿಂತಿದ್ದ ಡಬಗಳ್ಳಿಯನ್ನು ತೋರಿಸಿ ಕೇಳಿದನು.

'ಆ ದಾರಿ-ತೋರಿಸುವವನು ಅವಳಿಗೆ ಸಹಾಯ ಮಾಡಿರಬೇಕೆಂದು ನನಗೆನಿಸುತ್ತದೆ.'

'ಆಹಾ! ಒಳ್ಳೇ ಸಹಾಯಕ!'

'ಮೇಲಿಂದ ಇಳಿದು ಬರಲು ಮತ್ತೆ ಬೇರೆ ದಾರಿಗಳಿವೆಯೇನು?

'ಲಕ್ಷಾವಧಿಗಳಿವೆ.'

ಫೀಲ್ಡಿಂಗನಿಗೆ ಆ ಕೊರಕಲವೊಂದನ್ನು ಬಿಟ್ಟು ಬೇರೆ ಏನೂ ಕಾಣಲಿಲ್ಲ.

'ಅವರು ಸುರಕ್ಷಿತವಾಗಿ ಕೆಳಗಿಳಿಯುವದನ್ನು ನೀನು ನೋಡಿದೆಯಾ?' ಎಂದು ಮತ್ತೆ ಕೇಳಿದನು.

'ಹೌದು, ಹೌದು. ಅವಳು ಮತ್ತು ಡೆರೆಕ್ ಇಬ್ಬರೂ ಕೂಡಿ ಕಾರಿನಲ್ಲಿ ಹೋದದ್ದನ್ನು ನೋಡಿದೆ.'

'ಅವರನ್ನು ಕಳಿಸಿ ಆ ದಾರಿ-ತೋರಿಸುವವನು ತಿರುಗಿ ನಿನ್ನ ಕಡೆಗೇ ಬಂದನೇನು ?'

'ಹೌದು. ಸಿಗರೇಟು ಹಚ್ಚಲೇ ?' ಎಂದು ಆ ಮಾತೇ ಹಾರಿಸ ಬೇಕೆಂದನು.

'ಅವಳು ಅಸ್ವಸ್ಥಳೇನೂ ಇದ್ದಿಲ್ಲವಷ್ಟೇ ?' ಎಂದು ಫೀಲ್ಡಿಂಗನು ಆ ಮಾತನ್ನೇ ಮುಂದರಿಸಿದನು.

'ಅವಳು ಅಸ್ವಸ್ಥಳಿದ್ದರೆ ಸಹಾಯಕ್ಕೆಂದು ನನ್ನನ್ನು ಕರೆಯುತ್ತಿದ್ದಳು.'

'ಹೌದು; ಅದೂ ನಿಜವೆಂದೇ ತೋರುತ್ತದೆ.'

'ನಿನಗೇಕೊ ತೊಂದರೆಯಾಗುತ್ತಿರುವಂತೆ ನನಗೆನಿಸುತ್ತಿದೆ. ಈಗ ಆ ವಿಷಯ ಬೇಡ. ಬೇರೆ ವಿಷಯಗಳನ್ನು ಮಾತನಾಡೋಣ. ಮಿಸ್ ಕ್ವೆಸ್ಟೆಡ್‌ಳು ಇಲ್ಲಿ ತನ್ನ ಮನಸಿಗೆ ಬಂದಂತೆ ಕಾರ್ಯಕ್ರಮ ಬದಲುಮಾಡಿ ಕೊಂಡು ನಡೆಯಬಹುದೆಂದು ನಾನು ಮೊದಲೇ ಅವಳಿಗೆ ಮಾತುಕೊಟ್ಟಿದ್ದೆ. ಅದರಂತೆ ಅವಳು ಮಾಡಿದ್ದಾಳೆ. ನೀನೇಕೊ ನನ್ನ ಸಲುವಾಗಿ ಸುಮ್ಮನೆ ತೊಂದರೆ ತಕ್ಕೊಳ್ಳುತ್ತಿರುವಂತೆ ಕಾಣುತ್ತದೆ. ನಾನು ಅಂತಹ ಸಣ್ಣ ಮಾತುಗಳನ್ನು ಲಕ್ಷ್ಯಕ್ಕೇ ತರುವದಿಲ್ಲ.'

'ಹೌದು, ನಿನ್ನ ಸಲುವಾಗಿಯೆ ನಾನು ತೊಂದರೆ ತಕ್ಕೊಳ್ಳುತ್ತಿದ್ದೇನೆ. ಅವರು ಅಸಭ್ಯತನದಿಂದ ವರ್ತಿಸಿದರೆಂದು ನನಗೆ ತಿಳಿಯುತ್ತದೆ.' ಎಂದು ಫೀಲ್ಡಿಂಗನು ಕೆಳದನಿಯಲ್ಲಿ ಹೇಳಿದನು. 'ಅವಳಿಗೆ ನಿಮ್ಮ ಈ ಗುಂಪಿನಿಂದ ಓಡಿಹೋಗಲಿಕ್ಕೆ ಅಧಿಕಾರವೇ ಇದ್ದಿಲ್ಲ; ಮತ್ತು ಆ ಡೆರೆಕ್ಕಳಿಗೆ ಅವಳಿಗೆ ಸಹಾಯಮಾಡುವ ಅಧಿಕಾರವೂ ಇರಲಿಲ್ಲ.'

ಅಝೀಜನು ಸ್ವಭಾವತಃ ಅತಿ ಮನಸ್ಸಿಗೆ ಹಚ್ಚಿಕೊಳ್ಳುವವನಾಗಿ ದ್ದರೂ ಈಗ ಮಾತ್ರ ಯಾರಿಗೂ ಹಣಿಯದಾದನು. ಅವನನ್ನು ಮೇಲಕ್ಕೆತ್ತಿ ಹಿಡಿದ ರೆಕ್ಕೆಗಳು ಈಗ ತತ್ತರಿಸಲಿಲ್ಲ. ಅವನೀಗ ತಾನೊಬ್ಬ ಮೊಗಲ ಬಾದ

ಪನೆಂದು ಭಾವಿಸಿಕೊಂಡಿದ್ದನು. ಆನೆಯ ಮೇಲೆ ಕುಳಿತುಕೊಂಡು ಮಾರ ಮಾರ ಗುಡ್ಡಗಳು ಹಿಂದೆ ಹಿಂದೆ ಜಾರುತ್ತಿರುವದನ್ನು ಅವನು ನೋಡಿದನು.

'ಅಝೀಜ! ಈ ವನಭೋಜನದ ಖರ್ಚು ಎಷ್ಟು ಬರುವದೆಂಬದರ ಲೆಕ್ಕವನ್ನೇನಾದರೂ ಮಾಡಿರುವೆಯಾ?'

'ಧೂ! ಅದನ್ನೆತ್ತಬಾರದು. ನೂರಾರು ನೂರಾರು ರೂಪಾಯಿಗಳು. ಲೆಕ್ಕ ಮಾಡಿದರೆ ಗಾಬರಿಗೆಡುವಷ್ಟು ಆಗಬಹುದು. ನನ್ನ ಗೆಳೆಯನ ಈ ಸೇವಕರು ಕೈಗೆ ಸಿಕ್ಕಷ್ಟು ಹಾಕಿದ್ದಾರೆ. ಇನ್ನು ಆನೆಯ ವಿಷಯವಂತೂ ಹೇಳತೀರದು. ಅದೇನು ಬರಿ ಬಂಗಾರವನ್ನೆ ತಿನ್ನುತ್ತದೆಯೋ ಏನೋ! ಈ ಮಾತನ್ನು ನೀನಿನ್ನು ತಿರುಗಿ ತೆಗೆಯುವದಿಲ್ಲೆಂದು ನಾನು ನಂಬುತ್ತೇನೆ. ಮತ್ತು ಆ 'ಮ–ಲ' ಅಂತೂ—ನೀನೂ ದಯಮಾಡಿ ಈ ಮೊದಲಿನಕ್ಷರಗಳನ್ನಷ್ಟೆ ಉಪಯೋಗಿಸಬೇಕು; ಇಲ್ಲದಿದ್ದರೆ ಅವನಿಗೆ ತಿಳಿಯುತ್ತದೆ—ಅವನು ಎಲ್ಲರಲ್ಲಿ ಹೆಚ್ಚಿನ ಲುಚ್ಚಾ!'

'ಅವನು ಯಾವುದಕ್ಕೂ ಉಪಯೋಗವಿಲ್ಲವೆಂದು ನಾನು ನಿನಗೆ ಮೊದಲೇ ಹೇಳಿದ್ದೆನು.'

'ಅವನಷ್ಟಕ್ಕೇ ಅವನನ್ನು ಬಿಟ್ಟರೆ ಬಹಳ ಒಳ್ಳೆಯವನಿದ್ದಾನೆ. ಏನೇ ಆಗಲಿ, ಅವನ ಈ ಗಂಟುಗಳ್ಳತನ ನನ್ನನ್ನು ಹಾಳುಮಾಡಿಬಿಟ್ಟಿದೆ.'

'ಅಝೀಜ, ಏನು! ಏನನ್ಯಾಯವಿದು?'

'ಹೌದು, ಇದು ಸತ್ಯವಾದ ಮಾತು. ಆದರೇನು, ಅವನು ಬಂದಿದ್ದರಿಂದ ನಿನಗೆ ಬಹಳ ಸಂತೋಷವಾಗಿದೆ. ಯಾಕಂದರೆ ಅವನು ನನ್ನ ಅತಿಥಿಗಳಿಗೆ ಸುಖ-ಸೌಕರ್ಯಗಳನ್ನು ಒದಗಿಸಿ ಕೊಟ್ಟಿದ್ದಾನೆ. ಇದಲ್ಲದೆ ಅವನನ್ನು ಮೋಯಿಸುವದು ನನ್ನ ಕರ್ತವ್ಯವಾಗಿದೆ. ಅವನೇನು ಹೊರಗಿನವನಲ್ಲ, ನಮ್ಮ ಚಿಕ್ಕಪ್ಪನ ಮಗ. ಹಣ ಹೋದರೆ ಹಣ ಬರುವದು. ಹಣ ಉಳಿದರೆ ಮಾತ್ರ ಹೆಣ ಬೀಳುವದು.'

'ನನ್ನದು ಹಾಗಲ್ಲ. ಉಳಿಸಿದ ಕಾಸು, ಅದು ಗಳಿಸಿದ ಕಾಸು. ಮತ್ತೆ ಇದರ ಮೇಲೆಯೆ ಈ ಬ್ರಿಟಿಶ್ ಸಾಮ್ರಾಜ್ಯವು ಕಾಲೂರಿ ನಿಂತದ್ದು. ಇಂತಹ 'ಮ–ಲ'ಗಳನ್ನು ನೀವು ಮೋಯಿಸುವ ವರೆಗೂ ನಮ್ಮನ್ನೇನು ಒದ್ದು ಹೊರಗೆ ಹಾಕುವದು ನಿಮಗೆ ಸಾಧ್ಯವಿಲ್ಲ.'

'ನಿಮ್ಮನ್ನು ಒದ್ದು ಹೊರಗೆ ಹಾಕುವದು? ಆ ಕೆಟ್ಟ ಕೆಲಸದ ಸಲುವಾಗಿ ನಾನೇಕೆ ತಲೆ ಕೆಡಿಸಿಕೊಳ್ಳಬೇಕು? ಅದನ್ನು ಆ ರಾಜಕಾರಣಪಟುಗಳಿಗೇ ಬಿಟ್ಟುಬಿಡೋಣ....ಇಲ್ಲ, ನಾನೂ ವಿದ್ಯಾರ್ಥಿಯಿದ್ದಾಗ ಹೀಗೆಯೆ ಏನೇನೋ ಕಿರುಚುತ್ತಿದ್ದೆ—'ಈ ಇಂಗ್ಲೀಷರು ಬದ್ಮಾಷರು—ಅವರ ಸರಕಾರ ಸೈತಾನೀ ಸರಕಾರ-' ಎಂದು ಕೂಗಾಡಿದೆ—ಆದರೆ ಈಗೆಲ್ಲ ಬದಲಾಗಿದೆ; ಅವರು ನನ್ನ ಧಂದೆಯನ್ನು ಸುಸೂತ್ರವಾಗಿ ಸಾಗಗೊಟ್ಟು, ಆಫೀಸಿನಲ್ಲಿ ನನಗೆ ಇಲ್ಲದ ಕಿರಿಕಿರಿ ಮಾಡದಿದ್ದರೆ ಸಾಕು; ನನಗೆ ಇದಕ್ಕೂ ಹೆಚ್ಚಿಗೇನೂ ಬೇಡ. ಆಚಂದ್ರಾರ್ಕವಾಗಿ ನಮ್ಮ ಮೇಲೆ ಅವರೇ ಬಾಳಲಿ! ಯಾರು ಬೇಡೆನ್ನುವರು?'

'ಇಲ್ಲ, ಇದಕ್ಕಿಂತ ನಿನಗೆ ಹೆಚ್ಚಿಗೆ ಬೇಕಾಗಿದೆ. ನೀನು ಅವರನ್ನು ಹೀಗೆಲ್ಲ ವನಭೋಜನಕ್ಕೆ ಕರಕೊಂಡು ಹೋಗುತ್ತೀಯಲ್ಲ, ಇದೇನು?'

'ಈ ವನಭೋಜನ ಅದಕ್ಕೇನೂ ಸಂಬಂಧವಿಲ್ಲ. ಇದೊಂದು ಗೆಳೆಯರ ಸಂತೋಷಕೂಟ.'

ಹೀಗೆಯೆ ಕೆಲಹೊತ್ತು ಸಾಗಿ ಆ ಮೆರವಣಿಗೆಯು ಕೊನೆಗೆ ಮುಗಿಯಿತು. ಗಾಡಿಯು ತನ್ನ ಉರಿಯುವ ಕತ್ತನ್ನು ಬೈಲಿನಲ್ಲಿ ಮೆರೆಯಿಸುತ್ತ ಬಂದಿತು. ಮಿಸೆಸ್ ಮೂರಳು ತನ್ನ ಗಾಡಿಯನ್ನು ಹತ್ತಿದಳು; ಮೂವರು ಗಂಡಸರು ತಮ್ಮ ಡಬ್ಬಿಯನ್ನೇರಿದರು; ಕಿಡಿಕಿಗಳನ್ನು ಸರಿಪಡಿಸಿ, ಇಲೆಕ್ಟ್ರಿಕ್ ಬೀಸಣಿಕೆಯನ್ನು ತಿರುಗಲು ಬಿಟ್ಟು, ಅವರು ನಿದ್ರೆ ಹೋಗಲು ಹವಣಿಸಿದರು. ಬಿಸಿಲಿಗೆ ಬೆಂದ ಅವರು ಹೆಣದಂತೆ ತೋರಿದರು. ಗಾಡಿಯು ಕೂಡ—ಸರಿದಾಡುತ್ತಿದ್ದರೂ—'ಜನಾಜ'ದಂತೆಯೆ ಕಂಡಿತು. ಗಾಡಿಯು ಮಾರವಾರವನ್ನು ಬಿಟ್ಟೊಡನೆ ಆ ಹೊಲಸು ಜಗತ್ತೊಮ್ಮೆ ಅವರ ಕಣ್ಮರೆಯಾಯಿತು. ಅದರ ಸ್ಥಳದಲ್ಲಿ ದೂರದಲ್ಲಿ ಕಾಣುವ, ಪರಿಮಿತವಾಗಿದ್ದರೂ ಅದ್ಭುತವಾದ ಮಾರವಾರವು ತೋರಿತು. ಗಾಡಿಯು ನೀರು ಕುಡಿಯುವ ಡಕ್ಕಾಗಿ ನಡುನಡುವೆ ನಿಂತು ಮುಂದೆ ಸಾಗಿತು. ಸಿವ್ಹಿಲ್ ಸ್ಟೇಶನ್ ಸುತ್ತುಹಾಕಿ ಅಡ್ಡಬರುವ ಬಂಡಿಯ ದಾರಿಯನ್ನು ಏರಿ, ಗಡಗಡ ಸಪ್ಪಳ ಮಾಡಿ ಒಮ್ಮೆಲೆ ನಿಂತಿತು. ಚಂದ್ರಪುರ! ಚಂದ್ರಪುರ! ಬಂತು.

ಗಾಡಿಯು ನಿಂತೊಡನೆ ಅವರೆಲ್ಲರೂ ಎದ್ದು ಕುಳಿತರು. ಮತ್ತೆ ತಾಪನ್ನು

ನಿತ್ಯಜೀವನದ ಚಕ್ರ ಸುತ್ತಬೇಕಾಯಿಲ್ಲ ಎಂಬ ಉದಾಸೀನ ಭಾವವು ಅವರ ಮುಖವನ್ನಾವರಿಸಿತ್ತು. ಮುಂಜಾನೆಯ ಅವರ ಉಲ್ಲಾಸ, ಉತ್ಸಾಹ, ಕುತೂಹಲ ಎಲ್ಲವೂ ಆಗಲೆ ಮಾಯವಾಗಿಬಿಟ್ಟಿದ್ದವು.

ಪೋಲಿಸ್ ಇನ್‌ಸ್ಪೆಕ್ಟರರಾದ ಹಕ್ಕರು ಅವರು ಕುಳಿತಿದ್ದ ಗಾಡಿಯ ಬಾಗಿಲನ್ನು ಧಡಕ್ಕೆಂದು ಒಮ್ಮೆಲೆ ತೆರೆದು 'ಡಾ. ಅಝೀಜ! ನಿಮ್ಮನ್ನು ಕೈದುಮಾಡುವ ದುಃಖದ ಕೆಲಸವನ್ನು ನಾನೀಗ ಮಾಡಬೇಕಾಗಿದೆ' ಎಂದು ನಿಶ್ಚಲವಾದ ಕರ್ಕಶ ದನಿಯಲ್ಲಿ ಹೇಳಿದರು.

'ಓಹೋ! ಏನೋ ತಪ್ಪಾಗಿದೆ' ಎಂದು ಫೀಲ್ಡಿಂಗನು ಒಮ್ಮೆಲೆ ಆ ಗೊಂದಲದ ಪರಿಸ್ಥಿತಿಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು ಹೇಳಿದನು.

'ನನಗೆ ಹಾಗೆ ಅಪ್ಪಣೆಯಾಗಿದೆ; ಉಳಿದದ್ದೇನೂ ನನಗೆ ಗೊತ್ತಿಲ್ಲ.'

'ಯಾವ ಅಪರಾಧಕ್ಕಾಗಿ ನೀವು ಅವರನ್ನು ಹಿಡಿಯುತ್ತಿದ್ದೀರಿ?'

'ಅದನ್ನೂ ಹೇಳಬಾರದೆಂದು ನನಗೆ ಅಪ್ಪಣೆಯಾಗಿದೆ.'

'ಜೋಕೆ, ಹಾಗೆ ಉತ್ತರಕೊಡಬೇಡಿರಿ. ವಾರಂಟಲ್ಲಿದೆ ತೋರಿಸಿರಿ?'

'ದಯವಿಟ್ಟು ಕ್ಷಮಿಸಬೇಕು. ಈ ವಿಶಿಷ್ಟಪರಿಸ್ಥಿತಿಯಲ್ಲಿ ಯಾವ ವಾರಂಟೂ ಬೇಕಿಲ್ಲ. ನೀವು ಬೇಕಾದರೆ ಮ್ಯಾಕ್‌ಬ್ರಾಯಿಡರನ್ನೇ ಕೇಳಿ ತಿಳಿಯಬಹುದು'

'ಒಳ್ಳೇದು, ನಾವು ಹಾಗೇ ಮಾಡುವೆವು. ಬಾ ಅಝೀಜ, ಇದಕ್ಕೇನು ಅಷ್ಟು ಗೊಂದಲವೆಬ್ಬಿಸುವ ಕಾರಣವಿಲ್ಲ.'

'ಡಾ. ಅಝೀಜ! ದಯಮಾಡಿ ಇತ್ತಬರುತ್ತೀರಾ? ನಿಮ್ಮ ಸಲುವಾಗಿ ಮುಚ್ಚಿದ ಗಾಡಿಯೊಂದು ಸಿದ್ಧವಾಗಿ ನಿಂತಿದೆ.'

ಅಝೀಜನು ಬಿಕ್ಕಿ ಬಿಕ್ಕಿ ಅತ್ತನು,– ಅವನು ಮೊದಲೆತ್ತಿದ ದನಿಯೇ ಇದು–ಮತ್ತು ಎದುರಿನ ಬಾಗಿಲದಿಂದ ಪಾರಾಗಿ ಓಡಿಹೋಗಬೇಕೆಂದು ಹವಣಿಸಿದನು.

'ಹಾಗೆ ಮಾಡಿದರೆ ನಾನು ಶಕ್ತಿಪ್ರಯೋಗ ಮಾಡಬೇಕಾದೀತು, ಹುಷಾರ!' ಎಂದು ಹಕ್ಕನು ಎಚ್ಚರಿಸಿದನು.

'ಹಾಂ! ದಯಮಾಡಿ ಅದನ್ನು ಮಾತ್ರ..' ಎಂದು ಫೀಲ್ಡಿಂಗನು ಕೂಗಿದನು. ಅಝೀಜನ ಸಹವಾಸದಿಂದ ಅವನ ಧೈರ್ಯವೂ ಕುಗ್ಗಿ

ಹೋಗಿತ್ತು. ಹಕ್ಕನ ಆ ಮಾತುಗಳು ಅವನ ಕಿವಿಗೆ ಬೀಳುವದರೊಳಗಾಗಿ ಅವನನ್ನು ಹಿಂದಕ್ಕೆ ಜಗ್ಗಿ ಕೂಸನ್ನು ಹಿಡಿವಂತೆ ಅಮುಕಿ ಹಿಡಿದು ಅಲ್ಲಾಡಿಸಿದನು. ಒಂದು ನಿಮಿಷ ಅವನನ್ನು ಹಿಂದಕ್ಕೆ ಜಗ್ಗುವದು ತಡವಾಗಿದ್ದರೆ ಕೆಲಸ ಕೆಟ್ಟುಹೋಗುತ್ತಿತ್ತು. ಅಝೀಜನು ಓಡಿಹೋಗಿಬಿಡುತ್ತಿದ್ದನು. ಅಲ್ಲಿಂದೇನು ! ಸೀಟಿಗಳನ್ನೂದುವದು– ಮನುಷ್ಯನ ಬೇಟೆಯಾಡುವದು— ಸುರುವಾಗಿಬಿಡುತ್ತಿತ್ತು. ' ಅಝೀಜ ! ನಾವು ಮ್ಯಾಕಾಬ್ರಾಯಿಡನ ಕಡೆಗೆ ಕೂಡಿಯೆ ಬರುವೆವು; ಮತ್ತು ಏನು ತಪ್ಪಿದೆಯೆಂಬುದನ್ನು ವಿಚಾರಿಸುವೆವು– ಇವನೂ ಸಭ್ಯಗೃಹಸ್ಥನಿದ್ದಾನೆ— ಇದೆಲ್ಲ ಏನು ಬುದ್ಧಿಪೂರ್ವಕ ಮಾಡಿದ್ದಲ್ಲ—ಬೇಕಾದರೆ ಅವನು ನಿನ್ನ ಕ್ಷಮೆಬೇಡಬಹುದು. . ಆದರೆ ಅಪರಾಧಿಯಂತೆ ಎಂದೂ ಓಡಿಹೋಗಲು ಹವಣಿಸಬೇಡ. .' ಎಂದು ಸಮಾಧಾನ ಮಾಡಲು ಯತ್ನಿಸಿದನು.

' ಅಯ್ಯೋ ! ನನ್ನ ಮಕ್ಕಳು....! ನನ್ನ ಹೆಸರು. . ' ಎಂದು ಅಝೀಜನು ಮತ್ತೆ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದನು. ಅವನನ್ನು ಮೇಲಕ್ಕೊಯ್ಯುವ ರೆಕ್ಕೆಗಳೀಗ ಮುರಿದುಬಿದ್ದವು.

' ಅಂಥದೇನೂ ಆಗಿಲ್ಲ; ಸುಮ್ಮನೆ ಗಾಬರಿಯಾಗಬೇಡ; ಟೊಪ್ಪಿಗೆಯನ್ನು ಸರಿಯಾಗಿ ಹಾಕಿಕೊ; ನನ್ನ ಕೈಹಿಡಿ; ನೀನು ಪಾರಾಗುವಂತೆ ನಾನು ನೋಡಿಕೊಳ್ಳುತ್ತೇನೆ. '

' ಅಂತೂ ದೇವರು ಕಾಯ್ದನು. ಅವನಾಗಿಯೆ ಬಂದನು ! ' ಎಂದು ಇನ್ಸ್‌ಪೆಕ್ಟರನು ಹಿಗ್ಗಿ ನುಡಿದನು.

ಅವರು ಮಧ್ಯಾನ್ಹದ ಆ ಉರಿಬಿಸಿಲಿನಲ್ಲಿ ಕೈಯಲ್ಲಿ ಕೈಹಾಕಿಕೊಂಡು ನುಗ್ಗಿದರು. ಸ್ಟೇಶನ್ನೆಲ್ಲ ಹುರಪಳಿಸುತ್ತಿತ್ತು. ಪ್ರಯಾಣಿಕರು, ಪೋರ್ಟರರು, ಸರಕಾರದ ನೌಕರರು ದಿಕ್ಕು ದಿಕ್ಕಿನಿಂದ ನುಗ್ಗಿ ಬಂದರು; ಹೆಚ್ಚು ಪೋಲಿಸರೂ ಬಂದರು. ರೋನಿಯು ಮೂರರನ್ನು ಮೈಗಾವಲು ಮಾಡಿಕೊಂಡು ಒಯ್ದನು. ಲತೀಫನೂ ಅಳಹತ್ತಿದನು. ಅಝೀಜ, ಫೀಲ್ಡಿಂಗ್ ಮೊದಲಾದವರು ಆ ಗದ್ದಲದೊಳಗಿಂದ ಹಾದಿಮಾಡಿಕೊಂಡು ಮುಂದೆ ಹೋಗುವಷ್ಟರಲ್ಲಿ ಟರ್ಟನ್ನರು ಫೀಲ್ಡಿಂಗನನ್ನು ಅಧಿಕಾರಯುಕ್ತದನಿಯಿಂದ ಕರೆದೊಯ್ದರು. ಅಝೀಜನೊಬ್ಬನೇ ಜೇಲಿಗೆ ಹೋಗಬೇಕಾಯಿತು.

ಪ್ರಕರಣ ೧೭

ಕಲೆಕ್ಟರನು ಒಂದನೆಯ ತರಗತಿಯ 'ವೇಟಿಂಗ್‌ರೂಮ್'ನಲ್ಲಿಯೆ ನಿಂತು ಕೈದುಮಾಡುವದನ್ನು ನೋಡುತ್ತಿದ್ದನು. ಫೀಲ್ಡಿಂಗನು ಜಾಳಿಗೆಯಂತಹ ತಗಡಿನ ಬಾಗಿಲುಗಳನ್ನು ನೂಕಿದೊಡನೆ ಗರ್ಭಗುಡಿಯೊಳಗಿನ ದೇವರಂತೆ ಕಲೆಕ್ಟರನು ಪ್ರಕಟನಾದನು. ಅವನು ಒಳಗೆ ಹೋದೊಡನೆ ಬಾಗಿಲುಗಳು ತಮ್ಮಷ್ಟಕ್ಕೆ ತಾವೇ ಮುಚ್ಚಿಕೊಂಡವು. ಹೊರಗೆ ಕಾವಲು ಇನ್ನೂ ಭದ್ರವಾಯಿತು. ಒಳಗೆ ಪಂಖಾ ಒಂದೇ ಸಮನೆ ಗಾಳೀಹಾಕುತ್ತಿತ್ತು. ಕಲೆಕ್ಟರನಿಗೆ ಮೊದಮೊದಲು ಮಾತಾಡಲಿಕ್ಕೇ ಬರಲಿಲ್ಲ. ಅವನ ಮುಖವು ಒಳಗಿನ ಉದ್ವೇಗದಿಂದ ಬೆಳ್ಳಗೆ ಆಗಿತ್ತು. ಎಂದಿನಿಂದಲೂ ಚಂದ್ರಪುರದಲ್ಲಿ ಈ ಇಂಗ್ಲೀಷರ ಮುಖಗಳೆಲ್ಲ ಇದೇ ಮುಖಭಾವವನ್ನು ತೋರಿಸುತ್ತಿರುವವು. ಧೈರ್ಯಶಾಲಿಯೂ ನಿಸ್ವಾರ್ಥಿಯೂ ಆದ ಅವನೀಗ ತನ್ನ ಆ ಒಳಗುದಿಯಲ್ಲಿ ಬೆಂದುಹೋಗಿದ್ದನು. 'ನನ್ನ ಜೀವನದಲ್ಲಿ ನಾನು ನೋಡಬಾರದ್ದನ್ನು ಈಗ ನೋಡಿದ್ದೇನೆ! ಮಾರವಾರ ಗುಹೆಯಲ್ಲಿ ಮಿಸ್ ಕ್ವೆಸ್ಟೆಡ್‌ಳಿಗೆ ಅವಮಾನವನು ಮಾಡಿದ್ದಾರೆ!' ಎಂದು ಕೊನೆಗೆ ದುಃಖದಿಂದ ಹೇಳಿದನು.

'ಛೇ, ಇಲ್ಲ,—ಇಲ್ಲ—ಇಲ್ಲ,' ಎಂದು ಫೀಲ್ಡಿಂಗನು ಸ್ವಲ್ಪ ಬೇಸರಬಂದವನಂತೆ ಉಸಿರುಬಿಡುತ್ತ ಉತ್ತರಕೊಟ್ಟನು.

'ದೇವರ ದಯೆ ಇತ್ತೆಂದೇ ಅವಳು ಹೇಗೋ ಪಾರಾದಳು!'

'ಛೇ, ಇಲ್ಲ—ಇಲ್ಲ; ಅದು ಅಝೀಜನಲ್ಲ....ಅಝೀಜನಲ್ಲ..'

ಟರ್ಟನ್ನನು ಅಸಮ್ಮತಿಯಿಂದ ತಲೆಯಲ್ಲಾಡಿಸಿದನು.

'ತೀರ ಅಸಂಭವದ ಮಾತು ಇದು; ತೀರ ವಿಲಕ್ಷಣ!'

'ನೀನು ಅವನ ಜೊತೆಗೇ ಪೋಲಿಸ್ ಸ್ಟೇಶನ್ನಕ್ಕೆ ಹೋಗಿದ್ದರೆ ನಿನಗೆ ಬರುತ್ತಿದ್ದ ಕೆಟ್ಟ ಹೆಸರಿನಿಂದ ನಿನ್ನನ್ನು ಉಳಿಸಬೇಕೆಂದು ನಾನಿತ್ತ ಕರೆದನು' ಎಂದು ಟರ್ಟನ್ನನು ಅವನ ಮಾತಿನ ಕಡೆಗೆ ಲಕ್ಷ್ಯಗೊಡದೆ, ಅಂದದ್ದನ್ನು ಕೇಳಿ ತಿಳಿದುಕೊಳ್ಳದೆ, ಹಾಗೇ ನುಡಿದನು.

'ಛೇ, ಇಲ್ಲ' ಎಂದು ಅವನು ತಿರುತಿರುಗಿ ಅದನ್ನೇ ಬೆಪ್ಪನಂತೆ ಹೇಳಿ

ದನು. ಬೇರೆ ಹೇಳಬೇಕೆಂದರೆ ಅವನಿಗೆ ಶಬ್ದಗಳೇ ದೊರೆಯುದಂತಾಗಿದ್ದವು. ಅವನಿಗೆ ತನ್ನಲ್ಲಿ ಹುಚ್ಚು ಬಂದು ಹುಡದಿಹಾಕಹತ್ತಿದೆಯೆಂದೆನಿಸಿತು. ಅದೆಲ್ಲ ವಸ್ತೂ ಹತ್ತಿಡಬೇಕೆಂನು ಹವಣಿಸಿದನು; ಹೇಗಾದರೂ ಮಾಡಿ ತನ್ನ ಆ ಹುಚ್ಚನ್ನು ಓಡಿಸಬೇಕಾಗಿತ್ತು ಅವನಿಗೆ. ಅದನ್ನು ಹೇಗೆ ಮಾಡಬೇಕು ಎಂಬುದೇ ಅವನಿಗೆ ಗೊತ್ತಾಗಲಿಲ್ಲ. ಆದರೂ ಕೊನೆಗೆ ಧೈರ್ಯ ತಂದು ಕೊಂಡು 'ಅವನ ಮೇಲೆ ಈ ಅಸಹ್ಯ ಅಪರಾಧವನ್ನು ಯಾರು ಹೊರಿಸು ವರು ?' ಎಂದು ಕೇಳಿದನು.

'ಮಿಸ್ ಡೆರೆಕ್ಕಳು; ಮತ್ತು ಸ್ವತಃ ಅನುಭವಿಸಿದವಳು....' ಎಂದು ಕಲೆಕ್ಟರನು ಆ ಹುಡುಗಿಯ ಹೆಸರನ್ನುಚ್ಚರಿಸಲಿಕ್ಕಾಗದೆ ಹಾಗೆಯೆ ಹೇಳಿ ದನು; ಅವನಷ್ಟು ಧೈರ್ಯಗುಂದಿದ್ದನು.

'ಮಿಸ್ ಕ್ವೆಸ್ಟೆಡ್‌ಳೇ ಸ್ವತಃ ಈ.... ಹೊರಿಸುತ್ತಾಳೆಯೇ ?'

ಅವನು ಮತ್ತೆ ತಲೆಯಲ್ಲಾಡಿಸಿ ಮುಖ ಹೊರಳಿಸಿದನು.

'ಹಾಗಾದರೆ ಅವಳಿಗೆ ಹುಚ್ಚೇ ಹಿಡಿದಿರಲಿಕ್ಕೆಬೇಕು.'

'ನಾನಿದನ್ನೆಂದೂ ಒಪ್ಪಲಾರೆ' ಎಂದು ಕಲೆಕ್ಟರನು ಈಗ ತಮ್ಮಿಬ್ಬರಲ್ಲಿ ಭೇದ ಬಂದಿರುವದೆಂಬ ಅರಿವುಂಟಾಗಿ ರೊಚ್ಚಿಗೆದ್ದು ನಡಗುತ್ತ ನುಡಿದನು. 'ನೀನು ಕೂಡಲೆ ಆ ಮಾತನ್ನು ಹಿಂದಕ್ಕೆ ತೆಗೆದುಕೊಳ್ಳಬೇಕು. ಇದೇ ತರಹದ ಮಾತುಗಳನ್ನೇ ನೀನು ಚಂದ್ರಪುರಕ್ಕೆ ಬಂದಂದಿನಿಂದ ಹೆಚ್ಚಾಗಿ ಆಡುತ್ತಿದ್ದೀಯೆಂದು ನನಗೆನಿಸುತ್ತದೆ.'

'ಆಯಿತು, ಅದಕ್ಕಾಗಿ ನನಗೆ ಬಹಳ ಕೆಡಕೆನಿಸುತ್ತಿದೆ. ನಾನು ಯಾವ ತಕರಾರೂ ಮಾಡದೆ ಆ ಮಾತನ್ನು ಹಿಂದಕ್ಕೆ ತೆಗೆದುಕೊಳ್ಳುತ್ತೇನೆ, ಆಯಿತೇ ?' ಎಂದನು. ಅವನೇ ಈಗ ಅರ್ಧಮರ್ಧ ಹುಚ್ಚನಂತಾಗಿದ್ದನು.

'ಮಿ. ಫೀಲ್ಡಿಂಗ್ ! ನೀವು ನನಗೆ ಇಂಥ ದನಿಯಲ್ಲಿ ಮಾತಾಡಿದ್ದು ಯಾವುದರ ಪರಿಣಾಮವೆಂದು ದಯವಿಟ್ಟು ನನಗೆ ಹೇಳುವಿರಾ ?'

'ಈ ಸುದ್ದಿಯಿಂದ ನನಗೆ ಬರ-ಸಿಡಿಲು ಬಡಿದಂತಾಯಿತು. ಅಂತೆಯೆ ನೀವು ನನ್ನನ್ನು ಕ್ಷಮಿಸಬೇಕೆಂದು ನಾನು ಬೇಡಿಕೊಳ್ಳಲೇಬೇಕು. ಡಾಕ್ಟರ ಅಝೀಜನು ಅಪರಾಧಿಯೆಂದು ನಾನು ಮಾತ್ರ ನಂಬಲಾರೆನು.'

'ಅದೊ— ಅದೊ— ನೀನು ಅದನ್ನೇ ಮತ್ತೆ ಉಚ್ಚಾರ ಮಾಡಿ ಅವಮಾನವನ್ನು ಹೆಚ್ಚಿಸುತ್ತಿರುವಿ' ಎಂದು ಮೇಜನ್ನು ಗುದ್ದಿ ಹೇಳಿದನು.

'ನಾನು ಇನ್ನೂ ಒಮ್ಮೆ ಹೇಳಬಹುದಾದರೆ ಧೈರ್ಯದಿಂದ ಹೇಳುತ್ತೇನೆ, ಇಲ್ಲ—ಇಲ್ಲ—ಇಲ್ಲ' ಎಂದು ಫೀಲ್ಡಿಂಗನು ಉದ್ವೇಗದಿಂದ ಬೆಳ್ಳಗಾಗಿದ್ದರೂ ಗಟ್ಟಿದನಿಯಲ್ಲಿ ಹೇಳಿದನು. 'ಅವನ ಮೇಲಿನ ಆ ಇಬ್ಬರು ಸ್ತ್ರೀಯರ ವಿಶ್ವಾಸದ ಮೇಲೆ ನಾನೇನೂ ಮಾತಾಡುವ ಇಚ್ಛೆ ಇಲ್ಲ; ಆದರೂ ಅವರು ಆರ್ಜೀಜನ ಮೇಲೆ ಹೊರಿಸಿದ ಅಪರಾಧಕ್ಕೆ ಮಾತ್ರ ಯಾವುದೋ ತಪ್ಪು ಕಾರಣವಿರಬೇಕು. ಐದು ನಿಮಿಷಗಳಲ್ಲಿ ತಾವು ಮನಸ್ಸು ಮಾಡಿದರೆ ಅದೆಲ್ಲ ಸ್ಪಷ್ಟವಾಗುವದು ಆ ಮನುಷ್ಯನ ನಡತೆಯು ಒಳ್ಳೆಯದಿದೆ. ಅವನೆಂದೂ ಇಂಥ ಕೃತ್ಯಗಳನ್ನು ಮಾಡಲಾರನೆಂದು ನನಗೆ ನಂಬಿಕೆಯಿದೆ.'

'ಇದಕ್ಕೆಲ್ಲ ಮೂಲವು ಒಂದು ತಪ್ಪೆಂದೇ ನಾನೂ ಹೇಳುತ್ತೇನೆ.' ಎಂದು ಕಟಕುವ ದನಿಯಲ್ಲಿ ಮೆಲ್ಲನೆ ಹೇಳಿ 'ಅದು ಇರುವದೇ ಹಾಗೆ. ನನಗೆ ಈ ದೇಶದ ಇಪ್ಪತ್ತೈದು ವರ್ಷಗಳ ಅನುಭವವಿದೆ' ಎಂದು ಸ್ವಲ್ಪ ತಡೆದನು. ಅವನ ಆ 'ಇಪ್ಪತ್ತೈದು ವರ್ಷಗಳು' ಇಡಿ ವೇಟಿಂಗ್‌ರೂಮನ್ನು ಸಂಕುಚಿತವೃತ್ತಿಯ ತಮ್ಮ ತಂಗಳ ನೆನಪುಗಳಿಂದ ತುಂಬಿಬಿಟ್ಟಿದ್ದವು. 'ನಾನು ಇಪ್ಪತ್ತೈದು ವರ್ಷಗಳಿಂದ ನೋಡುತ್ತ ಬಂದಿದ್ದೇನೆ, ಯಾವಾಗಾವಾಗ ಈ ನಮ್ಮ ಜನರೂ ಮತ್ತು ಹಿಂದೀ ಜನರೂ ಸಾಮಾಜಿಕವಾಗಿ ಬೆರೆಯುವರೋ ಆಗಾಗೆಲ್ಲ ಇಂತಹ ಅನಾಹುತಗಳಾಗುವದು ಕಟ್ಟಿಟ್ಟ ಮಾತೇ. ಅದಕ್ಕೇ ಅವರೊಡನೆ ಮಾತನಾಡಬಹುದು; ಅವರಿಗೆ ದೂರಿನಿಂದ ಬೇಕಾದಷ್ಟು ಸೌಜನ್ಯ ತೋರಿಸಬಹುದು; ಆದರೆ ಅವರೊಂದಿಗೆ ಸಮಾನರಾಗಿ ಎಂದೂ ಬೆರೆಯಬಾರದು. ನಾನಿದನ್ನು ಸರ್ವರೀತಿಯಿಂದಲೂ ವಿರೋಧಿಸುತ್ತೇನೆ. . ನಾನು ಚಂದ್ರಪುರಕ್ಕೆ ಅಧಿಕಾರಿಯಾಗಿ ಬಂದು ಆರು ವರ್ಷಗಳಾದವು; ಈ ಅವಧಿಯಲ್ಲಿ ಇಲ್ಲಿ ಎಲ್ಲವೂ ಸುಸೂತ್ರವಾಗಿ ನಡೆದದ್ದಕ್ಕೆ, ನಮ್ಮ ಮಾನ-ಮರ್ಯಾದೆಗಳು ಹೆಚ್ಚಿದ್ದಕ್ಕೆ, ಕಾರಣವೆಂದರೆ ಇಬ್ಬರೂ ಈ ನಿಯಮವನ್ನು ಅನುಸರಿಸಿದ್ದು. ಈ ಹೊಸದಾಗಿ ಬಂದ ಹೊಸಬರು ನಮ್ಮ ಈ ಸಂಪ್ರದಾಯಗಳನ್ನು ಕಿತ್ತೊಗೆದರು. ಅಂತೆಯೆ. ನೀವೀಗ ಕಣ್ಣಿಲೆ ನೋಡಿದ ಈ ಅನಾಹುತವು ಸಂಭವಿಸಿತು. ಎಷ್ಟೋ ವರ್ಷಗಳಿಂದ ನಾವು

ಮಾಡಿದ ಕೆಲಸವೆಲ್ಲ ಹಾಳಾಗಿ ಹೋಯಿತು. ಮತ್ತು ಇನ್ನು ಒಂದು ತಲೆಯು ವರೆಗೆ ನನ್ನ ಈ ಜಿಲ್ಲೆಯು ಒಳ್ಳೆಯ ಹೆಸರು ಅಳಿಸಿಹೋಯಿತು. ಫೀಲ್ಡಿಂಗ್ ! ಇದನ್ನೆಲ್ಲ ನಾನು ನೋಡಲಾರೆನು. ನಿಮಗೆ—ಹೊಸ ವಿಚಾರಗಳಿಂದ ತುಂಬಿದ ನಿಮಗೆ—ಅದೆಲ್ಲ ಆಟ; ನಮಗೆ ಪ್ರಾಣಸಂಕಟ. ಇದೇ ನನ್ನ ಕೊನೆಯೆಂದು ನನಗೆ ಗೊತ್ತಿದೆ. ಒಬ್ಬ ಸ್ತ್ರೀಯನ್ನು—ತರುಣ ಸ್ತ್ರೀಯನ್ನು-ನನಗೆ ಬಹಳ ಬೇಕಾಗಿದ್ದ ನನ್ನ ಕೈಕೆಳಗಿನ ಅಧಿಕಾರಿಯೊಡನೆ ನಿಶ್ಚಯವಾದ ಸ್ತ್ರೀಯನ್ನು—ಇಂಗ್ಲೆಂಡದಿಂದ ಇದೇ ಹೊಸದಾಗಿ ಬಂದವಳನ್ನು.... ಅಯ್ಯೋ ! ಬೇಡ.. ಇದನ್ನೆಲ್ಲ ನೋಡಲಿಕ್ಕೂ ನಾನಿನ್ನೂ ಜೀವಿಸಬೇಕೇ !..' ಎಂದು ವಿಕಾರಪರವಶನಾಗಿ ಹೇಳಿ ಕೊನೆಗೆ 'ಅತ್ತ ಪಾಪ, ಆ ಹೆಸ್ಲೊಪನು ತಾಯಿಯನ್ನು ಕರೆದುಕೊಂಡು ಹೋದ ಮೇಲೆ, ನಾನು ಕೇವಲ ನಿಮಗಿಷ್ಟು ಹೇಳುವದಕ್ಕಾಗಿಯೆ ಇತ್ತ ಬಂದೆನು. ನನಗೆ ಮಾಡಲು ಸಾಧ್ಯವಿದ್ದದ್ದು ಇಷ್ಟೇ ಇತ್ತು. ಈ ಹೊತ್ತು ಕ್ಲಬ್ಬಿನಲ್ಲಿ ಒಂದು ಖಾಸಗಿ ಸಭೆಯನ್ನು ಕರೆದು ಈ ಪ್ರಸಂಗವನ್ನು ಚರ್ಚಿಸುವವರಿದ್ದೇವೆ. ಇದನ್ನು ನಿನಗೆ ತಿಳಿಸು ವದೂ ಒಂದು ಕೆಲಸವಿತ್ತು. ಆದರೆ ನಿನಗೆ ಬರಬೇಕೆಂಬ ಲಕ್ಷ್ಯವಾದರೂ ಉಳಿಯುವದೋ ಇಲ್ಲವೊ ! ನೀನು ಇತ್ತೀಚೆ ಕ್ಲಬ್ಬಿಗೆ ಬರುವದನ್ನೆ ಕಡಿಮೆ ಮಾಡಿದ್ದೀ.'

'ಆಗಲಿ, ನಿಶ್ಚಯವಾಗಿ ಬರುವೆನು. ನನ್ನ ಸಲುವಾಗಿ ತಾವಿಷ್ಟು ಶ್ರಮ ತೆಗೆದುಕೊಂಡದ್ದಕ್ಕೆ ನಾನು ತಮಗೆ ಕೃತಜ್ಞನಾಗಿದ್ದೇನೆ. ಆದರೆ ತಮಗೆ ಇನ್ನೊಂದು ಮಾತು ಕೇಳಬೇಕಾಗಿದೆ, ಕೇಳಿಬಿಡುತ್ತೇನೆ. ಮಿಸ್ ಕ್ವೆಸ್ಟೆಡ್‌ಳು ಎಲ್ಲಿದ್ದಾಳೆ ?'

ಅವಳೀಗ ಅಸ್ವಸ್ಥಳಿದ್ದಾಳೆಂದು ಸನ್ನೆಮಾಡಿ ತಿಳಿಸಿದನು.

'ಕೆಟ್ಟಿತು, ಕೆಟ್ಟಿತು ! ಇದು ಭಯಂಕರಕ್ಕಿಟ್ಟಿತು !' ಎಂದು ಅವನು ಮಿಡುಕಿದನು.

ಕಲೆಕ್ಟರನು ತನ್ನನ್ನು ದುರುದುರು ನೋಡಿದರೂ ಇನ್ನೂ ಅವನು ಶಾಂತನಾಗಿಯೆ ಇದ್ದನು. 'ಇಂಗ್ಲೆಂಡದಿಂದ ಹೊಸದಾಗಿ ಬಂದ ಹುಡುಗಿ ಯರೆಲ್ಲ ಹೀಗೆಯೆ !' ಎಂಬ ಆಗಲೆ ಪ್ರಚಾರದಲ್ಲಿದ್ದ ಅವನ ಮಾತಿನಿಂದ ಅವನ ತಲೆ ಇನ್ನೂ ತಿರುಗಿದ್ದಿಲ್ಲ. ಅವನು 'ತನ್ನವರು, ತನ್ನ ಜಾತಿಯವರು' ಎಂದು

ಅವರ ಧ್ವಜದ ಕೆಳಗೆ ನಿಲ್ಲಲಿಕ್ಕೆಂದೇನು ಓಡಿ ಬಂದಿರಲಿಲ್ಲ. ಜನಜಂಗುಳಿಯು —ಯಾವುದನ್ನೇ ಆಗಲಿ—ತನ್ನ ಭಾವನಾವೇಶದ ಪ್ರಮಾಣದಿಂದಲೆ ನಿರ್ಣಯಿಸುತ್ತಿದ್ದರೂ ಇವನು ಮಾತ್ರ ಹಾಗೆ ಮಾಡದೆ ಆದ ಸಂಗತಿಗಳನ್ನೆಲ್ಲ ಬುದ್ಧಿಯ ಒರೆಗೆ ಹಚ್ಚಿಯೆ ನೋಡುತ್ತಿದ್ದನು. ಆ್ಯಂಗ್ಲೋ-ಇಂಡಿಯನ್ನನನ್ನು ಈ ವಿಚಾರ-ದೀಪವು ರೊಚ್ಚಿಗೆಬ್ಬಿಸುವಷ್ಟು ಇನ್ನಾವುದೂ ಎಬ್ಬಿಸಲಾರದು. ಚಂದ್ರಾಪುರದಲ್ಲಿದ್ದ ಯುರೋಪಿಯನ್ನರೆಲ್ಲ ತಮ್ಮ ವಿಚಾರಶಕ್ತಿಯನ್ನೂ ವ್ಯಕ್ತಿತ್ವವನ್ನೂ ಒದಿಗಿರಿಸಿ ಜಾತೀಯ ಭಾವನೆಯಿಂದ ಆ ಜನಜಂಗುಳಿಯಲ್ಲಿಯೆ ಬೆರೆತುಕೊಂಡಿದ್ದರು. ಅವರಲ್ಲಿ ಅವಳಿಗಾಗಿ ಕರುಣೆ, ಅವನಿಗಾಗಿ ಕೋಪ, ಅಭಿಮಾನಕ್ಕಾಗಿ ಶೌರ್ಯ ತುಂಬಿದ್ದವು. ಅವರ ಈ ಆವೇಗವನ್ನು ಬುದ್ಧಿಯೊಡನೆ ಬೆಸೆಯುವ ಶಕ್ತಿಯೂ ಎರಡನ್ನು ಒಂದುಮಾಡುವ ಸಮರಸಭಾವವೂ ಅವರಲ್ಲಿಂದ ಹೊರಟುಹೋಗಿದ್ದವು.

ಫೀಲ್ಡಿಂಗನೊಡನೆ ಮಾತಾಡುವದನ್ನು ಮುಗಿಸಿ ಕಲೆಕ್ಟರನು ಪ್ಲ್ಯಾಟ್‌ಫಾರ್ಮಿನ ಮೇಲೆ ಬಂದನು. ಅಲ್ಲಿಯ ಗೊಂದಲವನ್ನು ನೋಡಿದನು. ತೀರ ತಾಳ್ಮೆಗೆಟ್ಟಿತ್ತು. ರೋನಿಯ ಚಪ್ರಾಶಿಗೆ ಆ ಸ್ತ್ರೀಯರ ಹಲಕೆಲವು ಸಣ್ಣಪುಟ್ಟ ಸಾಮಾನುಗಳನ್ನು ತರಲಿಕ್ಕೆ ಹೇಳಿದ್ದರು. ಅವನು ಅವನ್ನಿಷ್ಟೇ ತರದೆ ತನಗೇನೂ ಸಂಬಂಧವಿಲ್ಲದ ಇನ್ನೂ ಬೇರೆ ಪದಾರ್ಥಗಳನ್ನೂ ತೆಗೆದುಕೊಳ್ಳಹತ್ತಿದನು. ಅವನೂ ಈ ಸಿಟ್ಟಿಗೆದ್ದ ಇಂಗ್ಲೀಷರಂತೆಯೆ ನಡೆಸಿದ್ದನು. ಲತೀಫನು ಅವನನ್ನು ತಡೆಯಲಿಕ್ಕೆ ಯಾವ ಪ್ರಯತ್ನವನ್ನೂ ಮಾಡಲಿಲ್ಲ. ಹಸನನು ತನ್ನ ರುಮಾಲವನ್ನು ಕೆಳಕ್ಕೆ ಒಗೆದು ಅಳಹತ್ತಿದನು. ಆತ್ಮಗೌರವಕ್ಕಾಗಿ ಉದಾರತನದಿಂದ ಕಲೆಹಾಕಿದ ಸೌಕರ್ಯಗಳೆಲ್ಲ ನೆಲದ ಮೇಲೆ ಉರುಳಾಡುತ್ತಿದ್ದವು; ಮತ್ತು ಬಿಸಿಲಿಗೆ ಹಾಳಾಗಿ ಹೋಗುತ್ತಿದ್ದವು. ಕಲೆಕ್ಟರನು ಒಮ್ಮೆ ನೋಡಿದ ಕೂಡಲೆ ಸ್ಥಿತಿಯನ್ನು ತಿಳಿದುಕೊಂಡನು. ಸಿಟ್ಟಿನಿಂದ ಒಳಗೆ ಕುದಿಯುತ್ತಿದ್ದರೂ ಅವನ ನ್ಯಾಯಬುದ್ಧಿಯು ಜಾಗ್ರತವಾಗಿ ಅವಶ್ಯವಿದ್ದ ಒಂದು ಮಾತನ್ನು ಅವರಿಗೆ ಹೇಳಿದನು. ಲೂಟಿಯು ನಿಂತಿತು. ಆಮೇಲೆ ಅವನು ಗಾಡಿಯಲ್ಲಿ ಕುಳಿತುಕೊಂಡು ತನ್ನ ಬಂಗ್ಲೆಕ್ಕೆ ಹೋದನು. ಅಲ್ಲಿ ಮತ್ತೆ ತನ್ನ ಕೆರಳಿದ ಭಾವನೆಗಳಿಗೆಡೆ ಕೊಟ್ಟನು. ಕೂಲಿ-ಕುಂಬಳಿಯವರು ತಿಪ್ಪೆಯ ತಗ್ಗಿನಲ್ಲಿ ಮಲಗಿದ್ದನ್ನೂ

ಅಂಗಡಿಕಾರರು ಎದ್ದು ತಮ್ಮ ತಮ್ಮ ಕಟ್ಟೆಯ ಮೇಲೆ ನಿಂತು ನಮಸ್ಕಾರ ಮಾಡುವದನ್ನೂ ನೋಡಿ ' ನೀವು ಎಂಥವರೆನ್ನುವದು ಈಗ ನನಗೆ ತಿಳಿ ಯಿತು! ಆಗಲಿ, ಅದಕ್ಕೆ ತಕ್ಕ ಫಲ ಉಣ್ಣುವಿರಿ; ಅಯ್ಯೋ ಎಂದು ಕಿರುಚು ವಿರಿ. ' ಎಂದು ತನ್ನಲ್ಲಿ ತಾನೆ ಅವರನ್ನು ಶಪಿಸಿದನು.

—

## ಪ್ರಕರಣ ೧೪

ಡಿಸ್ಟ್ರಿಕ್ಟ ಸುಪರಿಂಟೆಂಡೆಂಟ್‌ರಾದ ಮ್ಯಾಕ್‌ಬ್ರಾಯಿಡರು ಚಂದ್ರ ಪುರದ ಅಧಿಕಾರಿಗಳಲ್ಲೆಲ್ಲ ಒಳ್ಳೆ ವಿಚಾರಶೀಲರೂ, ಸುಶಿಕ್ಷಿತರೂ ವಿನಯ ಸಂಪನ್ನರೂ ಆಗಿದ್ದರು. ದಾಂಪತ್ಯ-ಜೀವನದಲ್ಲಿ ಅವರಿಗೆ ಸುಖವಿಲ್ಲದ್ದರಿಂದ ಅವರ ಮನಸು ವೇದಾಂತದ ಕಡೆಗೊಲೆದಿತ್ತು. ತಮ್ಮ ನಿಸ್ಸಾರವಾದ ಜೀವನದಲ್ಲಿ ಅವರಿಗೆ ಅತೃಪ್ತಿಯಿದ್ದರೂ ಕಂಡಕಂಡವರೆದುರಿಗೆ ಗೊಣ ಗುಟ್ಟುವ ಸ್ವಭಾವವಲ್ಲ ಅವರದು. ಸಿಟ್ಟು, ಸೆಡವು ಅವರಿಗೆ ಗೊತ್ತೇ ಇರಲಿಲ್ಲ. ಅವರ ಮಾತಿನಲ್ಲಿ ಮಿದುವಿತ್ತು, ಮಿತಿಯಿತ್ತು, ಹದವಿತ್ತು.

ಅಝೀಜನು ಬಂದೊಡನೆ ಅವನನ್ನು ಸೌಜನ್ಯದಿಂದ ಬರಮಾಡಿ ಕೊಂಡು ಅವನಿಗೆ ಎಷ್ಟೋ ಸಮಾಧಾನದ ಮಾತುಗಳನ್ನು ಹೇಳಿದರು. ' ನೀನು ಜಾಮೀನು ಕೊಡುವ ವರೆಗೆ ನಿನ್ನನ್ನಿಲ್ಲಿ ತಡೆದಿಡಬೇಕಾಗುವದು; ನಿನ್ನ ಮಿತ್ರರು ಅರ್ಜಿ ಕೊಟ್ಟೇಕೊಡುವರು; ಚಿಂತಿಸಬೇಡ; ಬೇಕಾದರೆ ಅವರನ್ನು ನಿನ್ನ ಭೆಟ್ಟಿಯಾಗಲಿಕ್ಕೆ ಬಿಡುವೆವು. ನನಗೆ ಕೆಲವೊಂದು ಸುದ್ದಿ ಬಂದಿದ್ದರಿಂದ ಮತ್ತು ಕೆಲ ಸಂಗತಿಗಳೂ ಗೊತ್ತಾಗಿದ್ದರಿಂದ ಅವಕ್ಕೆ ತಕ್ಕಂತೆ ನಾನು ನಡೆಯಬೇಕಾಗಿದೆ. ನಾನೇನು ತೀರ್ಪು ಕೊಡುವ ನ್ಯಾಯಾಧೀಶ ನಲ್ಲ ' ಎಂದು ಅಳುತ್ತಿರುವ ಅವನನ್ನು ಒಳಕ್ಕೆ ಕರೆದೊಯ್ದರು.

ಅವರಿಗೆ ಅಝೀಜನ ಈ ಅಧಃಪತನವನ್ನು ನೋಡಿ ಬಹಳ ಕೆಡಕೆನಿಸಿತು. ಆದರೆ ಅಝೀಜನು ಹಾಗೆ ಮಾಡಿದ್ದರಲ್ಲಿಯೂ ಅವನಿಗೇನು ಆಶ್ಚರ್ಯವೆನಿಸ ಲಿಲ್ಲ. ಯಾಕಂದರೆ ಈ ಉಷ್ಣಕಟಿಬಂಧದಲ್ಲಿರುವ ಜನರ ಬಗ್ಗೆಯೆ ಅವರು ಒಂದು ಸಿದ್ಧಾಂತವನ್ನೇ ಮಾಡಿಕೊಂಡಿದ್ದರು. ಅದೆಂದರೆ ' ಅಲ್ಲಿಯ ಎಲ್ಲ

ಜನರೂ—ಪಾಪ ದುರ್ದೈವಿಗಳು!—ಒಳಒಳಗೆ ಹೋಗಿ ನೋಡಿದರೆ ಮೂಲ ದಲ್ಲಿ ದುರಾಚಾರಿಗಳೇ ಇರುತ್ತಾರೆ. ಇದಕ್ಕೆ ಕಾರಣ ಬಹಳ ಸರಳವಿದೆ; ಅವರು ಮೂವತ್ತು 'ಡಿಗ್ರಿ' ಅಕ್ಷಾಂಶದ ದಕ್ಷಿಣಕ್ಕೆ ಇರುತ್ತಾರೆ. ಅದು ಅವರ ದೋಷವಲ್ಲ; ಅವರಿಗದನ್ನು ತಪ್ಪಿಸಲಿಕ್ಕೆ ಸ್ವಲ್ಪೂ ಅವಕಾಶವಿಲ್ಲ—ಮತ್ತೆ ನಾವಿಲ್ಲಿರಬೇಕಾದರೂ ನಾವೂ ಹಾಗೆಯೆ ಆಗಬೇಕು.' ಇದನ್ನು ಹೇಳುವಾಗ ತಾವು ಕಾರಾಚಿಯಲ್ಲಿ ಹುಟ್ಟಿದ್ದರಿಂದ ತಮ್ಮ ತತ್ತ್ವಕ್ಕೆ ತಾವೇ ಬಾಧೆ ತಂದುಕೊಳ್ಳುತ್ತೇವೆಂಬುದನ್ನು ಮರೆತುಬಿಡುತ್ತಾರೆ. ಒಮ್ಮೊಮ್ಮೆ ಅದನ್ನೂ ನಗೆಯಾಟದಲ್ಲಿ ಒಪ್ಪಿಕೊಂಡುಬಿಡುತ್ತಾರೆ.

'ಅಂಥವರ ಪೈಕಿ ಮತ್ತೊಬ್ಬನು ಸಿಕ್ಕನು!' ಎಂದು ಅವರು ಮ್ಯಾಜಿಸ್ಟ್ರೇಟರಿಗೆ ಕಳಿಸುವ ತಮ್ಮ ವರದಿಯನ್ನು ತಯಾರು ಮಾಡುತ್ತಿರುವಾಗ ಯೋಚಿಸಿದರು. ಅಷ್ಟರಲ್ಲಿ ಫೀಲ್ಡಿಂಗನು ಬಂದಿದ್ದರಿಂದ ಆ ವರದಿ ಅಷ್ಟಕ್ಕೇ ನಿಂತಿತು. ಫೀಲ್ಡಿಂಗನು ಬಂದವನೆ ನೇರವಾಗಿ ತನ್ನ ವಿಷಯವನ್ನೇ ಪ್ರಸ್ತಾಪಿಸಿದನು. ಸುಪರಿಂಟೆಂಡೆಂಟರೂ ಮುಚ್ಚುಮರೆ ಯಾವುದೂ ಇಲ್ಲದೆ 'ಹೌದು, ಈಗ ಒಂದು ತಾಸಿನ ಹಿಂದೆ, ಚಿಂತಾಜನಕ ಸ್ಥಿತಿಯಲ್ಲಿದ್ದ ಕ್ವೆಸ್ಟೆಡ್‌ಳೊಡನೆ ಡೆರೆಕ್ಕಳು ತನ್ನ ಮುದಕಲ್ ಕಾರಿನಲ್ಲಿ ಇಲ್ಲಿಗೇ ಬಂದಿದ್ದಳು. ನಾನೂ ಆಕಸ್ಮಾತ್ ಮನೆಯಲ್ಲಿಯೇ ಇದ್ದೆ. ಅವರು ಕೇಳಿದ್ದನ್ನೆಲ್ಲ ಬರೆದುಕೊಂಡೆ. ಕೂಡಲೆ ರೇಲ್ವೆ ಸ್ಟೇಶನ್ ಮೇಲೆಯೆ ಅವನನ್ನು ಕೈದುಮಾಡುವ ವ್ಯವಸ್ಥೆ ಮಾಡಿದೆ' ಎಂದು ಹೇಳಿದರು.

'ಹೀಗೇನು? ಹಾಗಾದರೆ ಅವರು ಹೊರಸಿದ ಆರೋಪವಾದರೂ ಯಾವುದು?'

'ಅವಳ ಹಿಂದೆ ಹಿಂದೆ ಗುಹೆಯಲ್ಲಿ ಹೋಗಿ ಅವಳನ್ನು ಹಿಡಿದುಕೊಳ್ಳ ಬೇಕೆಂದು ಮೈಮೇಲೆ ಹೋದನಂತೆ. ಆಗ ಅವಳು ತನ್ನ ಕೈಯಲ್ಲಿದ್ದ ದುರ್ಬಿಣೆಯಿಂದ ಅವನಿಗೆ ಹೊಡೆದಳಂತೆ. ಆದರೂ ಬಿಡದೆ ಅವನು ಜಗ್ಗಿದ ನಂತೆ. ಆ ಜಗ್ಗಾಟದಲ್ಲಿ ದುರ್ಬಿಣೆಯ ತೊಗಲಪಟ್ಟಿಯು ಹರಿಯಿತಂತೆ. ಆದರಿಂದಲೇ ಅವಳು ಪಾರಾದಳಂತೆ. ಈಗ ಅವನನ್ನು ತಪಾಸು ಮಾಡಲಾಗಿ ಆ ದುರ್ಬಿಣೆಯು ಅವನ ಜೇಬಿನಲ್ಲಿತ್ತು.'

'ಛೇ, ಛೇ! ಅಲ್ಲ ಅಲ್ಲ! ಇದು ತಪ್ಪು ತಿಳಿವಳಿಕೆಯಾಗಿದೆ. ಇದನ್ನು ವಿಚಾರ ಮಾಡಿದರೆ ಐದು ನಿಮಿಷಗಳಲ್ಲಿ ಹೋಗಲಾಡಿಸಬಹುದು' ಎಂದು ಅವನು ಕೂಗಿಕೊಂಡನು.

'ಅದನ್ನಷ್ಟು ನೋಡಿಯಾದರೂ ನೋಡು' ಎಂದು ಆ ದುರ್ಬಿಣಿಯನ್ನೆ ತೋರಿಸಿದನು. ಅದರ ತೊಗಲಪಟ್ಟಿಯು ಹೊಸದಾಗಿ ಹರಿದಿತ್ತು. ದುರ್ಬಿಣಿಯೂ ನೆಗ್ಗಿತ್ತು. ಅದೇ ಈಗ ಸಾಕ್ಷಿಯಾಗಿ ನಿಂತು 'ಇವನೇ ಅಪರಾಧಿ!' ಎಂದು ಹೇಳಿತು.

'ಅವಳೇನಾದರೂ ಹೆಚ್ಚಿಗೆ ಹೇಳಿದಳೇ?'

'ಅಲ್ಲಿಯ ಪ್ರತಿಧ್ವನಿಯು ಅವಳನ್ನು ಅಂಜಿಸಿದಂತೆ ಕಾಣುತ್ತದೆ. ನೀನು ಆ ಗುಹೆಗಳಲ್ಲಿ ಹೋಗಿದ್ದಿಲ್ಲವೇನು?'

'ನಾನು ಅವುಗಳಲ್ಲೊಂದನ್ನು ಮಾತ್ರ ನೋಡಿದೆ. ಅಲ್ಲಿಯೂ ಪ್ರತಿಧ್ವನಿಯಾಗುತ್ತಿತ್ತು. ಅಷ್ಟಕ್ಕೇನೇ ಅವಳು ಅಂಜಿದ್ದು?'

'ನಾನು ಅವಳಿಗೆ ಇಲ್ಲದ ಅನೇಕ ಪ್ರಶ್ನೆಗಳನ್ನು ಕೇಳಿ ತೊಂದರೆ ಕೊಡುವದಾಗಲಿಲ್ಲ. ಹೇಗಾದರೂ ನ್ಯಾಯಾಸ್ಥಾನದ ಎದುರಿಗೆ ನಿಂತಾಗ ಅವಳು ಆ ಎಲ್ಲ ಪ್ರಶ್ನೆಗಳಿಗೂ ಉತ್ತರ ಕೊಡಲೇಬೇಕಾಗುವದಲ್ಲ ದೇವರೇ! ಈ ಮಾರವಾರ ಗುಡ್ಡ, ಈ ಗುಹೆಗಳು, ಇವೆಲ್ಲ ಸಮುದ್ರದಲ್ಲಿ ಮುಳುಗಿ ಹೋಗಿದ್ದರೆ ಎಷ್ಟು ಹಿತವಾಗುತ್ತಿತ್ತು! ಪ್ರತಿನಿತ್ಯ ಸಂಜೆಗೆ ಕ್ಲಬ್ಬಿನಲ್ಲಿ ನಿಂತು ನೋಡುತ್ತಿದ್ದಾಗ ಇಂತಹ ಅನಾಹುತಕ್ಕೆ ಅವು ಕಾರಣವಾಗಬಹುದೆಂದೆನಿಸಿರಲಿಲ್ಲ ... ಹೌದು, ನಾವು ಹೊರಡಬೇಕಿನ್ನು' ಎಂದು ಏಳುವಷ್ಟರಲ್ಲಿ ಹೊರಗಿನಿಂದ ಭೆಟ್ಟಿಗಾಗಿ ಒಂದು ಚೀಟಿ ಬಂತು. ಆರೋಪಿಯ ಕಡೆಯ ವಕೀಲನಾದ ಮಹಮ್ಮದಲಿಯೆ ಆ ಚೀಟಿಯನ್ನು ಕಳಿಸಿದ್ದನು. ಮ್ಯಾಕ್‌ಬ್ರಾಯಿಡನು ಅದನ್ನು ನೋಡಿ ಉಸಿರ್ಗರೆದು ಒಳಗೆ ಬರಲು ಅಪ್ಪಣೆ ಕೊಟ್ಟು ಮತ್ತೆ ಫೀಲ್ಡಿಂಗನೊಡನೆ ಮಾತು ಮುಂದರಿಸಿದನು. 'ನಾನು ಮಿಸ್ ಡೆರೆಕ್ಕಳಿಂದ ಇನ್ನೂ ಹೆಚ್ಚು ಕೇಳಿಕೊಂಡೆ; ಅವಳು ನಮ್ಮ ಹಳೆಯ ಪರಿಚಿತಳು; ಮತ್ತು ಮಾತಿನಲ್ಲಿ ನನ್ನಂತೆಯೆ ಮುಚ್ಚುಮರೆಯಿಲ್ಲದವಳು; ಅವಳು ಹೇಳಿದ್ದೆಂದರೆ ಹೀಗೆ: ನೀನು ಅವರಿಳಿದುಕೊಂಡ ಸ್ಥಳವನ್ನು ಗೊತ್ತುಹಚ್ಚಲು ಹೋದೆಯಂತೆ; ಅತ್ತ ಹೋದೊಡನೆ ಇತ್ತ ಕಾವಾದೋಲದ ಮೇಲೆ ಕಲ್ಲುಗಳು

ಬೀಳುವದನ್ನು ಕೇಳಿದಳಂತೆ; ಮೇಲಕ್ಕೆ ನೋಡಲು ಮಿಸ್ ಕ್ವೆಸ್ಟೆಡ್‌ಳು ಕಡಿದಾದ ಬಂಡೆಗಲ್ಲ ಕೆಳಗೆ ನೇರವಾಗಿ ಓಡಿಬರುವದು ಕಂಡಿತಂತೆ; ಆಯಿತು, ಒಡನೆಯೆ ಇವಳೂ ಕಷ್ಟಪಟ್ಟು ಹತ್ತಿ ಅವಳಿದ್ದಲ್ಲಿಗೆ ಹೋದಳಂತೆ; ಅಲ್ಲಿ ಹೋಗಿ ನೋಡಿದಾಗ ನಿಜವಾಗಿ ಕ್ವೆಸ್ಟೆಡ್‌ಳ ಅವತಾರವೇ ಮುಗಿದಂತಾಗಿತ್ತಂತೆ; ಅವಳ ಟೊಪ್ಪಿಗೆ ಎಲ್ಲೋ ಹೋಗಿ ಬಿದ್ದಿತ್ತಂತೆ....'

'ಅಂತೂ ಇದೆಲ್ಲ 'ಅಂತೆ'ಯ ಕಂತೆಯೇ ಸರಿ!' ಎಂದು ಮನಸ್ಸಿನಲ್ಲಿಯೆ ಅಂದುಕೊಂಡು ಮತ್ತೆ 'ಹಾಗಾದರೆ ಅವಳೊಡನೆ ಆ ದಾರಿ-ತೋರಿಸುವವನು ಇದ್ದಿಲ್ಲವೇ?' ಎಂದು ನಡುವೆಯೆ ಕೇಳಿದನು.

'ಇದ್ದಿಲ್ಲವಂತೆ. ಅವಳು ಡಬಗಳ್ಳಿಯಲ್ಲಿ ಸಿಕ್ಕಿಬಿದ್ದಿದ್ದಳಂತೆ; ಮಿಸ್ ಡೆರೆಕ್ಕಳೇ ಹೋಗಿ ಅವಳ ಜೀವವನ್ನುಳಿಸಿದಳಂತೆ; ಅಲ್ಲಿಂದ ಅವಳನ್ನು ಹೇಗೋ ಮಾಡಿ ಕಾರಿದ್ದಲ್ಲಿಗೆ ಕರೆದುಕೊಂಡು ಬಂದಳಂತೆ; ಕಾರಿನಲ್ಲಿಯು ಹಿಂದೀ ಡ್ರಾಯವ್ಹರನನ್ನು ನೋಡಿ ಕ್ವೆಸ್ಟೆಡ್‌ಳಿಗೆ ತಡೆದುಕೊಳ್ಳುವದಾಗದೆ 'ಅವನನ್ನು ದೂರ ಒಯ್ಯಿರಿ' ಎಂದು ಕೂಗಿದಳಂತೆ; ಹೀಗಾದದ್ದರಿಂದಲೇ ಡೆರೆಕ್ಕಳಿಗೆ ಅವಳ ಹಿಂದಿನ ಸಂಗತಿಯ ಎಳೆ ಸಿಕ್ಕಿತಂತೆ; ಕೂಡಲೆ ಅವಳನ್ನು ಕರೆದುಕೊಂಡು ನಮ್ಮ ಬಂಗ್ಲೆಗೇ ನೇರವಾಗಿ ಬಂದಳಂತೆ; ಈಗ ಇಬ್ಬರೂ ಇಲ್ಲಿಯೆ ಇದ್ದಾರೆ. ನನಗೆ ಗೊತ್ತಿದ್ದ ಕಥೆಯೆಂದರೆ ಇದೇ. ಏನೇ ಆಗಲಿ, ಡೆರೆಕ್ಕಳು ಒಳ್ಳೆ ಬುದ್ಧಿ ಉಪಯೋಗ ಮಾಡಿ ನಡೆದಳೆಂದೇ ನನಗೆನಿಸುತ್ತದೆ.'

'ಹಾಗಾದರೆ ಮಿಸ್ ಕ್ವೆಸ್ಟೆಡ್‌ಳನ್ನು ಭೆಟ್ಟಿಯಾಗುವ ಯೋಗವು ನನಗಿಲ್ಲವೆಂದು ತೋರುತ್ತದೆ?' ಎಂದು ಫೀಲ್ಡಿಂಗನು ಒಮ್ಮೆಲೆ ಕೇಳಿದನು.

'ಅದು ಸಾಧಿಸುವದು ಮಾತ್ರ ಬಹಳ ಕಷ್ಟದ್ದೆಂದೇ ತೋರುತ್ತದೆ.'

'ನೀನು ಹೀಗೇ ಹೇಳಬಹುದೆಂದು ನನಗೆ ಅಂಜಿಕೆಯೇ ಇತ್ತು. ನಾನು ಅವಳನ್ನು ನೋಡುವದು ಅಗತ್ಯವಿತ್ತು.'

'ಅವಳೀಗ ಯಾರನ್ನೂ ಕಾಣುವ ಸ್ಥಿತಿಯಲ್ಲಿಲ್ಲ. ಇದಲ್ಲದೆ ನಿನಗೆ ಅವಳ ಪರಿಚಯವೂ ಚೆನ್ನಾಗಿಲ್ಲ.'

'ಹೌದು; ಏನೂ ಇಲ್ಲ.... ಆದರೆ ಅವಳಿಗೇನೋ ಒಂದು ತರಹದ ಭ್ರಮೆ ಹಿಡಿದುಕೊಂಡಿದೆಯೆಂದೆನಿಸುತ್ತದೆ; ಮತ್ತು ಪಾಪ, ಆ ಹುಡುಗನೂ ನಿರಪರಾಧಿಯೆಂದು ತೋರುತ್ತದೆ.'

ಇದನ್ನು ಕೇಳಿ ಆ ಪೋಲಿಸ ಅಧಿಕಾರಿಯು ಬೆಪ್ಪನೆ ಬೆರಗಾದನು. ಅವನ ಮುಖದ ಮೇಲೆ ಯಾವುದೊ ಒಂದು ಛಾಯೆಯು ಹಾಯ್ದು ಹೋಯಿತು. ಅವನ ಮನಸ್ಸು ಹರಿದು ಹಂಚಿದಂತಾಯಿತು; ಸಹನೆ ಕೈಬಿಟ್ಟಿರಿತು. 'ಇದು—ಇ—ದು ನಿನ್ನ ಮನಸ್ಸಿನಲ್ಲಿದೆಯೆಂಬು ನನಗೆ ಕಲ್ಪನೆಯೆ ಇದ್ದಿಲ್ಲ!' ಎಂದು ನುಡಿದು ತನ್ನ ಎದುರಿಗಿದ್ದ ಅವಳ ರುಜುಹಾಕಿದ ಜವಾಬಿನ ಕಡೆಗೆ ನೋಡಿದನು.

'ಆ ದುರ್ಬಿಣಿಯೆನೊ ಒಂದು ನಿಮಿಷ ನನ್ನನ್ನು ದಂಗುಬಡಿಸಿತು. ಆದರೆ ಸ್ವಲ್ಪ ವಿಚಾರ ಮಾಡಲಾಗಿ, ಅವಳ ಮೈಮೇಲೆ ಹೋಗಲಿಕ್ಕೆ ಯತ್ನಿಸಿದವನು ಅವಳ ಆ ದುರ್ಬಿಣಿಯನ್ನೆ ತನ್ನ ಜೇಬಿನಲ್ಲಿಯೇ ಇಟ್ಟುಕೊಳ್ಳುವದು ತೀರ ಅಸಂಭವ ಎಂದು ತೋರಿತು.'

'ಅದೇ ತೀರ ಸಂಭವವೆಂದೂ ನನಗೆನಿಸುತ್ತದೆ. ಒಬ್ಬ ಹಿಂದೀ ಮನುಷ್ಯನು ಒಮ್ಮೆ ಕೆಟ್ಟಹಾದಿ ಹಿಡಿದನೆಂದರೆ ತೀರಿತು, ಅವನು ಏನು ಮಾಡಿಯಾನು, ಏನು ಮಾಡಲಿಕ್ಕಿಲ್ಲ ಎಂಬುದೇ ತಿಳಿಯುವದಿಲ್ಲ.'

'ನನಗಿದರ ಅರ್ಥವೇ ಆಗುವದಿಲ್ಲ.'

'ಅದು ಹೇಗೆ? ಅಪರಾಧ ಎಂದೊಡನೆ ನಿನ್ನ ಮನಸ್ಸಿನಲ್ಲಿ ಇಂಗ್ಲಿಶರ ಅಪರಾಧವೇ ಬರುತ್ತದೆಂದು ಕಾಣುತ್ತದೆ. ಈ ದೇಶದ ಜನರ ಮಾನಸಿಕ ಸ್ಥಿತಿಯೇ ಬೇರೆಯಿದೆ. ಅವನು ಗುಡ್ಡವನ್ನಿಳಿದು ಕೆಳಗೆ ನಿನ್ನನ್ನು ಸ್ವಾಗತಿಸಲಿಕ್ಕೆ ಒಂದಾಗ ಅವನ ಮನಸ್ಸು ಎಷ್ಟು ಉದ್ವೇಗಗೊಂಡಿರಲಿಲ್ಲವೆಂದು ಇನ್ನು ಮುಂದೆ ನೀನೇ ಹೇಳುವಿಯೆಂದು ನಾನು ಧೈರ್ಯದಿಂದ ಈಗಲೆ ಸಾರುತ್ತೇನೆ ಬೇಕಾದರೆ. ಅವನೇಕೆ ನಿರಪರಾಧಿಯಿರಬಾರದೆಂಬುದಕ್ಕೆ ಬಂಡಾಯ ಕಾಲದ ಕಾಗದ ಪತ್ರಗಳೇ ನಿನಗೆ ಸಾಕ್ಷಿ ಹೇಳುತ್ತವೆ; ಒಮ್ಮೆ ಓದಿ ನೋಡು, ಅಂದರೆ ತಿಳಿಯುವದು. ಭಗವದ್ಗೀತೆಯಕಿಂತ ಆ ಕಾಗದ ಪತ್ರಗಳೇ ಈ ದೇಶದಲ್ಲಿ ನಮಗೆ ಬಾಯಿಬಲ್ಲಾಗಬೇಕು. ನಾನಿದರಲ್ಲಿ ಪಶುವಿನಂತೆ ಮಾತ್ರ ಆಚರಿಸಿಲ್ಲವಷ್ಟೆ? ಆದರೆ ಫೀಲ್ಡಿಂಗ್! ನಾನು ನಿನಗೆ ಈ ಮೊದಲೇ ಹೇಳಿದ್ದೇನೆ, ನೀನು ಎಷ್ಟೆಂದರೂ ಶಾಲೆಯ ಶಿಕ್ಷಕನು. ನಿನಗೆ ಇವರ ಅವಗುಣ ತಿಳಿಯುವದು ಸಾಧ್ಯವೇ ಇಲ್ಲ. ನೀನು ಅವರನ್ನು ಯಾವಾಗಲೂ ನೋಡುವದು ಅವರು ಶಿವಗುಣದಲ್ಲಿದ್ದಾಗಲೆ. ಅಂತೇ

ನೀನು ಹೀಗೆ ತಪ್ಪು ಹಾದಿ ಹಿಡಿದಿದ್ದೀ. ಚಿಕ್ಕವರಿದ್ದಾಗ ಅವರು ಬಹಳ ಚೆನ್ನಾಗಿರಬಹುದು. ಆದರೆ ಅದೇ ಅವರು ದೊಡ್ಡವರಾಗಿ ಬೆಳೆದ ಮೇಲೆ ಹೇಗೆ ಆಗುತ್ತಾರೆಂಬುದು ನನಗೆ ಹೆಚ್ಚು ಗೊತ್ತು; ನಿನಗಲ್ಲ. ಉದಾಹರಣೆಗಾಗಿ ಇದನ್ನೇ ನೋಡು....' ಎಂದು ಅವನು ಅಝೀಜನ ಒಂದು ಸಣ್ಣ ಚೀಲವನ್ನು ಎತ್ತಿ ಹಿಡಿದು ತೋರಿಸಿ 'ಇದರಲ್ಲಿದ್ದುದೆಲ್ಲವನ್ನೂ ನಾನು ನೋಡಿದ್ದೇನೆ. ಅವು ಅಝೀಜನ ಬಗ್ಗೆ ಅಷ್ಟೊಂದು ಒಳ್ಳೆಯ ಅಭಿಪ್ರಾಯವನ್ನು ಹುಟ್ಟಿಸುವದಿಲ್ಲ. ಇಲ್ಲಿ ನೋಡು, ವೇಶ್ಯೆಯರ ದಲಾಲನಾದ ಒಬ್ಬ ಅವನ ಮಿತ್ರನ ಕಾಗದವಿದೆ.'

'ಅವನ ಖಾಸಗೀ ಪತ್ರಗಳನ್ನು ನೋಡುವ ಇಚ್ಛೆ ನನಗಿಲ್ಲ.'

'ಅವನ ನೀತಿಯ ನೆಲೆಯನ್ನು ತೋರಿಸಿಕೊಡುವದಕ್ಕಾಗಿ ಇವುಗಳನ್ನು ಕೋರ್ಟಿನಲ್ಲಿಯಾದರೂ ಓದಲೇಬೇಕಾಗುತ್ತದೆ. ಆಗಾದರೂ ನೀನು ಕೇಳಬೇಕಾಗುವದು. ಅವನು ಕಲಕತ್ತೆಯಲ್ಲಿಯೂ ಹೆಂಗಸಿಡಲಿಕ್ಕೆ ಪ್ರಯತ್ನಪಟ್ಟಂತೆ ಕಾಣುತ್ತದೆ!'

'ಓ! ಸಾಕು, ಸಾಕು.'

ಈ ಉತ್ತರದಿಂದ ಮ್ಯಾಕ್‌ಬ್ರಾಯಿಡನ ಸರಳ ಮನಸ್ಸೂ ದಿಗಿಲುಗೊಂಡಿತು. ಅವನು ಒಂದು ಕ್ಷಣ ಸುಮ್ಮನೆ ಕುಳಿತನು. ಯಾರಾದರೂ ಇಬ್ಬರು ಸಾಹೇಬರು ಕೂಡಿದರೆಂದರೆ—ಯಾವ ಹಿಂದೀಯನ ವಿಷಯದಲ್ಲಿಯೆ ಆಗಲಿ—ತಮಗೆ ಗೊತ್ತಿದ್ದುದೆಲ್ಲವನ್ನೂ ಪರಸ್ಪರರು ಪರಸ್ಪರರಿಂದ ಸಂಗ್ರಹಿಸಿಕೊಳ್ಳಬೇಕೆಂಬುದೊಂದು ಎಂದಿನಿಂದಲೂ ನಡೆದುಬಂದ ಸಂಪ್ರದಾಯ. ಈಗ ಈ ಫೀಲ್ಡಿಂಗನ ವಿರೋಧ ಏತಕ್ಕೆ ಬಂದಿತೆಂಬುದೇ ಅವನಿಗೆ ತಿಳಿಯದಾಯಿತು.

'ಅದನ್ನು ಮಾಡಿದ, ಮಾಡುವ ಯಾವ ತರುಣನಿಗೂ ಕಲ್ಲೆಸೆಯುವದಕ್ಕೆ ನಿನಗೆ ಅಧಿಕಾರವಿದೆ; ಆದರೆ ನನಗಿಲ್ಲ. ಆ ವಯಸ್ಸಿಗೆ ನಾನೂ ಹಾಗೆಯೆ ಮಾಡಿದ್ದೆನು.'

ಸುಪರಿಂಟೆಂಡೆಂಟರೂ ತಮ್ಮ ವಯಸ್ಸಿನಲ್ಲಿ ಹಾಗೆಯೆ ಮಾಡಿದ್ದರು. ಆದರೆ ಈ ಸಂಭಾಷಣೆಯು ತಮಗೆ ಬೇಡಾದ ದಿಕ್ಕಿಗೆ ತಿರುಗಿತೆಂದು ಅವರು ತಿಳಿದುಕೊಂಡರು. ಫೀಲ್ಡಿಂಗನ ಮುಂದಿನ ಮಾತೂ ಅವರಿಗೆ ಸೇರಲಿಲ್ಲ

'ಕ್ವೆಸ್ಟೆಡ್‌ಳನ್ನು ನೋಡುವದು ನಿಜವಾಗಿ ಶಕ್ಯವಿಲ್ಲವೇ? ನಿಮಗೆ ಅದು ನಿಶ್ಚಯವಾಗಿ ಗೊತ್ತಿದೆಯೇ?'

'ನಿನ್ನ ಮನಸಿನಲ್ಲಿದ್ದದ್ದನ್ನು ನೀನು ನನಗೆ ತಿಳಿಸಿ ಹೇಳಲೇ ಇಲ್ಲವಲ್ಲ? ನಿನಗೆ ಆವಳನ್ನು ಕಾಣಬೇಕಾಗಿದ್ದಾದರೂ ಏತಕ್ಕಾಗಿ?'

'ನೀವು ಈ ವರದಿಯನ್ನೆಲ್ಲ ಕಳಿಸುವ ಮುಂಚೆ, ನ್ಯಾಯವಿಚಾರಣೆಗಾಗಿ ಅವನನ್ನು ಕೋರ್ಟಿನಲ್ಲಿ ನಿಲ್ಲಿಸುವ ಮುಂಚೆ, ಈ ಜೇಗೆಯು ಸಂಪೂರ್ಣವಾಗಿ ಹಬ್ಬುವ ಮುಂಚೆ, ಆವಳೇನಾದರೂ ತಾನು ಮೊದಲು ಬರೆದು ಕೊಟ್ಟದ್ದನ್ನು ತಪ್ಪೆಂದು ತಿರುಗಿ ತಕ್ಕೊಳ್ಳುವ ಸಂಭವವಿದ್ದರೆ ಆ ಸುಸಂಧಿಯನ್ನು ಕಳೆದುಕೊಳ್ಳಬಾರದೆಂದು ನನ್ನಾಶೆ. ದಯವಿಟ್ಟು ಇನ್ನು ಈ ವಿಷಯಕ್ಕೆ ವಾದಿಸಬಾರದು. ವರದಿಯನ್ನು ಕಳಿಸುವ ಮುಂಚೆ ನಿಮ್ಮ ಹೆಂಡತಿಯನ್ನಾಗಲಿ ಅಥವಾ ಮಿಸ' ಡೆರೆಕ್ಕಳನ್ನಾಗಲಿ ಕರೆಕಳಿಸಿ ವಿಚಾರಿಸಿ ನೋಡುವ ಉಪಕಾರ ಮಾಡಬೇಕು. ಅದಕ್ಕೇನು ಹತ್ತಬೇಕಾಗಿದೆ? ಏನೂ ಇಲ್ಲ.'

'ಅವರನ್ನು ಕರೆಕಳಿಸಿ ಉಪಯೋಗವಿಲ್ಲ' ಎಂದು ಟೆಲಿಫೋನಿನ ಕಡೆಗೆ ಕೈಚಾಚಿದನು. 'ನಿಜವಾಗಿ ಈ ಪ್ರಶ್ನೆಯ ನಿರ್ಣಯವನ್ನು ಕ್ಯಾಲೆಂಡರನೇ ಮಾಡಬಲ್ಲನು. ಇದೆಲ್ಲದರಲ್ಲಿಯೂ ಅವಳು ತೀರ ಅಸ್ವಸ್ಥಳಿದ್ದಾಳೆಂಬ ಮಾತನ್ನೇ ನೀನು ಗ್ರಹಿಸಿದಂತೆ ಕಾಣುವದಿಲ್ಲ?'

'ಅವನೋ, ನಿರ್ಣಯ ಮಾಡುವವನು? ತೀರಿತು, ನಿಶ್ಚಯವಾಗಿ ಬೇಡೆನ್ನುವನು. ಅವನಿದ್ದದ್ದೇ ಅಷ್ಟಕ್ಕೆ ಮತ್ತೆ!' ಎಂದು ಫೀಲ್ಡಿಂಗನು ಹಂಗುದೊರೆದೇ ನುಡಿದನು.

ಪ್ರತೀಕ್ಷಿಸಿದಂತೆಯೆ ಕ್ಯಾಲೆಂಡರನಿಂದ ಉತ್ತರ ಬಂತು. ರೋಗಿಗೆ ತೊಂದರೆ ಕೊಡಲು ಅವನು ಒಪ್ಪಲಿಲ್ಲ.

'ಅಝೀಜನೇ ತನ್ನ ಬೆನ್ನುಹತ್ತಿ ಗುಹೆಯಲ್ಲಿ ಬಂದನೆಂಬುದು ಅವಳಿಗೆ ನಿಶ್ಚಯವಾಗಿ ಗೊತ್ತಿದಿಯೇ ಹೇಗೆ? ಎಂದು ಮಾತ್ರ ನನಗೆ ಅವಳನ್ನು ಕೇಳಬೇಕಾಗಿದೆ; ಇನ್ನೇನೂ ಇಲ್ಲ.'

'ನಿನಗಷ್ಟೇ ಬೇಕಾಗಿದ್ದರೆ ನನ್ನ ಹೆಂಡತಿಯು ಅದನ್ನು ಕೇಳಿ ತಿಳಿಸ ಬಹುದು.'

'ಇಲ್ಲ; ನಾನೇ ಅವಳನ್ನು ಕೇಳಬೇಕಾಗಿತ್ತು. ಅಝೀಜನಲ್ಲಿ ನಂಬಿಗೆ ಇದ್ದವನೇ ಅವಳನ್ನು ಕೇಳಬೇಕೆಂದು ನನ್ನ ಇಚ್ಛೆ.'

'ಅದರಿಂದೇನು ಹೆಚ್ಚು ಕಡಿಮೆಯಾಗುವದು?'

'ಹಿಂದೀ ಜನರಲ್ಲಿ ವಿಶ್ವಾಸವಿಲ್ಲದ ಜನರ ನಡುವೇ ಈಗ ಅವಳಿದ್ದಾಳೆ.'

'ಆದರೇನಾಯಿತು? ಅವಳೇ ತನ್ನ ಕತೆಯನ್ನು ಇಲ್ಲ ಹೇಳಿದ್ದಾಳಲ್ಲ, ಅದು ಸಾಕಾಗಲಿಲ್ಲವೇ?'

'ಅದು ನಿಮ್ಮೆದುರಿಗೆ ಹೇಳಿದ್ದು; ನನ್ನೆದುರಿಗೆ ಹೇಳಿದ್ದಲ್ಲ.'

ಮ್ಯಾಕ್‌ಬ್ರಾಯಿಡನು ಹುಬ್ಬುಗಳನ್ನೇರಿಸಿ 'ಇದು ತೀರ ಸೂಕ್ಷ್ಮತೆ ಕ್ಕೆಳಿಯಿತು. ಹೇಗಾದರೂ ನಿನ್ನನ್ನು ಕ್ವ್ಯಾಲೆಂಡರನು ಇವಳಿಗೆ ಭೆಟ್ಟಿಯಾಗ ಗೊಡುವದಿಲ್ಲ. ಅವಳ ಪರಿಸ್ಥಿತಿಯು ಚಿಂತಾಜನಕವಾಗಿದೆಯೆಂದೂ ಅವಳು ಇನ್ನೂ ಕುತ್ತಿನಿಂದ ಪಾರಾಗಿಲ್ಲೆಂದೂ ಇದೇ ಈಗ ಅವನು ತಿಳಿಸಿದ್ದಾನೆ' ಎಂದು ಗೊಣಗುಟ್ಟಿದನು.

ಇಬ್ಬರೂ ಸ್ವಲ್ಪ ಹೊತ್ತು ಸುಮ್ಮನೆ ಕುಳಿತರು. ಅಷ್ಟರಲ್ಲಿ ಮತ್ತೆ ಹಮೀದುಲ್ಲಾನ ಚೀಟಿಯು ಬಂತು.

'ಹಾಗಾದರೆ ಈ ವರದಿಯನ್ನಷ್ಟು ನಾನೀಗಲೇ ಮುಗಿಸಿ ಕಳಿಸ ಬೇಕಾಗಿದೆಯಲ್ಲ, ಫೀಲ್ಡಿಂಗ್?'

'ನೀನದನ್ನು ಈಗಲೇ ಮಾಡಲಿಕ್ಕಿಲ್ಲೆಂದು ನನ್ನ ನಂಬಿಗೆಯಿದೆ.'

'ಈಗಲೆ ಮಾಡದೆ ಇನ್ನಾವಾಗ ಮಾಡಬೇಕಿನ್ನು? ಇಲ್ಲ, ನಾನೀಗಲೆ ಕಳಿಸಲೇಬೇಕು.'

'ಪರಿಸ್ಥಿತಿಯೇನೊ ತೀರ ಅಸಮಾಧಾನಕರವಿದೆ; ಅಲ್ಲದೆ ಬಹಳ ಕಠಿಣವೂ ಇದೆ. ಕನಿಷ್ಟಕ್ಕೆ ನಾನು ನಿಮ್ಮ ಸೆರೆಯಾಳನ್ನಾದರೂ ಈಗಲೆ ನೋಡಬಹುದಷ್ಟೇ?'

ಅವನು ಒಮ್ಮೆಲೆ ಉತ್ತರ ಕೊಡಲಿಕ್ಕೆ ಸ್ವಲ್ಪ ಅನುಮಾನಿಸಿದನು. ಸ್ವಲ್ಪ ವಿಚಾರಿಸಿ ಅಲ್ಲಿಂದ 'ಅವನ ಜನರೇ ಅವನೊಡನೀಗ ಮಾತಾಡುವದಕ್ಕೆ ಬಂದಿದ್ದಾರೆ' ಎಂದು ತಪ್ಪಿಸಿಕೊಳ್ಳಬೇಕೆಂದನು.

'ಹಾಗಾದರೆ ಅವರದಾದ ಮೇಲೆ?'

'ಹಾಗೆ ನಿನ್ನನ್ನು ಸುಮ್ಮನೆ ಅದಕ್ಕಾಗಿಯೆ ದಾರಿ ಕಾಯಿಸಲಾರೆ. ಬೇಕಾದರೆ ಈ ಎಲ್ಲ ಹಿಂದೀ ಜನರಿಗಿಂತಲೂ ನಿನಗೆ ಮುಂಚಿತವಾಗಿಯೇ ಪ್ರವೇಶ ದೊರೆಯಬಹುದು. ಆದರೆ ನಾನು ಹೇಳಿದ್ದರ ಅರ್ಥ ಹಾಗಲ್ಲ. ಹೀಗೆ: 'ಅದರಿಂದ ನಿನಗೇನು ಫಲ? ಸುಮ್ಮನೆ ಆ ಕೊಳಚೆಯಲ್ಲಿ ನೀನೇಕೆ ಕೈಯಿಡುತ್ತೀ' ಎಂದು.

'ಅವನು ನಿರ್ದೋಷಿಯಿದ್ದಾನೆಂದು ನಾನೆನ್ನುತ್ತೇನೆ— '

'ದೋಷಿಯಿರಲಿ, ನಿರ್ದೋಷಿಯಿರಲಿ, ಅದರಲ್ಲಿ ನೀನೇಕೆ ಅಷ್ಟು ಹೊಕ್ಕಾಡುತ್ತೀ? ಅದರಿಂದ ನೀನೇನು ಗಳಿಸಬೇಕಾಗಿದೆ?'

'ಓ! ಚೆನ್ನಾಗಿದೆ ನಿಮ್ಮ ಮಾತು! ಪ್ರಸಂಗ ಒಂದಾಗ ಉಸಿರಿದ್ದವನಂತೆ ನಡೆಯದೆ ಉಸಿರಡಗಿದವನಂತೆ ನಡೆಯಬೇಕೆನ್ನುತ್ತೀರಾ ನಾನು? ಅದಾಗದು; ನಾನು ಅವಳನ್ನೂ ನೋಡದಿರಬಹುದು, ಇವನನ್ನೂ ನೋಡದಿರಬಹುದು; ಆದರೆ ಅವನಿಗೆ ಕೊಟ್ಟ ವಚನ ಮುರಿಯಲಾರೆ. ಅವನ ಜೊತೆಗೇ ನಿಮ್ಮ ಕಡೆಗೆ ಬರುವೆನೆಂದು ನಾನವನಿಗೆ ಸ್ಟೇಶನ್ನದಲ್ಲಿ ವಚನ ಕೊಟ್ಟಿದ್ದೆ. ಅದರಂತೆಯೆ ಎರಡು ಹೆಜ್ಜೆ ಮುಂದೆ ಬರುವಷ್ಟರಲ್ಲಿ ಟರ್ಟನ್ನನು ನನ್ನನ್ನು ಕರೆದು ತಡೆಹಾಕಿದನು!'

'ಮೋರೆಯ ಮೇಲೆ ಕೈಯೆಳೆಯುವ ಕೆಲಸ! ಅಷ್ಟನ್ನಾದರೂ ನಮ್ಮ ಕಲೆಕ್ಟರನು ಮಾಡಿದನು, ಸಾಕು' ಎಂದು ಮನದಲ್ಲಿಯೆ ಅಂದುಕೊಂಡು 'ಮಹಾರಾಯಾ! ನಾವೆಲ್ಲರೂ ಇದರಲ್ಲಿ ಕೂಡಿಯೆ ನೇಣುಹಾಕಿಕೊಳ್ಳಬೇಕಾಗುತ್ತದೆಂದು ನನಗೆನಿಸುತ್ತಿದೆ. ವಯಸ್ಸಿನಿಂದೇನೊ ನಾನು ಸಣ್ಣವನು, ನನಗೆ ಗೊತ್ತಿದೆ. ಆದರೆ ನೌಕರಿಯಲ್ಲಿ ನಿನಗಿಂತಲೂ ಹಿರಿಯನು. ನನಗೆ ಗೊತ್ತಿದ್ದಷ್ಟು ನಿನಗೆ ಈ ವಿಷತುಂಬಿದ ದೇಶದ ಪರಿಸ್ಥಿತಿ ಗೊತ್ತಿಲ್ಲ. ನಾನು ಹೇಳುತ್ತೇನೆ ಕೇಳು; ಇನ್ನು ಮುಂದಿನ ಕೆಲವು ವಾರಗಳಲ್ಲಿಯೆ ಈ ಚಂದ್ರಪುರದ ಸಾಮಾನ್ಯ ಪರಿಸ್ಥಿತಿಯು ಕೆಡುತ್ತದೆ, ತೀರ ಕೆಟ್ಟುಹೋಗುತ್ತದೆ.'

'ಅದನ್ನೇ ನಾನೂ ಈಗ ತಮಗೆ ಹೇಳಿದ್ದು.'

'ಆದರೆ ಇಂಥ ಸಮಯದಲ್ಲಿ ನಮ್ಮ ಸ್ವಂತದ ಅಭಿಪ್ರಾಯಕ್ಕೆ

ಸ್ವಲ್ಪವೂ ಅವಕಾಶವಿರುವದಿಲ್ಲ. ಯಾವನು ತನ್ನವರ, ತನ್ನ ಜಾತಿಯವರ ಪಕ್ಷ ಗಟ್ಟುವದಿಲ್ಲವೋ ಅವನದು ಮುಗಿಯಿತೆಂದೇ ತಿಳಿಯಬೇಕು.'

'ಓ! ನನಗೆ ಈಗ ನಿಮ್ಮ ಅರ್ಥವು ತಿಳಿಯಿತು.'

'ಇಲ್ಲ, ನಿನಗಿನ್ನೂ ಪೂರ್ಣ ತಿಳಿದಿಲ್ಲ. ಹಾಗೆ ಪಕ್ಷಗಟ್ಟದಿದ್ದವನು ತಾನು ಸಾಯುತ್ತಾನಿಷ್ಟೇ ಅಲ್ಲ, ತನ್ನ ಉಳಿದ ಗೆಳೆಯರನ್ನೂ ಕೊಲ್ಲುತ್ತಾನೆ. ಈ ನ-ರಿ-ಗಳು—' ಎಂದು ಅವನು ತನ್ನ ಮೇಜಿನ ಮೇಲೆ ಬಿದ್ದಿದ್ದ ವಕೀಲನ ಚೀಟಿಗಳ ಕಡೆಗೆ ಬೊಟ್ಟುಮಾಡಿ ತೋರಿಸಿ 'ಇವರು ಕಣ್ಣಲ್ಲಿ ಕಣ್ಣಿಟ್ಟು ಇಂಥವರನ್ನೇ ಹುಡುಕುತ್ತಿರುತ್ತಾರೆ!' ಎಂದನು.

'ನಾನು ಅಝೀಜನನ್ನು ಕಾಣಬಹುದೇ?' ಎಂದು ಅವನ ಉಳಿದಾವ ಮಾತುಗಳಿಗೂ ಉತ್ತರ ಕೊಡದೆ ಕೇಳಿದನು.

'ಇಲ್ಲ; ನೀವು ಮ್ಯಾಜಿಸ್ಟ್ರೇಟರ ಅಪ್ಪಣೆಯನ್ನು ಪಡೆದು ಅವನನ್ನು ಕಾಣಬಹುದು. ನನ್ನ ಜವಾಬದಾರಿಯ ಮೇಲೆಯೆ ನಿಮ್ಮನ್ನು ಬಿಡುವದು ನನಗೆ ಯುಕ್ತವೆನಿಸುವದಿಲ್ಲ; ಅದರಿಂದ ಇನ್ನೂ ಹೆಚ್ಚು ತೊಡಕು ಉಂಟಾದೀತು.'

'ಆಗಲಿ; ಹಾಗಾದರೆ ನಾನು ಆ ಅಪ್ಪಣೆ ಪಡೆಯಬೇಕಾದರೆ ಯಾರಿಗೆ ಅರ್ಜಿ ಮಾಡಬೇಕು?'

'ಸಿಟಿ ಮ್ಯಾಜಿಸ್ಟ್ರೇಟರಿಗೆ'

'ಇದೂ ಒಂದು ರೀತಿಯಿಂದ ಒಳ್ಳೆಯದೇ.'

'ಹೌದು, ಆದರೆ ಪಾಪ, ಆ ಹೆಸ್ಲೊಪನನ್ನು ಹೀಗೆ ಕಾಡುವದು ಒಳಿತಲ್ಲ.'

ಇದೇ ಹೊತ್ತಿಗೆ ಇನ್ನೂ ಹೆಚ್ಚಿನ ಪುರಾವೆಯೊಂದು—ಅಝೀಜನ ಬಂಗ್ಲೆಯಲ್ಲಿಯ, ಅವನ ಮೇಜಿನೊಳಗಿನ ಡ್ರಾಅರು—ಒಬ್ಬ ಪೋಲಿಸನ ಹೆಗಲ ಮೇಲೆ ಒಳ್ಳೆ ವಿಜಯ-ವೈಭವದಿಂದ ಬಂತು.

'ಹೆಂಗಸರ ಫೋಟೋಗಳು! ಹಾಂ!'

'ಅದು ಅವನ ಹೆಂಡತಿಯದು!' ಎಂದು ಫೀಲ್ಡಿಂಗನು ಬೆಚ್ಚಿಬಿದ್ದು ನುಡಿದನು

'ಅದು ನಿನಗೆ ಹೇಗೆ ಗೊತ್ತು?'

'ಅವನೇ ತೋರಿಸಿ ಹೇಳಿದ್ದನು.'

ಮ್ಯಾಕ್‌ಬ್ರಾಯಿಡನು ಒಂದು ಅವಿಶ್ವಾಸದ ಕಿರುನಗೆಯನ್ನು ನಕ್ಕು ಡ್ರಾಯರದಲ್ಲಿ ನುತ್ತಲೂ ಹುಡುಕಲಿಕ್ಕೆ ಹತ್ತಿದನು. ಅವನ ಮುಖವು ಕುತೂಹಲಭಾವವನ್ನು ತಳೆದಿತ್ತು. 'ಹೆಂಡತಿಯೋ? ನಿಜ. ಎಂತಹ ಹೆಂಡತಿಯೋ ಏನೋ! ಆ ಹೆಂಡಂದಿರನ್ನೂ ನಾನು ಬಲ್ಲೆ!' ಎಂದು ಮನದಲ್ಲಿ ಎಂದುಕೊಂಡು ಹೊರಗೆ ಮಾತ್ರ 'ಒಳ್ಳೇದು ಗೆಳೆಯ, ನೀನಿನ್ನು ಹೊರಡಬೇಕು. ನಮ್ಮ ಮೇಲೆ ದೇವರಂತೂ ಇದ್ದೇ ಇದ್ದಾನೆ!' ಎಂದನು.

ಇವನ ಪ್ರಾರ್ಥನೆಗೇ ಓಗೊಟ್ಟಂತೆ ಒಮ್ಮಿಂದೊಮ್ಮೆ ಒಂದು ಗುಡಿಯ ಗಂಟೆಯು ಢಣ ಢಣ ಢಣ ಎಂದು ಬಾರಿಸಿತು

—

## ಪ್ರಕರಣ ೧೯

ದೃಶ್ಯ ಬದಲಾಯಿಸಿತು. ಹಮೀದುಲ್ಲಾನ ಪಾತ್ರ ರಂಗದ ಮೇಲೆ ಬಂತು. ಸುಪರಿಂಟೆಂಡೆಂಟರ ಆಫೀಸಿನ ಹೊರಗೆ ಇಷ್ಟೊತ್ತನಕ ಕಾಯ್ದು ಕಾಯ್ದು ಬೇಸತ್ತಿದ್ದನು. ಫೀಲ್ಡಿಂಗನು ಹೊರಗೆ ಬಂದದ್ದನ್ನು ನೋಡಿದ ಕೂಡಲೆ ಒಳ್ಳೆ ವಿನಯದಿಂದ ಜಿಗಿದು ಎದ್ದು ನಿಂತನು.

'ಎಲ್ಲ ತಪ್ಪಾಗಿ ಹೋಗಿದೆ!' ಎಂದು ಫೀಲ್ಡಿಂಗನು ಉದ್ವೇಗದಿಂದ ಅವನಿಗಿಂತ ಮೊದಲೆ ಹೇಳಿದನು.

'ಆಂ! ಏನಾದರೂ ಪುರಾವೆ ಬಂದಿದೆಯೇನು?' ಎಂದು ಹಮೀದುಲ್ಲಾ ತಿರುಗಿ ಕೇಳಿದನು.

'ಅದೂ ಬರುವದು' ಎಂದು ಫೀಲ್ಡಿಂಗನು ಅವನ ಕೈಯಲ್ಲಿ ಕೈಕೊಟ್ಟು ನುಡಿದನು.

'ಓ! ಹೌದು, ಫೀಲ್ಡಿಂಗ್. ಒಮ್ಮೆ ಒಬ್ಬ ಹಿಂದೀ ಮನುಷ್ಯನ ಕೈದಾಯಿತೆಂದರೆ ತೀರಿತು, ಅದು ಎಲ್ಲಿಗೆ ಹೋಗಿ ಮುಟ್ಟುತ್ತದೋ ಯಾರು ಬಲ್ಲರು? ನೀನು ಹೀಗೆ ಸಮಾನಭಾವದಿಂದ ನನ್ನನ್ನು ಗೌರವಿಸಿದ್ದು ನನ್ನ ಮನಸ್ಸಿಗೆ ಬಹಳ ಬಂತು. ನನಗೂ ನಿನಗೂ ಅದರ ಬೆಲೆ ಗೊತ್ತಿದೆ. ಆದರೆ

ಆ ಮ್ಯಾಜಿಸ್ಟ್ರೇಟರಿಗೆ ಮಾತ್ರ ಯಾವುದು ಮನವರಿಕೆಯಾಗಬೇಕಾದರೂ ಸಾಕ್ಷಿ–ಪುರಾವೆ ಇಲ್ಲದೆ ನಡೆಯುವುದಿಲ್ಲ. ನನ್ನ ಚೀಟಿ ಬಂದಾಗ ಅದರ ಬಗ್ಗೆ ಮ್ಯಾಕ್‌ಬ್ರಾಯಿಡರೇನಾದರೂ ಅಂದರೇನು? ನನ್ನ ಅರ್ಜಿಯಿಂದ ಅವರೇನಾದರೂ ಕೆರಳಿದಂತೆ ನಿಮಗೆ ಕಂಡರೇನು? ಅದು ನನ್ನ ಗೆಳೆಯನ ವಿರುದ್ಧ ಅವರಲ್ಲೇನಾದರೂ ತಪ್ಪು ತಿಳಿವಳಿಕೆ ಹುಟ್ಟಿಸಿದಂತೆ ಕಂಡಿತೇನು? ಹಾಗಿದ್ದರೆ ನಾನು ಹೀಗೇ ಹಿಂತಿರುಗಿ ಹೋಗುತ್ತೇನೆ ಮತ್ತೆ?'

'ಅವರೇನೂ ಕೆರಳಿದಂತೆ ಕಾಣಿಸಲಿಲ್ಲ. ಒಂದು ವೇಳೆ ಕೆರಳಿದರೂ ಅದರಿಂದೇನಾಗಬೇಕಾಗಿದೆ?'

'ನಿನ್ನಂಥವರು ಹೇಗೆ ಮಾತನಾಡಿದರೂ ಚೆಂದ. ನಮಗಿನ್ನೂ ಈ ದೇಶದಲ್ಲಿ ಇರಬೇಕಾಗಿದೆ.'

'ಓ! ಇದರಿಂದೇನು ನೀನು ಧೈರ್ಯಗೆಡುವ ಕಾರಣವಿಲ್ಲ. ಕೊನೆಯಲ್ಲಿ ಎಲ್ಲವೂ ಒಳಿತಾಗುವದು' ಎಂದು ಫೀಲ್ಡಿಂಗನು ಅವನ ಮನಸಿನ ಅಳುಕನ್ನು ತಿಳಿದು ಹುರುಪು ಕೊಟ್ಟನು.

'ಹೌದು; ಆದರೆ ಮೊಟ್ಟಮೊದಲೇ ಬಂತಲ್ಲ ಜಾಮೀನಿನ ಪ್ರಶ್ನೆ..?'

ಇಬ್ಬರೂ ವಿಚಾರ ಮಾಡಿ ಅದೇ ಮಧ್ಯಾಹ್ನ ಜಾಮೀನಿಗಾಗಿ ಒಂದು ಅರ್ಜಿಯನ್ನು ಬರೆಯಬೇಕೆಂದು ಗೊತ್ತುಮಾಡಿದರು. ಫೀಲ್ಡಿಂಗನು ತಾನೇ ಜಾಮೀನಾಗಬೇಕೆಂದಿದ್ದನು. ಆದರೆ ಹಮೀದುಲ್ಲಾನು ನವಾಬ ಬಹದ್ದೂರರನ್ನು ಹಾಕಬೇಕೆಂದು ಸೂಚಿಸಿದನು.

'ಅವರನ್ನೇಕೆ ಸುಮ್ಮನೆ ಇದರಲ್ಲಿ ಎಳೆಯಬೇಕು?'

ಎಲ್ಲರನ್ನೂ ಇದರಲ್ಲಿ ಎಳೆದು ತೊಡಕಿಸುವದೇ ಆ ಬ್ಯಾರಿಸ್ಟರನ ಉದ್ದೇಶವಾಗಿತ್ತು. ಅಂತೆಯೆ ಈ ಕೇಸನ್ನು ನಡಿಸುವವನು ಹಿಂದೂ ವಕೀಲನೇ ಇರಬೇಕೆಂದೂ ಅದರಿಂದಲೆ ಜನರ ಮೇಲೆ ಹೆಚ್ಚು ಪರಿಣಾಮವಾಗುವದೆಂದೂ ಸೂಚಿಸಿದನು. ಅಲ್ಲಿಂದ ಒಂದೆರಡು ಹೆಸರುಗಳನ್ನೂ ಎತ್ತಿದನು. ಅವರಲ್ಲಿ ಅಮೃತರಾಯನನ್ನೆ ಆರಿಸಬೇಕೆಂದೂ ಹೇಳಿದನು. ಈ ಅಮೃತರಾಯನು ಕಲಕತ್ತಾದ ಬ್ಯಾರಿಸ್ಟರನು; ಬಳ್ಳೆ ಪ್ರಖ್ಯಾತನು. ಆದರೆ ಬ್ರಿಟಿಶರನ್ನು ಕಂಡರೆ ಉರಿದುಬೀಳುವನು. ಇದನ್ನು ತಿಳಿದೇ ಫೀಲ್ಡಿಂಗನು ಹಿಂಜೆಗ್ಗ ಹತ್ತಿದ್ದನು. ಹಾಗೆ ಮಾಡಿದರೆ ಅದು ಇನ್ನೊಂದು ಅತಿರೇಕಕ್ಕೆ ಹೋಗುತ್ತ

ದೆಂದು ಅವನಿಗೆ ಗೊತ್ತಿತ್ತು. ಈ ಜಾತಿದ್ವೇಷದ ಬಣ್ಣ ಬರದಂತೆ ಅಝೀಜ ನನ್ನು ಬಿಡಿಸಬೇಕೆಂದು ಅವನಾಶೆಯಿತ್ತು. ಅಲ್ಲದೆ ಕ್ಲಬ್ಬಿನಲ್ಲಿ ಈ ಅಮೃತ ರಾಯನನ್ನು ಕಂಡರೆ ಹೇಸಿಕೊಳ್ಳುವವರೇ ಹೆಚ್ಚಿದ್ದರು. ಅಂಥವನನ್ನು ಕರೆಯಿಸಿದರೆ ಹುಂಜ ಕಾದಾಡಿಸಿದಂತೆಯೆ ಸರಿ ಎಂದುಕೊಂಡನು.

'ಛೇ, ಛೇ! ಅದೇನೂ ಆಗದು. ಅವನನ್ನೇ ಕರೆಯಿಸಬೇಕು. ಈಗ ನಮ್ಮೆಲ್ಲ ಸಾಮರ್ಥ್ಯದಿಂದ ಹೊಡೆದಾಡಬೇಕು. ಇದೇ ಈಗ ನನ್ನ ಗೆಳೆಯನ ಖಾಸಗಿ ಕಾಗದಪತ್ರಗಳನ್ನು ಒಬ್ಬ ಪೋಲಿಸನು ಹೊತ್ತುಕೊಂಡು ತರುವ ದನ್ನು ಇದೇ ಕಣ್ಣಿಂದ ನೋಡಿವೆ. ಅವರ ಈ ಕಡ ತೀರಿಸಬೇಕಾದರೆ ಅಮೃತರಾಯನೇ ಬೇಕು.'

ಇಬ್ಬರೂ ಕೆಲಹೊತ್ತು ಸುಮ್ಮನೆ ನಿಂತರು. ಚರ್ಚಿನ ಗಂಟೆಯಿನ್ನೂ ಹಾಗೆಯೆ ಕರ್ಣಕಠೋರವಾಗಿ ಬಾರಿಸುತ್ತಿತ್ತು. ಅದೇ ಹೊತ್ತಿಗೆ ಒಬ್ಬ ಕುದುರೆಯ ಸವಾರನು ಸುಪರಿಂಟೆಂಡೆಂಟರಿಂದ ವರದಿಯನ್ನು ತೆಗೆದು ಕೊಂಡು ಮ್ಯಾಜಿಸ್ಟ್ರೇಟನ ಕಡೆಗೆ ಹೊರಟನು.

'ಸುಮ್ಮನೇ ಎಲ್ಲವನ್ನೂ ಜಗ್ಗಾಡಿ ತೊಡಕು ಮಾಡಬೇಡಿರಿ. ಅದರ ಷ್ಟಕ್ಕೆ ಅದನ್ನು ಬಿಟ್ಟುಬಿಡಿರಿ' ಎಂದು ಆ ಸವಾರನು ಧೂಳಿಯಲ್ಲಿ ಕಾಣ ದಾಗುವ ವರೆಗೆ ನೋಡಿ ಫೀಲ್ಡಿಂಗನು ಬೇಡಿಕೊಂಡನು. 'ನಮಗೆ ಗೆಲುವು ಸಿಗುವದು ನಿಶ್ಚಯ; ನಾವಿನ್ನು ಏನೂ ಮಾಡುವದು ಬೇಡ. ಅವಳಿಗೆ ತಾನು ಹೊರಿಸಿದ ಆರೋಪವನ್ನೇ ಸಿದ್ಧಮಾಡುವದು ಎಂದೂ ಶಕ್ಯವಿಲ್ಲ.'

ಇದರಿಂದ ಹಮಾದುಲ್ಲಾನಿಗೆ ಸಮಾಧಾನವಾಯಿತು. 'ಗಂಡಾಂತರ ದಲ್ಲಿದ್ದ ಇಂಗ್ಲೀಷರ ಧೈರ್ಯಕ್ಕೆ ಸರಿಗಟ್ಟುವವರು ಯಾರೂ ಇಲ್ಲ' ಎಂದು ಮನವಾರೆ ಅವನನ್ನು ಹೊಗಳಿದನು.

'ಹೋಗಿಬರುತ್ತೇನೆ ಹಮಾದುಲ್ಲಾ! ನಾವಿನ್ನು ಈ 'ಮಿಸ್ಟರ-ಗಿಸ್ಟರ' ಹಚ್ಚುವದನ್ನು ಬಿಟ್ಟುಬಿಡಬೇಕು. ಅಝೀಜನಿಗೆ ನನ್ನ ಪ್ರೀತಿಯ ಮಾತನ್ನು ಮುಟ್ಟಿಸು. ಮತ್ತು ಅವನಿಗೆ ಶಾಂತನಾಗಿರಲು ಹೇಳು. ನಾನೀಗ ಕಾಲೇಜಕ್ಕೆ ತಿರುಗಿ ಹೋಗುತ್ತೇನೆ. ಅವಶ್ಯಬಿದ್ದರೆ ಟೆಲಿಫೋನಿನಿಂದ ಕರೆದು ಮಾತನಾಡಬಹುದು. ಇಲ್ಲದಿದ್ದರೆ ಬೇಡ. ನನಗೀಗ ಬಹಳ ಕೆಲಸವಿದೆ.'

'ಹೋಗಿ ಬರಬೇಕು ಫೀಲ್ಡಿಂಗರೇ! ನೀವು ನಿಮ್ಮ ಜನರ ವಿರೋಧ ವನ್ನು ಕಟ್ಟಿಕೊಂಡೂ ನಮ್ಮ ಪಕ್ಷವನ್ನು ಹಿಡಿದಿದ್ದೀರಿ!'

'ಹೌದು, ನಿಶ್ಚಯವಾಗಿ.'

ತಾನೊಂದು ಪಕ್ಷವನ್ನು ಕಟ್ಟಿದಂತಾದದ್ದನ್ನು ನೋಡಿ ಅವನಿಗೆ ಒಳ ಒಳಗೆ ಕೆಡಕೆನಿಸಿತು. ಈ ಹಿಂದುಸ್ಥಾನದಲ್ಲಿರುವ ವರೆಗೆ 'ಇವನು ಇಂಥವರ ಬಣದವನು; ಇಂಥ ಜಾತಿಯವನು; ಇಂಥ ಮತದವನು' ಎಂಬ ಹಣೆಪಟ್ಟಿ ಯನ್ನು ತಪ್ಪಿಸಿಕೊಂಡು ಪಾರಾಗಬೇಕೆಂದು ಅವನ ಆಶೆಯಿತ್ತು. ಆದರೆ ಅದು ಸಾಧಿಸುವಂತೆ ಕಾಣಲಿಲ್ಲ. ಇನ್ನುಮುಂದೆ ಅವನಿಗೆ 'ಬ್ರಿಟಿಶ್ ವಿರೋಧಿ' 'ರಾಜದ್ರೋಹಿ' 'ರಣಹೇಡಿ' 'ಅಭಿಮಾನಶೂನ್ಯ' ಎಂಬ ಬಿರುದು-ಬಾವಲಿಗಳು ಬಂದೇ ಬರತಕ್ಕವು. ಅವನೂ ತಮ್ಮವರ ಶಬ್ದಜಾಲ ಕ್ಕಾಗಿ ಬಹಳ ಬೇಸರಗೊಂಡಿದ್ದನು

ಆ ದಿವಸ ಮುಗಿಯುವ ಮುನ್ನ ಫೀಲ್ಡಿಂಗನು ಪ್ರೊ. ಗೋಡಬೊಲೆ ಯವರನ್ನು ಕಂಡನು. ಯಥಾಪ್ರಕಾರ ಅವರ ಅಸಂಬಂದ್ಧ ಪ್ರಲಾಪವು ಪ್ರಾರಂಭವಾಯಿತು. ಫೀಲ್ಡಿಂಗನು ಎತ್ತೆತ್ತೊ ಹರಿದಾಡುತ್ತಿರುವ ತನ್ನ ಮನಸ್ಸನ್ನು ಬಿಗಿಹಿಡಿದು ಸುಮ್ಮನೆ ಕೇಳುತ್ತ ಕುಳಿತನು. ಎಲ್ಲೆಲ್ಲಿಂದೊ ಸುತ್ತಾಡಿ ಕೊನೆಗೆ ಮಾತು ಅಲ್ಲಿಗೇ ಬಂತು. 'ಅಂತೂ ನೀವೂ ಮಾರವಾರಕ್ಕೆ ಹೋಗಿದ್ದಿರಿ? ನನ್ನ ತಡಕ್ಕಾಗಿ ನಿಮಗೆಲ್ಲಿ ಮಾರವಾರ ಪ್ರವಾಸವು ಪೂರ್ತಿ ಯಾಗಿ ತಪ್ಪಿಹೋಗುವದೋ ಎಂದು ಬೆದರಿದ್ದೆ. ನೀವು ಡೆರೆಕ್ಕಳ ಕಾರಿನಲ್ಲಿ ಹೋಗಿದ್ದಿರಲ್ಲವೆ? ಅಂತೂ ಪ್ರವಾಸ ಸುಖಕರವಾಯಿತು?' ಎಂದು ಪ್ರಶ್ನಾವಲಿಯನ್ನೇ ಸುರುವು ಮಾಡಿದನು.

'ನಿಮಗಿನ್ನೂ ಸುದ್ದಿಯೇ ಮುಟ್ಟಿಲ್ಲೇನು?

'ಇಲ್ಲ. ಏನು?'

'ಅಝೀಜನಿಗೆ ದೊಡ್ಡದೊಂದು ಕುತ್ತು ಬಂದಿದೆ.'

'ಹೌದು, ಹೌದು, ಕಾಲೇಜದ ಸುತ್ತಲೂ ಏನೊ ಹಬ್ಬಿದೆ.'

'ಯಾವ ಪ್ರವಾಸದಲ್ಲಿ ಅದು ಸಂಭವಿಸಿದೆಯೋ ಆ ಪ್ರವಾಸ ಸುಖಕರ ಹೇಗಾಗಬಹುದು?' ಎಂದು ಫೀಲ್ಡಿಂಗನು ಅವನನ್ನು ಬಿರಿಬಿರಿ ನೋಡುತ್ತ ಕೇಳಿದನು

'ಅದನ್ನು ನಾನು ಹೇಳಲಾರೆ. ನಾನು ಅಲ್ಲಿಗೆ ಬಂದಿದ್ದೇ ಇಲ್ಲ.'

ಫೀಲ್ಡಿಂಗನು ಮತ್ತೆ ಬಿರಿಬಿರಿ ನೋಡಿದನು. ಆ ಬ್ರಾಹ್ಮಣನ ಮನಸ್ಸಿನಲ್ಲಿ ಏನಿತ್ತೆಂಬದು ಯಾವ ಕಣ್ಣಿಗೂ ಕಾಣಿಸದು. ಆದರೂ ಅವನಿಗೂ ಒಂದು ಮನಸ್ಸು, ಒಂದು ಅಂತಃಕರಣ ಇತ್ತು. ಮತ್ತು ಯಾಕೆನ್ನುವದು ಗೊತ್ತಿಲ್ಲದೆ ಅವನೆಲ್ಲ ಗೆಳೆಯರೂ ಅವನಲ್ಲಿ ವಿಶ್ವಾಸವಿಡುತ್ತಿದ್ದರು.

'ಗೋಡಬೋಲೆ! ನಿನ್ನ ಈ ರೀತಿಯಿಂದ ನನ್ನ ಮನಸ್ಸು ಬಹಳ ವ್ಯಥೆಗೊಂಡಿದೆ' ಎಂದು ಅವನು ಕೆರಳಿ ನುಡಿದನು.

'ನಿಮ್ಮ ಆಫೀಸಿನೊಳಗೆ ಬಂದ ಕೂಡಲೆ ನನಗೂ ಹಾಗೇ ಎನಿಸಿತು. ನಾನೇನು ಇನ್ನು ನಿಮ್ಮನ್ನು ಹೆಚ್ಚು ಹೊತ್ತು ತಡೆಯುವದಿಲ್ಲ; ಆದರೆ ನನ್ನದೊಂದು ಸ್ವಂತದ ಪ್ರಶ್ನೆಯಿದೆ. ಅದಕ್ಕೆ ನಿಮ್ಮ ಸಹಾಯ ಬೇಕಾಗಿದೆ. ನಿಮಗೆ ಗೊತ್ತೇ ಇದೆ, ನಾನಿನ್ನು ಬೇಗನೆ ನಿಮ್ಮ ನೌಕರಿಯನ್ನು ಬಿಡುವವನಿದ್ದೇನೆ.'

'ಅಯ್ಯೋ ಪಾಪ! ಹೌದು.'

'ಆ ಮೇಲೆ ಮಧ್ಯಹಿಂದುಸ್ಥಾನದಲ್ಲಿದ್ದ ನನ್ನ ಹುಟ್ಟಿದೂರಿಗೆ ಹೋಗಿ ಅಲ್ಲಿ ನಾನೊಂದು ಇಂಗ್ಲೀಷ ಪದ್ಧತಿಯ ಮೇಲೆ ಒಳ್ಳೆ ಸ್ಥಿರವಾದ ಒಂದು ಹೈಸ್ಕೂಲನ್ನು ಸುರುವು ಮಾಡಬೇಕೆನ್ನುತ್ತೇನೆ. ಅದು ಸಾಧ್ಯವಿದ್ದಷ್ಟು ಈ ಕಾಲೇಜದಂತೆಯೆ ಆಗುವದು.'

'ಒಳ್ಳೇದು' ಎಂದು ಅದರಲ್ಲಿ ಮನಸ್ಸು ಹಾಕುವದಕ್ಕೆ ಪ್ರಯತ್ನಪಟ್ಟನು.

''ಮಾವ್'ದಲ್ಲಿ ಸದ್ಯಕ್ಕೆ ಪ್ರಾಥಮಿಕ ಶಿಕ್ಷಣ ಮಾತ್ರ ಇದೆ. ಅದನ್ನೆಲ್ಲ ನಾನು ಬದಲು ಮಾಡುವೆನು. ರಾಜಧಾನಿಯಲ್ಲಿ ಕನಿಷ್ಟ ಪಕ್ಷಕ್ಕೆ ಒಂದು ಹೈಸ್ಕೂಲಾದರೂ ಆಗಬೇಕೆಂದು ನಾನು ಮಹಾರಾಜರಿಗೆ ಹೇಳುತ್ತೇನೆ. ಶಕ್ಯವಿದ್ದರೆ ಪ್ರತಿಯೊಂದು ಪರಗಣೆಯಲ್ಲಿಯೂ ಒಂದೊಂದು ಆಗಬೇಕು....'

ಫೀಲ್ಡಿಂಗನು ಬೇಸರದಿಂದ ತಲೆಯನ್ನು ತನ್ನ ಕೈಗಳ ಮೇಲೆ ಚಲ್ಲಿಕೊಟ್ಟನು. ಮತ್ತು ಈ ಹಿಂದೀ ಜನರು ಕೆಲಕೆಲವು ಹೊತ್ತಿನಲ್ಲಿ ತೀರ ತಾಳ್ಮೆಗೆಡಿಸಿಬಿಡುತ್ತಾರೆಂದು ಮನದಲ್ಲಿಯೆ ಹಲ್ಲು ಮಸೆದನು.

'ಆ ವಿಷಯ—ಯಾವ ವಿಷಯದಲ್ಲಿ ತಮ್ಮ ಸಹಾಯ ನನಗೆ ಬೇಕಾಗಿದೆಯೊ—ಆ ವಿಷಯ ಯಾವುದೆಂದರೆ, ನಾನು ತೆರೆಯಲಿರುವ ಆ ಶಾಲೆಗೆ ಯಾವ ಹೆಸರಿಡಬೇಕು?'

'ಹೆಸರೇ? ಶಾಲೆಗೆ ಹೆಸರೇ? ಅದನ್ನು ನಾನು ಹೇಳಬೇಕೇ?' ಎಂದು ಅವನು ಒಮ್ಮಿಂದೊಮ್ಮೆ ಒಟ್ಟರಿಸಿ ನುಡಿದನು.

'ಹೌದು, ಹೆಸರೇ; ನೀವೇ ಹೇಳಬೇಕು. ಜನರಲ್ಲೆಲ್ಲ ಗೊತ್ತಾಗುವದಕ್ಕಾಗಿ, ಅವರು ಕರೆಯುವದಕ್ಕಾಗಿ ಒಂದು ಹೆಸರು ಬೇಕಲ್ಲ ಮತ್ತೆ?'

'ನಿಜವಾಗಿ ನನ್ನ ತಲೆಯಲ್ಲೀಗ ಶಾಲೆಗೆ ಇಡುವದಕ್ಕಾಗಿ ಯಾವ ಹೆಸರುಗಳೂ ಇಲ್ಲ. ಈಗ ನನಗೆ ಪಾಪ ಆ ಆರ್ಝೀಜನ ಹೊರತು ಬೇರೆ ಯಾವ ವಿಚಾರವೂ ಬರುವದಿಲ್ಲ. ಈಗ ಅವನು ಸೆರೆಮನೆಯಲ್ಲಿದ್ದಾನೆಂಬುದಾದರೂ ನಿಮಗೆ ಗೊತ್ತಿದೆಯೇ?'

'ಓಹೋ. ಅಲ್ಲ, ನನ್ನ ಪ್ರಶ್ನೆಗೆ ಉತ್ತರವನ್ನು ತಾವು ಈಗಲೇ ಕೊಡಬೇಕೆಂದೇನು ನನ್ನ ಅಪೇಕ್ಷೆಯಿಲ್ಲ. ತಾವು ಸಾವಕಾಶವಾಗಿ ಬಿಡುವಿದ್ದಾಗ ಆ ವಿಷಯವನ್ನು ವಿಚಾರ ಮಾಡಿ ಶಾಲೆಗಳಿಗೆ ಸರಿಹೋಗುವಂತೆ ಎರಡು ಮೂರು ಹೆಸರುಗಳನ್ನು ಸೂಚಿಸಿರಿ. ನಾನೇನೊ ಅಂದುಕೊಂಡಿದ್ದೇನೆ, 'ಮಿ. ಫೀಲ್ಡಿಂಗ ಹೈಸ್ಕೂಲ' ಎಂದು ಇಡಬೇಕೆಂದು. ಅದು ತಪ್ಪಿದರೆ 'ಕಿಂಗ್ ಎಂಪರರ್ ಜಾರ್ಜ್ ದಿ ಫಿಪ್ತ್ ಹೈಸ್ಕೂಲ' ಎಂಬುದು.'

'ಏನು ಗೋಡಬೊಲೆ!'

ಮುದುಕನು ಎರಡೂ ಕೈಗಳನ್ನು ಜೋಡಿಸಿದನು; ಆದರೂ ಅವನು ಫೀಲ್ಡಿಂಗನಿಗೆ ಮಾತ್ರ ಈಗ ಒಬ್ಬ ಠಕ್ಕನಂತೆ ತೋರಿದನು.

'ಆರ್ಝೀಜನು ನಿರ್ದೋಷಿಯಿದ್ದಾನೋ, ಏನು ದೋಷಿಯಿದ್ದಾನೋ?'

'ಅದನ್ನು ನಿರ್ಣಯಿಸುವ ಕೆಲಸ ಕೋರ್ಟಿನದು. ಆದರೆ ಆ ನಿರ್ಣಯವು ಮಾತ್ರ ನಿಮ್ಮಂಥವರ ಸಾಕ್ಷಿ-ಪುರಾವೆಗಳ ಮೇಲೆಯೆ ಇದೆ.'

'ಹೌದು, ಹೌದು; ಆದರೆ ನಿಮ್ಮ ಸ್ವಂತದ ಅಭಿಪ್ರಾಯವೇನೂ ಅಂದೆ? ನಮ್ಮಿಬ್ಬರಿಗೂ ಬೇಕಾದವ, ಸಂಭಾವಿತ, ಸಂಪನ್ನ, ಆದ ಒಬ್ಬ ಮನುಷ್ಯನು ತನ್ನಷ್ಟಕ್ಕೆ ತಾನು ತನ್ನ ಉದ್ಯೋಗ ಮಾಡಿಕೊಂಡು ಹಾಯಾಗಿದ್ದಾನೆ, ಎನ್ನೋಣ. ಅಂಥವನು ಈ ಕೆಲಸ ಮಾಡಿರಬಹುದೇ? ಅಥವಾ ಇಲ್ಲವೇ?'

'ಓಹೊ! ಇದು ನೀವು ಮೊದಲು ಕೇಳಿದ ಪ್ರಶ್ನೆಗಿಂತ ಬೇರೆ ಯಾಯಿತು; ಅಲ್ಲದೆ ಸ್ವಲ್ಪ ಸೂಕ್ಷ್ಮವೂ ಆಯಿತು. ಡಾ. ಅಝೀಜನು ಯೋಗ್ಯನಾದ ತರುಣ ಮನುಷ್ಯನಿದ್ದಾನೆ. ನನಗೆ ಅವನ ವಿಷಯಕ್ಕೆ ಗೌರವ ವಿದೆ; ಆದರೆ ಆ ವ್ಯಕ್ತಿಯು ಕೆಟ್ಟ ಕೆಲಸವನ್ನಾಗಲಿ ಒಳ್ಳೆಯ ಕೆಲಸವನ್ನಾಗಲಿ ಮಾಡಬಲ್ಲನೇ ? ಎಂಬುದನ್ನು ನೀವು ಕೇಳುತ್ತೀರೆಂದು ನನಗೆನಿಸುತ್ತದೆ. ಇದನ್ನು ಹೇಳುವದು ನನಗೆ ಸಾಧ್ಯವಿಲ್ಲ' ಎಂದು ಅವನು ನಿರ್ವಿಕಾರದಿಂದ ಸ್ಪಷ್ಟವಾಗಿ ಹೇಳಿದನು.

'ನಾನು ಕೇಳುವದು, ಅವನು ಮಾಡಿದನೋ ಇಲ್ಲವೋ ಎಂದು? ಈಗಾದರೂ ನನ್ನ ಮಾತು ಸ್ಪಷ್ಟವಾಯಿತೇ ? ಅವನು ಮಾಡಿಲ್ಲೆಂದೇ ನನಗೆ ಗೊತ್ತಿದೆ; ನಾನೂ ಅದನ್ನೇ ಹಿಡಿದುಕೊಂಡು ಹೊರಡುವದು. ಇನ್ನು ಒಂದೆರಡು ದಿವಸಗಳಲ್ಲಿ ಅದರ ನಿಜವಾದ ಸಂಗತಿಗಳನ್ನೆಲ್ಲ ನಾನು ದೊರಕಿಸ ಬೇಕೆಂದು ಮಾಡಿದ್ದೇನೆ. ಅವಳೊಡನೆ ದಾರಿ-ತೋರಿಸುವವನೇ ಹೋಗಿದ್ದ ನೆಂದು ನನ್ನ ಮೊದಲಿನ ಅಭಿಪ್ರಾಯವಾಗಿತ್ತು. ಮಿಸ್ ಕ್ವೆಸ್ಟೆಡ್‌ಳು ಜಾತೀಯ ದ್ವೇಷವನ್ನೇನೂ ಸಾಧಿಸಿರಲಿಕ್ಕಿಲ್ಲವಷ್ಟೆ ? ಹಮೀದುಲ್ಲಾನ ಕಲ್ಪನೆ ಹಾಗೆಯೇ ಇದೆ ಮತ್ತೆ. ಅದಿರಲಿ; ಅವಳಿಗೇನೋ ಭಯಂಕರ ಪ್ರಸಂಗ ಬಂದಿರಬೇಕು. ಆದರೆ ನೀವೇ ಹೇಳಿರಿ, ಛೇ ಬೇಡ; ಯಾಕಂದರೆ ನಿಮಗೆ ಒಳ್ಳೆಯದು ಕೆಟ್ಟದ್ದು ಎರಡೂ ಅಷ್ಟೇ.'

'ಅಲ್ಲ, ಅಲ್ಲ. ನಮ್ಮ ತತ್ವ ಬೇರೆಯೇ ಇದೆ. ಒಂದನ್ನೊಂದು ಅಗಲಿಸಿ ಯಾವುದನ್ನೂ ಮಾಡಲಿಕ್ಕೆ ಬರುವಂತಿಲ್ಲ. ಒಳ್ಳೆಯದನ್ನು ಮಾಡಿದರೆ ಎಲ್ಲರೂ ಒಳ್ಳೆಯದನ್ನೇ ಮಾಡುವರು. ಕೆಟ್ಟದ್ದನ್ನು ಮಾಡಿದರೆ ಎಲ್ಲರೂ ಕೆಟ್ಟದ್ದನ್ನೇ ಮಾಡುವರು. ಇದನ್ನು ಉದಾಹರಣೆ ಕೊಟ್ಟು ಸ್ಪಷ್ಟ ಮಾಡಬೇಕೆಂದರೆ ಸದ್ಯದ ವಿಷಯವನ್ನೇ ತೆಗೆದುಕೊಳ್ಳೋಣ.'

'ಮಾರವಾರ ಗುಡ್ಡಗಳಲ್ಲಿ ಒಂದು ದುಷ್ಕೃತಿಯು ಜರುಗಿ, ಅದರ ಪರಿಣಾಮವಾಗಿ ಒಬ್ಬ ಇಂಗ್ಲೀಷ ಸ್ತ್ರೀಯು ಈಗ ಬಹಳ ಜಡ್ಡಿಗೆ ಬಿದ್ದಿದ್ದಾಳೆ. ಇದಕ್ಕೆ ನನ್ನ ಉತ್ತರವೆಂದರೆ—ಆ ದುಷ್ಕೃತಿಯನ್ನು ಡಾಕ್ಟರ ಅಝೀಜನು ಮಾಡಿರಬೇಕು; ಇಲ್ಲವೆ ಆ ದಾರಿ-ತೋರಿಸುವವನು ಮಾಡಿರ ಬೇಕು; ಇಲ್ಲವೆ ನೀವು ಮಾಡಿರಬೇಕು; ಇಲ್ಲವೆ ನಾನು ಮಾಡಿರಬೇಕು;

ಅಥವಾ ನನ್ನ ಹುಡುಗರು ಮಾಡಿರಬೇಕು; ಒಂದು ವೇಳೆ ಆ ಸ್ತ್ರೀಯು ಸಹ ಮಾಡಿರಬೇಕು; ಯಾಕಂದರೆ ಆ ದುಷ್ಕೃತಿ ನಮ್ಮೆಲ್ಲರ ಪ್ರತಿನಿಧಿ ಇದ್ದಂತೆಯೆ ಅಲ್ಲವೇ ?'

'ಆದರಂತೆ ದುಃಖವೂ ನಮ್ಮ ಪ್ರತಿನಿಧಿಯಾಗಬೇಕು......ಪ್ರತಿಯೊಂದೂ......' ಎಂದು ಪ್ರಕೋಪದಿಂದ ಅವನಾಡಿದನು.

'ಕ್ಷಮಿಸಿರಿ, ನೀವು ಮತ್ತೆ ಚರ್ಚೆಯ ವಿಷಯವನ್ನು ಬದಲು ಮಾಡಿದಿರಿ ನಾವು ಒಳಿತು ಕೆಡಕುಗಳ ವಿಚಾರ ಮಾಡುತ್ತಿದ್ದೆವು ದುಃಖಾನುಭವವು ಕೇವಲ ವ್ಯಕ್ತಿಗೆ ಮಾತ್ರ ಸಂಬಂಧಪಟ್ಟದ್ದು. ಒಬ್ಬ ತರುಣ ಸ್ತ್ರೀಯು ಬಿಸಿಲಿನ ತಾಪವನ್ನನುಭವಿಸಿದರೆ ಅದೇನು ಇಡೀ ವಿಶ್ವಕ್ಕೇ ಮಹತ್ವದ ವಿಷಯವೇ ? ಎಂದೂ ಅಲ್ಲ, ಊಹುಂ—ಅದೊಂದು ವಿವಿಕ್ತ ಸಂಗತಿ, ಅದು ಅವಳಿಗೆ ಮಾತ್ರ ಸಂಬಂಧಪಟ್ಟದ್ದು; ಆದರೆ ಒಳಿತು-ಕೆಡಕುಗಳ ವಿಷಯ ತೀರ ಭಿನ್ನವಾಗಿರುವದು. ನಾವು ನೋಡಿದಂತೆ ಅವು ಇರುವುದೂ ಇಲ್ಲ; ಅವು ಇದ್ದಂತೆ ನಾವು ನೋಡುವುದೂ ಇಲ್ಲ. ನಾವು ಎರಡನ್ನೂ ಹಚ್ಚಿಸಿದ್ದೇವೆ.'

'ನೀವು ಒಳಿತು ಕೆಡಕು ಇವೆರಡೂ ಒಂದೇ ಎಂದು ಬೋಧಿಸುತ್ತಿರುವಿರಲ್ಲ ?'

'ಛೇ ಇಲ್ಲ. ಮತ್ತೆ ಕ್ಷಮಿಸಿರಿ; ಒಳಿತು ಕೆಡಕು ಇವು, ಆ ಶಬ್ದಗಳೇ ಸೂಚಿಸುವಂತೆ ಭಿನ್ನವಾಗಿವೆ. ಆದರೆ ಅವೆರಡೂ ಈಶ್ವರನ ರೂಪಗಳೆಂದು ನನ್ನ ಮಂದಬುದ್ಧಿಗೆನಿಸುತ್ತದೆ. ಅವನು ಒಂದರಲ್ಲಿದ್ದಾನೆ; ಇನ್ನೊಂದರಲ್ಲಿಲ್ಲ; ಅವನ ಈ ಭಾವಾಭಾವದ ಭೇದವೇ ದೊಡ್ಡದಿದೆ. ಆದರೂ ಅಭಾವದಿಂದ ಭಾವವು ಸೂಚಿತವಾಗುತ್ತದೆ. ಅಭಾವವು ಅಸತ್ಯಲ್ಲ. ಆದುದರಿಂದಲೇ ನಮಗೆ 'ಬಾ, ಬಾ, ಬಾ,' ಎಂದು ಪುನಃ ಪುನಃ ಅವನನ್ನು ಎಚ್ಚರಿಸಲಿಕ್ಕೆ ಅಧಿಕಾರವಿದೆ' ಎಂದು, ಮತ್ತೆ ಅದೇ ಉಸಿರಿನಲ್ಲಿ ಇಷ್ಟೊತ್ತಿನವರೆಗೆ ಆಡಿದ ಮಾತಿನಲ್ಲಿದ್ದ ಅಲ್ಪಸ್ವಲ್ಪ ಮಾಧುರ್ಯವನ್ನೆಲ್ಲ ಕೆಡಿಸಿ ಬಿಡುವಂತೆ—'ಮಾರವಾರ ಗುಡ್ಡಗಳಲ್ಲಿ ಆ ಪುರಾತನ ಪದಾರ್ಥಗಳನ್ನು ನೋಡಲಿಕ್ಕೆ ನಿಮಗೆ ಹೊತ್ತು ದೊರೆಯಿತೇ ?' ಎಂದು ಕೇಳಿದನು.

ಫೀಲ್ಡಿಂಗನು ಇವನ ಮಾತು ಕೇಳಿ ಕೇಳಿ ಕಾಯ್ದುಹೋಗಿದ್ದ ತನ್ನ

ತಲೆಗೆ ವಿಶ್ರಾಂತಿಯನ್ನು ಕೊಡುವದಕ್ಕಾಗಿ ಏನೂ ಉತ್ತರ ಕೊಡದೆ ಸುಮ್ಮನೆ ಕುಳಿತನು.

'ಇಳಿದುಕೊಳ್ಳುವ ಸ್ಥಳದ ಹತ್ತಿರಿರುವ ಕೆರೆಯನ್ನಾದರೂ ನೋಡ ಲಿಲ್ಲವೇ ?' ಎಂದು ಮತ್ತೆ ಗಂಟು ಬಿದ್ದು ಕೇಳಿದನು.

'ಹೌದೂ ಹೌದು.' ಎಂದು ವ್ಯಗ್ರವಾಗಿ ಒಮ್ಮೆಲೆ ಉತ್ತರ ಕೊಟ್ಟನು.

'ಬಹಳ ಒಳ್ಳೆಯದಾಯಿತು. ಹಾಗಾದರೆ ನೀವು ಕಠಾರಿ ಕೆರೆಯನ್ನೂ ನೋಡಿದಿರೆನ್ನಿ ?' ಎಂದು ಆ ಕೆರೆಯ ಬಗ್ಗೆ ಇದ್ದ ಒಂದು ದಂತಕಥೆಯನ್ನೂ ಹೇಳಿಯೇ ಬಿಟ್ಟನು. ಆ ಕಥೆಯಲ್ಲಿ ಒಬ್ಬ ಹಿಂದೂ ರಾಜನು ತನ್ನ ತಂಗಿಯ ಮಗನನ್ನೆ ಕೊಲ್ಲುತ್ತಾನೆ. ಈ ಕೆಲಸವನ್ನು ಸಾಧಿಸಿದ ಆ ಕಠಾರಿಯು ಅವನ ಕೈಗೇ ಅಂಟಿಗೊಳ್ಳುತ್ತದೆ. ಕೊನೆಗೆ ಎಷ್ಟೋ ವರ್ಷಗಳಾದ ಮೇಲೆ ಅವನು ಈ ಮಾರವಾರ ಗುಡ್ಡಗಳಿಗೆ ಬರುತ್ತಾನೆ. ಆಗ ಅವನಿಗೆ ಬಹಳ ನೀರಡಿಕೆಯಾಗುತ್ತದೆ. ನೀರು ಕುಡಿಯಬೇಕೆನ್ನುವಷ್ಟರಲ್ಲಿ ಒಂದು ನೀರಡಿಸಿದ ಆಕಳವು ಒದ್ದಾಡುವದನ್ನು ನೋಡುತ್ತಾನೆ. ತನ್ನ ನೀರನ್ನೇ ಆ ಆಕಳಿಗೆ ಕುಡಿಸುತ್ತಾನೆ. ಕೂಡಲೆ ಕೈಗೆ ಅಂಟಿಕೊಂಡಿದ್ದ ಕಠಾರಿಯು ಕೆಳಗೆ ಬೀಳುತ್ತದೆ. ಈ ಅದ್ಭುತವನ್ನು ನೋಡಿ ಅದರ ನೆನಪಿಗಾಗಿ ಅವನು ಒಂದು ಕೆರೆಯನ್ನು ಕಟ್ಟಿಸುತ್ತಾನೆ. ಅದೇ ಕಠಾರ ಕೆರೆಯೆಂದು ಪ್ರಸಿದ್ಧಿಯಾಗುತ್ತದೆ ಪ್ರೊ. ಗೋಡಬೋಲೆಯವರ ಯಾವ ಮಾತಿನ ಕೊನೆಗೇ ಆಗಲಿ ಆಕಳವು ಬರಲಿಕ್ಕೆಬೇಕು. ಫೀಲ್ಡಿಂಗನೂ ಇದನ್ನೆಲ್ಲ ನಿರ್ವಾಹವಿಲ್ಲದೆ ಒಳಗೆ ಚೇಳು ಕಡಿದಂತಾಗುತ್ತಿದ್ದರೂ ಸುಮ್ಮನೆ ಕುಳಿತು ಕೇಳಿದನು.

* * * * *

ಮರುದಿನ ಮಧ್ಯಾನ್ಹಕ್ಕೆ ಫೀಲ್ಡಿಂಗನಿಗೆ ಅಝೀಜನನ್ನು ಭೆಟ್ಟಿ ಆಗಲು ಅಪ್ಪಣೆ ದೊರೆಯಿತು. ಅಝೀಜನು ದುಃಖದಲ್ಲಿ ತೀರ ಮುಳುಗಿದ ರಿಂದ ಅವನ ಸಮೀಪಕ್ಕೆ ಹೋಗುವದು ಇವನಿಗೆ ಸಾಧ್ಯವಾಗಲಿಲ್ಲ. ಅವನೇ ಇವನನ್ನು ನೋಡಿ 'ಫೀಲ್ಡಿಂಗ್! ನೀನು ನಡುನೀರಲ್ಲಿ ನನ್ನ ಕೈಬಿಟ್ಟೆ!' ಎಂದರಚಿಕೊಂಡನು. ಇದನ್ನು ಕೇಳಿ ಫೀಲ್ಡಿಂಗನು ಅಲ್ಲಿ ನಿಲ್ಲದೆ ಕ್ವೆಸ್ಟೆಡ್‌ಳಿಗೆ ಪತ್ರ ಬರೆಯುವ ನೆವ ಮಾಡಿಕೊಂಡು ಹೊರಟೇ ಹೋದನು. ತನ್ನ ಆ ಪತ್ರದಿಂದೇನೂ ಕೆಲಸವಾಗುತ್ತಿರಲಿಲ್ಲೆಂಬುದು ಅವನಿಗೇ ಗೊತ್ತಿತ್ತು.

ಆದರೂ ಒಂದು ಕಲ್ಲೊಗೆದು ನೋಡಬೇಕೆಂದು ಅವನಿಗೆನಿಸಿತು. ಒಂದು ವೇಳೆ ಮ್ಯಾಕ್‌ಬ್ರಾಯಿಡರು ತನ್ನ ಪತ್ರವನ್ನು ನಡುವೆಯೇ ತಡೆದು ಹಿಡಿಯ ಬಹುದೆಂಬ ಸಂಶಯವೂ ಅವನಿಗಿತ್ತು. ಆದರೆ ಕ್ವೆಸ್ಟೆಡ್‌ಳ ಆ ವಿಕಾರಶೂನ್ಯ ವಿಚಾರಪೂರ್ಣ ಸ್ವಭಾವವು ಅವನಿಗೆ ಸ್ವಲ್ಪ ಧೈರ್ಯ ಕೊಟ್ಟಿತು. ಚಂದ್ರಪುರ ದಲ್ಲಿ ಹಿಂದೀ ಜನರನ್ನು ಅನ್ಯಾಯವಾಗಿ ಅಪರಾಧಕ್ಕೆ ಗುರಿಪಡಿಸದಿದ್ದವಳು ಎಂದರೆ ಇವಳೊಬ್ಬಳೇ ಎಂದು ಹೇಳಬಹುದು.

—

## ಪ್ರಕರಣ ೨೦

ಈ ಹೊತ್ತು ಕ್ಲಬ್ಬು ದಿನದಕಿಂತಲೂ ಹೆಚ್ಚು ತುಂಬಿತ್ತು. ಎಷ್ಟೋ ಜನ ತಮ್ಮ ಮಕ್ಕಳು-ಮರಿಗಳನ್ನೂ ಕರೆದುಕೊಂಡು ಬಂದಿದ್ದರು. ಎಲ್ಲರೂ ಒಳಗೆ ಗಾಬರಿಗೊಂಡಿದ್ದರೂ ಹೊರಗೆ ಮಾತ್ರ ಗಂಭೀರಭಾವ ತಳೆದಿದ್ದರು. ಒಬ್ಬರ ಕಿವಿಯಲ್ಲಿ ಒಬ್ಬರು ಏನೇನೋ ಗುಜುಗುಜು ಮಾತಾಡುತ್ತಿದ್ದರು. ಕೆಲ ಜನ ಹಲ್ಲು ಕಟೆಯುತ್ತಿದ್ದರು; ಕೆಲ ಜನ ಮೂಗು ಹಿಳ್ಳಿಸಿದ್ದರು; ಕೆಲ ಜನ ಕಣ್ಣು ಕೆಂಪು ಮಾಡಿದ್ದರು. ಇಷ್ಟಿದ್ದರೂ ಒಟ್ಟಿನಲ್ಲಿ ವಾತಾವರಣವು ಶಾಂತವಿತ್ತು. ವಾಡಿಕೆಯಂತೆ ಮೊದಲು ಒಬ್ಬರಿಗೊಬ್ಬರು ಪೇಯಗಳನ್ನು ಕೊಟ್ಟರು. ಯಾರಿಗೂ ಅದು ರುಚಿ ಹತ್ತಿದಂತೆ ಕಾಣಲಿಲ್ಲ. ನಡುನಡುವೆ ಎಲ್ಲಿಂದಲೋ ದೂರದಿಂದ ಹಲಿಗೆಗಳ ಸಪ್ಪಳವು ಗಾಳಿಗುಂಟ ತೇಲಿ ಬರು ತ್ತಿತ್ತು. ಇದನ್ನು ತಂಬಾಕ ಸೇದುವ ಕೋಣೆಯಲ್ಲಿ ಕುಳಿತಿದ್ದ ಒಬ್ಬ ಚಿಕ್ಕ ಕೂಸಿನ ತಾಯಿಯು ಕೇಳಿ 'ಅಯ್ಯೋ! ಅವರು ಸುರುವು ಮಾಡಿಯೇ ಬಿಟ್ಟರು!' ಎಂದು ಕೂಸನ್ನು ಗಟ್ಟಿಯಾಗಿ ಎದೆಗವಚಿಕೊಂಡು ಚೀರಿದಳು. ಎಲ್ಲರ ಕಣ್ಣುಗಳೂ ಕಿವಿಗಳೂ ಅತ್ತ ಹೊರಳಿದವು. ನಾಲ್ಕಾರು ಜನ ಎದ್ದು ಹೋಗಿ ಅವಳನ್ನು ಏನಾಯಿತೆಂದು ಕೇಳಿದರು. 'ಅಯ್ಯೋ! ಈ ಕಾಳಾ-ಜನ ರೆಲ್ಲ ಕೂಡಿ ದಂಗೆಯೆಬ್ಬಿಸಿದರೆ ಏನು ಮಾಡಬೇಕು? ನಮ್ಮ ಬಂಗ್ಲೆಯನ್ನೇ ಮುತ್ತಿದರೆ ಹೇಗೆ? ನನ್ನನ್ನೂ ಅವಮಾನಗೊಳಿಸಿದರೆ ಯಾರು ಬಿಡಿಸುವರು? ನಾನೀಗ ಒಬ್ಬಳೇ ಇದ್ದೇನೆ. ನನ್ನ ಗಂಡ 'ಫಿರ್ತಿ'ಯ ಮೇಲೆ ಹೋಗಿ

ದ್ದಾನೆ. ಆವನೇನು ದೊಡ್ಡ ಆಫೀಸರನಲ್ಲ. ಒಬ್ಬ ರೇಲ್ವೆ ಸಣ್ಣ ಅಧಿಕಾರಿ.. ಅಯ್ಯೊ! ಅವರು ಇತ್ತ ಕಡೆಗೇ ಬರುತ್ತಿದ್ದಾರೆ....!' ಎಂದು ಹೇಳಹೇಳು ತ್ತಿರುವಂತೆ ಮತ್ತೆ ಚೀರಿದಳು. ಹುಡುಗಿ ನೋಡಲಿಕ್ಕೇನೊ ಚೆಲುವೆಯಾಗಿ ದ್ದರೂ ತಲೆ ಮಾತ್ರ ಸ್ವಲ್ಪ ಸ್ವಾಧೀನ ತಪ್ಪಿದಂತೆ ಕಂಡಿತು. ದಿಸದಂತೆ ಯಾಗಿದ್ದರೆ ಅವಳನ್ನು ಎಲ್ಲರೂ ಜಬರಿಸಿ ಕೂಡಿಸಬಹುದಾಗಿತ್ತು. ಆದರೆ ಇಂದಿನ ರಂಗೇ ಬೇರೆಯಿತ್ತು. ಇಂಥವಳನ್ನು ಕೂಡ ತನ್ನ ಪ್ರಾಣವನ್ನು ಅರ್ಪಿಸಿಯಾದರೂ ಸಂರಕ್ಷಿಸಬೇಕೆಂಬ ಆವೇಶವೂ ಅಭಿಮಾನವೂ ಅಲ್ಲಿ ತುಂಬಿ ತುಳುಕುತ್ತಿತ್ತು. ಅಡೀಲಾಳಕಿಂತಲೂ ಇವಳ ಬಬ್ಬಾಟವೇ ಹೆಚ್ಚಾಯಿತು. 'ತಾಯಿ ಚಿಂತೆ ಮಾಡಬೇಡ; ಅವು ನೊಹರಮ್ಮದ ಹಲಿಗೆಗಳು' ಎಂದು ಗಂಡಸರೂ ಸಮಾಧಾನ ಮಾಡಿದರು. 'ಇಲ್ಲ, ನಿಶ್ಚಯವಾಗಿಯೂ ಇಲ್ಲ; ಏನಾದರೂ ಅವರು ಈ ಕ್ಲಬ್ಬಿಗೆ ಬರುವದಿಲ್ಲ. ಮತ್ತು ಒಡಾಸಾಹೇಬರ ಬಂಗ್ಲೆಗಂತೂ ಬರುವದೇ ಇಲ್ಲ. ನೀನು ನಿನ್ನ ಕೂಸಿನೊಂದಿಗೆ ಈ ರಾತ್ರಿ ಅಲ್ಲಿಯೆ ಮಲಗಿದರಾಯಿತು' ಎಂದು ಮಿಸೆಸ್ ಟರ್ಟನ್ನಳೂ ಅವಳಿಗೆ ಧೈರ್ಯ ಹೇಳಿ ತಾನೂ ಮುಂದೆ ಹೀಗೆ ಅಂಜುಗುಳಿಯಾಗಬಾರದೆಂದು ಮನದಲ್ಲಿಯೆ ನಿಶ್ಚಯಿಸಿಕೊಂಡಳು.

ಕಲೆಕ್ಟರನು ಎಲ್ಲರೂ ಸುಮ್ಮನಾಗಬೇಕೆಂದು ಚಪ್ಪಾಳಿಕ್ಕಿದನು. ಫೀಲ್ಡಿಂಗನನ್ನು 'ವೇಟಿಂಗ್ ರೂಮಿ'ನಲ್ಲಿ ಕಂಡಾಗ ಹೊರಬಿದ್ದ ಉದ್ವೇಗವು ಈಗ ಸಂಪೂರ್ಣವಾಗಿ ಕಡಿಮೆಯಾಗಿತ್ತು; ಮನಸ್ಸು ಆಗಲೆ ಸಮತೆಗೆ ಬಂದಿತ್ತು. 'ನಾನು ಹೆಣ್ಣುಮಕ್ಕಳಿಗಾಗಿ ಎರಡು ಮಾತು ಹೇಳಬಯಸು ತ್ತೇನೆ. ನೀವು ಗಾಬರಿಯಾಗಲಿಕ್ಕೆ ಎಳ್ಳಷ್ಟೂ ಕಾರಣವಿಲ್ಲ. ಶಾಂತವಾಗಿ ಇರ್ರಿ. ಅತ್ಯವಶ್ಯವಿದ್ದರೇ ಹೊರಗೆ ಹೋಗಿರಿ. ಊರೊಳಗೆ ಹೋಗಬೇಡಿರಿ. ನಿಮ್ಮ ಚಾಕರರೆದುರಿಗೆ ಏನೂ ಮಾತಾಡಬೇಡಿರಿ. ಇಷ್ಟೇ ನೀವು ಮಾಡಿದರೆ ಸಾಕು' ಎಂದು ಹೇಳಿದನು.

'ಹ್ಯಾರಿ! ಊರೊಳಗಿನ ಸುದ್ದಿಯೇನಾದರೂ ಇದೆಯೇ?' ಎಂದು ಅವನ ಹೆಂಡತಿಯು ಸ್ವಲ್ಪ ದೂರದಲ್ಲಿಯೆ ನಿಂತು 'ಜನಪದ ಹಿತಕರ್ತರ' ಆಢ್ಯತೆಯನ್ನು ದನಿಯಲ್ಲಿ ತಂದು ಕೇಳಿದಳು. ಉಳಿದವರೆಲ್ಲ ಸುಮ್ಮನಿದ್ದರು.

'ಎಲ್ಲವೂ ಯಥಾಸ್ಥಿತ ಇದೆ.'

'ನಾನೂ ಅಷ್ಟೇ ಸುದ್ದಿಯನ್ನು ಕೇಳಿದ್ದೇನು. ಆ ಹಲಿಗೆಗಳು ಕೇವಲ ಮೊಹರಮ್ಮಿನವಲ್ಲವೇ ?'

'ಇನ್ನೂ ಅದರ ತಯಾರಿ ನಡೆದಿದೆ; ಮೆರೆವಣಿಗೆ ಇನ್ನೂ ಮುಂದಿನ ವಾರದ ವರೆಗೆ ಇಲ್ಲ.'

'ಹೌದು, ಮುಂದಿನ ಸೋಮವಾರದ ವರೆಗೆ.'

'ಎಂ. ಮ್ಯಾಕ್‌ಬ್ರ್ಯಾಯಿಡನು ಸಾಧುವೇಷ ಹಾಕಿಕೊಂಡು ಹೋಗಿದ್ದಾನೆ ?' ಎಂದು ಮಿಸೆಸ್ ಕ್ಯಾಲೆಂಡರಳು ಕೇಳಿದಳು.

'ಇಂಥ ಮಾತುಗಳನ್ನು ಇಂಥಲ್ಲಿ ಎಂದೂ ಆಡಬಾರದು, ಮಿಸೆಸ್ ಕ್ಯಾಲೆಂಡರ್ ! ಇಂಥ ದಿವಸಗಳಲ್ಲಿ ನಾವಿನ್ನೂ ಹೆಚ್ಚು ಜಾಗರೂಕರಾಗಿರಬೇಕು' ಎಂದು ಅವಳ ಕಡೆ ಕೈತೋರಿಸಿ ಕಲೆಕ್ಟರನು ಎಚ್ಚರ ಕೊಟ್ಟನು.

'ನಾನು....ಹಃ ಹಃ....ಹೌದು ನಾನು....' ಎಂದು ತಡವರಿಸಿದಳು. ಅವಳಿಗೆ ಕೆಡಕೇನೂ ಎನಿಸಿರಲಿಲ್ಲ ಅವನ ಈ ನಿಷ್ಠುರ ಮಾತಿನಿಂದ.

'ಮತ್ತೇನಾದರೂ ಪ್ರಶ್ನೆಗಳಿವೆಯೇ ? ಅವಶ್ಯವೆನಿಸುವ ಪ್ರಶ್ನೆಗಳು ಮಾತ್ರ.'

'ಎಲ್ಲಿದ್ದಾನೆ ಆ..ಅವನು..?' ಎಂದು ಮಿಸೆಸ್ ಲೆಸ್ಲಿಯು ನಡುಗಿದಳು.

'ಜೇಲಿನಲ್ಲಿ. ಜಾಮೀನು ನಿರಾಕರಿಸಲ್ಪಟ್ಟಿತು.'

ಆಮೇಲೆ ಫೀಲ್ಡಿಂಗನು ಎದ್ದು ಮಾತನಾಡಿದನು. ಅವನಿಗೆ ಕ್ವೆಸ್ಟೆಡ್‌ಳ ಆರೋಗ್ಯದ ವಿಷಯದಲ್ಲಿ ಸರಕಾರದ ಪ್ರಕಟನೆಯೇನಾದರೂ ಹೊರಟಿದೆಯೊ? ಏನು ಬರಿ ಬಜಾರದ ಸುದ್ದಿಯಿಂದ ಈ ಗಾಬರಿಯಾಗುವ ಸುದ್ದಿ ಹೊರಟಿದೆಯೋ ? ಎಂದು ತಿಳಿದುಕೊಳ್ಳಬೇಕಾಗಿತ್ತು. ಆದರೆ ಅವನ ಈ ಪ್ರಶ್ನೆಯೇ ಕೆಟ್ಟ ಪರಿಣಾಮ ಮಾಡಿತು. ಅವನು ಪ್ರಶ್ನೆ ಕೇಳುವಾಗ ಅವಳ ಹೆಸರನ್ನೇ ಉಚ್ಚರಿಸಿಬಿಟ್ಟನು; ಹಾಗೆ ಮಾಡದೆ ಪರ್ಯಾಯೋಕ್ತಿಯಿಂದಲೆ ಕೇಳಬೇಕಾಗಿತ್ತು.

'ಕ್ಯಾಲೆಂಡರರೇ ಅಲ್ಲಿಯ ಸ್ಥಿತಿಗತಿಯ ಬಗ್ಗೆ ಚೆನ್ನಾಗಿ ಹೇಳಬಲ್ಲರೆಂದು ನನಗೆನಿಸುತ್ತದೆ.'

'ಅವರು ಕೇಳಿದ ಆ ಪ್ರಶ್ನೆಯು ಅವಶ್ಯ ಪ್ರಶ್ನೆಯೆಂದು ಹೇಗೆನಿಸು ವದೋ ನನಗೆ ತಿಳಿಯದಾಗಿದೆ ' ಎಂದು ಮಿಸೆಸ್ ಟರ್ಟನ್ನಳು ಕೆದಕಿದಳು.

'ಎಲ್ಲ ಸ್ತ್ರೀಯರು ಈಗ ದಯಮಾಡಿ ಈ ಸೇದುವ ಕೋಣೆಯನ್ನು ಬಿಟ್ಟು ಹೊರಗೆ ಹೋಗುವಿರಾ?' ಎಂದು ಕಲೆಕ್ಟರನು ಮತ್ತೆ ಚಪ್ಪಾಳಿಕ್ಕಿ ಕೂಗಿದನು. 'ನಾನು ಹೇಳಿದ್ದನ್ನು ನೆನಪಿನಲ್ಲಿಡಬೇಕು. ಕಠಿಣ ಪ್ರಸಂಗ ದಲ್ಲಿ ನಮಗೆ ಸಹಾಯ ಮಾಡಲಿಕ್ಕೆ ನಾವು ನಿಮ್ಮ ಕಡೆಗೇ ನೋಡುತ್ತೇವೆ; ಮತ್ತು ನೀವು ಎಲ್ಲವೂ ಯಥಾಸ್ಥಿತ ನಡೆದಿದೆಯೆಂದ ತಿಳಿದು ನಡೆದುಕೊಂ ಡರೆ ಸಾಕು ಅದೇ ನಮಗೆ ಸಹಾಯ ಮಾಡಿದಂತಾಗುವದು. ಇಷ್ಟನ್ನು ನೀವು ನಡಿಸಿಕೊಡುವಿರಾ? ಭರವಸೆಯಿಡಲೇ?'

'ಓಹೋ! ಬೇಕಾದಹಾಗೆ ಇಡಬಹುದು ' ಎಂದು ಅವರು ಆತುರ ರಾಗಿ ಮುಖ ಮೇಲಕ್ಕೆತ್ತಿ ಒಂದೇ ಧ್ವನಿಯಲ್ಲಿ ಉತ್ತರ ಕೊಟ್ಟು ಗಂಭೀರ- ರಾಗಿ ಮಿಸೆಸ್ ಬ್ಲ್ಯಾಕಿನ್‌ಸ್ಟನ್ನಳನ್ನು ತಮ್ಮ ನಡುವೆ ಮಾಡಿಕೊಂಡು ದೇವರಿಗೊಯ್ಯುವ ನೀರಾಂಜನ ದೀಪದಂತೆ ಅವಳನ್ನು ಸುತ್ತಲಿಂದಲೂ ಸಂರಕ್ಷಿಸುತ್ತ ಹೊರಗೆ ಹೊರಟರು. ಕಲೆಕ್ಟರನ ಈ ಸಾದಾ ಶಬ್ದಗಳು ಅವರಲ್ಲಿ ತಾವೂ ಈ ಬ್ರಿಟಿಶ್ ಸಾಮ್ರಾಜ್ಯದ ಆಧಾರಸ್ತಂಭರೆಂಬ ಅಭಿಮಾನ ವನ್ನು ಹುಟ್ಟಿಸಿದವು. ಅಡೀಲಾಳ ಸಲುವಾಗಿ ಅವರಲ್ಲಿದ್ದ ಅನುಕಂಪ ಭಾವ ದೊಡನೆ ಇನ್ನೊಂದು ಭಾವವು—ಅದು ಹುಡುಗಾಟದ್ದಿರಬೇಕು—ಮೆಲ್ಲನೆ ತಲೆಯೆತ್ತಿ ಕೊನೆಗೆ ತಾಯಿಬೇರಾದ ಆ ಅನುಕಂಪ ಭಾವವನ್ನೆ ಕಿತ್ತೆಸೆಯಿತು. ಮೊದಮೊದಲು ಆದ ಚಿನ್ಹಗಳು ಅಷ್ಟೇನು ಎದ್ದು ಕಾಣಲಿಲ್ಲ. ಯಾವಾಗ ಮಿಸೆಸ್ ಟರ್ಟನ್ನಳು ಬ್ರಿಜ್ಜಿನ ಆಟದಲ್ಲಿ ಮುಳುಗಿ ಗಟ್ಟಿಯಾಗಿ ಜೇಷ್ಟೆ ಸುರುವು ಮಾಡಿದಳೊ ಆಗಲೆ ಅದು ಸುರುವಾಯಿತು. ಮಿಸೆಸ್ ಲೆಸ್ಲಿಯು ಇದಾವುದಕ್ಕೂ ಸಂಬಂಧವಿಲ್ಲದವರಂತೆ ಉಣ್ಣೆಯ ಕೊರಳಪಟ್ಟಿಯನ್ನು ಹೆಣೆಯಹತ್ತಿದಳು.

ಸೇದುವ ಕೋಣೆಯು ತೆರವಾದ ಕೂಡಲೆ ಕಲೆಕ್ಟರನು ಮೇಜಿನ ಮೇಲೆ ಒಂದು ಕುಳಿತನು. ಅವನ ಮನಸ್ಸಿನಲ್ಲೀಗ ಪರಸ್ಪರ ವಿರುದ್ಧವಾದ ಅನೇಕ ಭಾವನೆಗಳ ಗುದುಮುರಿಗೆ ನಡೆದಿತ್ತು. ಇತ್ತ ಕ್ವೆಸ್ಟೆಡ್‌ಳಿಗೆ ಆದ ಅನ್ಯಾಯಕ್ಕೆ ಪ್ರತೀಕಾರವೂ ಆಗಬೇಕು; ಅತ್ತ ಫೀಲ್ಡಿಂಗನ ಉದ್ಧಟತನಕ್ಕೆ

ಶಿಕ್ಷೆಯೂ ಆಗಬೇಕು; ಆದರೆ ಅದರಲ್ಲಿ ತಾನು ಮಾತ್ರ ಧರ್ಮರಾಜನಾಗಿಯೇ ಉಳಿಯಬೇಕು. ಕಣ್ಣಿಗೆ ಬಿದ್ದ ಪ್ರತಿಯೊಬ್ಬ ದೇಶಿ ಮನುಷ್ಯನನ್ನೂ 'ಛಟಿಗಿ' ಹೊಡೆಯಬೇಕು, ಆದರೆ ಅದರಿಂದ ದಂಗೆಯೆದ್ದಿರಬಾರದು, 'ಲಷ್ಕರು' ಒಂದಿರಬಾರದು. ಲಷ್ಕರಿಯ ನೆನಪಾದ ಕೂಡಲೆ ಅವನ ಕಣ್ಣೆದುರಿಗೆ ಅದೆಷ್ಟೋ ಭಯಾನಕ ರುದ್ರ ದೃಶ್ಯಗಳು ಹಾಯ್ದುಹೋದವು. ಅವನ ಮೈ ನಡುಗಿ, ಮನ ಬೆಚ್ಚಿತು. ಬಂದವರಲ್ಲಿ ಈ ಹೊತ್ತು ಅದು ಹೇಗೋ ಒಬ್ಬ ಗುರ್ಖಾ ಸೈನಿಕನು ಬಂದು ಸೇರಿಕೊಂಡಿದ್ದನು ಬೇರೆ; ಮೇಲಾಗಿ ಸ್ವಲ್ಪ ಕುಡಿದಿದ್ದನು. ಕಲೆಕ್ಟರನು ಅವನನ್ನು ನೋಡಿ. ತನ್ನ ಮನಸ್ಸಿನಲ್ಲಿಯ ಗುದುಮುರಿಗೆಯನ್ನು ನೆನೆದು, ನಿಟ್ಟುಸಿರುಬಿಟ್ಟನು; ಹಿಂದಿನ ಕಾಲವನ್ನು ನೆನೆದನು. ಆ ಕಾಲದಲ್ಲಿ ಇಂಗ್ಲಿಷ ಮನುಷ್ಯನು ತನ್ನ ಮರ್ಯಾದೆಯನ್ನು ಕಾಯ್ದುಕೊಳ್ಳಲಿಕ್ಕೆ ಏನು ಬೇಕಾದ್ದು ಮಾಡಿದರೂ ಯಾರೂ ಅದರ ವಿಷಯಕ್ಕೆ 'ಬ್ರ'ಯೆನ್ನುತ್ತಿರಲಿಲ್ಲ. ಅಂಥ ಕಾಲವೇಕೆ ಮತ್ತೊಮ್ಮೆ ಈಗ ಬರಬಾರದೆಂದು ಚಡಪಡಿಸಿದನು. ಆದರೆ ಬಿಸಿರಕ್ತದ ಹೆಸ್ಲೋಪನು ಆಗಲೆ ಈ ಸ್ವೈರವೃತ್ತಿಯ ಹಾದಿಯನ್ನೆ ಹಿಡಿದು ಜಾಮೀನನ್ನು ನಿರಾಕರಿಸಿದ್ದನು. ಅವನು ಹೀಗೆ ಮಾಡಿದ್ದು ಕಲೆಕ್ಟರನಿಗೆ ಸರಿಯೆನಿಸಲಿಲ್ಲ. ಇದರಿಂದ ಕೇವಲ ನವಾಬಬಹಾದ್ದೂರರಾಗಲಿ, ಅಥವಾ ಅವರ ಪಂಗಡದವರಾಗಲಿ ಇವರಿಷ್ಟೇ ಸಿಟ್ಟಿಗೇಳುತ್ತಾರೆಂದಲ್ಲ, ಹಿಂದುಸ್ತಾನ ಸರಕಾರವೂ ಕಣ್ಣಿಟ್ಟು ನೋಡುವದು; ಮತ್ತೆ ಈ ಬ್ರಿಟಿಶ್ ಪಾರ್ಲಿಮೆಂಟಿನ ಮಾತಿನ ಮಾಯಾಬಲೆಯಲ್ಲಿ ಸಿಕ್ಕಿಬಿದ್ದ ಆ ಹೆಣದತ್ತ ಅರೆಮರುಳರದೊಂದು ಗುಂಪು ಬೇರೆ ಅದರ ಹಿಂದೆ ಇದೆ! ಕಾಯಿದೆಯ ದೃಷ್ಟಿಯಿಂದ ಆಝೀಜನಿನ್ನೂ ಅಪರಾಧಿಯಾಗಿಲ್ಲೆಂಬುದರರಿವು ಅವನನ್ನು ಮೇಲಿಂದ ಮೇಲೆ ಕಟಕುತ್ತಿತ್ತು. ಇದೆಲ್ಲದರಿಂದ ಅವನು ನಟ್ಟುಕಡಿದು ನೇಗಿಲ ಹೊಡೆದವರಷ್ಟು ದಣಿದು ಹೆಣವಾದನು.

ಹೊಣೆಗಾರಿಕೆ ಕಡಿಮೆಯಿದ್ದವರು ಇದಾವುದರಲ್ಲಿಯೂ ಅಷ್ಟೊಂದು ಮನಸ್ಸು ಹಾಕದೆ ಪ್ರತಿನಿತ್ಯ ಹೇಗೆ ಇರಬೇಕೊ, ಹೇಗೆ ಕಾಲ ಕಳೆಯಬೇಕೊ ಹಾಗೆಯೆ ಇದ್ದು ಕಾಲಕಳೆಯಹತ್ತಿದರು. 'ಇದ್ದರೆ ಇರಬಹುದು; ನಮಗೇನು ಸಂಬಂಧ?' ಎಂದುಕೊಂಡು ಅವರು ಆ ವಿಷಯವನ್ನೆ ಬಿಟ್ಟು ತಮ್ಮ ಮನೆ, ಮಡದಿ, ಮಕ್ಕಳ ವಿಷಯವಾಗಿ ಮಾತನಾಡಹತ್ತಿದರು.

ಮನುಷ್ಯ ಒಮ್ಮೆ ಈ ತರಹದ ಮಾತಿನ ಪ್ರವಾಹದ ಸೆಳವಿಗೆ ಸಿಕ್ಕನೆಂದರೆ ಸುಖದಕಿಂತ ದುಃಖದ ತೂಕವೇ ಹೆಚ್ಚಾಗಿ ಅವನ ಮನಸ್ಸಿನ ತೂಕವೂ ತಪ್ಪಿ ಹೋಗುವದುಂಟು. ಹೀಗೆ ಅವರು ತೂಕತಪ್ಪಿ ಮಾತನಾಡಿಕೊಳ್ಳುತ್ತಿದ್ದರೂ ಅವರಿಗೊಂದು ತರಹದ ಸುಖವಿತ್ತು ಅದರಲ್ಲಿ. ತಮ್ಮ ಆ ಸುಖದಲ್ಲಿ ಅವರು ಆ ಅರ್ಧ ಪರಿಚಿತಳಾದ ಮಿಸ್ ಕ್ವೆಸ್ಟೆಡ್‌ಳ ಭಾವರಹಿತ ಮುಖವನ್ನೆ ಮರೆತುಬಿಟ್ಟರು. ಅದರ ಬದಲು ಅವರು ತಮ್ಮ ಜೀವನದಲ್ಲಿಯ ಅತ್ಯಂತ ಮಧುರವಾದ ಅಂತಃಕರುಣವನ್ನುಕ್ಕಿಸುವ ಪ್ರಸಂಗಗಳನ್ನು ನೆನೆದುಕೊಂಡರು. ಈ ಮಾತಿನ ಭರದಲ್ಲಿ ಕುಡಿಯುವದೂ ಜೋರಾಗಿ ನಡೆದಿತ್ತು. ಅದಷ್ಟು ಅವರಿಗೆ ಅಮಲೇರಗೊಡಬಾರದೆಂದು ಕಲೆಕ್ಟರನ ಆಶೆ; ಆದರೆ ಅವರಿಗೇ ಹೇಳಿ ಕುಡಿಯುವದನ್ನು ನಿಲ್ಲಿಸುವ ಧೈರ್ಯವಿದ್ದಿಲ್ಲ ಅವನಿಗೆ. ಅಲ್ಲಿ ಕೂಡಿದವರಲ್ಲಿ ಎಷ್ಟೋ ಹೆಂಗಸರು ಹುಡುಗರು ಇನ್ನು ಸ್ವಲ್ಪ ದಿವಸಗಳಲ್ಲಿಯೆ ಬೇಸಿಗೆಯ ಸಲುವಾಗಿ ಬೆಟ್ಟಕ್ಕೆ ಹೋಗುವವರಿದ್ದರು. ಅವರನ್ನೆಲ್ಲ ಒಂದು ಸ್ಪೆಶಲ್ ಗಾಡಿಯಲ್ಲಿ ತುಂಬಿ ಬೇಗನೆ ಕಳಿಸಬೇಕೆಂದು ಯಾವುದೊ ಒಂದು ಮೂಲೆಯಿಂದ ಸೂಚನೆ ಬಂತು.

'ಒಳ್ಳೇ ಸೂಚನೆ!' ಎಂದು ಗುರ್ಖಾ ಸೈನಿಕನು ನುಡಿದನು. 'ಹೇಗೂ ಸೈನ್ಯವು ಈ ಹೊತ್ತಾಗಲಿ ನಾಳೆಯಾಗಲಿ ಬರತಕ್ಕದ್ದೇ.' (ಅವನ ಮನಸ್ಸಿನಲ್ಲಿ ಸ್ಪೆಶಲ್ ಗಾಡಿಗೂ ಸೈನ್ಯಕ್ಕೂ ಅಭೇದವೇ ಇತ್ತು.) 'ಈ ಬರ್ಬಾಸ ಗುಡ್ಡಗಳು (ಮಾರವಾರಕ್ಕೇ ಅವನೆಂದದ್ದು) ಲಷ್ಕರೀ ಅಧಿಕಾರದಲ್ಲಿದ್ದಿದ್ದರೆ ಹೀಗೆಂದೂ ಆಗುತ್ತಲೇ ಇರಲಿಲ್ಲ. ಕೆಲವು ಗುರ್ಖಾ ಸಿಪಾಯರ ಗುಂಪನ್ನು ಗುಹೆಗಳ ಬಾಗಿಲಿಗೆ ಇರಿಸಿಬಿಟ್ಟಿದ್ದರೆ ಆಗಿಹೋಗಿತ್ತು..

'ಮಿಸೆಸ್ ಬ್ಲ್ಯಾಕಿಸ್ಟನ್ನಳು ಅಲ್ಲಿ ಗುರ್ಖರ ಬದಲು ಕೆಲವು ಟೋಮ್ಮಿಗಳನ್ನಿರಿಸಿದ್ದರೆ ಹೇಗೆ ? ಎಂದು ಕೇಳುತ್ತಾಳೆ. ' ಎಂದು ಯಾರೊ ನುಡಿದರು.

'ಇಂಗ್ಲೀಷರು ಉಪಯೋಗವಿಲ್ಲ.' ಎಂದು ತನ್ನ ರಾಜನಿಷ್ಠೆಯ ಪ್ರತಿಷ್ಠೆ ಮುಂದೆಮಾಡಿ ನುಡಿದನು. 'ಈ ದೇಶಕ್ಕೆ ದೇಶೀ ಸಿಪಾಯರೇ ಬೇಕು. ನನ್ನ ಕೈಯಲ್ಲಿ ಬೇಕಾದರೆ ಆಟಗುಳಿ ದೇಶೀ ಮನುಷ್ಯರನ್ನು ಕೊಡಿರಿ, ಗುರ್ಖರನ್ನು ಕೊಡಿರಿ, ರಜಪೂತರನ್ನು ಕೊಡಿರಿ, ಮರಾಠರನ್ನು ಕೊಡಿರಿ, ಜಾಠರನ್ನು ಕೊಡಿರಿ, ಪಂಜಾಬಿಗಳನ್ನು ಕೊಡಿರಿ, ಶೀಖರನ್ನು

ಕೊಡಿರಿ, ಭಿಲ್ಲ, ಆಫ್ರಿದಿ, ಪಠಾಣರನ್ನು ಕೊಡಿರಿ, ಮತ್ತೆ ಅಂಥ ಪ್ರಸಂಗವೇ ಬಂದರೆ ನೀವು ಬಜಾರದೊಳಗಿನ ಬೀಕಲು ಕೊಟ್ಟರೂ ಚಿಂತೆಯಿಲ್ಲ, ಅವರನ್ನು ನಾನು ಬೇಕಾದಲ್ಲಿಗೆ ಒಯ್ಯಬಲ್ಲೆ !......ಅವರಿಗೆಲ್ಲ ಸರಿಯಾದ ನಾಯಕನು ಬೇಕು ಅಷ್ಟೆ....'

ಕಲೆಕ್ಟರನು ಅವನ ಈ ಮಾತಿಗಾಗಿ ಸಂತೋಷದಿಂದ ತಲೆದೂಗಿದನು. ಮತ್ತು ತನ್ನ ಜನರಿಗೆ 'ನಿಮ್ಮ ಸಂಗಡ ಆಯುಧಗಳನ್ನು ತೆಗೆದುಕೊಂಡು ಹೋಗಬೇಡಿರಿ. ಪರಿಸ್ಥಿತಿಯು ವಿಪರೀತಕ್ಕೆ ಹೋಗುವ ವರೆಗೆ ಯಾವುದೂ ಬೇಡ. ಅಲ್ಲಿಂದ ಬೇಕಾದರೆ ನೋಡಬಹುದು. ಬೆಟ್ಟಕ್ಕೆ ಕಳಿಸುವವರನ್ನು ಕಳಿಸಿಬಿಡಿರಿ. ಆದರೆ ಅದೆಲ್ಲ ಗದ್ದಲಿಲ್ಲದಂತೆ ಆಗಲಿ. ದಯಮಾಡಿ ಸ್ಪೆಶಲ್ ಗಾಡಿಯ ಹೆಸರು ಮಾತ್ರ ತೆಗೆದುಕೊಳ್ಳಬೇಡಿರಿ. ನಿಮ್ಮ ಮನೋವಿಕಾರಗಳ ಕಡೆಗೆ ಲಕ್ಷ್ಯಗೊಡಬೇಡಿರಿ. ಅಂದರೆ ನನಗೇನೂ ಇಲ್ಲ ಎಂದು ತಿಳಿದುಕೊಳ್ಳಬೇಡಿರಿ. ನನಗೂ ಮನಸ್ಸಿದೆ; ಭಾವನೆಗಳಿವೆ; ಸಿಟ್ಟಿದೆ; ಅಭಿಮಾನವಿದೆ. ಆದರೆ ತಾಳ್ಮೆಯಿಂದಿರಬೇಕು. ಒಬ್ಬ ಹಿಂದೀ ಮನುಷ್ಯನು ಒಂದು 'ಗುನ್ಹೆ' ಮಾಡಲು ಹವಣಿಸಿದ್ದ—ಅವನ ಮೇಲೆ ಆ ಪ್ರಕಾರ ಆರೋಪ ಹೊರಿಸಲಾಗಿದೆ—' ಎಂದು ಹೇಳಿ ತನ್ನ ಕೈಬೆರಳಿನ ಉಗುರಿನಿಂದ ಜೋರಾಗಿ ಹಣೆಗೆ ತಟ್ಟಿಕೊಂಡನು. ಅವರಿಗೆಲ್ಲ ತಮ್ಮಷ್ಟೇ ಅವನಿಗೂ ಎನಿಸಿದೆಯೆಂದು ಮನವರಿಕೆಯಾಯಿತು. ಅಲ್ಲಿಂದ 'ಹೆಚ್ಚು ಸಂಗತಿಗಳು ತಿಳಿಯುವ ವರೆಗೆ ಇದೊಂದೇ ಸಂಗತಿಯನ್ನಿಟ್ಟುಕೊಂಡು ನಡೆಯೋಣ; ಮತ್ತು ಪ್ರತಿಯೊಬ್ಬ ಹಿಂದೀ ಮನುಷ್ಯನು ದೇವನಿದ್ದಾನೆಂದೇ ಗ್ರಹಿಸಿರಿ.' ಎಂದು ತನ್ನ ಭಾಷಣವನ್ನು ಮುಗಿಸಿದನು.

ಕುಳಿತವರಲ್ಲಿ ಕೂಡಲೆ ಗುಜುಗುಜು ಮಾತಾಡಿಕೊಳ್ಳುವದು ಸುರುವಾಯಿತು. 'ಅವನು ಹೇಳುವದು ಸರಿ....ಅದರಂತೆ ನಾವು....ದೇವರೆಂದು....ಹಾಗೆಯೇ..' ಎಂದನೊಬ್ಬ. ಗುರ್ಖಾ ಸೈನಿಕನು ಕೂಡಲೆ ಉತ್ತರ ಕೊಟ್ಟನು: 'ನಾನು ಹೇಳಿದ್ದೂ ಇದೇ...ಒಬ್ಬನೇ ಇದ್ದಾಗೆಲ್ಲ ಈ ದೇಶೀ ಮನುಷ್ಯನು ಸರಿಯಾಗಿರುತ್ತಾನೆ......ಲೆಸ್ಲಿ! ಲೆಸ್ಲಿ! ಹೋದ ತಿಂಗಳು ನಿಮ್ಮ ಬೈಲಿನಲ್ಲಿ ನಾನೊಬ್ಬನಿಂದ ಹೊಡತ ತಿಂದೆನಲ್ಲ, ನಿಮಗೆ

ನೆನಪಿದೆಯೇ? ಅವನದು ಎಷ್ಟೋ ಬರಾಬರಿ ಇತ್ತು. ನೀವು ತುಳಿದಿಡ-ಬೇಕಾದವರೆಂದರೆ ಈ ಸುಶಿಕ್ಷಿತ ಜನರನ್ನೇ, ಗೊತ್ತಿರಲಿ.'

ನೇದುವ ಕೋಣೆಯ ಬಾಗಿಲು ತೆರೆಯಿತು. ಒಮ್ಮೆಲೆ ಹೆಂಗಸರ ಕಿಲಿಬಿಲಿಯು ಒಳನುಗ್ಗಿ ಬಂತು ಮಿಸೆಸ್ ಟರ್ಟನ್ನಳು 'ಅವಳು ಹುಷಾರಿಯಾಗಿದ್ದಾಳೆ!' ಎಂದು ಕೂಗಿದಳು. ಈ ಸುದ್ದಿಯನ್ನು ತಂದ ಸಿವ್ಹಿಲ್ ಸರ್ಜನ್ನನು ಒಳಕ್ಕೆ ಬಂದನು. ಕಣಕದ ಮುದ್ದೆಯಂತಿದ್ದ ಅವನ ಮುಖದ ಮೇಲೆ ಉದ್ವೇಗವು ಒಡೆದು ಕಾಣುತ್ತಿತ್ತು. ಬಂದೊಡನೆ ಸುತ್ತಲೂ ಎಲ್ಲ ಕಡೆಗೆ ನೋಡಿದನು. ತನ್ನ ಹತ್ತಿರವೇ ಫೀಲ್ಡಿಂಗನು ಬೋಳ ಕುರ್ಚಿಯಲ್ಲಿ ಹುದುಗಿದ್ದನ್ನು ಕಂಡು 'ಹೂಂ!' ಎಂದು ಗುರುಗುಟ್ಟಿದನು. ಅವನ ವಿಷಯಕ್ಕೆ ಎಲ್ಲ ವಿವರಗಳನ್ನೂ ಹೇಳಬೇಕೆಂದು ಪ್ರತಿಯೊಬ್ಬರೂ ಅವನನ್ನು ಒತ್ತಾಯಪಡಿಸಹತ್ತಿದರು. 'ಸ್ವಲ್ಪೇ ಇರಲಿ, ಬಹಳೇ ಇರಲಿ, ಅಂತೂ ಜ್ವರ ಇರುವ ವರೆಗೆ ಈ ದೇಶದಲ್ಲಿ ಯಾವನೂ ಪಾರಾದೆನೆಂದು ತಿಳಿಯಬಾರದು.' ಎಂದು ಉತ್ತರಕೊಟ್ಟನು. ತನ್ನ ರೋಗಿಗೆ ಗುಣವಾದದ್ದೇ ಅವನಿಗೆ ಬೇಡಾಗಿತ್ತೆಂದು ಅವನ ಮುಖ ಹೇಳುತ್ತಿತ್ತು. ಈ ಮೋಬರನ ರೀತಿ-ನೀತಿಗಳ ಪರಿಚಯವಿದ್ದವರೆಲ್ಲರಿಗೂ ಇದರಿಂದೇನು ಆಶ್ಚರ್ಯವೆನಿಸಲಿಲ್ಲ.

'ಕ್ಯಾಲೆಂಡರ್! ಕುಳಿತುಕೊಳ್ಳಿರಿ; ಅದರ ವಿಷಯ ನಮಗೆಲ್ಲ ಹೇಳಿರಿ'

'ಅದನ್ನೆಲ್ಲ ಹೇಳಲಿಕ್ಕೆ ನನಗೆ ಸ್ವಲ್ಪ ಹೊತ್ತು ಕೊಡಬೇಕು.'

'ಮುದುಕಿಯು ಹೇಗಿದ್ದಾಳೆ?'

'ಇನ್ನೂ ಜ್ವರವಿದೆ.'

'ಅವಳು ಕ್ಷೀಣವಾಗುತ್ತಿದ್ದಾಳೆಂದು ನನ್ನ ಹೆಂಡತಿಯು ಕೇಳಿದಳಂತೆ!'

'ಇರಬಹುದು. ನಾನು ಯಾವುದನ್ನೂ ಹೇಳಲಾರೆ. ಲೆಸ್ಲಿ, ನನಗೆ ಈ ರೀತಿ ಪ್ರಶ್ನೆಗಳಿಂದ ತೊಂದರೆ ಕೊಡಬೇಡ.'

'ಹೆಸ್ಲೊಪನು ನನ್ನ ಹಿಂದೆಯೆ ಬರುತ್ತಿದ್ದಾನೆ.'

ಹೆಸ್ಲೊಪನ ಹೆಸರುಚ್ಚರಿಸಿದ ಕೂಡಲೆ ಎಲ್ಲರ ಮುಖಗಳ ಮೇಲೂ ಒಂದು ಮಧುರ ಭಾವವು ಮಿನುಗಿತು. ಅವರ ಮನಸ್ಸಿನ ರಂಗದ ಮೇಲೆ

ಮಿಸ್ ಕ್ವೆಸ್ಟೆಡ್‌ಳು ತನ್ನ ದೈವದ ದೇವಿಗೆ ಮೂಕ ಬಲಿಯಾಗಿದ್ದಳು; ಆದರೆ ಹೆಸ್ಲೊಪನು ಎಲ್ಲ ನೋವನ್ನೂ ನುಂಗಿ ಸಾವನ್ನೂ ಆಭರಣವನ್ನಾಗಿ ಧರಿಸುವ ಯುದ್ಧ ವೀರನ ಅನುರಪಟ್ಟವನ್ನೇರಿದ್ದನು.

'ನನ್ನ ಕೈಕೆಳಗಿನ ಆ ಮಹಾರತ್ನಕ್ಕೆ ನಾನು ರಜೆಯನ್ನೇ ಕೊಡಬಾರದಾಗಿತ್ತು. ಆ ಬುದ್ಧಿಯನ್ನು ದೇವರು ನನಗೇಕೆ ಕೊಡಬಾರದಿತ್ತು! ಮೊದಲು ನನ್ನ ನಾಲಿಗೆಯನ್ನೆ ಕತ್ತರಿಸಬೇಕು. ಇಷ್ಟೆಲ್ಲ ಅನರ್ಥಕ್ಕೆ ನಾನೇ ಮೂಲ. ನನ್ನನ್ನೀಗ ಕಟಿಯುತ್ತಿರುವದೂ ಇದೇ. ಮೊದಲು ಇಲ್ಲೆಂದು ಆ ಮೇಲೆ ಮುರವತ್ತಿಗಾಗಿ ಕೊಟ್ಟು ಈಗ ಪೇಚಾಡಬೇಕಾಗಿದೆ.' ಎಂದು ಕ್ಯಾಲೆಂಡರನು ಇಳಿದನಿಯಲ್ಲಿ ಹೇಳಿದನು.

ಫೀಲ್ಡಿಂಗನು ತನ್ನ ಬಾಯೊಳಗಿನ ಚಿಲುಮೆಯನ್ನು ತೆಗೆದು ಕೈಯಲ್ಲಿ ಹಿಡಿದು, ಧೇನಿಸುತ್ತ ಅದನ್ನೇ ನೋಡಿದನು.

ಅವನು ಅಂಜಿ ಹಾಗೆ ಕುಳಿತಿದ್ದಾನೆಂದು ಕ್ಯಾಲೆಂಡರನು ತಿಳಿದುಕೊಂಡು ಮತ್ತೆ ತನ್ನ ಬಲೆ ಬೀಸಿದನು. 'ಆ ಪ್ರವಾಸಿಕರೊಂದಿಗೆ ಒಬ್ಬ ಇಂಗ್ಲೀಷ ಮನುಷ್ಯನೂ ಹೋಗುವವನಿದ್ದನೆಂದು ನನಗೆ ತಿಳಿದದ್ದರಿಂದಲೇ ನಾನು ಒಪ್ಪಿದೆನು.'

'ನಿಮಗೀಗ ಯಾರೂ ದೋಷಕೊಡುವದಿಲ್ಲ ಕ್ಯಾಲೆಂಡರ್!' ಎಂದು ಕಲೆಕ್ಟರನು ಕೆಳಗೆ ನೋಡುತ್ತ ನುಡಿದನು. 'ಅವರ ಪ್ರವಾಸಕ್ಕೆ ಸಾಕಷ್ಟು ಸುರಕ್ಷತೆ ಇದ್ದಿಲ್ಲವೆಂದು ತಿಳಿದೊಡನೆ ಅದನ್ನು ನಾವು ನಿಲ್ಲಿಸಬೇಕಾಗಿತ್ತು. ಈ ದೃಷ್ಟಿಯಿಂದ ಈ ಅನ್ಯಾಯದ ಅನಾಹುತದಲ್ಲಿ ನಾವೂ ಒಂದಿಷ್ಟು ಪಾಲುಗಾರರಾಗಿದ್ದೇವೆ. ನಿಮಗೊಬ್ಬರಿಗೇ ಎಂದೂ ದೋಷ ತಟ್ಟುವದಿಲ್ಲ.'

'ನನಗೆ ಮಾತ್ರ ಹಾಗೆನಿಸುವದಿಲ್ಲ. ಅದನ್ನು ನಿಲ್ಲಿಸಲಿಕ್ಕೆ ಬರುತ್ತಿತ್ತೆಂದು ಈ ಕ್ಷಣಕ್ಕೂ ಎನಿಸುತ್ತಿದೆ. ಹೊಣೆಗಾರಿಕೆಯೆಂಬುದೇನು ಸಾಮಾನ್ಯವಲ್ಲ! ಯಾವನು ಅದನ್ನು ತಪ್ಪಿಸಾಡಲಿಕ್ಕೆ ಹವಣಿಸುತ್ತಾನೋ ಅವನಿಂದೇನುಪಯೋಗ?' ಎಂದೆನ್ನುವಾಗ ಅವನ ಕಣ್ಣುಗಳು ಫೀಲ್ಡಿಂಗನ ಕಡೆಗೆ ಹೊರಳಿದವು. ಆ ದೃಷ್ಟಿಯಲ್ಲಿ ಚುಚ್ಚುವ ಮೊನೆಯಿತ್ತು. ಫೀಲ್ಡಿಂಗನು ಗಾಡೀ ತಪ್ಪಿಸಿಕೊಂಡ ವಿಷಯ ಯಾರಿಗೆ ಗೊತ್ತಿತ್ತೊ ಅವರು ಅದಕ್ಕಾಗಿ ಹಳಹಳಿಸಿದರು. ಆದರೆ ಉಳಿದವರು 'ಈ ದೇಶೀ ಜನರೊಡನೆ

ಕೂಡಿದರೆ ಹೀಗಾಗುವದೆಂದೇ ತಿಳಿಯತಕ್ಕದ್ದು; ಅವಮಾನದಲ್ಲಿಯೆ ಅದರ ಪರ್ಯವಸಾನ. ಫೀಲ್ಡಿಂಗನು ಹೋಗದಿರುವದಕ್ಕೆ ಕಾರಣ..?' ಎಂದು ಇಲ್ಲದ ತರ್ಕವಿತರ್ಕ ನಡೆಸಿದರು. ಕಲೆಕ್ಟರನಿಗೆ ಹೆಚ್ಚು ಗೊತ್ತಿದ್ದುದರಿಂದ ಅವನು ಸುಮ್ಮನಿದ್ದನು. ಯಾಕಂದರೆ ಫೀಲ್ಡಿಂಗನು ಇನ್ನಾದರೂ ತಮ್ಮ ಪಕ್ಷಕ್ಕೆ ಸೇರುವನೆಂಬಾಸೆಯಿತ್ತು ಅವನಿಗೆ. ಗುಂಪಿನಲ್ಲಿ ಮತ್ತೆ ಹೆಂಗಸರ ಹುಡುಗರ ಮಾತು ಹೊರಟಿತು. ಈ ಪ್ರಸಂಗವನ್ನು ಮಾತ್ರ ಮೇಜರನು ಸುಮ್ಮನೆ ಹೋಗಗೊಡಲಿಲ್ಲ. ಅವನು ಆ ಗುರ್ಖಾ ಸೈನಿಕನನ್ನು ಸಾಧಿಸಿ ಹಿಡಿದು ಅವನಿಂದ ಫೀಲ್ಡಿಂಗನಿಗೆ ತೊಂದರೆ ಕೊಡಲಿಕ್ಕೆ ಹಚ್ಚಿದನು. ಅವನೂ ಅಮಲೇರಿದ ಧೋರಣೆಯಿಂದ ಅವಮಾನದ ಮಾತುಗಳನ್ನು ಆಡಹತ್ತಿದನು.

'ಮಿಸ್ ಕ್ವೆಸ್ಟೆಡಾಳ ಸೇವಕನ ವಿಷಯ ಗೊತ್ತಿದೆಯೆ?' ಎಂದು ಕೇಳಿ ಮೇಜರನೇ ಮೊದಲಿಗೆ ಚುಚ್ಚಿ ಕೊಟ್ಟನು.

'ಇಲ್ಲ; ಅವನ ವಿಷಯವೇನು?'

'ಹೆಸ್ಲೊಪನು ಆ ಸೇವಕನಿಗೆ ಕ್ವೆಸ್ಟೆಡ್‌ಳನ್ನು ಯಾವಾಗಲೂ ಬಿಟ್ಟಿರ ಬಾರದೆಂದು ಕಟ್ಟಪ್ಪಣೆ ಮಾಡಿದ್ದನ್ನು ಆರೋಪಿಯು ಹೇಗೊ ತಿಳಿದು ಕೊಂಡು ಅವನಿಗೆ ಲಂಚಕೊಟ್ಟು ಅವನನ್ನು ಸ್ಟೇಶನ್ನದಿಂದಲೇ ತಿರುಗಿ ಕಳಿಸುವಂತೆ ಮಾಡಿದನು. ಹೆಸ್ಲೊಪನೇ ಈಗ ಆ ಇಡಿ ಕಥೆಯನ್ನೆಲ್ಲ—ಯಾರು, ಯಾರಿಗೆ, ಎಷ್ಟು ಹಣ ಎಂಬುದನ್ನು ಸಹಿತ—ಹುಡುಕಿ ತೆಗೆದಿದ್ದಾನೆ. ಆ ಕುಂಟಲತನವನ್ನು ಮಾಡಿದವನ ಹೆಸರು ಮುಹಮ್ಮದ ಲತೀಫ ಅಂತೆ! ಇದಿಷ್ಟು ಆ ಸೇವಕನ ವಿಷಯವಾಯಿತು. ಇನ್ನು ಇಲ್ಲಿಯೆ ಕುಳಿತಿರುವ ನಮ್ಮ ಗೆಳೆಯ, ಇಂಗ್ಲಿಷ ಮನುಷ್ಯನದೇನು? ಅವನನ್ನು ಹೇಗೆ ತಪ್ಪಿಸಿದರು?..ಮತ್ತೆ ಲಂಚವೇನು?'

ಫೀಲ್ಡಿಂಗನು ಕೂಡಲೆ ಎದ್ದು ನಿಂತನು. ಎಷ್ಟೋ ದನಿಗಳೂ ಒಟ್ಟುಗೂಡಿ ಅವನಿಗೆ ಬೆಂಬಲ ಕೊಟ್ಟವು. ಅವನ ಪ್ರಾಮಾಣಿಕತೆಯ ಬಗ್ಗೆ ಇನ್ನೂ ಯಾರಿಗೂ ಸಂಶಯವಿದ್ದಿಲ್ಲ.

'ನನ್ನನ್ನು ತಪ್ಪು ತಿಳಿದುಕೊಂಡಂತೆ ಕಾಣುತ್ತದೆ. ಕ್ಷಮಿಸಿರಿ; ಮಿ. ಫೀಲ್ಡಿಂಗರಿಗೆ ಲಂಚ ಕೊಟ್ಟರೆಂದು ನಾನೆನ್ನುವದಿಲ್ಲ.'

'ಹಾಗಾದರೆ ನೀವನ್ನುವದಾದರೂ ಏನು?'

'ನಿಮಗೆ ತಡಮಾಡಿಸುವದಕ್ಕಾಗಿ ಇನ್ನೊಬ್ಬ ಹಿಂದೂ ಮನುಷ್ಯನಿಗೆ—ಅಂದರೆ ಆ ಗೋಡಬೋಲೆಗೆ—ಕೊಟ್ಟಿದ್ದಾರೆ. ಅವನು ಪ್ರಾರ್ಥನೆಗಳನ್ನು ಅನ್ನುತ್ತಿದ್ದನಂತೆ! ನನಗೆ ಗೊತ್ತಿಲ್ಲವೆ ಅವನ ಪ್ರಾರ್ಥನೆಗಳೆಲ್ಲ!'

'ಇದು ನಗಿಗೇಡು..ಹುಚ್ಚುತನ..' ಎಂದು ಫೀಲ್ಡಿಂಗನು ಸಿಟ್ಟಿನಿಂದ ನಡುಗುತ್ತ ಕುಳಿತನು. ಇದೇ ರೀತಿಯಾಗಿ ಒಬ್ಬರಹಿಂದೊಬ್ಬರನ್ನು ಎಳೆದು ತಂದು ಕೆಸರಲ್ಲಿ ನೂಕುವದು ಮತ್ತೆ ನಡೆಯಿತು.

'ಹೆಸ್ಲೊಪನು ತನ್ನ ತಾಯಿಯಿಂದ ತಿಳಿದುಕೊಂಡದ್ದಿಷ್ಟು: ಅಝೀಜನು ಕೆಲವು ದೇಶೀ ಜನರ ಗುಂಪಿಗೆ ದುಡ್ಡುಕೊಟ್ಟು ಗದ್ದಲ ಮಾಡಿಸಿ ಅವಳ ಉಸಿರು ಕಟ್ಟುವಂತೆ ಮಾಡಿದನಂತೆ. ಆ ಗದ್ದಲದಲ್ಲಿ ಅವಳ ಅವತಾರ ಸಮಾಪ್ತಿಯೆ ಆಗುತ್ತಿತ್ತಂತೆ. ಆದರೆ ಹೇಗೋ ಪಾರಾದಳು. ಆ ಮುದುಕಿಯನ್ನು ತಪ್ಪಿಸುವ ಅವನ ಈ ಹಂಚಿಕೆ ಸೆಟ್ಟಗಿದೆಯಲ್ಲವೆ? ಆಮೇಲೆ ಆ ಹುಡುಗಿಯೊಡನೆ ತಾನು ಮತ್ತು ಆದೇ ಮುಹಮ್ಮದ ಲತೀಫನು ಗೊತ್ತು ಮಾಡಿಕೊಟ್ಟ ಆಳು ಕೂಡಿ ಸಾಗಿದರಂತೆ. ಈಗ ಆ ಆಳೇ ನಾಪತ್ತೆಯಾಗಿದ್ದಾನೆ! ಹಾಕಿದ ಬಲೆ ಬಹಳ ಚೆನ್ನಾಗಿದೆ!' ಎಂದು ಮೇಜರನು ಮತ್ತೆ ಒಂದು ಗುಂಡನ್ನು ಹಾರಿಸಿದನು. ಕೊನೆಗೆ 'ಇದು ಸಮ್ಮನೆ ಕುಳಿತುಕೊಳ್ಳುವ ಕಾಲವಲ್ಲ. ಕೆಲಸ ಮಾಡಬೇಕು. ಲಷ್ಕರಿಯನ್ನು ಕರೆಸಿ ಪೇಟಿಯನ್ನು ನೆಲಸಮ ಮಾಡಬೇಕು.' ಎಂದು ಅಬ್ಬರಿಸಿದನು. ಸಾಮಾನ್ಯವಾಗಿ ಮೇಜರನ ಈ ತರಹದ ಅಬ್ಬರಗಳಿಗೆ ಜನರು ಅಷ್ಟೊಂದು ಮಹತ್ವವನ್ನೆ ಕೊಡುತ್ತಿರಲಿಲ್ಲವಾದರೂ ಈ ಹೊತ್ತು ಅವನ ಗುಡುಗಿನ ಅಬ್ಬರದಿಂದ ಪ್ರತಿಯೊಬ್ಬನ ಮನಸ್ಸೂ ಕೆರಳಿತ್ತು.

ಪಾಪ, ಗೋಡಬೋಲೆಯ ಮೇಲಿನ ಸಿಟ್ಟನ್ನು ಮರೆತು ಫೀಲ್ಡಿಂಗನು ತನ್ನ ವಿಚಾರದಲ್ಲಿಯೆ ಮಗ್ನನಾದನು. ಆಗ ಅವನಿಗೆ ಪಾಪವೇ ಎಲ್ಲ ಕಡೆಗೂ ಕಾಳ್ಗಿಚ್ಚಿನಂತೆ ಹಬ್ಬುತ್ತಿರುವಂತೆನಿಸಿತು. ಅವನು ಹೀಗೆ ಕುಳಿತದ್ದನ್ನು ನೋಡಿ ಅವನ ಪ್ರತಿವಾದಿಗೆ ಮತ್ತೆ ಅವನನ್ನು ಕೆಣಕಬೇಕೆಂದೆನಿಸಿತು. 'ಈ ಕ್ಲಬ್ಬಿನಲ್ಲಿ ಮಾತಾಡಿದ ಸುದ್ದಿ ಯಾವುದೂ ಹೊರಗೆ ಹೋಗಲಿಕ್ಕಿಲ್ಲೆಂದು ನನ್ನ ಭರವಸೆಯಿದೆ.' ಎಂದು ಲೆಸ್ಲಿಯನ್ನು ನೋಡಿ ಕಣ್ಣು ಚಿವುಟಿದನು.

'ಯಾಕೆ ಹೋಗಬೇಕು?' ಎಂದು ಲೆಸ್ಲಿಯು ಉತ್ತರವಿತ್ತನು.

'ಅದೇನೂ ಇಲ್ಲ; ಇಲ್ಲಿಗ್ದ ಸದಸ್ಯರಲ್ಲೊಬ್ಬರು ಈಹೊತ್ತು ಮಧ್ಯಾಹ್ನ ಕೈದಿಯ ಭೆಟ್ಟಿಗೆ ಹೋಗುವವರಿದ್ದಾರೆಂದು ನಾನು ಕೇಳುತ್ತೇನೆ. ಅದಕ್ಕಂದೆ ಈ ಮಾತು ಹೇಳಿದ್ದು.'

'ಹಾಗಾದರೆ ಇಲ್ಲಿದ್ದವರಲ್ಲಿ ಯಾರಾದರೂ ಕೈದಿಯನ್ನು ಕಾಣುವವರಿದ್ದಾರೆಯೆ ?'

ಫೀಲ್ಡಿಂಗನು ತಾನಿನ್ನು ಮತ್ತೆ ಈ ಗೊಂದಲದಲ್ಲಿ ಬೀಳಬಾರದೆಂದು ನಿಶ್ಚಯಿಸಿಕೊಂಡು ಉತ್ತರ ಕೊಡುವ ಮನಸ್ಸಿದ್ದರೂ 'ಅಂತಹ ಹೊತ್ತೇ ಬಂದಾಗ ನೋಡೋಣ' ಎಂದು ಸುಮ್ಮನೆ ಕುಳಿತನು. ಹೀಗಾಗಿ ಅವನು ಬಿಟ್ಟ ಬಾಣವು ಗುರಿತಪ್ಪಿ ಹೋಯಿತು. ಮತ್ತೆ ಎಲ್ಲರ ಲಕ್ಷ್ಯವು ಒಂದು ಕ್ಷಣ ಬೇರೆ ಕಡೆಗೆ ಹೋಯಿತು. ಹೆಣ್ಣುಮಕ್ಕಳಿದ್ದಲ್ಲಿಂದ ಒಮ್ಮೆಲೆ ಗುಜು ಗುಜು ಕೇಳಬಂತು. ರೋನಿಯು ಬಾಗಿಲನ್ನು ತೆರೆದು ಬಂದಿದ್ದನು.

ರೋನಿಯು ಬಹಳ ನೊಂದುಕೊಂಡಂತೆಯೂ ದಣಿದವನಂತೆಯೂ ಕಂಡನು. ಆದರೂ ದಿನದಕಿಂತಲೂ ಹೆಚ್ಚು ಸೌಮ್ಯನಾಗಿ ತೋರಿದನು. ಅವನ ಮುಖವು ತನಗಾದ ಅವಮರ್ಯಾದೆಗಾಗಿ ಆಶ್ರಯ ಬೇಡಿಕೊಳ್ಳುವಂತೆ ಕಂಡಿತು. ಅವನು ಒಂದೊಡನೆ ಎಲ್ಲರೂ ತಮ್ಮಿಂದ ತಾವೇ ಎದ್ದು ನಿಂತು ಅವನಿಗೆ ಮರ್ಯಾದೆ ಮಾಡಿದರು. ಆದರೊಂದಿಗೆ ಆಝೀಜನ ಮತ್ತು ಹಿಂದುಸ್ತಾನದ ನಿಷೇಧವನ್ನೂ ಅವರು ಮಾಡಿದರು. ಫೀಲ್ಡಿಂಗನು ಮಾತ್ರ ಕುಳಿತಲ್ಲಿಂದ ಮಿಟ್ಟಿ-ಮಿಸುಕಲಿಲ್ಲ. 'ಇದು ಶುದ್ಧ ಶುಂಭನ ನಡತೆ; ಹೀಗೆ ಮಾಡುವದು ಅಯುಕ್ತ' ಎಂಬುದು ಅವನಿಗೇ ಗೊತ್ತಿತ್ತು. ಆದರೆ ಬಹಳ ಹೊತ್ತು ಸುಮ್ಮನೆ ಕುಳಿತಿದ್ದರಿಂದ, ತಾನೇನಾದರೂ ತೋರಿಸದಿದ್ದರೆ ಜನರು ವಿಪರೀತ ಭಾವಿಸಬಹುದೆಂದು ತಿಳಿದು ಅವನು ಹೀಗೆ ಮಾಡಿದನು. ರೋನಿಯು ಅವನನ್ನು ನೋಡಿರಲೆ ಇಲ್ಲ. ಅವನು ಎಲ್ಲರಿಗೂ 'ಓ! ದಯವಿಟ್ಟು ಕುಳಿತುಕೊಳ್ಳಿರಿ; ಎಲ್ಲರೂ ಕುಳಿತುಕೊಳ್ಳಿರಿ. ಏನು ನಿರ್ಣಯಿಸಿದಾರೆಂಬದನ್ನು ಮಾತ್ರ ನನಗೆ ತಿಳಿದುಕೊಳ್ಳಬೇಕಾಗಿದೆ.' ಎಂದು ಗೊಗ್ಗರ ದನಿಯಲ್ಲಿ ಹೇಳುತ್ತ ಬಂದನು.

'ಹೆಸ್ಲೊಪ! ನಾವು ಯಾವ ತರಹದಿಂದಲೂ ನಮ್ಮ ಶಕ್ತಿಪ್ರದರ್ಶನ ಮಾಡಬಾರದೆಂಬುದೇ ನನ್ನ ಅಭಿಪ್ರಾಯ.' ಎಂದು ಕಲೆಕ್ಟರನು ಅತಿ ನಮ್ರ

ನಾಗಿ ಹೇಳಿದನು. ‘ ನಿನಗೆ ಮಾತ್ರ ನನ್ನ ಹಾಗೆನಿಸುವದೋ ಇಲ್ಲವೋ ನಾನರಿಯೆ; ನನ್ನ ಸ್ಥಿತಿಯು ಮಾತ್ರ ಹೀಗಿದೆ. ಖಟ್ಲೆಯ ತೀರ್ಪು ಹೊರಬಿದ್ದ ಮೇಲೆ ಆ ಮಾತೇ ಬೇರೆ. ’

‘ ನೀವೇ ಎಲ್ಲವನ್ನೂ ಬಲ್ಲವರು. ನನಗೇನೂ ಅನುಭವವಿಲ್ಲ. ಇದ ರಲ್ಲಿ ನಾನೇನೂ ಹೇಳಲಾರೆ. ’

‘ ನಿನ್ನ ತಾಯಿ ಹೇಗಿದ್ದಾಳೆ ? ’

‘ ಸ್ವಲ್ಪ ವಾಸಿಯಾಗಿದ್ದಾಳೆ. ಪ್ರತಿಯೊಬ್ಬರೂ ಕುಳಿತುಕೊಳ್ಳ ಬೇಕೆಂದು ನನ್ನ ಇಚ್ಛೆ. ’

‘ ಕೆಲವರು ಎದ್ದೇ ನಿಂತಿಲ್ಲ ! ’ ಎಂದು ತರುಣ ಸೈನಿಕನೊಬ್ಬನು ನುಡಿದನು.

‘ ಮತ್ತು ಮಿಸ್ ಕ್ವೆಸ್ಟೆಡ್‌ಳು ಚೆನ್ನಾಗಿದ್ದಾಳೆಂಬ ಸುದ್ದಿಯನ್ನೂ ಮೇಜರನು ತಂದಿರುತ್ತಾನೆ. ’ ಎಂದು ಟರ್ಟನ್ನರು ರೋನಿಗೆ ಹೇಳಿದರು.

‘ ಹೌದು, ಹೌದು. ಕೇಳಿ ಬಹಳ ಸಂತೋಷವಾಯಿತು ’

‘ ಮೇಜರರೇ, ಅವಳಿಗೆ ಸರಿಯಿಲ್ಲವೆಂದು ಇದಕ್ಕೂ ಮುಂಚೆ ನೀವೇ ಹೇಳಲಿಲ್ಲವೇ ? ಅಂತೆಯೇ ನಾನು ಕೈದಿಯನ್ನು ಜಾಮೀನಿನ ಮೇಲೆ ಬಿಡ ಲಾರೆನೆಂದು ಹೇಳಿದೆ. ’

ಕ್ಯಾಲೆಂಡರನು ಅದರಲ್ಲಿ ಗೆಳೆತನದ ಗೌಪ್ಯವೇನೋ ಇರುವಂತೆ ನಕ್ಕು ಹೇಳಿದನು. ‘ ಹೆಸ್ಲೊಪ, ಹೆಸ್ಲೊಪ, ಇನ್ನುಮುಂದೆ ಎಂದೂ ಜಾಮೀನಿನ ಮೇಲೆ ಬಿಡಬೇಕಾದರೂ ಈ ಹಳೇ ಡಾಕ್ಟರನನ್ನೇ ಮೊದಲು ಕೇಳಬೇಕು ನೋಡು! ಇವನ ಮೇಲೆ ಏನು ಬೇಕಾದ್ದೂ ಹೊರಿಸಬಹುದು. ಈ ಡಾಕ್ಟ ರನ ಹೆಗಲು ಗಟ್ಟಿಯಿದೆ. ಅಲ್ಲ ಮತ್ತೆ, ಈ ಮುದುಕ ಡಾಕ್ಟರನ ಅಭಿಪ್ರಾಯ ವನ್ನು ಅಷ್ಟೊಂದು ಮನಸ್ಸಿಗೆ ಹಚ್ಚಿಕೊಳ್ಳಬೇಡಿರಿ. ಬೇಕಾದರೆ ಇವನೊಬ್ಬ ಬಡಬಡಿಸುವ ಹುಚ್ಚನೆಂದೂ ತಿಳಕೊಂಡುಬಿಡಬಹುದು. ಆದರೆ ಸೆರೆ-ಮನೆಗೆ ಕಳಿಸಲಿಕ್ಕೆಷ್ಟು ಬೇಕೋ ಅಷ್ಟು ಮಾಡುವನು. ’ ಎಂದು ಅತಿ ವಿನಯದಿಂದ ಹೇಳಿ ಸ್ವಲ್ಪ ಹೊತ್ತು ನಿಂತು ಅಲ್ಲಿಂದ ‘ ಓಹೋ ! ಇಲ್ಲಿ ಡಾಕ್ಟರನ ಮಿತ್ರರಲ್ಲೊಬ್ಬರು ಬೇರೆ ಇದ್ದಾರೆ ! ’ ಎಂದು ವ್ಯಂಗ್ಯವಾಗಿ ಉದ್ಗಾರ ತೆಗೆದನು.

'ಎದ್ದು ನಿಲ್ಲೋ, ಏ ಹುಂಬಾ!' ಎಂದು ಗುರ್ಖಾ ಸೈನಿಕನು ಫೀಲ್ಡಿಂಗನ ಕಡೆಗೆ ಕೈ ಮಾಡಿ ಕೂಗಿಯೇಬಿಟ್ಟನು.

'ಮಿ. ಫೀಲ್ಡಿಂಗ್! ನೀವು ಯಾಕೆ ಎದ್ದು ನಿಲ್ಲಲಿಲ್ಲ, ಹೇಳುವಿರಾ?' ಎಂದು ಕೊನೆಗೆ ಕಲೆಕ್ಟರನು ಈ ಗೊಂದಲದಲ್ಲಿ ಬಿದ್ದು ಕೇಳಿದನು. ಫೀಲ್ಡಿಂಗನೂ ಯಾರಾದರೂ ಹೀಗೆ ಮೇಲೇರಿ ಬರುವದನ್ನೇ ದಾರಿನೋಡುತ್ತಿದ್ದನು. ಚಟ್ಟನೆ ಎದ್ದುನಿಂತು 'ಇನ್ನು ನಾನು ನನ್ನ ಮಾತನ್ನು ಹೇಳಬಹುದೋ?' ಎಂದು ಕೇಳಿದನು.

'ಬೇಕಾದ ಹಾಗೆ.'

'ಡಾ. ಅಝೀಜನು ನಿರ್ದೋಷಿಯೆಂದು ನಾನು ನಂಬುತ್ತೇನೆ.'

'ನಿಮಗೆ ಬೇಕಿದ್ದರೆ ಹಾಗೇ ಅಭಿಪ್ರಾಯಪಟ್ಟುಕೊಳ್ಳಲಿಕ್ಕೆ ನಿಮಗೆ ಅಧಿಕಾರವಿದೆ. ಆದರೆ ಅದಕ್ಕಾಗಿ ಹೆನ್ಲೋಪರನ್ನು ಅವಮಾನಗೊಳಿಸುವದು ಯೋಗ್ಯವಾಗಬಹುದೇ? ದಯವಿಟ್ಟು ಹೇಳುವಿರಾ?'

'ನಾನು ನನ್ನ ಮಾತನಾದರೂ ಮುಗಿಸಬಹುದೇ?'

'ನಿಶ್ಚಯವಾಗಿ.'

'ಆ ವಿಷಯವಾಗಿ ನಾನು ಕೋರ್ಟಿನ ತೀರ್ಪನ್ನೇ ನಿರೀಕ್ಷಿಸುತ್ತಿದ್ದೇನೆ. ಅವನು ದೋಷಿಯೆಂದು ನಿರ್ಣಯಿಸಲ್ಪಟ್ಟರೆ ನಾನು ನನ್ನ ನೌಕರಿಗೆ ರಾಜಿನಾಮೆ ಕೊಟ್ಟು ಈ ದೇಶವನ್ನೇ ಬಿಟ್ಟುಹೋಗುತ್ತೇನೆ. ಈಗಂತೂ ಈ ಕ್ಲಬ್ಬಿಗೆ ಮೊದಲು ರಾಜಿನಾಮೆ ಕೊಟ್ಟಿದ್ದೇನೆ.'

'ಕೇಳಿರಿ, ಕೇಳಿರಿ.' ಎಂದು ಎಷ್ಟೋ ಜನರು ಅವನು ಸ್ಪಷ್ಟ ಮಾತನಾಡಿದ್ದಕ್ಕೆ ಮೆಚ್ಚಿ ಕೂಗಿದರು.

'ನೀವು ನನ್ನ ಪ್ರಶ್ನೆಗೇನೂ ಉತ್ತರಕೊಟ್ಟಂತಾಗಲಿಲ್ಲ. ಹೆನ್ಲೋಪರು ಬಂದಾಗ್ಗೆ ನೀವು ಯಾಕೆ ಎದ್ದುನಿಲ್ಲಲಿಲ್ಲ?'

'ತಮ್ಮನ್ನು ಅಗೌರವಿಸುತ್ತೇನೆಂದು ತಿಳಿಯಬಾರದು; ನಾನಿಲ್ಲಿ ತಾವು ಕೇಳಿದ ಪ್ರಶ್ನೆಗಳಿಗೆಲ್ಲ ಉತ್ತರಕೊಡಲಿಕ್ಕೆ ಬಂದು ನಿಂತಿಲ್ಲ. ನನಗೆ ನನ್ನ ಸ್ವತಃದ ವಿಷಯದಲ್ಲಿ ಒಂದೆರಡು ಮಾತು ಹೇಳುವದಿತ್ತು. ಅಷ್ಟನ್ನು ನಾನು ಹೇಳಿ ಮುಗಿಸಿದ್ದೇನೆ.'

'ತಾವು ಈ ವೆಲ್ಲೆಯ ಚಾರ್ಜು ತೆಗೆದುಕೊಂಡಿದ್ದೀರೇನು?'

ಫೀಲ್ಡಿಂಗನು ಬಾಗಿಲ ಕಡೆಗೆ ಸಾಗಿದನು.

'ಮಿ. ಫೀಲ್ಡಿಂಗ್! ತಡೆ, ಇನ್ನೊಂದು ನಿಮಿಷ. ದಯಮಾಡಿ ನೀನು ಈಗಲೇ ಹೋಗಕೂಡದು. ನೀನು ರಾಜಿನಾಮೆ ಕೊಟ್ಟು ಈ ಕ್ಲಬ್ಬು ಬಿಟ್ಟು ಹೋಗುವ ಮೊದಲು ಈ ಗುಸ್ತೆಯು ನಿಂದ್ಯವಾದದ್ದೆಂದು ಹೇಳಬೇಕು; ಮತ್ತು ಮಿ. ಹೆಸ್ಲೊಪರ ಕ್ಷಮೆಯನ್ನು ಬೇಡಿಕೊಳ್ಳಬೇಕು.'

'ಇದನ್ನೇನು ತಾವು ಅಧಿಕಾರಿಗಳೆಂದು ಹೇಳುತ್ತಿರುವಿರೋ?'

ಕಲೆಕ್ಟರನಿಗೆ ಬಹಳ ಕೋಪ ಬಂದು ತಲೆ ತಿರುಗಿಹೋಯಿತು. 'ಈ ಸ್ಥಳವನ್ನು ಬಿಟ್ಟು ಮೊದಲು ಹೊರಗೆ ನಡೆ! ನಾನು ನಿನ್ನ ಕೂಡ ಸ್ಟೇಶನ್ ಮೇಲೆ ಸಭ್ಯರೀತಿಯಿಂದ ನಡೆದದ್ದಕ್ಕೆ ನನಗೀಗ ಬಹಳ ಕೆಡಕೆನಿಸುತ್ತದೆ. ನೀನೂ ನಿನ್ನ ಸಂಗಡಿಗರ ತಾಡಿಗೇ ಇಳಿದಿದ್ದೀ! ನಿನ್ನಲ್ಲಿ ಶಕ್ತಿಯಿಲ್ಲ, ಶಕ್ತಿ ಯಿಲ್ಲ; ಅದೇ ನಿನ್ನ ದೋಷ..'

'ನನಗೂ ಈ ಸ್ಥಳ ಬಿಟ್ಟು ಹೋಗಬೇಕಾಗಿದೆ. ಆದರೆ ಈ ಮಹಾ-ರಾಯುರೊಬ್ಬರು ಅಡ್ಡ ನಿಂತಿದ್ದಾರೆ.' ಎಂದು ಫೀಲ್ಡಿಂಗನು ಅಡ್ಡಗಟ್ಟಿ ನಿಂತಿದ್ದ ಆ ಗುರ್ಖಾ ಸೈನಿಕನನ್ನು ತೋರಿಸಿ ವಿನೋದ ಮಾಡಿದನು.

'ಅವನಿಗೆ ಹೋಗಗೊಡು.' ಎಂದು ರೋನಿಯು ಕಣ್ಣಲ್ಲಿ ನೀರು ತಂದು ಹೇಳಿದನು.

ರೋನಿಯ ಈ ಮಾತೊಂದೇ ಆ ದುರ್ಧರಪ್ರಸಂಗವನ್ನು ಪಾರು ಮಾಡಿತು. ಹೆಸ್ಲೊಪನಿಗೆ ತಾನಾಡಿದ್ದೆಲ್ಲ ಆಗಲೇಬೇಕೆಂಬ ಹಟ. ಅವನಂ ತೆಯೆ ಆಯಿತು. ಆದರೆ ಹೊರಟಾಗ ಬಾಗಿಲ ಹತ್ತರ ಬಂದು ಸ್ವಲ್ಪ ಗೊಂ ದಲವಾಗುವ ಸಂಭವ ಕಂಡಿದ್ದರಿಂದ ಫೀಲ್ಡಿಂಗನು ಹೆಂಗಸರು ಕುಳಿತ ಕೋಣೆಯನ್ನೇ ಸೇರಿದನು. 'ನಾನೂ ಸಿಟ್ಟಿಗೆದ್ದಿದ್ದರೆ....ಎಂಥ ಅನರ್ಥ ವಾಗುತ್ತಿತ್ತು!' ಎಂದುಕೊಂಡನು. ನಿಜವಾಗಿ ಅವನಿಗೂ ಸ್ವಲ್ಪ ಸಿಟ್ಟು ಬಂದಿತ್ತು. ತನ್ನ ಸರಿಜೋಡಿಯವರೇ ಎಂದೂ ತನ್ನ ಮೈಮೇಲೆ ಬಂದಿ ದ್ದಿಲ್ಲ; ತನ್ನನ್ನೆಂದೂ ಅಶಕ್ತನೆಂದು ಕರೆದಿದ್ದಿಲ್ಲ. ಹೆಸ್ಲೊಪನಂತೂ ಅವನ ತಲೆಯ ಮೇಲೆ ಬೇಂಕಿಯನ್ನೇ ಸುರುವಿದ್ದನು. ಇವರಿಗೆ ಈ ದೇಶೀ ಜನ ರೊಡನೆ ಬಡಿದಾಟವಾಡುವದೇ ಬೇಕಾಗಿದ್ದರೆ ಬೇರೆ ಬೇಕಾದಷ್ಟು ಸ್ಪಷ್ಟ

ಕಾರಣಗಳಿದ್ದವು; ಅವನ್ನೆಲ್ಲ ಬಿಟ್ಟು ಪಾಪ, ಹೆಸ್ಲೋಪನ ಸಂಬಂಧದಲ್ಲಿ ಬಡಿದಾಟ ತೆಗೆದದ್ದನ್ನು ನೋಡಿ ಫೀಲ್ಡಿಂಗನಿಗೆ ಬಹಳ ಕೆಡಕೆನಿಸಿತು.

ಆದರೂ ಆಗಬಾರದ್ದು ಆಗಿಹೋಯಿತು; ಕಲಕುಮಲಕಾಗಿ ರಾಡಿ ಎದ್ದುಬಿಟ್ಟಿತು. ಫೀಲ್ಡಿಂಗನು ತನ್ನ ಮನಸ್ಸನ್ನು ಸಮಸ್ಥಿತಿಗೆ ತಂದುಕೊಳ್ಳಲಿಕ್ಕೆಂದು ಆಟ್ಟದ ಬೈಲು ಮಾಳಿಗೆಗೆ ಹೋದನು. ಹೋದೊಡನೆ ಅವನು ಮೊದಲು ಕಂಡದ್ದು ಮಾರವಾರ ಗುಹೆಗಳನ್ನೇ. ಆಯಿತು, ಮತ್ತೆ ಹಿಂದಿನದೆಲ್ಲವೂ ಅವನ ಮನದ ಕಣ್ಣೆದುರಿಗೆ ಒಂದೊಂದಾಗಿ ಹಾಯ್ದುಹೋಯಿತು. ಮರಕಳಿಸಿ ಬಂದ ಆ ನೆನಪಿನಿಂದ ಬೇಸತ್ತು ಅವನು ಬೇರೆ ಯಾವುದಾದರೂ ಕೆಲಸದಲ್ಲಿ ತೊಡಗಬೇಕೆಂದನು. ಆದರೆ ಆ ಬೇರೆ ಕೆಲಸವೇ ಅವನಿಗೆ ಗೊತ್ತಾಗಲಿಲ್ಲ; ಗೊತ್ತಾಗುವಂತೆಯೂ ಇರಲಿಲ್ಲ; ಗೊತ್ತಾಗುವದು ಸಾಧ್ಯವೂ ಇರಲಿಲ್ಲ. ಇದಕ್ಕಾಗಿಯೆ ಅವನ ಮನಸ್ಸು ಮತ್ತೆ ಕೆರಳಿತು; ಅವನ ಜೀವ ತಳಮಳಿಸಿತು.

—

## ಪ್ರಕರಣ ೨೧

ತನ್ನ ದುಃಖದುಗುಡಗಳನ್ನೆಲ್ಲ ಆಚೆಗೆ ತಳ್ಳಿ ಫೀಲ್ಡಿಂಗನು ತನ್ನ ಹೊಸ ಮಿತ್ರರ ಕಡೆಗೆ ಹೊರಟನು. ತಾನು ಕ್ಲಬ್ಬಿಗೆ ಶರಣು ಹೊಡೆದದ್ದಕ್ಕಾಗಿ ಅವನಿಗೆ ಸಂತೋಷವೇ ಎನಿಸಿತ್ತು. ಅವನು ಬಜಾರದಲ್ಲಿ ಹಾಯ್ದು ಹೋಗುವಾಗ ಒಂದು ಮೊಹರಮ್ಮದ ಹುಲಿಯನ್ನು ನೋಡಿ ಅವನ ಕುದುರೆ ಬೆದರಿತು. ಹುಲಿ-ಹುಲಿಗಳಾಟ, ಗೆಜ್ಜೆಗೋಲುಗಳಾಟ ಒಳ್ಳೆ ತುರಿಸಿನಿಂದ ನಡೆದದ್ದವು. ಅಂತೂ ಮೊಹರಮ್ಮು ಒಳ್ಳೆ ಜೋರಾಗಿತ್ತು. ಹಲಿಗೆಗಳ ಸಪ್ಪಳದಿಂದ ಕಿವಿಗಳು ಗತಚಿಕ್ಕಿದವು. ಅವನು ಹೊರಟಿದ್ದು ಒಂದು ಡೋಲಿಯನ್ನು ನೋಡಲಿಕ್ಕೆ; ಅದೂ ಅವನ ಗೆಳೆಯರು ಆಮಂತ್ರಿಸಿದ್ದರಿಂದ-ಡೋಲಿಯನ್ನು ನೋಡಿದ್ದಾಯಿತು. ಹಮೀದುಲ್ಲಾ, ಮಹಮ್ಮದಲಿ, ನವಾಬ ಬಹದ್ದೂರರೊಡನೆ ಮಾತನಾಡುತ್ತ ಸಂಜೆಯ ವರೆಗೆ ಹೊತ್ತುಗಳೆದದ್ದಾಯಿತು. ಖಟ್ಲೆಯ ಪೂರ್ವತಯಾರಿ ಜೋರಿನಿಂದ ನಡೆದದ್ದೂ,

ಸುಪ್ರಸಿದ್ಧ ಅಮೃತರಾಯನಿಗೆ ತಾರು ಕೊಟ್ಟಿದ್ದೂ, ಆವನೊಪ್ಪಿದ್ದೂ, ಜಾಮೀನ ಮೇಲೆ ಬಿಡಲಿಕ್ಕೆ ಹೊಸ ಅರ್ಜಿ ಮಾಡಬೇಕೆಂದಿದ್ದೂ ಅವರೊಡ ನಾಡಿದ ಮಾತು-ಕತೆಯಿಂದ ಫೀಲ್ಡಿಂಗನಿಗೆ ಗೊತ್ತಾಯಿತು. ಅವನೂ ಅವ ರಲ್ಲಿ ಸಮರಸಭಾವದಿಂದ ಬೆರೆತು ಮಾತನಾಡುತ್ತಿದ್ದನು. ಅದೆಷ್ಟೋ ಮಾತು ಕತೆಗಳು ಅವರ ನಡುವೆ ಯಾವ ಸಂಕೋಚವೂ ಇಲ್ಲದೆ ಆಗಿಹೋದವು.

ರಾತ್ರಿ ಬಹಳಾದ ಮೇಲೆ ಫೀಲ್ಡಿಂಗನು ಅವರನ್ನು ಬಿಟ್ಟು ಪ್ರೊ. ಗೋಡಬೋಲೆಯವರಲ್ಲಿಗೆ ಹೋಗಿ, ಹೆಸ್ಲೊಪನೊಡನೆ ತಾನು ನಡೆದುಕೊಂಡ ರೀತಿಯನ್ನೂ ಅವರು ತನಗೆ ಮಾಡಿದ ಅವಮಾನವನ್ನೂ ಅವರಿಗೆ ಹೇಳ ಬೇಕೆಂದು ಮಾಡಿದ್ದನು. ಮತ್ತು ಅದರ ಬಗ್ಗೆ ಅವರ ಅಭಿಪ್ರಾಯವನ್ನೂ ಕೇಳಬೇಕೆಂದಿದ್ದನು. ಆದರೆ ಇವನು ಹೋಗುವಷ್ಟರಲ್ಲಿ ಆ ಮುದುಕನು ಮಲಗಿಬಿಟ್ಟಿದ್ದನು. ನಿರುಪಾಯನಾಗಿ ಹಿಂದಿರುಗಿದನು. ಅಲ್ಲಿಂದ ಒಂದೆರಡು ದಿನಗಳ ವರೆಗೆ ಯಾರ ಕಣ್ಣಿಗೂ ಬೀಳದಂತೆ ಜಾರಿಕೊಂಡು ತನ್ನ ಕೆಲಸ ದಲ್ಲಿಯೆ ಇದ್ದುಬಿಟ್ಟನು.

—

## ಪ್ರಕರಣ ೨೨

ಅಡೀಲಾ ಬಹಳ ದಿವಸಗಳ ವರೆಗೆ ಮ್ಯಾಕ್‌ಬ್ರಾಯಿಡರ ಬಂಗ್ಲೆಯ ಲ್ಲಿಯೆ ಮಲಗಿಕೊಂಡಿದ್ದಳು. ಅವಳಿಗೆ ಬಿಸಿಲಿನ ತಾಪವೂ ಬಹಳಾಗಿತ್ತು; ಮೈಯೊಳಗೆ ನಟ್ಟ ನೂರಾರು ಡಬಗಳ್ಳಿಯ ಮುಳ್ಳುಗಳನ್ನು ಇನ್ನೂ ಕಿತ್ತ ಬೇಕಾಗಿತ್ತು. ತಾಸುತಾಸಿಗೆ ಮಿಸ್ ಡೆರೆಕ್ಕಳೂ ಮತ್ತು ಮಿಸೆಸ್ ಮ್ಯಾಕ್ ಬ್ರಾಯಿಡಳೂ ಹೋಗಿ ಹೇಗಿದ್ದಾಳೆಂಬುದನ್ನು ನೋಡಿಕೊಂಡು ಬರುತ್ತಿದ್ದ ರಲ್ಲದೆ, ಆ ಡಬಗಳ್ಳಿಯ ಮುಳ್ಳುಗಳನ್ನೂ ಹುಡುಕಿ ಹುಡುಕಿ ಕೀಳುತ್ತಿ ದ್ದರು ಅವಳ ನಯವಾದ ಕುರಳು ಬಾಚದೆ ಬಿಟ್ಟಿದ್ದರಿಂದ ಜಡೆಗಟ್ಟಿ ಬಹಳ ವೇದನೆಯನ್ನುಂಟುಮಾಡುತ್ತಿದ್ದವು. ಅವನ್ನು ಸಾವಕಾಶವಾಗಿ ಬೆರಳು ಗಳಿಂದ ಬಿಡಿಸುತ್ತಿದ್ದರು. ಆದರಿಂದಲೆ ಸ್ವಲ್ಪ ಹಗುರೆನಿಸಿ ಮಲಗುತ್ತಿದ್ದಳು. ಆದರೆ ಮಲಗಿದೊಡನೆ ಬೆದರಿಬೀಳುವದು, ಬಡಬಡಿಸುವದು ಹೆಚ್ಚಾಗು ತ್ತಿತ್ತು. ಅವಳ ಇಂದ್ರಿಯಗಳೇ ಈಗ ಮಂದವಾಗಿದ್ದವು. ಉಸಿರಾಟ-

ವನ್ನೊಂದು ಬಿಟ್ಟು ಅವಳಲ್ಲೇನೂ ಇರಲಿಲ್ಲ. ಅವಳ ಆ ತೆರೆದ ಕಣ್ಣಿಗೆ ಜನರೆಲ್ಲ ಒಂದೇ ಬಗೆಯವರಾಗಿ ಕಾಣುತ್ತಿದ್ದರು. 'ಅವಕಾಶದಲ್ಲಿ ವಸ್ತುಗಳು ಕಲೆಯುವವು; ಅವಧಿಯಲ್ಲಿ ಅಗಲುವವು.' ಎಂದು ಅವಳು ಆಗಾಗ ಎನ್ನುತ್ತಿದ್ದಳು. ತಾನೆನ್ನುತ್ತಿದ್ದ ಈ ಮಾತು ವೇದಾಂತವೊ, ವಿನೋದವೊ ಎಂಬುದೇನು ಅವಳಿಗೆ ತಿಳಿಯುತ್ತಿರಲಿಲ್ಲ. ಮಿದುಳು ತೀರ ದುರ್ಬಲವಾಗಿತ್ತು.

ಅವರೆಲ್ಲರೂ ಅವಳ ಮೇಲೆ ಅಂತಃಕರಣ ಮಾಡುತ್ತಿದ್ದರು. ಗಂಡಸರು ಅವಳಿಗೆ ಮರ್ಯಾದೆಯನ್ನೂ ಹೆಂಗಸರು ಮಮತೆಯನ್ನೂ ತೋರಿಸುತ್ತಿದ್ದರು. ಇಷ್ಟು ದಿನಗಳಾದರೂ ತಾನು ನೋಡಬೇಕೆಂದು ಹಾತೊರೆಯುತ್ತಿದ್ದ ಮಿಸೆಸ್ ಮೂರಳು ಮಾತ್ರ ಅವಳ ಸಮೀಪಕ್ಕೆ ಹಾಯ್ದಿದ್ದಿಲ್ಲ. ಅಂತೆಯೆ ಅವಳ ಮನಸ್ಸಿನ ವೇದನೆಯು ಅಲ್ಲಿ ಯಾರಿಗೂ ತಿಳಿಯಲಿಲ್ಲ. ಒಮ್ಮೆ ಜಾಣೆಯಂತೆ, ಮತ್ತೊಮ್ಮೆ ಹುಚ್ಚಿಯಂತೆ ಅವಳು ಮಾತನಾಡುತ್ತಿದ್ದಳು. 'ನಾನು ಆ ಅಸಹ್ಯವಾದ ಗುಹೆಯಲ್ಲಿ ಹೋದೆನು—ನಾನು ನನ್ನ ಉಗುರಿನಿಂದ ಗೋಡೆಯನ್ನು ಕೆದರಿದ್ದು ಚೆನ್ನಾಗಿ ನೆನಪಿನಲ್ಲಿದೆ—ಪ್ರತಿಧ್ವನಿಯನ್ನು ಆರಂಭಿಸಿದ್ದೂ ಗೊತ್ತಿದೆ— ಆಮೇಲೆ ನನ್ನನ್ನು ಹಿಡಿದೆಳೆದು ಸುತ್ತಲೂ ಒಯ್ದುದ್ದೂ ನೆನಪಿದೆ—ಇದಾದ್ದೆಲ್ಲ ಮೂವತ್ತೇ ಸೆಕೆಂಡುಗಳಲ್ಲಿ—ಆದರೆ ಅದನ್ನು ಅನುಭವಿಸುವಾಗ ಒಂದು ಯುಗ ಕಳೆದಂತೆನಿಸುತ್ತಿತ್ತು—ನಾನು ಅವನಿಗೆ ದುರ್ಬಿಣಿಯಿಂದೆಸೆದೆನು—ಅವನೂ ಅದರ ಪಟ್ಟಿಯನ್ನು ಹಿಡಿದು ನನ್ನನ್ನು ಜಗ್ಗಾಡಿದನು—ಪಟ್ಟಿಯು ಹರಿಯಿತು—ನಾನು ಪಾರಾದೆನು—ಅವನು ನನ್ನನ್ನು ಒಮ್ಮೆಯೂ ಮುಟ್ಟಲಿಲ್ಲ—ಇದೆಲ್ಲ ಎಷ್ಟು ಮೂರ್ಖತನ—' ಎಂದು ತಿಳವಳಿಕೆಯಿದ್ದವಳಂತೆ ಒಮ್ಮೊಮ್ಮೆ ಮಾತಾಡಹತ್ತುವಳು. ಮಾತು ಮುಗಿದೊಡನೆ ಅವಳ ಕಣ್ಣುಗಳು ನೀರಿನಿಂದ ತುಂಬುವವು. 'ನನ್ನ ಮನಸ್ಸು ನೊಂದಿದೆ—ಅಂತಃಕರಣ ಸುಟ್ಟಿದೆ—ಆದರೂ ಸರಿಮಾಡಿಕೊಳ್ಳುವೆನು....' ಎಂದು ಬಿಕ್ಕಿ ಬಿಕ್ಕಿ ಅಳಲಾರಂಭಿಸುವಳು. ಹತ್ತಿರಿದ್ದ ಹೆಂಗಸರೂ ಅವಳೊಡನೆ ದನಿಗೂಡಿಸುವರು. ತಾವೂ ಹೀಗೆ ಅತ್ತರೆ ಅವಳಿಗೆ ಕೆಡಕೆನಿಸೀತೆಂಬುದರರಿವು ಯಾರಿಗೂ ಇರಲಿಲ್ಲ. ಇದರಿಂದಲೆ ಅವಳ ಪ್ರಗತಿಪರವಾದ ಗುರಿಯು ಅಳಿಸಿಹೋಯಿತು. ಮತ್ತು ಅವಳ ಮನಸ್ಸಿನ ಸ್ವಭಾ

ವಿಕ ಪ್ರಾಮಾಣಿಕತೆಯೂ ಇಲ್ಲದಾಯಿತು. ಆದರೂ ಅವಳು 'ನನಗೇನಾಗಿದೆ ? ಏನೂ ಆಗಿಲ್ಲ..ಸ್ವಲ್ಪ ಹೆದರಿದ್ದೇನೆ ಅಷ್ಟೆ..ಆದರದೇನು..?' ಎಂದು ಧೈರ್ಯ ಹಿಡಿಯಲು ಹವಣಿಸುತ್ತಿದ್ದಳು. ಅಷ್ಟರಲ್ಲಿ ಆ ಪ್ರತಿಧ್ವನಿಯ ನೆನಪು ಜಾಗೃತವಾಗುವದು. ಅಲ್ಲಿಂದ ಎಲ್ಲವೂ ಮರಕಳಿಸುವದು. ಅಳುವಳು; ರೋನಿಯ ಕೈ ಹಿಡಿಯಲು ತಾನು ಅಯೋಗ್ಯಳೆಂದು ಹೇಳುವಳು; ತನ್ನ ಮೈಮೇಲೇರಿ ಬಂದು ತನ್ನನ್ನು ಜಗ್ಗಾಡಿದವನು ಹಾಳಾಗಿಹೋಗಲೆಂದು ಶಪಿಸುವಳು; ಇಲ್ಲಿಗೆ ಅವಳ ವಿಚಾರಗಳ ಒಂದು ಸುತ್ತು ಮುಗಿದಂತಾಗುವದು. ಅಲ್ಲಿಂದ ಒಮ್ಮೆಲೆ ಎದ್ದುನಿಂತು 'ನಾನು ಬಜಾರದಲ್ಲಿ ಹೋಗಬೇಕು—ಹೊರಟೇಬಿಟ್ಟೆ—ನೀವು ನನ್ನನ್ನು ಕ್ಷಮಿಸಬೇಕು—ನೀವೂ—ನೀವೂ..ಯಾಕಂದರೆ ನನ್ನಿಂದ ಜಗತ್ತಿಗೇ ಅನ್ಯಾಯವಾಗಿದೆ—ನನಗಿದು ಸ್ಪಷ್ಟವಾಗಿ ಗೊತ್ತಾಗಿದೆ—ಇದೆಲ್ಲ ನನ್ನದೇ ಅಪರಾಧ......' ಎಂದು ಕೂಗಾಡುವಳು. ಅಲ್ಲಿಂದ ಬುದ್ಧಿಯು ಮತ್ತೆ ಸ್ವಲ್ಪ ಜಾಗೃತವಾಗುವದು. ಆದರಿಂದ ಇಷ್ಟೊತ್ತಿನಕ ಆಡಿದ್ದನ್ನೆಲ್ಲ ತೊಳೆದು ಬಿಡುವಳು.

ಅವಳು ಮಿಸೆಸ್ ಮೂರಳನ್ನು ಕಂಡಿದ್ದರೆ ಎಷ್ಟೋ ಚೆನ್ನಾಗುತ್ತಿತ್ತು. ಆದರೆ ತಾನೇ ಬಂದು ಭೆಟ್ಟಿಯಾಗಲಿಕ್ಕೆ ಆ ಮುದುಕಿಗೂ ಮನಸ್ಸಿನಲ್ಲಿ ಅಷ್ಟೊಂದು ಸ್ವಾಸ್ಥ್ಯವಿದ್ದಿಲ್ಲ. ಅವಳ ಬದಲು ರೋನಿಯೇ ಬಂದು 'ನನ್ನ ತಾಯಿಗೆ ಹೊರಬೀಳುವ ಮನಸ್ಸೇ ಇಲ್ಲ' ಎಂದು ಹೇಳಿದನು. ಇದನ್ನು ಕೇಳಿದ ಮೇಲಂತೂ ಪ್ರತಿಧ್ವನಿಯು ಹಾವಳಿಗೆ ಮೇರೆಯೆ ಇಲ್ಲದಂತಾಯಿತು. ತಾನು ಸುಮ್ಮಸುಮ್ಮನೆ ಆ ನುಣುಪಾದ ಗೋಡೆಗಳಿಗೆ ಹೊಡೆದದ್ದು, ಆದರ ಮೇಲೆ ಅಝೀಜನು ಟೀಕೆ ಮಾಡಿದ್ದು, ಆ ಧ್ವನಿಯುಡಗುವಷ್ಟರಲ್ಲಿ ಅವನು ತನ್ನ ಬೆನ್ನುಹತ್ತಿದ್ದು, ತಾನು ದುರ್ಬಿಣಿಯನ್ನು ಚಲ್ಲಿಕೊಟ್ಟದ್ದು, ಇವೆಲ್ಲ ಮತ್ತೆ ಮರಕಳಿಸಿದವು. ಹೀಗೆಯೆ ಹೇಗೊ ಒದ್ದಾಡುತ್ತ ಅವಳು ಕಾಲವನ್ನು ಕಳೆಯುತ್ತಿದ್ದಳು.

ಡಬಗಳ್ಳಿಯ ಮುಳ್ಳುಗಳೆಲ್ಲವನ್ನೂ ತೆಗೆದ ಮೇಲೆ ಜ್ವರ ಇಳಿದು ಅಳತೆಯಲ್ಲಿ ಬಂದವು. ಆಗ ರೋನಿಯು ಅವಳನ್ನು ತಮ್ಮಲ್ಲಿಗೆ ಕರೆದುಕೊಂಡು ಹೋಗಲಿಕ್ಕೆ ಬಂದನು. ಅವನೂ ಸಂತಾಪದಿಂದ ಕುದ್ದು ಕುದ್ದು, ಸೊರಗಿ ಸಣ್ಣಾಗಿದ್ದನು. ಅವನನ್ನು ನೋಡಿದ ಕೂಡಲೆ ಅವಳಿಗೆ ಅವನನ್ನೇ ಸಂತೈಸ

ಬೇಕೆಂದೆನಿಸಿತು. ಆದರೆ ಅಷ್ಟು ಹಚ್ಚಿಕೊಳ್ಳುವದು ವಿಡಂಬನೆಯಾಗಬಹು ದೆಂದು ತಿಳಿದು ಹಿಂಜರಿದಳು. ಹೆಚ್ಚೆಚ್ಚು ಮಾತಾಡಿದ ಹಾಗೆ ಇಬ್ಬರಿಗೂ ತಮ್ಮ ಅರಿವೇ ಹೆಚ್ಚಾಗಿ ಮತ್ತಿಷ್ಟು ದೈನ್ಯಾವಸ್ಥೆಗೆ ಬಂದರು. ಅದನ್ನು ಕಡಿಮೆ ಮಾಡಬೇಕೆಂದು ಲವನೂ ಮ್ಯಾಕ್‌ಬ್ರಾಯಿಡನೂ ಇಬ್ಬರೂ ಕೂಡಿ ತಾವು ಇಂದಿನ ವರೆಗೆ ಅವಳಿಗೆ ಹೇಳದೆ ಮುಚ್ಚಿಟ್ಟಿದ್ದ ಒಂದೆರಡು ಮಾತು ಗಳನ್ನು ಹೇಳಿದರು. ಅವಳಿಗೆ ಮೊಹರಮ್ಮದ ಗೊಂದಲವೆಲ್ಲ ಗೊತ್ತಾದದ್ದು ಇದೇ ಮೊದಲು. 'ಕೊನೆಯ ದಿನದ ಮೆರವಣಿಗೆಯು ಸರಕಾರದವರು ಗೊತ್ತುಮಾಡಿಕೊಟ್ಟ ದಾರಿಯನ್ನು ಬಿಟ್ಟು ಸಿವ್ಹಿಲ್ ಸ್ಟೇಶನ್‌ದಲ್ಲಿ ಹೊಗ ಬೇಕೆಂದು ಹವಣಿಸಿತು; ದೊಡ್ಡದೊಂದು ತಾಬೂತಕ್ಕೆ ಅಡ್ಡಯಾಗುವ ಟೆಲಿ- ಫೋನಿನ ತಂತಿಯನ್ನು ಕತ್ತರಿಸಿಯೂ ಬಿಟ್ಟರು; ಮ್ಯಾಕ್‌ಬ್ರಾಯಿಡರು ಮತ್ತು ಪೋಲಿಸರು ಕೂಡಿ ಸಾಹಸದಿಂದ ಅಂದಿನ ಕುತ್ತನ್ನು ದಾಟಿಸಿದರು. ಅದೆಲ್ಲ ಮ್ಯಾಕ್‌ಬ್ರಾಯಿಡರ ಕೌಶಲ್ಯ.' ಎಂದು ಹೇಳಿ ಮೇಲೆ 'ಮುಖ್ಯವಾಗಿ ನೀನು ಕೋರ್ಟಿನಲ್ಲಿ ಹಾಜರಾಗಿ ಗುನ್ಹೆಗಾರನ ಗುರುತು ಹಿಡಿಯಬೇಕು; ಹಿಂದೀ ವಕೀಲನು 'ಕ್ರಾಸು' ಮಾಡುವದಕ್ಕೆ ಒಪ್ಪಿಗೆ ಕೊಡಬೇಕು.' ಎಂದು ಖಟ್ಲೆಯ ಸಂಬಂಧವಾಗಿಯೂ ಒಂದೆರಡು ಮಾತು ಹೇಳಿದರು.

'ಮಿಸೆಸ್ ಮೂರಳು ನನ್ನ ಕೂಡ ಇರುವಳಷ್ಟೇ?'

'ಓಹೋ. ನಾನೂ ಸ್ವತಃ ಅಲ್ಲಿರುವೆನು.' ಎಂದು ರೋನಿಯು ಧೈರ್ಯ ಕೊಟ್ಟನು. 'ಪ್ರತಿವಾದಿಗಳು ತಕರಾರು ಮಾಡಿದ್ದರಿಂದ ಆ ಖಟ್ಲೆ ನನ್ನೆದು ರಿಗೆ ನಡೆಯುವದಿಲ್ಲ. ಅದು ಚಂದ್ರಪುರದಲ್ಲಿಯೆ ನಡೆಯುವದು.'

'ಕ್ವೆಸ್ಟೆಡ್‌ಳಿಗೆ ಅದೆಲ್ಲ ತಿಳಿಯುತ್ತದೆ. ಖಟ್ಲೆ ದಾಸರವರ ಎದುರಿಗೆ ನಡೆಯುತ್ತದೆ.' ಎಂದು ಮ್ಯಾಕ್‌ಬ್ರಾಯಿಡನು ಹೆಸರೊಡೆದನು.

ದಾಸನು ರೋನಿಯ ಕೈಕೆಳಗಿನವನು. ಹಿಂದಿನ ತಿಂಗಳಲ್ಲಿ ಅಡೀಲಾ ಮತ್ತು ಮೂರಳಿಗೆ ಮನೆಗೆ ಬರಲು ಔತಣ ಕೊಟ್ಟು ಗಾಡೀ ಕಳಿಸುತ್ತೇ ನೆಂದು ಹೇಳಿ ಕಳಿಸದೇ ಇದ್ದ ಮಿಸೆಸ್ ಭಟ್ಟಾಚಾರ್ಯಳ ಅಣ್ಣನೇ ಇವನು. ಆದರೆ ಬಹಳ ವಿನಯಶೀಲನು, ಬುದ್ಧಿವಂತನು; ತನಗೆ ದೊರೆತ ಸಾಕ್ಷಿ ಪುರಾವೆಗಳಿಂದಲೆ ಖಟ್ಲೆಯ ನಿರ್ಣಯವನ್ನು ಕೊಡುವವನು. ಆದರೆ ಒಬ್ಬ ಹಿಂದೂ,ಇಂಗ್ಲಿಷ ಹುಡುಗೆಯ ಖಟ್ಲೆ ನಡೆಸುವನೆಂದು ಕೇಳಿ ಸಿವ್ಹಿಲ್

ಸ್ಟೇಶನ್ನೆಲ್ಲ ಸಿಟ್ಟಿನಿಂದ ಸಿಡಿದೆದ್ದಿತ್ತು. ಹಂಗಸರೇ ಕೆಲವರು ಕೂಡಿ ಲೆಫ್ಟ್-ನೆಂಟ ಗವ್ಹರ್ನರರ ಹೆಂಡತಿಯಾದ ಲೇಡಿ 'ಮೆಲೆನ್‌ಬ'ಯವರಿಗೆ ತಂತಿಯನ್ನು ಕೊಟ್ಟಿದ್ದರು.

'ನಾನು ಯಾರ ಎದುರಿಗಾದರೂ ನಿಲ್ಲಲಿಕ್ಕೇ ಬೇಕಲ್ಲ!

'ಹೌದು, ಬಂದ ಗಂಡಾಂತರವನ್ನು ಹೀಗೆಯೆ ಎದುರಿಸಬೇಕು. ನಿನಗೆ ಧೈರ್ಯವಿದೆ.' ಎಂದು ಹೀಗಾದದ್ದಕ್ಕೆ ಮನಸ್ಸಿನಲ್ಲಿ ಖತಿಗೊಂಡಿದ್ದರೂ ಅವನು 'ಆಗಲಿ, ಇದೆಲ್ಲ ಈ ಪ್ರಜಾಧಿಪತ್ಯದ ಫಲ! ಪೂರ್ವಕಾಲದಲ್ಲಿ ಹೀಗೆ ಇಂಗ್ಲೀಷ ಸ್ತ್ರೀಯು ಯಾರ ಎದುರಿಗೂ ನಿಲ್ಲಬೇಕಾಗುತ್ತಿದ್ದಿಲ್ಲ ಯಾವ ಹಿಂದೀ ಮನುಷ್ಯನಿಗೂ ಅವಳ ಮನೆಮಾತಿನಲ್ಲಿ ಕೈಹಾಕುವ ಧೈರ್ಯವಾಗುತ್ತಿದ್ದಿಲ್ಲ. ಅವಳೇ ಬಂದು ತನ್ನ ಲೇಖಿ ಕೈಫೀಯತ್ತು ಕೊಡಬೇಕು; ಅದರಿಂದಲೆ ಏನು ಆಗುವ ನಿರ್ಣಯವಾಗಬೇಕು, ಹೀಗಿತ್ತು. ಆದರೆ ಈಗ ಈ ದೇಶದ ಪರಿಸ್ಥಿತಿಯೇ ಬದಲಾಗಿಹೋಗಿದೆ. ಉಪಾಯವಿಲ್ಲ. ' ಎಂದು ದೈನ್ಯದಿಂದ ಹೇಳಿದನು. ಇದನ್ನು ಕೇಳಿ ಅವಳ ಕಣ್ಣು ನೀರುದುಂಬಿದವು. ರೋನಿಯು ಅವಳು ಅಳುತ್ತಿರುವದನ್ನು ನೋಡಿ ಕಸವಿಸಿಬಡುತ್ತ ಕೋಣೆಯಲ್ಲಿ ಹಾಸಿದ್ದ ಕಾಶ್ಮೀರದ ರತ್ನಗಂಬಳಿಯ ಮೇಲೆ ಅತ್ತಿತ್ತ ಪಂಜರದಲ್ಲಿಯ ಸಿಂಹದಂತೆ ಓಡಾಡಹತ್ತಿದನು.

'ದಿನದಿನಕ್ಕೆ ನಾನಿದನ್ನು ಕಡಿಮೆ ಮಾಡಿ ಬೇಗನೆ ಪ್ರಕೃತಿಯನ್ನು ಸುಧಾರಿಸಿಕೊಳ್ಳುವೆ. ನನಗೆ ಏನಾದರೂ ಕೆಲಸ ಬೇಕು. ಅದಿಲ್ಲದ್ದರಿಂದಲೇ ನಾನು ಹೀಗೆ ನಗಿಗೇಡಾಗಿ ಅಳುತ್ತಿದ್ದೇನೆ.' ಎಂದು ಮೂಗೇರಿಸಿ ಹೇಳಿದಳು.

'ಇದು ನಗೆಗೀಡಲ್ಲ; ನಿನ್ನ ಈ ದುಃಖವನ್ನು ಸ್ವಲ್ಪಾದರೂ ಕಡಿಮೆ ಮಾಡಲಿಕ್ಕೆ ನಮಗೆ ಬರಲೊಲ್ಲದಲ್ಲ ಎಂದು ತಲ್ಲಣಗೊಂಡಿದ್ದೇವೆ. ಇಂಥ ಸಮಯದಲ್ಲಿ—ಇಲ್ಲಿ ನೀನು ಇದ್ದದ್ದು—ನಮಗೆ ಬಹಳ ಅಭಿಮಾನ. . . .' ಎನ್ನುವಾಗ ಆ ಪೋಲಿಸ ಅಧಿಕಾರಿಗೆ ದುಃಖವು ಹಿಡಿಸದಾಯಿತು; ಮಾತು ತತ್ತರಿಸಹತ್ತಿದವು. ಆದರೂ 'ಮತ್ತೊಂದು ವಿಷಯ; ನೀನು ಜಡ್ಡಿನಿಂದ ಬಿದ್ದಾಗ ನಿನ್ನ ಹೆಸರಿಗೆ ಒಂದು ಕಾಗದ ಬಂದಿತ್ತು. ನಾನೇ ಅದನ್ನು ತೆಗೆದು ನೋಡಿದೆನು. ಅದಕ್ಕಾಗಿ ನನ್ನನ್ನು ಕ್ಷಮಿಸಬೇಕು. ಅದು ಫೀಲ್ಡಿಂಗನ ಪತ್ರ.' ಎಂದನು.

‘ಫೀಲ್ಡಿಂಗನದು! ಅವನು ನನಗೇಕೆ ಬರೆಯಬೇಕು?’

‘ಅಷ್ಟೇ ಅಲ್ಲ, ಅವನನ್ನು ಆರೋಪಿ ಪಕ್ಷದವರು ತಮ್ಮ ಕಡೆಗೆ ಜಗ್ಗಿಕೊಂಡಿದ್ದಾರೆ!’

‘ಅದೊಂದು ವಿಕ್ಷಿಪ್ತ ಪ್ರಾಣಿಯು!’ ಎಂದು ರೋನಿ ಸಹಜವಾಗಿ ನುಡಿದನು.

‘ವಿಕ್ಷಿಪ್ತವಿದ್ದರೇನಾಯಿತು, ಅಸಭ್ಯನಾಗಬಾರದು. ನಿನ್ನೊಡನೆ ಅವನು ನಡೆದುಕೊಂಡ ಆ ವಿಚಿತ್ರ ರೀತಿಯು ಕ್ವೆಸ್ಟೆಡಾಳಿಗೂ ಗೊತ್ತಾಗಲಿ, ಹೇಳು. ನೀನೇ ಹೇಳದಿದ್ದರೆ ಮತ್ತ್ಯಾರು ಹೇಳಬೇಕು?’

ಅವನು ಹೇಳಿದನು ‘ಈಗ ಈ ಫೀಲ್ಡಿಂಗನೇ ಆರೋಪಿ ಪಕ್ಷದಿಂದ ಮುಖ್ಯ ಸಾಕ್ಷಿಯಾಗಿದ್ದಾನೆ. ನಾವೆಲ್ಲ ಉನ್ಮತ್ತರಂತೆ! ಈ ಉನ್ಮತ್ತ ಇಂಗ್ಲೀಷರ ಗುಂಪಿನಲ್ಲಿ ಇವನೊಬ್ಬನು ಮಾತ್ರ ಒಳ್ಳೆ ಧಾರ್ಮಿಕ ಹೊರಟಿದ್ದಾನೆ! ಪೇಟೆಯಲ್ಲಿಯ ಜನರು ಅವನ ಕೂಡ ಮಾತಾಡಲಿಕ್ಕೆ ಬಂದಿರುತ್ತಾರೆ. ಅವನೂ ಅವರಲ್ಲಿಯೆ ಬೆರೆತುಬಿಟ್ಟಿದ್ದಾನೆ. ಅವರೊಡನೆ ಎಲಿ-ಅಡಿಕೆ ಹಾಕಿಕೊಂಡು, ಮುಂಗೈಗೆ ಸುವಾಸನೆ ಎಣ್ಣೆಯನ್ನು ಹಚ್ಚಿಸಿಕೊಂಡಿದ್ದಾನೆ. ಹೀಗೆ ಅವರ ಉಪಚಾರ ಉಪಹಾರಕ್ಕೆ ಸವಿಗಂಡ ಇಂಥ ಮನುಷ್ಯನನ್ನು ಮಾತಿನಿಂದ ಹಾದಿಗೆ ತರುವದು ಬಹಳ ಕಠಿಣ. ಅವನ ವಿದ್ಯಾರ್ಥಿಗಳೇ ಈಗ ಸಂಪು ಹೂಡಿದ್ದಾರೆ—ಅವನ ಮಾತಿನಿಂದ ಹುರುಪುಗೊಂಡು ಅಭ್ಯಾಸ ಮಾಡುವದನ್ನು ಬಿಟ್ಟುಬಿಟ್ಟಿದ್ದಾರೆ—ಈ ಫೀಲ್ಡಿಂಗನೊಬ್ಬನು ಇರದಿದ್ದರೆ ಮೊಹರಮ್ಮದಲ್ಲಿ ಗೊಂದಲವೇ ಏಳುತ್ತಿರಲಿಲ್ಲ—ಅವನು ನಮ್ಮ ಸಮಾಜಕ್ಕೇ ಕಂಟಕನಾಗಿ ಕುಳಿತಿದ್ದಾನೆ—ಅವನು ಬರೆದ ಪತ್ರವು ಇಲ್ಲಿಯೆ ಒಂದೆರಡು ದಿವಸ ಬಿದ್ದಿತ್ತು—ಪರಿಸ್ಥಿತಿಯು ತೀರ ವಿಕೋಪಕ್ಕೆ ಹೋದದ್ದನ್ನು ನೋಡಿ ಆ ಪತ್ರವೇನಾದರೂ ನಮಗೆ ಉಪಯೋಗವಾಗಬಹುದೆಂದು ತಿಳಿದು ನಾನೇ ಒಡೆದೆನು—’

‘ಅದರಲ್ಲಿ ಅಂಥದು ಇದೆಯಾದರೂ ಏನು?’ ಎಂದು ಸಣ್ಣದನಿಯಲ್ಲಿ ಕೇಳಿದಳು.

‘ಛೇ, ಅಂಥದೇನೂ ಇಲ್ಲ ನೀನೇ ತಪ್ಪು ಮಾಡಿದ್ದೀಯೆಂದು ಅದರಲ್ಲಿ ಹೇಳುವ ಧಾರ್ಷ್ಟ್ಯವನ್ನು ಮಾತ್ರ ಮಾಡಿದ್ದಾನೆ.’

'ನಾನು ತಪ್ಪು ಮಾಡಿದ್ದೇ ನಿಜವಾಗಲೆಂದು ನಾನೂ ಬಯಸುತ್ತೇನೆ.' ಎಂದು ಅವಳು ಆ ಕಾಗದವನ್ನು ಓದಹತ್ತಿದಳು. 'ಡಾ. ಅಝೀಜನು ನಿರಪರಾಧಿಯಿದ್ದಾನೆ.' ಇದನ್ನು ಓದಿದೊಡನೆ ಅವಳ ದನಿಯು ನಡುಗಹತ್ತಿತು. ಕೈಯಲ್ಲಿಯ ಕಾಗದವು ಕಳಚಿ ಬಿತ್ತು. ಮುಖವು ವಿವರ್ಣವಾಯಿತು. ಸ್ವಲ್ಪಹೊತ್ತು ಸುಮ್ಮನೆ ಕುಳಿತು, ಆಮೇಲೆ ರೋನಿಗೆ ಹೇಳಿದಳು, 'ಆದರೆ ರೋನಿ! ಅವನು ನಿನ್ನೊಡನೆ ಹೇಗೆ ನಡೆದುಕೊಂಡನೆಂಬುದನ್ನು ನೋಡು. ಈ ಮೊದಲೆ ನನ್ನ ಸಲುವಾಗಿ ನೀನು ಎಷ್ಟೋ ಸಹಿಸಿರುವೆ. ಪ್ರಿಯಾ, ಇದನ್ನು ನಾನು ಹೇಗೆ ತೀರಿಸಬೇಕು? ಕೊಟ್ಟು ತೀರಿಸಬೇಕೆಂದರೆ ನನ್ನ ಹತ್ತಿರ ಏನಿದೆ? ಏನೂ ಇಲ್ಲ; ನಾನೊಬ್ಬ ತಿರುಕಿ. ನನ್ನಂತಹಳ ಸಂಬಂಧದಿಂದ ನಿಮಗೇನು ಪ್ರಯೋಜನ? ನಾವು ಇನ್ನೂ ಎಷ್ಟೋ ಯುಗಗಳ ವರೆಗೆ ಕಾಡಿನಲ್ಲಿ ಹೋಗಿಯೆ ಇದ್ದು ನಮ್ಮ ಈ ಪಶುಸ್ವಭಾವವನ್ನು ತಿದ್ದಿಕೊಂಡು ಬರಬೇಕೆಂದು ಕಾಣುತ್ತದೆ. ನನ್ನ ಜ್ಞಾನವೇ ನನಗೆ ಕಾಲ್ತೊಡಕಾಗಿದೆ. ಅಥವಾ ಅದು ಜ್ಞಾನವೇ ಇರಲಿಕ್ಕಿಲ್ಲ. ನಾನು ನಿನ್ನ ಸ್ನೇಹಕ್ಕೆ ಯೋಗ್ಯಳಿರಲಿಕ್ಕಿಲ್ಲ. ಒಳ್ಳೇದು, ಇನ್ನು ಹೊರಡೋಣ? ಫೀಲ್ಡಿಂಗನ ಕಾಗದವೇನು ಅಷ್ಟು ಮಹತ್ವದ್ದಲ್ಲ. ಅವನು ತನ್ನ ಮಟ್ಟಿಗೆ ತಾನು ಬೇಕಾದ ಹಾಗೆ ಇದ್ದುಕೊಳ್ಳಲಿ; ಆದರೆ ನಿನಗೆ ಇಷ್ಟು ಕಷ್ಟವಾದಾಗ್ಗೆ ಅವನು ಹೀಗೆ ಕಠೋರನಾಗಬಾರದಿತ್ತು. ಅದೇ ಮಹತ್ವದ್ದು....ನಿಮ್ಮ ಮೇಲೆ ಭಾರಹಾಕುವದು ಬೇಡ; ನಾನೀಗ ಚೆನ್ನಾಗಿ ಒಬ್ಬಳೇ ನಡೆಯಬಲ್ಲೆ; ನೀವೇನೂ ಹಿಡಿಯುವದು ಬೇಡ.'

ಮಿಸೆಸ್ ಮ್ಯಾಕ್‌ಬ್ರಾಯಿಡಳು ಅಂತಃಕರಣದಿಂದ ಅವಳಿಗೆ ಬೀಳ್ಕೊಟ್ಟಳು. ಹೋಗುವಾಗ 'ನಿಮ್ಮಿಂದ ನನಗೆ ಬಹಳ ಉಪಕಾರವಾಯಿತು.' ಎಂದು ಕ್ವೆಸ್ಟೆಡ್‌ಳು ತನ್ನ ಕೃತಜ್ಞತೆಯನ್ನು ತೋರಿಸಿದಳು.

'ಇದರಲ್ಲಿ ಉಪಕಾರವೇತರದು? ನಾವು ಒಬ್ಬರಿಗೊಬ್ಬರು ಸಹಾಯವನ್ನು ಮಾಡಲೇಬೇಕು.' ಎಂದು ಮ್ಯಾಕ್‌ಬ್ರಾಯಿಡಳು ದೊಡ್ಡಿಸ್ತಿಕೆಯಿಂದ ಉತ್ತರಕೊಟ್ಟು 'ಹೋಗಿ ಬಾ ಅಡೀಲಾ.' ಎಂದು ಕಳಿಸಿಕೊಟ್ಟಳು.

ರೋನಿಯು ಅವಳನ್ನು ಮೋಟಾರಿನಲ್ಲಿ ಕುಳ್ಳಿರಿಸಿಕೊಂಡು ಮನೆಗೆ ಕರೆದೊಯ್ದನು. ಅವರು ಬಂಗ್ಲೆಯ ಸಮೀಪಕ್ಕೆ ಬಂದಕೂಡಲೆ 'ತಾಯಿಯು

ನಿನ್ನ ದಾರಿಯನ್ನೇ ನೋಡುತ್ತಿದ್ದಾಳೆ; ನೀನು ಅವಳು ಮುದುಕಿಯೆಂಬು ದನ್ನು ಮರೆಯಬಾರದು. ಮುಪ್ಪಿನವರ ಸ್ವಭಾವ ಸ್ವಲ್ಪ ಸೀಡಕ ಹೆಚ್ಚು; ಅದಕ್ಕೆ ಅರಮರವೂ ಕೂಡಿರುತ್ತದೆ. ನಮ್ಮ ದೃಷ್ಟಿಗೂ ಅವರ ದೃಷ್ಟಿಗೂ ಬಿಡಿಸುತ್ತದೆ.' ಎಂದು ಮೊದಲೇ ಹೇಳಿಟ್ಟನು. ಆದರೆ ಇದಾವುದಕ್ಕೂ ಅವಳು ಲಕ್ಷ್ಯಕೊಡಲಿಲ್ಲ. ಮಿಸೆಸ್ ಮೂರಳೊಡನೆ ತನ್ನ ಸ್ನೇಹವು ದೃಢ ವಾಗಿದ್ದುದರಿಂದ ಎಂಥ ಪ್ರಸಂಗದಲ್ಲಿಯೂ ಅದು ಸಡಿಲಾಗಲಾರದೆಂದು ಅವಳು ನಂಬಿದ್ದಳು. 'ನಿನಗೀಗ ಎಲ್ಲವೂ ಹಗುರೆನಿಸಬೇಕಾದರೆ ನಾನು ಏನು ಮಾಡಬೇಕು? ನನಗಿರುವದು ನಿನ್ನದೊಂದೇ ಚಿಂತೆ.' ಎಂದು ಅವಳು ಉಸುರ್ಗರೆದಳು.

'ನೀನು ನನ್ನ ಚೆನ್ನಿ!'

'ಹಾಗಾದರೆ ನೀನು ನನ್ನ ಚೆನ್ನ.' ಎಂದು ಆಮೇಲೆ 'ರೋನಿ, ಅವಳೂ ಕಾಯಿಲೆ ಬಿದ್ದಿಲ್ಲವೇ?'

'ಬಿದ್ದಿದ್ದಳು; ಈಗ ಗುಣವಾಗಿದೆ. ಆದರೆ ಅವಳೀಗ ಸ್ವಲ್ಪ ಪಿಶಿ ಯಾಗಿದ್ದಾಳೆ. ನಮ್ಮ ಮನೆತನವೇ ಮೊದಲಿನಿಂದ ಸ್ವಲ್ಪ ಪಿಶಿ. ನೀನು ಅವ- ಭೆಟ್ಟಿಯಾದ ಮೇಲೆ ನಿನಗೂ ಅದು ಗೊತ್ತಾಗುವದು. ಏನೇ ಆದರೂ ನೀನು ಅವಳಿಂದ ಹೆಚ್ಚು ಮಾತ್ರ ಅಪೇಕ್ಷಿಸಬೇಡ.'

ಮನೆಯು ಕಾಣಹತ್ತಿತು. ತಾನು ಮೊದಲು ಬಿಟ್ಟುಹೋಗುವಾಗ ಇದ್ದಂತೆಯೆ ಆ ಮನೆಯೀಗ ಅವಳಿಗೆ ತೋರಿತು. ಉಬ್ಬಿದ, ಕೆಂಪನ್ನ, ಗಂಭೀರ ಮುಖಮುದ್ರೆಯ ಮೂರಳು ಮಂಚದ ಮೇಲೆ ಕುಳಿತಿದ್ದೂ ಕಂಡಿತು. ಅವರು ಒಳಗೆ ಬಂದಾಗ ಅವಳೇನು ಏಳಲಿಲ್ಲ. ಇದನ್ನು ನೋಡಿಯೂ ನೋಡದವಳಂತಿದ್ದಳು ಅಡೀಲಾ.

'ನೀವಿಬ್ಬರೂ ತಿರುಗಿ ಬಂದಿರಿ.' ಇಷ್ಟರಿಂದಲೆ ಅವರಿಗೆ ಸ್ವಾಗತ ವಾಯಿತು.

ಅಡೀಲಾ ಅವಳ ಹತ್ತಿರ ಕುಳಿತುಕೊಂಡು, ಅವಳ ಕೈಯ್ಯನ್ನು ತನ್ನ ಕೈಯಲ್ಲಿ ತೆಗೆದುಕೊಂಡಳು. ಆದರೆ ಅದು ಮೆಲ್ಲನೆ ಹಿಂಗಕ್ಕೆ ಹೋಯಿತು.

'ನೀನು ಚೆನ್ನಾಗಿದ್ದೀಯಾ? ನಾನಿಲ್ಲಿಂದ ಹೋಗುವಾಗ ನೀನು ನೆಟ್ಟಗಿದ್ದಂತೆ ತೋರಿದಿ.' ಎಂದು ರೋನಿಯು ಶಾಂತರೀತಿಯಿಂದ

ಕೇಳಿದನು. ಆದರೆ ಮನೆಬಿಟ್ಟು ಹೊರಡುವಾಗ, ಅಡೀಲಾ ಬಂದೊಡನೆ ಅವಳಿಗೆ ನಾಲ್ಕು ಚಲೋ ಮಾತುಗಳನ್ನಾಡಬೇಕೆಂದು ತನ್ನ ತಾಯಿಗೆ ಹೇಳಿಕೊಂಡಿದ್ದನು. ಅಂತೆಯೆ ಈಗೇನಾಗುವದೊ ಏನೋ ಎಂದು ಬೆದರಿದ್ದನು.

'ಚೆನ್ನಾಗಿದ್ದೇನೆ.' ಎಂದು ವಿಷಣ್ಣಳಾಗಿ ಉತ್ತರಕೊಟ್ಟು 'ನಿಜವಾಗಿ ಹೇಳಬೇಕೆಂದರೆ ನಾನೀಗ ನನ್ನ 'ರಿಟರ್ನ ಟಿಕೆಟ್ಟಿ'ನ ಕಡೆಗೇ ನೋಡುತ್ತಿದ್ದೇನೆ. ಅದನ್ನು ಬದಲು ಮಾಡಲಿಕ್ಕೆ ಬರುತ್ತಿರುವದರಿಂದ ನಾನು ಬೇಕಾದ ಬೋಟಿನಿಂದ ನಮ್ಮ ದೇಶಕ್ಕೆ ಹೋಗಬಹುದು.'

'ಆ ವಿಷಯ ನಾವು ಹಿಂದುಗಡೆ ಮಾತಾಡಬಹುದಲ್ಲವೆ?'

'ರಾಲ್ಫ ಮತ್ತು ಸ್ಟೇಲಾ ಇವರಿಗೆ ನಾನು ತಿರುಗಿ ಅಲ್ಲಿಗೆ ಯಾವಾಗ ಮುಟ್ಟುವೆನೆಂಬದನ್ನು ತಿಳಿಸಬೇಕಾಗಿದೆ.'

'ಈ ಎಲ್ಲ ವಿಚಾರಕ್ಕೂ ಇನ್ನೂ ಬೇಕಾದಷ್ಟು ಅವಕಾಶವಿದೆ. ಈಗ ನಮ್ಮ ಅಡೀಲಾ ಹೇಗೆ ಕಾಣುತ್ತಾಳೆ ನೋಡು.'

'ಮೂರ್! ನನಗೆ ಇದರೊಳಗಿಂದ ಪಾರಾಗಲಿಕ್ಕೆ ನೀನು ಸಹಾಯ ಮಾಡುವಿಯೆಂದು ನಾನು ನಂಬಿದ್ದೇನೆ. ನಿನ್ನ ಸಂಗಡ ಇರುವ ಪ್ರಸಂಗವು ಮತ್ತೆ ಬಂದುದರಿಂದ ನನ್ನ ಮೇಲೆ ದೇವರು ದಯೆಮಾಡಿದನೆಂದೇ ನಾನು ತಿಳಿದಿದ್ದೇನೆ. ನನಗೆ ಉಳಿದವರೆಲ್ಲರೂ ಅಪರಿಚಿತರು.' ಎಂದು ಆ ಹುಡುಗಿಯು ಪಾಠ ಒಪ್ಪಿಸುವಂತೆ ಬೇಗ ಬೇಗ ಹೇಳಿದಳು.

ಆದರೆ ಮಿಸೆಸ್ ಮೂರಳು ಇವಳಿಗೆ ಸಹಾಯ ಮಾಡುವ ಇಚ್ಛೆಯನ್ನೇನು ತೋರಿಸಲಿಲ್ಲ. ಅವಳಿಂದ ಒಂದು ಬಗೆಯ ತಿರಸ್ಕಾರವೇ ಹೊರಬಿತ್ತು. 'ನಾನು ಕಡೆತನಕ ಎಷ್ಟು ಗೋಳಾಡಲಿ!' ಎಂದೆನ್ನುವಂತೆ ಅವಳ ಮುಖಭಾವವಿತ್ತು. ಈಗ ಕ್ರೈಸ್ತಧರ್ಮದ ತಿರುಳನ್ನರಿತ ಅವಳ ಮೃದು ಸ್ವಭಾವವು ಹೋಗಿ ಅದರ ಬದಲು ಅತಿ ಕಠೋರವಾದ ಕಾಠಿಣ್ಯವು ಅವಳಲ್ಲಿ ಸೇರಿತ್ತು. ಜನರನ್ನು ಕಂಡರೆ ಸಾಕು, ಅವಳಲ್ಲಿ ದ್ವೇಷವು ಹುಟ್ಟುತ್ತಿತ್ತು ಅಝೀಜನನ್ನು ಹಿಡಿದದ್ದಕ್ಕೆ ಅವಳಿಗೇನೂ ಎನಿಸಿದ್ದಿಲ್ಲ. ಅಂತೆಯೆ ಆದರ ವಿಷಯವಾಗಿ ಅವಳೇನೂ ಕೇಳಲಿಲ್ಲ; ಮತ್ತು ಹಿಂದಿನ ದಿನ ಮೊಹರಮ್ಮದ ಭಯಂಕರವಾದ ರಾತ್ರಿಯಲ್ಲಿ ಜನರು ಬಂಗ್ಲೆಯ ಮೇಲೆ ಹಲ್ಲೆಯನ್ನು

ಮಾಡಬಹುದೆಂದು ತಿಳಿದಿದ್ದರೂ ಅವಳೇನು ಹಾಸಿಗೆಯನ್ನು ಬಿಟ್ಟು ಕದ-ಲಿರಲಿಲ್ಲ.

'ನನಗೆ ಗೊತ್ತಿದೆ ಅದೇನೂ ಅಲ್ಲೆಂದು. ಆದರೂ ನಾನಿನ್ನು ವಿವೇಕಿ ಯಾಗಲೇಬೇಕು; ಆಗಿಯೆ ತೀರುತ್ತೇನೆ.' ಎಂದು ಅಡೀಲಾ ಕಣ್ಣೀರು ತಂದು ಹೇಳಿದಳು. 'ಮತ್ತೆಲ್ಲಿಯಾದರೂ ಆಗಿದ್ದರೆ ನಾನು ಅದನ್ನು ಹಚ್ಚಿ ಕೊಳ್ಳುತ್ತಿರಲಿಲ್ಲ. ಈಗ ಅದೆಲ್ಲಿ ಆಯಿತೋ ನನಗೆ ಗೊತ್ತೇ ಇಲ್ಲ!'

ಅವಳಾಡಿದ್ದರ ಅರ್ಥವನ್ನು ತಾನು ತಿಳಿದುಕೊಂಡೆನೆಂದು ರೋನಿಗೆ ಎನಿಸಿತು. ಯಾವ ಗುಹೆಯೆಂಬುದರ ವರ್ಣನೆಯನ್ನಾಗಲಿ ಅದರ ಗುರುತನ್ನಾ ಗಲಿ ಮಾಡಿಕೊಡಲಿಕ್ಕೆ ಅವಳಿಗೆ ಶಕ್ಯವಿರಲಿಲ್ಲ; ಅವಳು ಪ್ರಯತ್ನವನ್ನೂ ಮಾಡಿರಲಿಲ್ಲ. ಇದರ ಲಾಭವನ್ನು ಆರೋಪಿಯ ಪಕ್ಷದವರು ತೆಗೆದುಕೊಳ್ಳ ಬಹುದೆಂದು ಬಗೆದು ಮಾರಬಾರ ಗುಹೆಗಳು ಒಂದೇತೆರನಾಗಿವೆಯೆಂದೂ, ಮುಂದೆ ಬಿಳಿ ಬಣ್ಣದಿಂದ ಅವುಗಳಿಗೆ ಅಂಕಿಗಳನ್ನು ಹಾಕಲಾಗುವದೆಂದೂ ಅವಳಿಗೆ ಅವನು ಭರವಸೆ ಕೊಟ್ಟು ಹೇಳಿದನು.

'ಹೌದು, ಹೌದು. ನಾನೆನ್ನುತ್ತಿದ್ದುದೂ ನುವಾರಾಗಿ ಅದೇ. ಆದರೆ ಆ ಖೋಡಿ ಪ್ರತಿಧ್ವನಿಯೊಂದು ಕೇಳಬರುತ್ತದಲ್ಲ? ಅದಕ್ಕೇನು ಮಾಡ ಬೇಕು?'

'ಓಹೊ! ಆ ಪ್ರತಿಧ್ವನಿಯದೇನದು?'

'ನನಗೆ ಅದನ್ನು ತಪ್ಪಿಸಿಕೊಳ್ಳುವದು ಸಾಧ್ಯವಿಲ್ಲ.'

'ನಿನಗೆಂದಾದರೂ ಸಾಧ್ಯವಾದೀತೆಂದೂ ನನಗೆನಿಸುವದಿಲ್ಲ.'

'ಮೂರ್! ಈ ಪ್ರತಿಧ್ವನಿಯೆಂದರೆ ಏನಿದು?'

'ನಿನಗೆ ಗೊತ್ತಿಲ್ಲವೇ?'

'ಇಲ್ಲ..ಏನದು? ದಯಮಾಡಿ ಹೇಳು..ನಿಮಗೆ ತಿಳಿಸಿ ಹೇಳಲಿಕ್ಕೆ ಬರುವದೆಂದು ನನಗಾಗಲೆ ಎನಿಸಿತ್ತು..ಅದರಿಂದ ನನಗೆ ಬಹಳ ಸಮಾಧಾನ ವಾಗುವದು....'

'ನಿನಗೆ ಗೊತ್ತಿಲ್ಲೆಂದರೆ ಅಷ್ಟೇ ಗುಣ. ಗೊತ್ತಿಲ್ಲದ್ದನ್ನು ಗೊತ್ತು ಮಾಡಿಕೊಟ್ಟು ಸುಮ್ಮನೆ ದುಃಖಕೊಡುವದನ್ನು ಯಾರು ಹೇಳಿದ್ದಾರೆ; ನಾನು ಹೇಳಲಾರೆನು.'

‘ ನೀನಿಷ್ಟು ನಿರ್ದಯಳಾಗಬಾರದು; ಹೇಳಬೇಕು; ಹೇಳುವದಿಲ್ಲವೆ ? ’

‘ ಹೇಳು, ಹೇಳು. ಹೇಳು. ಏನು ಹೇಳಲಿ ಮಣ್ಣು! ಹೇಳಲಿಕ್ಕೆ ಏನಾದರೂ ಇದ್ದರಷ್ಟೆ ಹೇಳುವದು ? ನನ್ನ ಇಡಿ ಆಯುಷ್ಯವೇ ಹೇಳುವದರಲ್ಲಿ, ಹೇಳುವದನ್ನು ಕೇಳುವದರಲ್ಲಿ, ಹೋಗಿದೆ. ನನಗೆ ಕೇಳಿ ಕೇಳಿ ಸಾಕಾಗಿದೆ. ನನ್ನನ್ನಷ್ಟು ಈಗ ಸುಮ್ಮನಿರಗೊಟ್ಟರೆ ಸಾಕು; ಸಾಯಿಯೆಂದಲ್ಲ ನುತ್ತೆ. ’ ಎಂದು ಮುದುಕಿಯು ಕಟುವಾಗಿ ನುಡಿದು ಅಲ್ಲಿಂದ ‘ ನಾನು ಸಾಯಬೇಕೆಂದು ನೀವು ಹಾದೀ ನೋಡುತ್ತಿರಬಹುದು. ಆದರೆ ನಿನ್ನದು ರೋನಿಯೊಡನೆ ಮದುವೆಯಾದದ್ದನ್ನು ನೋಡಬೇಕೆಂದು ನನ್ನ ಕಣ್ಣು ಆಶೆಯಿಂದ ತೆರೆದೇ ಇವೆ; ಉಳಿದವ್ವರು ಮಕ್ಕಳನ್ನೂ ನೋಡಿ ಮಾತನಾಡಿಸಬೇಕೆಂದು ಜೀವ ಹಾತೊರೆಯುತ್ತಿದೆ— ಇಷ್ಟಾದರೆ ತೀರಿತು, ಅಲ್ಲಿಂದ ಹಾಯಾಗಿ ಕಣ್ಣು ಮುಚ್ಚುತ್ತೇನೆ. ’ ಎಂದು ಒಂದು ಬಗೆಯ ತೃಪ್ತಿಯ ನಗೆ ನಕ್ಕಳು.

‘ ಅದೆಲ್ಲ ಸರಿಯಾದ ಮಾತು. ಆದರೆ ಅಷ್ಟರಲ್ಲಿ ‘ ಚೌಕಸಿ ’ಯೊಂದು ಬಂತಲ್ಲ ? ನಾವೆಲ್ಲರೂ ಇದರೊಳಗಿಂದ ಪಾರಾಗುವಂತೆ ಒಮ್ಮನಸ್ಸಿನಿಂದ ಒಬ್ಬರಿಗೊಬ್ಬರು ಸಹಾಯ ಮಾಡಬೇಕೇ ಹೊರತು, ಒಬ್ಬರಿಂದೊಬ್ಬರು ದೂರ ಸರಿದು ನಿಲ್ಲಬಾರದು. ನೀನು ಸಾಕ್ಷಿ ಹೇಳುವಾಗ ಹೀಗೆಯೇ ಹೇಳ-ತಕ್ಕವಳೇನು ? ’ ಎಂದು ರೋನಿ ಸ್ವಲ್ಪ ಸಿಟ್ಟಿನಿಂದ ಕೇಳಿದನು.

‘ ಸಾಕ್ಷಿ ! ನಾನೇಕೆ ಸಾಕ್ಷಿ ಹೇಳಬೇಕು ? ’

‘ ನಮ್ಮ ಫುರಾವೆಯಲ್ಲಿಯ ಕೆಲ ಮಾತುಗಳನ್ನು ಸಿದ್ಧಮಾಡಲಿಕ್ಕೆ.

‘ ನಿಮ್ಮ ಈ ಹುಚ್ಚು ಕೊರ್ಟುಗಳನ್ನು ಕಟ್ಟಿಕೊಂಡು ನನಗೇನೂ ಆಗಬೇಕಿಲ್ಲ. ನಾನು ಆ ತಂಟೆಯಲ್ಲಿಯೇ ಬೀಳುವದಿಲ್ಲ. ’

‘ ಅವಳು ಇದರಲ್ಲಿ ಬೀಳುವದು ನನ್ನ ಮನಸ್ಸಿಗೂ ಬರುವದಿಲ್ಲ. ಅವಳಿಗಿನ್ನು ನನ್ನ ಸಲುವಾಗಿ ಹೆಚ್ಚು ತೊಂದರೆ ಬೇಡ. ಅವಳ ಸಾಕ್ಷಿಯು ಅಗತ್ಯವೇ ಇಲ್ಲ. ’

‘ ಅವಳಿಗೇ ಹೇಳುವದು ಬೇಕಾಗಿದೆಯೆಂದು ನನಗೆನಿಸಿತ್ತು. ಅವ್ವಾ! ನಿನಗೆ ಯಾರೂ ದೋಷವನ್ನು ಕೊಡುವದಿಲ್ಲ. ಇದ್ದ ಸಂಗತಿಯೆಂದರೆ ಇಷ್ಟು: ನೀನು ಮೊದಲನೆಯ ಗವಿಯ ಹತ್ತಿರ ಉಳಿದುಬಿಟ್ಟೆ; ಅದೀಲಾಳೊ

ಬ್ಬಳಿಗೇ ಅವನೊಡನೆ ಹೋಗಲಿಕ್ಕೆ ಅನುವು ಮಾಡಿಕೊಟ್ಟೆ; ನೀನೂ ನಟ್ಟ ಗಿದ್ದು ಅವಳೊಡನೆ ನೀನೂ ಹೋಗಿದ್ದರೆ ಈ ಅನರ್ಥವೇ ಸಂಭವಿಸುತ್ತಿದ್ದಿಲ್ಲ; ಅದು ನಿನ್ನ ತಪ್ಪಲ್ಲ; ಅವನೇ ಹಾಗೆ ಹಂಚಿಕೆ ಹಾಕಿದ್ದನು, ನನಗೆ ಗೊತ್ತಿದೆ. ಆದರೂ ಫೀಲ್ಡಿಂಗ್ ಅಂಟೋನಿಯವರಂತೆ ನೀನೂ ಅವನ ಬಲೆಯಲ್ಲಿ ಬಿದ್ದಿ; ಹೀಗೆ ಸ್ಪಷ್ಟ ಮಾತಾಡಿದ್ದಕ್ಕೆ ಕ್ಷಮಿಸು. ಕೋರ್ಟುಗಳಿಂದ ಕೂಡಲೆ ನೀನೇನು ಇಷ್ಟು ದೂರ ಸಿಡಿದು ನಿಂತು ಮಾತನಾಡುವ ಕಾರಣವಿಲ್ಲ. ನೀನು ಅಶಕ್ತಳಿದ್ದಿದ್ದರೆ ಆ ಮಾತೇ ಬೇರೆಯಾಗುತ್ತಿತ್ತು. ನಿನಗೀಗ ಸರಿಯಾಗಿದೆ ಎಂದು ನೀನೇ ಹೇಳುತ್ತಿ; ಮತ್ತೆ ಹಾಗೆ ಕಾಣುತ್ತಿ ಅಂದಮೇಲೆ ನೀನು ಮಾಡಬೇಕಾದ ಕೆಲಸವನ್ನು ಮಾಡಿಯೆ ಮಾಡುವಿಯೆಂದು ನಾನು ನಿಜ ವಾಗಿಯೂ ತಿಳಿದಿದ್ದೆನು.'

'ಅವಳಿಗೆ ಸರಿಯಾಗಿರಲಿ, ಇರದಿರಲಿ, ನೀನು ಅವಳಿಗೆ ತೊಂದರೆ ಕೊಡುವದು ನನ್ನ ಮನಸ್ಸಿಗಂತೂ ಬರುವದಿಲ್ಲ.' ಎಂದು ಅಡೀಲಾ ಮಂಚದ ಮೇಲಿಂದ ಎದ್ದು ಬಂದು ಅವನ ಕೈಯನ್ನು ಹಿಡಿದಳು; ಉಸುರ್ಗರೆದು ಅದನ್ನು ಕೆಳಗೆ ಬಿಟ್ಟು ಮತ್ತೆ ಕುಳಿತಳು.

'ನಾನು ಲಗ್ನಕ್ಕೆ ಬರುವೆನು; ಆದರೆ ನಿಮ್ಮ ಖಟ್ಲೆಗೆ ಬರುವದಿಲ್ಲ.' ಎಂದು ತನ್ನ ಮೊಣಕಾಲುಗಳನ್ನು ಟಪಟಪ ಬಾರಿಸುತ್ತ ಅವರಿಗೆ ಹೇಳಿದಳು. 'ಆಮೇಲೆ ನಾನು ಇಂಗ್ಲೆಂಡಕ್ಕೆ ಹೋಗುವೆನು.'

'ಮೇ ತಿಂಗಳಲ್ಲಿ ಇಂಗ್ಲೆಂಡಿಗೆ ಹೋಗುವದಿಲ್ಲೆಂದು ನೀನೇ ಒಪ್ಪಿ ರುವಿ.'

'ನನ್ನ ಮನಸ್ಸೀಗ ಬದಲಾಗಿದೆ.'

'ಒಳ್ಳೇದು, ಈ ಅನಿರೀಕ್ಷಿತ ವಾದವಿವಾದವನ್ನು ಇಲ್ಲಿಗೇ ನಿಲ್ಲಿ ಸೋಣ. ಯಾವದರಲ್ಲಿಯೂ ನಿನ್ನನ್ನು ಸೇರಿಸಬಾರದೆಂದು ನಿನ್ನ ಅಭಿಪ್ರಾಯ ವಷ್ಟೇ? ಆಗಲಿ.' ಎಂದು ಆ ತರುಣನು ಅತ್ತಿತ್ತ ತಿರುಗಾಡುತ್ತ ಹೇಳಿದನು.

'ಈ—ನನ್ನ ಸಿಥಿಲವಾದ ದೇಹವು—ಇದು ಗಟ್ಟಿಮುಟ್ಟೆ ಯಾಕಿರ ಬಾರದು?—ನಾನು ಇಲ್ಲಿಂದ ಹೊರಟು ಯಾಕೆ ಹೋಗಬಾರದು?—ನಾನು ಮಾಡುವ ಕೆಲಸಗಳನ್ನು ಮುಗಿಸಿ ನಡೆಯಬಾರದೇಕೆ?—ನಡೆದರೆ ಕಾಲು ಊದಿಕೊಂಡು ತಲೆಶೂಲಿ ಏಕೆ ಏಳುತ್ತದೆ?—ಯಾವಾಗಾದರೂ ಇದನ್ನು

ಮಾಡಬೇಕು, ಅದನ್ನು ಮಾಡಬೇಕು—ಇದನ್ನು ನಿನ್ನ ಸಲುವಾಗಿ, ಅದನ್ನು ಅವಳ ಸಲುವಾಗಿ—ಪ್ರತಿಯೊಂದೂ ಸಹಾನುಭೂತಿಯ ಗೊಂದಲ—ಒಬ್ಬರೊಬ್ಬರ ಭಾರ ಒಬ್ಬರೊಬ್ಬರು ಹೊರುವದು—ನನ್ನ ಸಲುವಾಗಿ ಇದನ್ನಷ್ಟು ಯಾಕೆ ಮಾಡಬಾರದು?—ಮಾಡಿ ನನ್ನನ್ನೇಕೆ ತಣ್ಣಗೆ ಬಿಡಬಾರದು?—ಏನು ಮಾಡಬೇಕಾದರೂ ಯಾಕೆ ಮಾಡಬೇಕು?—ಈ ಮದುವೆಯಾದರೂ ಏತಕ್ಕೆ?........ ಮದುವೆಯಿಂದ ಒಳಿತೇನಾದರೂ ಆಗುತ್ತಿದ್ದರೆ, ಸಾವಿರಾರು ವರ್ಷಗಳ ಹಿಂದೆಯೇ ಮಾನವ ಜನಾಂಗವು ಒಂದಾಗುತ್ತಿತ್ತು. ಇದು ನೋಡಿರಿ, ಈ ಪ್ರೇಮದ ಹೊಲಸು,—ಚರ್ಚಿನಲ್ಲಿ ಪ್ರೇಮ, ಗವಿಯಲ್ಲಿ ಪ್ರೇಮ—ಏನಾದರೂ ಅಂತರವಿದೆಯೇ?—ಇಂಥ ಕ್ಷುದ್ರ ಕೆಲಸಗಳ ಸಲುವಾಗಿ ನನಗೆ ಅಡ್ಡಿ ಮಾಡುವದು!....'

'ನಿನಗೆ ಬೇಕಾದುದಾದರೂ ಏನು? ನೀನಂದದ್ದು ಒಂದೂ ಅರ್ಥವಾಗಲಿಲ್ಲ. ಸರಳ ಎರಡು ಮಾತಿನಲ್ಲಿ ಹೇಳಲಿಕ್ಕೆ ಬರುತ್ತಿದ್ದರೆ ಹೇಳು.' ಎಂದು ರೋನಿ ರೊಚ್ಚಿಗೆದ್ದು ಕೇಳಿದನು.

'ನನಗೆ 'ಪೇಶೆನ್ಸ್' ಆಟವಾಡಲು ಇಸ್ಪೇಟು ಬೇಕು.'

'ಆಗಲಿ ಕೊಡುತ್ತೇನೆ.' ಎಂದು ಅಳುತ್ತಿರುವ ಅಡೀಲಾಳ ಕಡೆಗೆ ತಿರುಗಿ 'ಈ ತರಹದ ಮನೆಯು ಮನೆಯೇ ಅಲ್ಲ—! ಅವಳು ಇದನ್ನೆಲ್ಲ ಎತ್ತಿ ಆಡುವಳೆಂದು ನನ್ನ ಕಲ್ಪನೆಯಿದ್ದಿಲ್ಲ!' ಎಂದನು.

ಅಡೀಲಾ ಅಳುವದನ್ನು ನಿಲ್ಲಿಸಿದಳು. ಅವಳ ಮುಖದ ಮೇಲೆ ಅರ್ಧ ಸಮಾಧಾನ, ಅರ್ಧ ಭಯ ಕೂಡಿದ ಒಂದು ಸಂಮಿಶ್ರಭಾವವು ಮೂಡಿತ್ತು. ಅವಳು 'ಅಝೀಜ! ಅಝೀಜ!' ಎಂದು ಕನವರಿಸುವವರಂತೆ ಕೂಗಿದಳು.

ಆ ಹೆಸರನ್ನು ಅವರೆಂದೂ ಎತ್ತುತ್ತಿದ್ದಿಲ್ಲ. ಅದೊಂದು ಪಾಪದ ಪರ್ಯಾಯಶಬ್ದವಾಗಿತ್ತು. ಅವನನ್ನು ಕರೆಯತಕ್ಕ ಹೆಸರುಗಳೆಂದರೆ 'ಕೈದಿ'—'ಆ ಮನುಷ್ಯ'—'ಆರೋಪಿ'—ಎಂದೇ ಹೊರತು ಹೆಸರುಗೊಂಡಲ್ಲ. ಈಗ ಆ ಹೆಸರನ್ನೆ ಉಚ್ಚರಿಸಿದ ಕೂಡಲೆ ಅದು ದೇವರ ಗುಡಿಯಲ್ಲಿಯ ಗಂಟೆಯಂತೆ ಝಣ್ ಎಂದು ಎಲ್ಲಕಡೆಗೂ ತನ್ನ ನಾದವನ್ನು ತುಂಬಿತು.

'ಅಝೀಜ....ನಾನು ತಪ್ಪು ಮಾಡಿದೆನೇನು?'

'ನಿನಗೆ ಬಹಳ ದಣುವಾಗಿದೆ.' ಎಂದು ರೋನಿ ಧಾವಿಸಿ ಬಂದನು.

'ರೋನಿ! ಅವನು ನಿರಪರಾಧಿ. ನಾನೊಂದು ದೊಡ್ಡ ತಪ್ಪು ಮಾಡಿದೆನು.'

'ಅದಿರಲಿ, ಕೆಳಗೆ ಕುಳಿತುಕೋ.' ಎಂದು ಅವಳ ಮಾತಿನ ಕಡೆಗೆ ಲಕ್ಷ್ಯಕೊಡದೆ ಕೋಣೆಯ ಸುತ್ತಲೂ ನೋಡಿದನು. ಎರಡು ಗುಬ್ಬಿಗಳು ಒಂದನ್ನೊಂದು ರಭಸದಿಂದ ಬೆನ್ನಟ್ಟಿ ಹಾರಾಡುತ್ತಿದ್ದವು. ಅದೇಲಾ ಅವನು ಬಯಸಿದಂತೆ ಬಂದು ಅವನ ಕೈಯನ್ನು ಹಿಡಿದಳು. ಅವನದನ್ನು ಮುದ್ದಿಟ್ಟನು. ಆಮೇಲೆ ಅವಳು ಮುಗುಳುನಗೆ ನಕ್ಕು, ನೀರೊಳಗೆ ಮುಳುಗೆದ್ದವರಂತೆ ಬಾಯಿ ತೆರೆದು ಉಸಿರುಬಿಟ್ಟಳು.

'ನನ್ನ ಪ್ರತಿಧ್ವನಿ ಚೆನ್ನಾಗಿದೆ?'

'ಚೆನ್ನಾಗಿದೆ. ಇನ್ನು ಸ್ವಲ್ಪ ದಿವಸಗಳಲ್ಲಿ ನಿನಗೆ ಗುಣವಾಗುವದು. ಆದರೆ ನೀನು ಖಟ್ಲೆಯ ಸಲುವಾಗಿ ಧೈರ್ಯಮಾಡಬೇಕು ಮತ್ತೆ. ದಾಸನು ಒಳ್ಳೆಯ ಮನುಷ್ಯ. ನಾವೆಲ್ಲರೂ ನಿನ್ನ ಜೊತೆಗೆ ಇದ್ದೇ ಇರುವೆವು.'

'ಆದರೆ ರೋನಿ! ಖಟ್ಲೆಯೇ ನಡೆಯಬಾರದು!'

'ನೀನನ್ನುವದರ ಅರ್ಥವೇ ನನಗಾಗಲೊಲ್ಲದು.'

'ಡಾ. ಅಝೀಜನು ಅದನ್ನೆಂದೂ ಮಾಡಿಲ್ಲೆಂದ ಮೇಲೆ ಅವನನ್ನು ಬಿಟ್ಟುಬಿಡಬೇಕು.'

ರೋನಿಯ ಮೈಯಲ್ಲಿ ಮರಣಕಂಪವೇ ಹುಟ್ಟಿತು. ಅವನು ಗಡಿಬಿಡಿಯಿಂದ 'ಅವನನ್ನು ಹೊರಗೇ ಬಿಟ್ಟಿದ್ದೆವು; ಆದರೆ ಮೊನ್ನೆ ಮೊಹರಮ್ಮಿನಲ್ಲಿ ದಂಗೆಯಾದ ಕೂಡಲೆ ಮತ್ತೆ ಒಳಗೆ ಹಾಕಿದೆವು.' ಎಂದು ಅವಳ ಲಕ್ಷ್ಯವನ್ನು ಎರಡನೆಯ ಕಡೆಗೆ ಎಳೆಯುವದಕ್ಕಾಗಿ ಅವನೊಂದು ಸ್ವಾರಸ್ಯವಾದ ಕತೆಯನ್ನೇ ಹೇಳಹತ್ತಿದನು. 'ನೂರುದ್ದೀನನು ನವಾಬಬಹದ್ದೂರರ ಕಾರನ್ನು ಕದ್ದು ತಂದು ಅಝೀಜನನ್ನು ಅದರಲ್ಲಿ ಕುಳ್ಳಿರಿಸಿಕೊಂಡು ಕತ್ತಲೆಯಲ್ಲಿ ಹೋಗುವಾಗ ಅದನ್ನು ಕಂದಕಕ್ಕೆ ಹಾಕಿದನು; ಇಬ್ಬರೂ ಹೊರಗೆ ಸಿಡಿದು ಬಿದ್ದರು; ನೂರುದ್ದೀನನ ಮುಖವೇ ಹರಿದುಹೋಯಿತು; ಅವರು ನರಳುವ ದನಿಯು 'ಅರೇ ಹುಸೇನಿ' ಎಂಬ ಅವರ ಧರ್ಮಬಾಂಧವರ ಅಳುವ ದನಿಯಲ್ಲಿ ಅಡಗಿಹೋಯಿತು; ಪೋಲಿಸರು ಅವರನ್ನು ಕಂಡು ಹಿಡಿದು ಎತ್ತಿ ತರುವ ವರೆಗೆ, ಎಷ್ಟೋ ಹೊತ್ತು ಅವರು ಅಲ್ಲಿಯೆ ಬಿದ್ದಿರ

ಬೇಕಾಯಿತು. ಸೂರುದ್ದೀನನನ್ನು 'ಎಂಟೋ' ಆಸ್ಪತ್ರೆಗೆ ಹಾಕಿದ್ದಾರೆ; ಅಝೀಜನನ್ನು ಮತ್ತೆ ಜೇಲಿಗೆ ಕಳಿಸಿದ್ದಾರೆ; ಅಲ್ಲದೆ ಅವನ ಮೇಲೆ ಸಾರ್ವಜನಿಕ ಶಾಂತತಾಭಂಗದ ಮತ್ತೊಂದು ಆರೋಪವನ್ನೂ ಹೊರಿಸಿದ್ದಾರೆ—ಬಂದೆ, ಒಂದು ಅರ್ಧ ನಿಮಿಷ.' ಎಂದು ಅವನು ಆ ಕಥೆಯನ್ನು ಅಷ್ಟಕ್ಕೇ ಮುಗಿಸಿ ಟೆಲಿಫೋನಿನ ಹತ್ತರ ಹೋಗಿ 'ಅವಳಿಗೆ ಪ್ರಯಾಣದಿಂದ ಆಯಾಸವಾಗಿದೆ; ನೀವು ಆದಷ್ಟು ಬೇಗ ಅನುಕೂಲ ಮಾಡಿಕೊಂಡು ಇತ್ತ ಬರಬೇಕು.' ಎಂದು ಕ್ಯಾಲೆಂಡರನಿಗೆ ಹೇಳಿದನು.

ಇಷ್ಟು ಹೇಳಿ ಅವನು ಟೆಲಿಫೋನಿನಿಂದ ತಿರುಗಿ ಬಂದಾಗ ಮತ್ತೆ ಅವಳ ಮಿದುಳು ಕೆಟ್ಟಿತ್ತು. ಆದರೆ ಅದಕ್ಕೆ ಈಗ ಬೇರೆ ರೂಪವು ಬಂದಿತ್ತು. ಅವಳು ಅವನನ್ನು ಅಪ್ಪಿಕೊಂಡು ಬಿಕ್ಕಿ ಬಿಕ್ಕಿ ಅಳುತ್ತ 'ನಾನೇನು ಮಾಡಬೇಕು ಹೇಳು? ಅಝೀಜನು ಒಳ್ಳೆಯವನಿದ್ದಾನೆ; ಇದೀಗ ನಿಮ್ಮ ತಾಯಿಯು ಹೇಳಿದ್ದನ್ನು ನೀನು ಕೇಳಿದೆಯಲ್ಲ?'

'ಏನದು ಕೇಳಿದ್ದು?'

'ಅವನು ಒಳ್ಳೆಯ ಮನುಷ್ಯನೆಂದು; ಅವನ ಮೇಲೆ ಆರೋಪ ಹೊರಿಸಿದ್ದು ದೊಡ್ಡ ತಪ್ಪಾಯಿತೆಂದು.'

'ಅವಳೆಂದೂ ಹಾಗೆ ಹೇಳಲಿಲ್ಲ!'

'ಹೇಳಲಿಲ್ಲವೇ?'

'ಅವಳೆಂದೂ ಆ ಹೆಸರನ್ನು ಕೂಡ ತೆಗೆದುಕೊಳ್ಳಲಿಲ್ಲ.'

'ಆದರೆ ರೋನಿ! ನಾನೇ ನನ್ನ ಕಿವಿಯಿಂದ ಕೇಳಿದ್ದೇನೆ.'

'ಇದು ನಿನ್ನ ಶುದ್ಧ ಭ್ರಮೆ; ಹೀಗೆ ನೀನು ತಿಳಿದುಕೊಂಡಿದ್ದರೆ ನಿನ್ನ ತಲೆ ಸರಿಯಾಗಿಲ್ಲವೆಂದೇ ಹೇಳಬೇಕು!'

'ಹೌದು, ಹೌದು, ನನ್ನ ತಲೆ ಸರಿಯಾಗಿರಲಿಕ್ಕಿಲ್ಲ—ಇದೇನಾಯಿತು ನನ್ನ ಗತಿ!'

'ನಾನು ಅವಳು ಹೇಳುವದನ್ನೆಲ್ಲ ಕೇಳುತ್ತಿದ್ದೆನು; ಅವಳೆಲ್ಲ ಅಸಂಬದ್ಧವಾಗಿಯೆ ಮಾತನಾಡಹತ್ತಿದ್ದಳು.'

'ಅವಳ ದನಿಯು ಬೀಳಹತ್ತಿದಾಗ, ಕೊನೆಗೆ—ಪ್ರೇಮದ ವಿಷಯ

ನಡೆದಾಗ--'ಪೆ ೀವು'. .ಆಮೇಲೆ ನನಗೆ ತಿಳಿಯಲಿಲ್ಲ-ಆಗ ಅವಳು 'ಅಝೀ ಜಸು ಅದನ್ನು ಎಂದೂ ಮಾಡಲಿಲ್ಲ.' ಎಂದಳು.'

'ಈ ಮಾತನ್ನೇ?'

'ಇವೇ ಶಬ್ದಗಳಿರಲಿಕ್ಕಿಲ್ಲ; ಅಭಿಪ್ರಾಯ ಮಾತ್ರ ಇದೇ.'

'ಹೀಗೆಂದೂ ಅವಳು ಹೇಳಿಲ್ಲ. ಇದು ಪೂರ್ಣ ಭ್ರಮೆ. ಯಾರೂ ಅವನ ಹೆಸರನ್ನೇ ಎತ್ತಿಲ್ಲ. ಇಲ್ಲಿ ನೋಡು, ನೀನು ಅವಳ ಮಾತನ್ನೂ ಫೀಲ್ಡಿಂಗನ ಮಾತನ್ನೂ ಕೂಡಿಸಿ ಏನೋ ಗೊಂದಲ ಮಾಡಿಕೊಂಡಿರುವಿ.'

'ಹಾಂ! ಹೌದು ನೋಡು, ಹೌದು. ನಾನು ಅವನ ಹೆಸರನ್ನು ಎಲ್ಲಿಯೋ ಕೇಳಿದಾತಿತ್ತು. ಇದನ್ನು ಸ್ಪಷ್ಟಮಾಡಿ ನನ್ನ ಮೇಲೆ ಬಹಳ ಉಪಕಾರ ಮಾಡಿದಿ. ಈ ತರಹದ ತಪ್ಪಿನಿಂದ ನನಗೆ ಬಹಳ ತೊಂದರೆಯಾಗುತ್ತದೆ. ಇದರಿಂದಲೆ ನನ್ನ ಮಿದುಳು ಅಶಕ್ತವಾಗಿದೆಯೆಂದು ಸಿದ್ಧವಾಗುತ್ತಿದೆ.'

'ಹಾಗಾದರೆ ಇನ್ನುಮೇಲೆ ನೀನು, ಅವನು ನಿರಪರಾಧಿಯಿದ್ದಾನೆಂದು ಹೇಳುತ್ತ ಹೋಗುವದಿಲ್ಲವಷ್ಟೇ? ಯಾಕಂದರೆ ನನ್ನ ಚಾಕರರೆಲ್ಲರೂ ಗುಪ್ತಚಾರರಿದ್ದಾರೆ. ಅವರೆಲ್ಲರೂ ನಮ್ಮನ್ನು ದ್ವೇಷಿಸುತ್ತಾರೆ. ಒಮ್ಮೆ ತೀರ್ಪು ದೊರೆತ ಮೇಲೆ ಅದೆಲ್ಲವೂ ಸರಿಹೋಗುವದು; ಯಾಕಂದರೆ ಕೋರ್ಟಿನಿಂದ ಸಿದ್ಧವಾಯಿತೆಂದರೆ ಸಾಕು, ಅವರು ಒಪ್ಪಿಕೊಂಡೇ ಬಿಡುವರು. ಆದರೆ ಈಗ ಅವರು, ನಾವು ತಪ್ಪು ನಡೆಯುವದನ್ನು ಹಿಡಿಯಲಿಕ್ಕೆಂದೇ ದುಡ್ಡನ್ನು ನೀರಿನ ಹಾಗೆ ಖರ್ಚುಮಾಡುತ್ತಿದ್ದಾರೆ. ನಿನ್ನ ಇಂತಹ ಒಂದು ಮಾತು ಅವರಿಗೆ ಸಿಕ್ಕರೆ ಸಾಕು, ಅದರ ಮೇಲೆ ಬೇಕಾದ್ದನ್ನು ಹುಟ್ಟಿಸುವರು;—ಈ ಮೇಲಧಿಕಾರಿಗಳೆಲ್ಲ ಕೂಡಿ ಬೇಕೆಂತಲೆ ಇದನ್ನೊಂದು ಖಟ್ಲೆ ತಯಾರು ಮಾಡಿ ಹಾಕಿದ್ದಾರೆ ಎನ್ನಲಿಕ್ಕೆ ಅವರಿಗಿದೊಂದು ಮಾರ್ಗವಾಗುತ್ತದೆ. ಈಗಾದರೂ ನಾನನ್ನುವದು ನಿನಗೆ ಅರ್ಥವಾಯಿತಲ್ಲವೇ?

ಮಿಸೆಸ್ ಮೂರಳು ಮೊದಲಿನಂತೆಯೆ ರಂಗಿಗೆದ್ದು ಇಸ್ಪೇಟಿನ ಮೇಜಿನ ಹತ್ತಿರ ಬಂದು ಕುಳಿತಳು. ಈ ತಪ್ಪುತಿಳವಳಿಕೆಯನ್ನು ದೂರ ಮಾಡಬೇಕೆಂದು ರೋನಿಯು ಅವಳಿಗೆ 'ನೀನು ಆ ಕೈದಿಯ ಹೆಸರನ್ನು ಎತ್ತಿದಿಯೇನು?' ಎಂದು ನೇರವಾಗಿ ಕೇಳಿಬಿಟ್ಟನು. ಮೊದಲು ಅವಳಿಗೆ ಆ ಪ್ರಶ್ನೆಯ ಅರ್ಥವೇ ತಿಳಿಯಲಿಲ್ಲ. ಆದರ ಕಾರಣವನ್ನೂ ರೋನಿಯು

ಅವಳಿಗೆ ಹೇಳಬೇಕಾಯಿತು. ಅಲ್ಲಿಂದ ಅವಳು 'ನಾನೇನು ಅವನ ಹೆಸರನ್ನು ಹೇಳಿಲ್ಲ.' ಎಂದು ಉತ್ತರಕೊಟ್ಟು ತನ್ನ 'ಪೇಶನ್ಸ' ಆಟವನ್ನು ಸುರುವು ಮಾಡಿದಳು.

'ಅಝೀಜನು ನಿರಪರಾಧಿಯಿದ್ದಾನೆಂದು ನೀನು ಹೇಳಿದೆಯೆಂದು ನನ್ನ ತಿಳಿವಳಿಕೆಯಾಗಿತ್ತು. ಆದರೆ ಅದು ಫೀಲ್ಡಿಂಗನ ಪತ್ರದಲ್ಲಿದೆಯಂತೆ.'

'ನಿಜವಾಗಿಯೂ ಅವನು ನಿರಪರಾಧಿಯಿದ್ದಾನೆ.' ಎಂದು ಲಕ್ಷ್ಯವಿಲ್ಲದೆ ಉತ್ತರಕೊಟ್ಟಳು. ಅವಳು ಈ ವಿಷಯದ ಮೇಲೆ ಹೀಗೆ ತನ್ನ ಅಭಿಪ್ರಾಯವನ್ನು ಕೊಟ್ಟದ್ದು ಇದೇ ಮೊದಲ ಸಲ.

'ಇದು ನೋಡು ರೋನಿ! ನಾನು ಹೇಳಿದ್ದೇ ಸರಿ'

'ನೀನು ಹೇಳುವದು ಸರಿಯಲ್ಲ. ಅವಳೆಂದೂ ಹಾಗೆ ಹೇಳಿಲ್ಲ.'

'ಆದರೆ ಅವಳಿಗೆ ಹಾಗೆನಿಸುತ್ತಿದೆ.'

'ಅವಳಿಗನಿಸಿದ್ದನ್ನು ಯಾರು ಕೇಳುವರು?'

'ಕರಿ ಹತ್ತರ ಮೇಲೆ ಕೆಂಪು ಬಂತು......'ಎಂದು ಇಸ್ಪೇಟಿನ ಮೇಜಿನಿಂದ ಧ್ವನಿ ಬಂತು.

'ಅವಳಿಗೂ ಎನಿಸಿರಬಹುದು, ಫೀಲ್ಡಿಂಗನಿಗೂ ಎನಿಸಿರಬಹುದು; ಆದರೆ ಪ್ರಮಾಣ, ಎಂಬುದೊಂದು ಇದೆಯಲ್ಲವೇ?'

'ಅದೆಲ್ಲ ನನಗೆ ಗೊತ್ತಿದೆ. ಆದರೆ—'

'ನೀವು ನನ್ನ ಆಟಕ್ಕೆ ಮೇಲಿಂದ ಮೇಲೆ ಅಡ್ಡಿಯಾಗುತ್ತಿರುವಿರಲ್ಲ! ನಾನು ಮತ್ತೇನಾದರೂ ಹೇಳಬೇಕಾಗಿದೆಯೇನು?' ಎಂದು ಮಿಸೆಸ್ ಮೂರಳು ಮುಖ ಮೇಲಕ್ಕೆ ಮಾಡಿ ಕೇಳಿದಳು.

'ಹಾದೀಹಿಡಿದ ಮಾತಿದ್ದರೆ ಹೇಳಬಹುದು.'

'ಅಯ್ಯೋ! ಏನು ಬೇಜಾರ....ಇದೆಲ್ಲ ಕ್ಷಣಿಕ..ಪ್ರತಿಯೊಂದೂ ಇನ್ನೂ ನನ್ನ ಕರ್ತವ್ಯವೇ?....ನಿಮ್ಮ ಈ ಗೊಂದಲದೊಳಗಿಂದ ನಾನೆಂದು ಪಾರಾದೇನು?....ಅವನು ಗುಹೆಯಲ್ಲಿದ್ದನೋ....ನೀನು ಗುಹೆಯಲ್ಲಿ ಇದ್ದೆಯೋ....ಏನೋ ಎಂತೋ....ಇದೆಲ್ಲವನ್ನೂ ಮುಗಿಸಲಿಕ್ಕೆ ಪ್ರತಿಧ್ವನಿಯಂತೂ ಇದ್ದೇ ಇದೆ....'

ಅಡೀಲಾ ಅವಳ ಸಮೀಪಕ್ಕೆ ಬಂದು 'ನನಗಷ್ಟು ಚೆನ್ನಾಗಿ ಕೇಳಿಸ

ಲಿಲ್ಲ. ನೀನು ಅದನ್ನು ಕಳುಹಿಸು; ನೀನು ಒಳಿತನ್ನೇ ಮಾಡುವಿ; ನೀನೆಷ್ಟು ಒಳ್ಳೆಯವಳು!' ಎಂದಳು

'ನಾನು ಒಳ್ಳೆಯವಳಲ್ಲ, ಕೆಟ್ಟವಳು...ಈ ಮಕ್ಕಳು ಚಿಕ್ಕವರಿದ್ದಾಗ ನಾನಿವರಿಗೆ ಒಳ್ಳೆಯವಳಾಗಿದ್ದೆ....ಆ ತರುಣ ಮನುಷ್ಯನನ್ನು ಮೊದಲು ಮನೀದೆಯಲ್ಲಿ ಕಂಡೆ....ಒಳ್ಳೆಯ ಜನ ಅವರು ನಿಜವಾಗಿ ಭೂಮಿಯ ಮೇಲೆ ಇರುವದಿಲ್ಲ..ಕನಸಿನಲ್ಲಿರುತ್ತಾರೆ....ಅವನನ್ನು ಹಿಂಸೆಪಡಿಸಲಿಕ್ಕೆ ನಾನೆಂದೂ ನಿಮಗೆ ಸಹಾಯಮಾಡುವದಿಲ್ಲ; ಯಾಕಂದರೆ ಅವನು ಏನೂ ಅಪರಾಧವನ್ನು ಮಾಡಿಲ್ಲ..ಕೆಡಕು ಮಾಡುವ ದಾರಿಗಳು ಬೇಕಾದಷ್ಟಿವೆ.. ನಿಮ್ಮದಕ್ಕಿಂತ ನನ್ನವೇ ನನಗಿರಲಿ..' ಎಂದು ಒಮ್ಮೆಲೆ ಹರಿದುಕೊಂಡೇ ಬಿದ್ದಳು.

'ನಿನ್ನ ಹತ್ತಿರ ಕೈದಿಗೆ ಅನುಕೂಲವಾಗುವ ಪುರಾವೆಗಳೇನಾದರೂ ಇವೆಯೇ?' ಎಂದು ಅಧಿಕಾರವಾಣಿಯಲ್ಲಿ ರೋಸಿಯು ಕೇಳಿದನು. 'ಹಾಗಿದ್ದರೆ ನೀನು ಕೋರ್ಟಿನಲ್ಲಿ ಹೋಗಿ ನಮ್ಮ ಪಕ್ಷವನ್ನು ಬಿಟ್ಟು ಅವನ ಪಕ್ಷದಿಂದ ಸಾಕ್ಷಿ ಹೇಳುವದೇ ನಿನ್ನ ಕರ್ತವ್ಯ; ಯಾರೂ ನಿನಗೆ ಅಡ್ಡೀಮಾಡುವದಿಲ್ಲ.'

'ಆಯಿತು, ನಮ್ಮ ಶೀಲ, ನಮ್ಮ ಶೀಲ ಎಂದು ಹೊಗಳಿಕೊಳ್ಳುತ್ತಿದ್ದಿರಲ್ಲ, ಅದೀಗ ಹೊರಬಿದ್ದಂತಾಯಿತು! ನಿಮ್ಮ ಜನರ ಶೀಲ ಇಷ್ಟೇ ಕಾಣುತ್ತದೆ! ನಿಮ್ಮವರೂ ಅವರವರೂ ಅವನ ವಿಷಯದಲ್ಲಿ ಒಳ್ಳೇ ಅಭಿಪ್ರಾಯ ಪಡುತ್ತಾರೆ. ಮತ್ತು ಅಂಥ ಕೆಲಸವನ್ನು ಅವನೆಂದೂ ಮಾಡಲಿಕ್ಕಿಲ್ಲವೆಂದು ನನಗೆನಿಸುತ್ತದೆ.'

'ಹೀಗನ್ನುವದರಲ್ಲಿ ಏನೂ ತಥ್ಯವಿಲ್ಲ. ಇದು ನಿರ್ಬಲ ಪುರಾವೆ!'

'ಹೌದು, ತೀರ ನಿರ್ಬಲ!'

'ಅಲ್ಲದೆ ಅಡೀಲಾಳಿಗೆ ದ್ರೋಹ ಬಗೆದಂತೆ.'

'ನಾನು ಹೇಳಿದ್ದೆಲ್ಲ ಸುಳ್ಳಾದರೆ....ಅಯ್ಯೋ! ಎಂಥ ಭಯಂಕರ ಅದು!..ಅಲ್ಲಿಂದ ನಾನು ಪ್ರಾಣ ನೀಗುವದೇ ಒಳಿತು.' ಎಂದು ಅಡೀಲಾ ಅರಚಿದಳು.

'ಅಡೀಲಾ, ಆಗಲೆ ನಾನು ನಿನಗೆ ಏನೆಂದು ಎಚ್ಚರ ಕೊಟ್ಟಿದ್ದೆ ನೆನಪಿ

ದೆಯೋ ? ನೀನೆನ್ನುವದು ನಿಜವಿದೆಯೆಂದು ನಿನಗೂ ಗೊತ್ತಿದೆ, 'ಇಡಿ ಸಿವ್ಹಿಲ್ ಸ್ಟೇಶನ್ನಿಗೂ ಗೊತ್ತಿದೆ.' ಎಂದು ಅವಳ ಮೇಲೂ ಹರಿಹಾಯ್ದನು.

'ಹೌದು....ಅವನು....ಅಯ್ಯೋ!....ಇದು ಬಹಳ ಭಯಂಕರವಾದದ್ದು....ಅವನೇ ನನ್ನನ್ನು ಹಿಂಬಾಲಿಸಿದ್ದನೆಂಬುದೇನೊ ನನಗೆ ಖಾತ್ರಿಯಿದೆ....ಆದರೆ ಹೇಗಾದರೂ ಮಾಡಿ ಈ ಖಟ್ಲೆಯನ್ನೇ ತಿರುಗಿ ತೆಗೆದುಕೊಳ್ಳಲಿಕ್ಕೆ ಶಕ್ಯವಿಲ್ಲವೇ ?..ನನಗೀಗ ಅಲ್ಲಿ ಹೋಗಿ ನಿಂತು ಸಾಕ್ಷಿ ಹೇಳುವನೆಂದರೆ ಹೆಚ್ಚಿಚ್ಚು ಅಂಜಿಕೆ ಬರಹತ್ತಿದೆ....ನೀವೆಲ್ಲರೂ ಏನೊ ಇಲ್ಲಿ ಹೆಂಗಸರಿಗೆ ಒಳ್ಳೆಯವರಾಗಿದ್ದೀರಿ!....ಅಲ್ಲದೆ ನಿಮಗಿಲ್ಲಿ ಇಂಗ್ಲೆಂಡದಲ್ಲಿಯಕಿಂತ ಹೆಚ್ಚು ಅಧಿಕಾರವೂ ಇದೆ....ಬೇಕಾದರೆ ಮಿಸ್ ಡೆರೆಕ್ಕಳ ಮೋಟರ ಕಾರನ್ನೇ ನೋಡಿರಿ..ಅದೇನು ಇದಕ್ಕೆ ಸಂಬಾಧಪಟ್ಟದ್ದಲ್ಲ.. ನಾನು ಆ ಮಾತನ್ನು ಎತ್ತಬಾರದಾಗಿತ್ತು......ದಯಮಾಡಿ ಕ್ಷಮಿಸಬೇಕು....'

'ಏನೂ ಅಡ್ಡಿಯಿಲ್ಲ; ಆಗಲಿ, ನೀನೇ ಎನ್ನುವಂತೆ ನಾನು ನಿನ್ನನ್ನು ಕ್ಷಮಿಸಿದ್ದೇನೆ. ಆದರೆ ಈ ಖಟ್ಲೆಯು ಈಗ ಮ್ಯಾಜಿಸ್ಟ್ರೇಟರೆದುರಿಗೆ ವಿಚಾರಣೆಗೆ ಬರುವದು, ಬರಲಿಕ್ಕೇಬೇಕು; ಯಂತ್ರವು ಒಮ್ಮೆ ಸುರುವಾಗಿ ಬಿಟ್ಟಿದೆ '

'ಅವಳೇ ಆ ಯಂತ್ರವನ್ನು ಸುರುವು ಮಾಡಿದ್ದಾಳೆ. ಅದೀಗ ಆ ಕೆಲಸವನ್ನು ಕೊನೆಗಾಣಿಸಲೇಬೇಕು.'

ಅಡೀಲಾಳಿಗೆ ಈ ನಿರ್ದಯದ ಮಾತಿನಿಂದ ಕಣ್ಣಿಲ್ಲಿ ನೀರು ತುಂಬಿ ಬಂದವು. ರೋನಿಯು ಪ್ರಯಾಣಮಾಡಲಿರುವ ಉಗಿಹಡಗಗಳ ಪಟ್ಟಿಯೊಂದನ್ನು ಕೈಯಲ್ಲಿ ತೆಗೆದುಕೊಂಡು ನೋಡಹತ್ತಿದನು. ಆಗ ಅವನಿಗೆ ಒಂದು ವಿಚಾರ ಹೊಳೆಯಿತು: 'ನಾನು ನನ್ನ ತಾಯಿಯನ್ನು, ಅವಳಂದಂತೆಯೇ ಬೇಗನೆ ಹಿಂದುಸ್ಥಾನ ಬಿಡಿಸಿ ಕಳಿಸಬಾರದೇಕೆ ? ಅವಳಿಂದ ನನಗೂ ಹಿತವಿಲ್ಲ, ಅನ್ಯರಿಗೂ ಹಿತವಿಲ್ಲ. ಹೌದು, ಹಾಗೇ ಮಾಡಬೇಕು.' ಎಂದು ನಿಶ್ಚಯಿಸಿಯೆಕೊಂಡನು.

—

## ಪ್ರಕರಣ ೨೩

ಚಂದ್ರಪುರದ ಇಂಗ್ಲಿಷ ಸ್ತ್ರೀಯರೆಲ್ಲ ಕೂಡಿ ಮಾಡಿದ ಮನವಿಯಿಂದ ಲೆಫ್ಟ್‌ನೆಂಟ್ ಗವ್ಹರ್ನರರ ಹೆಂಡತಿಯಾದ ಲೇಡಿ ಮೆಲೆನ್‌ಬಿಯವರಿಗೆ ಕರುಣೆ ಹುಟ್ಟಿತ್ತು. ಆದರೆ ಅದರಲ್ಲಿ ಅವಳಿಗೇನೂ ಮಾಡಲಿಕ್ಕೆ ಬರುವಂತಿದ್ದಿಲ್ಲ; ಅಲ್ಲದೆ ಅವಳೀಗ ಇಂಗ್ಲಂಡಕ್ಕೆ ಹೊರಟುನಿಂತಿದ್ದಳು. ಆದರೂ ತನ್ನ ಕೈಯಿಂದ ಬೇರೆ ಏನಾದರೂ ಸಹಾಯ ಮಾಡಲಿಕ್ಕೆ ಬರುವಂತಿದ್ದರೆ ತಿಳಿಸ ಬೇಕೆಂದು ಔಪಚಾರಿಕವಾಗಿ ಮಾರುತ್ತರ ಬರೆದಳು. ಅದಕ್ಕೆ ಮಿಸೆಸ್ ಟರ್ಟನ್ನಳು 'ಹೆಸ್ಲೊಪನ ತಾಯಿಯು ಇಂಗ್ಲೆಂಡಕ್ಕೆ ತಿರುಗಿ ಹೋಗ ಬೇಕೆನ್ನುತ್ತಾಳೆ. ಈಗ ಬಹಳ ತಡವಾಗಿಬಿಟ್ಟಿದ್ದರಿಂದ ಹಡಗದಲ್ಲಿ ಸ್ಥಳ ದೊರೆಯುವದು ಬಹಳ ಕಠಿಣವಾಗಿದೆ. ಆಗಲೆ ಹಡಗವು ತುಂಬಿಹೋಗಿದೆ ಎಂದು ಅವರಿಂದ ಉತ್ತರ ಬಂದಿದೆ. ಅವಳಿಗೂ ಅದಷ್ಟು ಬೇಗ ಹೋಗ ಬೇಕಾಗಿದೆ. ಇದರಲ್ಲಿ ನೀವೇನಾದರೂ ನಿಮ್ಮ ಮುರವತ್ತನ್ನು ಖರ್ಚು ಮಾಡಿ ಸ್ಥಳ ದೊರಕಿಸಿಕೊಡಬಹುದೇ?' ಎಂದು ಉತ್ತರ ಬರೆದಳು. ಪಿ. ಎಂಡ. ಓ. ಕಂಪನಿಯ ಹಡಗಗಳನ್ನೇ ಹಿಗ್ಗಿಸಲಿಕ್ಕೆ ಲೇಡಿ ಮೆಲೆನ್‌ಬಿಯವರಿ ಗೇನು ಶಕ್ಯವಿದ್ದಿಲ್ಲ. ಅವಳು ತನ್ನ ಕೋಣೆಯಲ್ಲಿಯೆ ಸ್ಥಳವನ್ನು ಕೊಡುತ್ತೇನೆಂದು ತಂತಿ ಕೊಟ್ಟಳು. ' ಇದೊಂದು ದೈವಾನುಕೂಲವೇ ಆಯಿತು.

ಪಾಪ, ಈ ಅಡೀಲಾಳ ನಿಮಿತ್ತವಾಗಿ ರೋನಿಯ ಹೆಸರು ಗವ್ಹರ್ನ-ಮೆಂಟದಲ್ಲೆಲ್ಲ ಗೊತ್ತಾಗಿತ್ತು. ಈಗಂತೂ ಮಿಸೆಸ್ ಮೂರಳು ಮೆಲೆನ್‌ಬಿಯೊಡನೆ ಕೂಡಿಯೆ ಪ್ರವಾಸ ಮಾಡುವದರಿಂದ ಆ ಹೆಸರನ್ನು ಅವಳಿಗೂ ಒಯ್ದು ಮುಟ್ಟಿಸುವಳು. ರೋನಿ ಈಗ ತನ್ನ ತಾಯಿಯನ್ನು ಉದಾಸೀನ ಮಾಡುವಂತಿರಲಿಲ್ಲ; ಯಾಕಂದರೆ ಅವಳೀಗ ಒಬ್ಬ ದೊಡ್ಡ ಅಧಿಕಾರಿಯ ಹೆಂಡತಿಯ ಕೂಡ ಹೋಗತಕ್ಕವಳು ಬೇರೆ.

ಮಿಸೆಸ್ ಮೂರಳಿಗೆ ಎಲ್ಲವೂ ತನ್ನ ಇಷ್ಟದಂತೆಯೆ ಆಯಿತು. ಖಟ್ಲೆಯಿಂದ, ಮದುವೆಯಿಂದ, ಬೇಸಿಗೆಯ ತಾಪದಿಂದ ಅವಳು ಪಾರಾದಂತಾಯಿತು. ತನ್ನ ಮಗನ ಸೂಚನೆಯಂತೆಯೂ ಆಯಿತು, ತನ್ನ ಇಚ್ಛೆಯಂ

ತೆಯೂ ಆಯಿತು, ಅವಳು ಕೊನೆಗೊಮ್ಮೆ ಇಂಗ್ಲೆಂಡಕ್ಕೆ ಹೊರಟಳು. ಆದರೆ ಅದಕ್ಕಾಗಿ ಅಷ್ಟೊಂದು ಉತ್ಸಾಹವನ್ನೇನು ತೋರಿಸಲಿಲ್ಲ.

ಅವಳ ಮಗನಿಗೆ ಅವಳೊಡನೆ ಮುಂಬೈ ವರೆಗೆ ಹೋಗಲಿಕ್ಕೆ ಸಾಧ್ಯ ವಿದ್ದಿಲ್ಲ. ಊರಲ್ಲಿಯ ಪರಿಸ್ಥಿತಿಯು ದಿನದಿನಕ್ಕೆ ಸೂಕ್ಷ್ಮವಾಗಹತ್ತಿದ್ದರಿಂದ ಎಲ್ಲ ಅಧಿಕಾರಿಗಳೂ ತಮ್ಮ ತಮ್ಮ ಸ್ಥಳಗಳಲ್ಲಿಯೇ ಇರಬೇಕಾಯಿತು. ಎಂಟೊ ನಿಯೂ ಅವಳೊಡನೆ ಹೋಗಲಿಕ್ಕೆ ಸಾಧ್ಯವಿದ್ದಿಲ್ಲ. ಯಾಕಂದರೆ ಆವನು ಸಾಕ್ಷಿಯನ್ನು ಹೇಳಲಿಕ್ಕೆ ತಿರುಗಿ ಬರದಿದ್ದರೆ ಎಲ್ಲವೂ ಕೆಟ್ಟುಹೋಗುತ್ತಿತ್ತು. ಹೀಗಾಗಿ ಅವಳು ಒಬ್ಬಂಟಿಗಳಾಗಿಯೇ ಹೊರಡಬೇಕಾಯಿತು. ಅದಕ್ಕೂ ಅವಳೇನು ಅಷ್ಟೊಂದು ಚಡಪಡಿಸಲಿಲ್ಲ. ಅವಳು ಚಂದ್ರಪುರವನ್ನು ಬಿಟ್ಟ ದಿನ ಹುಣ್ಣಿಮೆಯಿತ್ತು. ಪೂರ್ಣಚಂದ್ರನು ಗಂಗೆಯ ಮೇಲೆ ಈಸಾಡುತ್ತಿ ದ್ದನು. ಅವಳು ಆ ರಾತ್ರಿ ಮತ್ತು ಮರುದಿನ ಸಂಪೂರ್ಣವೆಲ್ಲ ಪ್ರವಾಸ ಮಾಡಿ ಅದರ ಮರುದಿನ ಮುಂಜಾನೆ ಮುಂಬೈಗೆ ಬಂದು ಮುಟ್ಟಿದಳು. ಅಲ್ಲಿ ಒಂದು ಕುದುರೆ-ಗಾಡಿಯನ್ನು ಮಾಡಿಕೊಂಡು ಬಂದರಕ್ಕೆ ಹೋದಳು. ಅಲ್ಲಿಂದ ಒಂದು ಡೋಣಿಯಲ್ಲಿ ಕುಳಿತು ಉಗಿಹಡಗ ನಿಂತಲ್ಲಿಗೆ ಹೋಗಿ ಮುಟ್ಟಿದಳು. ಸಮುದ್ರದ ದಂಟಿಗುಂಟ ಬೆಳೆದು ನಿಂತ ತೆಂಗಿನ ಮರಗಳು ತಮ್ಮ ತಲೆಯಲ್ಲಾಡಿಸಿ ಇವಳಿಗೆ ಬಿಳ್ಕೊಟ್ಟವು. 'ಹೀಗೆ ನೀನು ಹಿಂದುಸ್ತಾನ ವೆಂದರೆ ಪ್ರತಿಧ್ವನಿಯೆಂದು ತಿಳಿದಿದ್ದೆಯಾ? ಮಾರವಾರ ಗುಹೆಗಳೇ ಹಿಂದು-ಸ್ತಾನದಲ್ಲಿ ಶ್ರೇಷ್ಠವೆಂದು ಬಗೆದೆಯಾ? ನೋಡು! ಅವಕ್ಕೂ ನಮಗೂ ಏನು ಹೋಲಿಕೆ! ಹೋಗಿಬನ್ನಿ.' ಎಂದು ನಕ್ಕವು. ಆಮೇಲೆ ಉಗಿಹಡಗವು ಕುಲಾಬಾ ಬಂದರವನ್ನು ಸುತ್ತುಹಾಕಿ ಮುನ್ನಡೆಯಿತು. ಆಗ ಇಡಿ ಹಿಂದುಸ್ತಾನವೇ ಸುತ್ತಿ ಬಿತ್ತು; ಪಶ್ಚಿಮಘಟ್ಟದ ಶಿಖರಗಳು ಸಮುದ್ರದ ಮಂಜಿನಲ್ಲಿ ಮಾಯವಾದವು. 'ಆಯಿತು ನಾವಿನ್ನು ಕಾಯ್ದು ಹಂಚಿನ ಮೇಲಿಂದ ಪಾರಾದೆವು; ಆದರೆ ಉರಿಯುವ ಬೆಂಕಿಯಲ್ಲಿ ಬೀಳಬಾರದಷ್ಟೆ?' ಎಂದು ಮೆಲೆನ್‌ಬಿಯವರು ಮಾತಿಗಾರಂಭಿಸಿದರು.

## ಪ್ರಕರಣ ೨೪

‘ಹೊರಡಲಿಕ್ಕೆ ಸಿದ್ಧವಾಗಿದ್ದೀಯಾ?’ ಎಂದು ಮಿಸೆಸ್ ಟರ್ಟನ್ನಳು ಗದ್ದರಿಸಿದಳು.

‘ಆಯಿತು, ಇನ್ನರ್ಧ ನಿಮಿಷ.’ ಎಂದು ಮೆಲ್ಲನೆ ಉತ್ತರಕೊಟ್ಟಳು.

ಅರ್ಧನಿಮಿಷವಾದ ಮೇಲೆ ಮತ್ತೆ ‘ಮಿಸ್ ಕ್ವೆಸ್ಟೆಡ್ ಅಡೀಲಾ! ಹೀಗೇ ಹೌದಲ್ಲವ್ವಾ ನಿನ್ನ ಹೆಸರು? ಈಗ ಏಳೂವರೆ ಗಂಟೆಯಾಯಿತು. ನಿನ್ನ ಮನಸು ಸರಿಯಾದ ಕೂಡಲೆ ನಾವಿನ್ನು ಕೋರ್ಟಿಗೆ ಹೊರಡಬೇಕು?’

‘ಅವಳು ಪ್ರಾರ್ಥನೆಯನ್ನು ಮಾಡುತ್ತಿದ್ದಾಳೆ.’ ಎಂದು ಕಲೆಕ್ಟರರ ದನಿಯು ಬಂತು.

‘ಓ! ಕ್ಷಮಿಸಬೇಕು..ನಿಧಾನವಾಗಿ ಆಗಲಿ..ನಿಮ್ಮ ಛೋಟಾ ಹಾಜ್ರಿ ಸರಿಯಾಯಿತೇ?’

‘ನಾನೇನೂ ತೆಗೆದುಕೊಳ್ಳಲಿಲ್ಲ. ಸ್ವಲ್ಪ ಬ್ರ್ಯಾಂಡಿ ಸಿಕ್ಕಬಹುದೆ?..’

ಕೂಡಲೆ ಬ್ರ್ಯಾಂಡಿ ಬಂದಿತು. ಅದನ್ನು ನೋಡಿ ನಡುಗಿ ಕುಡಿಯು ಲಾರದೆ ‘ಹೊರಡಲಿಕ್ಕೆ ಸಿದ್ಧಳಿದ್ದೇನೆ.’ ಎಂದು ಹೇಳಿದಳು.

‘ಕುಡಿ, ಕುಡಿ; ಚೆನ್ನಾಗಿದೆ. ಇನ್ನೊಂದು ಪೆಗ್ಗು?’

‘ಅದರಿಂದೀಗ ನನಗೇನೂ ಸಹಾಯವಾಗಲಾರದು.’

‘ಮೇರಿ! ನೀನು ಕೋರ್ಟಿಗೂ ಬ್ರ್ಯಾಂಡಿ ಕಳಿಸಿದಿಯಲ್ಲವೇ?’

‘ಹೌದು; ಅದರ ಜೊತೆಗೆ ‘ಶಾಂಪೇ’ನೂ ಹೋಗಿದೆ.’

‘ನಿಮ್ಮ ಉಪಕಾರಸ್ಮರಿಸುವದನ್ನೆಲ್ಲ ಸಂಜೆಗೇ ಒಮ್ಮೆಲೆ ಮಾಡು ತ್ತೇನೆ. ಈಗ ನನ್ನ ಮನಸ್ಸು ಒಂದೇಸಮನೆ ಕುದಿಯುತ್ತಿದೆ. ನನ್ನ ಪ್ರತಿಧ್ವನಿಯು ಮತ್ತೆ ಬಂದುಬಿಟ್ಟಿದೆ!....’

‘ಆಸ್ಪರಿನು ಹೇಗೆ ಅದೆ?’

‘ನನಗೇನು ತಲೆಶೂಲೆಯಲ್ಲ, ಅದು ಪ್ರತಿಧ್ವನಿ! ಕಿವಿಯಲ್ಲಿ ತುಂಬಿರು ತ್ತದೆ.’

ಅವಳ ಕಿವಿಯೊಳಗಿನ ಗುಂಯ್ಯೆಂಬ ಸಪ್ಪಳವನ್ನು ದೂರಮಾಡಲಿಕ್ಕೆ ಸಾಧ್ಯವಾಗದೆ ಮೇಜರ ಕ್ಯಾಲೆಂಡರರು ಅದು ಕೇವಲ ಕಲ್ಪನೆಯೆಂದು

ಸಿದಾಸವಮಾಡಿ, ಅದಕ್ಕೆ ಉತ್ತೇಜನ ಕೊಡಬಾರದೆಂದು ಅವರಿಗೆ ಹೇಳಿದ್ದನು. ಆದುದರಿಂದ ಟರ್ಟನ್ನರು ಆ ವಿಷಯವನ್ನೇ ಬಡಲುಮಾಡಿದರು.

'ನಾನು ನಿಜವಾಗಿಯೂ 'ಕ್ರಾಸಿ'ನಲ್ಲಿ ಬಿದ್ದುಬಿಡುವೆನು.' ಎಂದು ಮತ್ತೆ ಮತ್ತೆ ಒಟಗುಟ್ಟಿದಳು.

ಕಲೆಕ್ಟರನು ಮಮತೆಯಿಂದ 'ಇಲ್ಲ, ನೀನು ಬೀಳುವದಿಲ್ಲ.' ಎಂದು ಧೈರ್ಯಕೊಟ್ಟನು.

'ಹೌದು, ನಿಜವಾಗಿಯೂ ಬೀಳುವದಿಲ್ಲ,—ಆವಳು ಗಟ್ಟಿಗಳಿದ್ದಾಳೆ.'

'ಆದರೆ ಮಿಸೆಸ್ ಟರ್ಟನ್....'

'ಏನು ಮಗು?'

'ನಾನಿದರಲ್ಲಿ ಬಿದ್ದರೆ ನನಗೇನೂ ಬಾಧೆಯಿಲ್ಲ; ಕೆಲವೊಂದು ಖಟ್ಲೆಗಳಲ್ಲಿ ಅದರ ಮಹತ್ವವಿರಬಹುದು; ಆದರೆ ಇದರಲ್ಲಿ ಇಲ್ಲ. ನಾನೇನೊ ಹೀಗೆ ತಿಳಿದುಕೊಂಡಿದ್ದೇನೆ: ನಾನಲ್ಲಿ ನನ್ನ ಮನಸ್ಸಿಗೆ ಬಂದಹಾಗೆ ನಡೆಯಬಹುದು; ಅಳಬಹುದು, ಅಸಂಬದ್ಧವಾಗಿ ಮಾತನಾಡಬಹುದು; ಮಿ. ದಾಸರು ಅಂಜಿ ಅನ್ಯಾಯಮಾಡದಿದ್ದರೆ ನನಗೆ ಯೋಗ್ಯ ನ್ಯಾಯವು ಸಿಕ್ಕೇ ಸಿಗುವದು.'

'ನಿನಗೆ ಜಯ ಸಿಕ್ಕೇ ಸಿಗುವದು.' ಎಂದು ಅವನು ಶಾಂತನಾಗಿ ನುಡಿದನು.

ಆರೋಪಿಯ ಪಕ್ಷಕ್ಕೆ ದುಡ್ಡಿನ ಸಹಾಯವನ್ನೆಲ್ಲನವಾಬಬಹುದ್ದೂರನೆ ಮಾಡಿದ್ದನು. ತನ್ನ ಮನೆ-ಮಾರು ಹಾಳುಮಾಡಿಕೊಂಡರೂ ಚಿಂತೆಯಿಲ್ಲ, ಆದರೆ ಒಬ್ಬ ನಿರಪರಾಧಿಯಾದ ಬಡ ಮುಸಲ್ಮಾನನು ಹಾಳಾಗುವದನ್ನು ಅವನು ಕಣ್ಣಿಲೆ ನೋಡಲಾರನು. ಏಳು ಕೋರ್ಟು ಕಂಡರೂ ಈ ಖಟ್ಲೆಯನ್ನು ಬಿಡುವಂತಿಲ್ಲ ಎಂದು ಹಟತೊಟ್ಟಿದ್ದನು. ಅಂದಮೇಲೆ ಕೇಳುವದೇನು? ನೀರಿನಂತೆ ರೊಕ್ಕ ಹರಿಯಹತ್ತಿತು.

ಚಂದ್ರಪುರಕ್ಕೆ ಚಂದ್ರಪುರವೇ ಈಗ ಬದಲಾಗುತ್ತ ನಡೆದಿತ್ತು. ಕಲೆಕ್ಟರನ ಗಾಡಿಯು ಕಾಂಪೌಂಡು ಬಿಟ್ಟು ಹೊರಬಿದ್ದ ಕೂಡಲೆ ಒಬ್ಬ ಹುಡುಗನು ಅದಕ್ಕೊಂದು ಕಲ್ಲೆಸೆದನು. ಮಸೀದೆಯ ಹತ್ತಿರ ಬಂದಾಗ ಅದಕ್ಕೂ ದೊಡ್ಡ ಕಲ್ಲುಗಳು ಬಿದ್ದವು. ಮೈದಾನಕ್ಕೆ ಬರುವಷ್ಟರಲ್ಲಿ ದೇಶಿ ಪೋಲಿಸರ ಒಂದು ಚಿಕ್ಕ ದಳವು ಮೋಟರ ಸಾಯಕಲ್ ಹತ್ತಿಕೊಂಡು

ಇವರನ್ನು ಬಜಾರದಲ್ಲಿ ಸುರಕ್ಷಿತವಾಗಿ ಕರೆದುಕೊಂಡು ಹೋಗುವದಕ್ಕಾಗಿ ನಿಂತಿತ್ತು. ಕಲೆಕ್ಟರನೂ ಆಗಲೆ ರೊಚ್ಚಿಗೆದ್ದಿದ್ದನು. ತನ್ನ ಆ ರೊಚ್ಚಿನಲ್ಲಿ ' ಈ ಮ್ಯಾಕ್‌ಬ್ರಾಯಿಡನು ಕೈಸಾಗದ ಮುದುಕಿಯರಂತೆ ಮಾಡುತ್ತಾನೆ! ' ಎಂದು ಗೊಣಗುಟ್ಟಿದನು.

ಮಿಸೆಸ್ ಟರ್ಟನ್ನಳು ' ಮೊಹರಮ್ ಆದಮೇಲೆ ಈ ಶಕ್ತಿಪ್ರದರ್ಶನವು ಅಪಾಯವನ್ನೇನೂ ಮಾಡುವದಿಲ್ಲ. ಅವರು ನಮ್ಮನ್ನು ದ್ವೇಷಿಸುವದಿಲ್ಲ ವೆಂದು ತಿಳಿದುಕೊಳ್ಳುವದು ನಗಗೇಡಿತನ; ಇನ್ನು ಆ ದೊಡ್ಡಿಸ್ತಿಕೆಯ ಸೋಗು ಸಾಕು.' ಎಂದಳು.

' ನಾನಂತೂ ಅವರನ್ನು ದ್ವೇಷಿಸುವದಿಲ್ಲ; ಯಾಕೆನ್ನುವದು ನನಗೆ ಗೊತ್ತಿಲ್ಲ. ' ಎಂದು ವಿಷಣ್ಣನಾಗಿ ನುಡಿದನು. ಅವನಿದ್ದದ್ದೂ ಹಾಗೆಯೆ ಇದ್ದನು. ಒಬ್ಬರನ್ನು ದ್ವೇಷಮಾಡುವದೆಂದರೆ ತನ್ನ ಜೀವನದ ಅಪವ್ಯಯ ಎಂದೇ ಅವನು ಭಾವಿಸಿದ್ದನು.

' ಒಟ್ಟಿನ ಮೇಲೆ ಹೆಂಗಸರು ಇಲ್ಲಿ ಇಲ್ಲದ ಕಠಿಣ ಪ್ರಸಂಗಗಳನ್ನು ತರುತ್ತಾರೆ! ' ಎಂದು ಅವನು ಒಂದು ಗೋಡೆಯ ಮೇಲಿನ ಕೆಲವು ಅಶ್ಲೀಲ ಶಬ್ದಗಳನ್ನು ನೋಡಿ ಮನಸ್ಸಿನಲ್ಲಿಯೆ ಎಂದುಕೊಂಡನು. ಕ್ವೆಸ್ಟೆಡ್‌ಳಿಗೆ ಮೇಲೆ ಉಪಕಾರ ಮಾಡಬೇಕೆಂಬ ಬುದ್ಧಿ ಇದ್ದರೂ ಒಳಗೆ ಮಾತ್ರ ಸಿಟ್ಟಿನ ಬೆಂಕಿಯು ಪ್ರಜ್ವಲಿಸುತ್ತಿತ್ತು. ಬಜಾರದೊಳಗಿಂದ ಹಾಯ್ದು ಮುಂದೆ ಬರುವಷ್ಟರಲ್ಲಿ ಕೆಲವು ವಿದ್ಯಾರ್ಥಿಗಳು ಸಿಟಿಮ್ಯಾಜಿಸ್ಟ್ರೇಟರ ಕೋರ್ಟಿನೆದುರಿಗೆ ನೆರೆದಿದ್ದರು. ತಾನೊಬ್ಬನೇ ಇದ್ದಿದ್ದರೆ ಆ ತಲೆತಿರುಕ ಹುಡುಗರೆದುರಿಗೇ ಹೋಗುತ್ತಿದ್ದನು. ಆದರೆ ಹಾಗೆ ಮಾಡಲಿಕ್ಕೆ ಬರುವಂತಿರಲಿಲ್ಲ. ಈಗ ಅವನು ಡ್ರಾಯವ್ಹರನಿಗೆ ತನ್ನ ಗಾಡಿಯನ್ನು ಕೋರ್ಟಿನ ಹಿಮ್ಮಗ್ಗಲು ತೆಗೆದುಕೊಳ್ಳಲಿಕ್ಕೆ ಹೇಳಿದನು. ಇದನ್ನು ನೋಡಿ ನೆರೆದ ಹುಡುಗರೆಲ್ಲ ಗೇಲಿ ಮಾಡಿದರು. ಮತ್ತು ರಫಿಯು ತನ್ನನ್ನು ಯಾರೂ ಗುರುತಿಸಬಾರದೆಂದು ಒಬ್ಬ ಗೆಳೆಯನ ಹಿಂದೆ ಅಡಗಿಕೊಂಡು ನಿಂತು ' ಇಂಗ್ಲಿಷರು ಪುಕ್ಕರು ! ' ಎಂದು ಕೂಗಿದನು.

ಕಲೆಕ್ಟರ ಮೊದಲಾದವರು ರೋನಿಯ ಖಾಸ ಕೋಣೆಗೆ ಬಂದರು. ಅಲ್ಲಿ ಅವರ ಜನರೇ ಇದ್ದರು. ಊರಲ್ಲಿ ಎದ್ದಿದ್ದ ವಿಚಿತ್ರ ಸುದ್ದಿಗಳನ್ನೇ

ಅವರೂ ಮಾತಾಡುತ್ತಿದ್ದರು. ಅಯ್ಯೀಜನ ಸಲುವಾಗಿ ಭಂಗಿ ಜನರು ಸಂಪು ಮಾಡಿದ್ದರಂತೆ; ಚಂದ್ರಪುರದ ಅರ್ಧ ಪಾಯಖಾನೆಗಳು ಹಾಗೇ ಉಳಿದಿದ್ದವಂತೆ; ಉಳಿದ ಜಿಲ್ಲೆಯೊಳಗಿನ ಭಂಗಿಯವರು ಮಧ್ಯಾಹ್ನಕ್ಕೆ ಬರತಕ್ಕವರಿದ್ದರಂತೆ; ಎಷ್ಟೋ ಮುಸಲ್ಮಾನ ಸ್ತ್ರೀಯರು ಕೈದಿಯನ್ನು ನಿರ್ದೋಷಿಯೆಂದು ಬಿಡುವ ವರೆಗೆ ಅನ್ನ ತೆಗೆದುಕೊಳ್ಳುವದಿಲ್ಲೆಂದು ಶಪಥವನ್ನು ತೊಟ್ಟಿದ್ದರಂತೆ; ಏನೇ ಆವರೂ ಅಯ್ಯೀಜನನ್ನು ಹಿಡಿದದ್ದು ಊರಲ್ಲಿ ಗಡಬಿಡಿಯನ್ನು ಎಬ್ಬಿಸಿತ್ತು. ಅದು ಈ ಬಿಳಿಜನರಿಗೊಬ್ಬರಿಗೂ ತಿಳಿಯಲಿಲ್ಲ. ಆದರೆ ಇದೆಲ್ಲದರ ಹಿಂದೆ ಫೀಲ್ಡಿಂಗನು ಇರಬೇಕೆಂದು ಸಹಜವಾಗಿ ಅವರಿಗೆನಿಸುತ್ತಿತ್ತು ಅದಕ್ಕಾಗಿ ಅವರು ಫೀಲ್ಡಿಂಗನನ್ನು ಬಾಯಿಗೆ ಬಂದಂತೆ ಬಯ್ದರು. ಅವನು ಅಮೃತರಾವ ಮತ್ತು ಮಹಮ್ಮದಲಿಯವರೊಡನೆ ಕಾರಿನಲ್ಲಿ ಕುಳಿತು ಹೋಗುವದನ್ನು ಬೇರೆ ಅವರು ನೋಡಿದ್ದರು! ಅವನು 'ಬಾಯ್‌ಸ್ಕಾಟ' ಚಳವಳಿಯನ್ನೂ ರಾಜದ್ರೋಹಬುದ್ಧಿಯಿಂದಲೆ ಹೂಡಿದ್ದಾನೆಂದೂ ಅವರು ತಿಳಿದರು. ಪರದೇಶಗಳಿಂದ ಕಾಗದ-ಪತ್ರಗಳು ಅವನಿಗೆ ಬರುತ್ತಿರುವದನ್ನು ನೋಡಿ ಅವನು ಜಪಾನಿ ಜನರ ಗುಪ್ತಚಾರನಿರಬಹುದೆಂದೂ ಕಲ್ಪಿಸಿದರು. ಆದರೆ ಅಂದಿನ ಠರಾವಿನಿಂದ ಈ ಸ್ವಪಕ್ಷತ್ಯಾಗಿಯು ಸಂಪೂರ್ಣವಾಗಿ ಹಣ್ಣಾಗುವನೆಂದು ಅವರು ಉಬ್ಬಿದ್ದರು. ಅವರೆಲ್ಲ ಹೀಗೆ ಅವನನ್ನು ಹಳಿಯುವಾಗ ಮಿಸ್ ಕ್ವೆಸ್ಟೆಡ್‌ಳು ತನ್ನ ಕೈಗಳನ್ನು ಕುರ್ಚಿಯ ಮೇಲೆ ಚಲ್ಲಿ ಹಿಂದಕ್ಕೆ ಆತು ಕುಳಿತುಕೊಂಡು, ಕಣ್ಣುಗಳನ್ನು ಮುಚ್ಚಿಕೊಂಡು, ಮುಂದಿನ ಪ್ರಸಂಗಕ್ಕಾಗಿ ತನ್ನ ಉತ್ಸಾಹವನ್ನೆಲ್ಲ ಸಂಗ್ರಹಿಸುತ್ತಿದ್ದಳು. ಕಲೆಕ್ಟರನು ಬಂದದ್ದನ್ನು ನೋಡಿ ಅವರು ತಮ್ಮ ಗದ್ದಲಕ್ಕೆ ತಾವೇ ನಾಚಿಕೊಂಡರು.

'ನಾವೇನೂ ನಿನಗೆ ಸಹಾಯಮಾಡಲಾರೆವೇ?' ಎಂದು ಮಿಸ್ ಡೆರೆಕ್ಕಳು ಕೇಳಿದಳು.

'ಕ್ಷಮಿಸಬೇಕು, ಸಾಧ್ಯವಿಲ್ಲ; ನನ್ನದು ನನಗೇ ತಿಳಿಯದಂತಾಗಿದೆ.'

'ಹಾಗೆನಬೇಡ; ನೀನೂ ಒಬ್ಬ ವಿಚಿತ್ರ ಹೆಣ್ಣುಮಗಳೇ!'

'ಹೌದು, ನಿಜವಾಗಿ.' ಎಂದು ಎಲ್ಲರೂ ಮರ್ಯಾದೆಯಿಂದ ಒಮ್ಮೆಲೆ ನುಡಿದರು.

'ನಮ್ಮ ಗೆಳೆಯ ದಾಸರು ಒಳ್ಳೆಯ ಮನುಷ್ಯ; ಚೆನ್ನಾಗಿದ್ದಾರೆ. ಎಂದು ರೋಸಿಯು ಹೊಸ ವಿಷಯವನ್ನೆ ಸುರುವು ಮಾಡಿದನು.

'ಅವರಲ್ಲಿ ಯಾರೂ ಚೆನ್ನಾಗಿಲ್ಲ.' ಮೇಜರ ಕ್ಯಾಲೆಂಡರರು ಅದನ್ನು ನಿಷೇಧಿಸಿದರು.

'ದಾಸರು ನಿಜವಾಗಿಯೂ....'

'ಶಿಕ್ಷೆಯನ್ನು ಕೊಡುವದರಕಿಂತಲೂ ಬಿಡುಗಡೆ ಮಾಡುವದರ ಹೆದರಿಕೆಯು ಅವನಿಗೆ ಬಹಳವೆಂದು ನಮ್ಮ ಅಭಿಪ್ರಾಯ; ಯಾಕಂದರೆ ಅವನು ಬಿಡುಗಡೆ ಮಾಡಿದರೆ ಕೆಲಸವನ್ನೇ ಕಳೆದುಕೊಳ್ಳುವನು.' ಎಂದು ಲೆಸ್ಲಿ ಸ್ವಲ್ಪ ಕಿರುನಗೆ ನಕ್ಕನು.

'ಒಂದು ದೃಷ್ಟಿಯಿಂದ ಹಿಂದೀ ಮನುಷ್ಯನೆದುರಿಗೆ ಖಟ್ಲೆ ನಡೆದದ್ದೂ ವಿಹಿತವೇ! ಶಿಕ್ಷೆಯಂತೂ ಕಟ್ಟಿಟ್ಟ ಮಾತೇ. ಮತ್ತು ಅದನ್ನು ಹಿಂದೀ ಮನುಷ್ಯನೇ ನಿರ್ಣಯಿಸುವವನು. ಮುಂದೆ ಅಷ್ಟು ರಂಭಾಟವಾಗುವದಿಲ್ಲ.' ಎಂದು ರೋಸಿಯು ಭಾಷ್ಯ ಬರೆದನು.

'ಲೇಡಿ ಮೆಲೆನ್‌ಬಿಗೆ ನಾನು ಅಪೀಲು ಮಾಡಿದ್ದು ನಿಜವಾಗಿಯೂ ನಿಮ್ಮ ಮನಸ್ಸಿಗೆ ಬರಲಿಲ್ಲವೆನ್ನಿ?' ಎಂದು ಮಿಸೆಸ್ ಟರ್ಟನ್ನಳು ಸ್ವಲ್ಪ ಆವೇಶದಿಂದಲೇ ಕೇಳಿದಳು. 'ಹೆಸ್ಲೊಪ! ನೀನು ದಯಮಾಡಿ ಕ್ಷಮೆ ಬೇಡುವ ಗೋಜಿಗೆ ಹೋಗಬೇಡ. ತಪ್ಪುಮಾಡುವದೇ ನನಗೆ ರೂಢಿಯಾಗಿ ಬಿಟ್ಟಿದೆ.'

'ನನ್ನ ಅರ್ಥ ಹಾಗಿರಲಿಲ್ಲ....'

'ಆಗಲಿ, ನೀನು ಕ್ಷಮೆ ಬೇಡುವ ಕಾರಣವಿಲ್ಲವೆಂದು ನಾನಂತೂ ಹೇಳಿದೆನು.'

'ಆ ಹಂದೀಮಕ್ಕಳು, ಏನಾದರೊಂದು ಕುಂದಿಟ್ಟು ತೋರಿಸಲಿಕ್ಕೇ ನಿಂತಿರುತ್ತಾರೆ!' ಎಂದು ಲೆಸ್ಲಿ ಅವಳನ್ನು ಸಮಾಧಾನಪಡಿಸಲಿಕ್ಕಾಡಿದಳು.

ಮೇಜರನೂ ಅದಕ್ಕೆ ದನಿಗೂಡಿಸಿದನು. 'ಹಂದಿಗಳು! ನಾನೂ ಹಾಗೇ ತಿಳಿಯುತ್ತೇನೆ. ಈಗ ಆದದ್ದೆಲ್ಲ ಚೆನ್ನಾಗಿಯೆ ಆಯಿತು! ಆದರೆ ಈ ನಮ್ಮ ಜನರಿಗೆ ಮಾತ್ರ ತೊಂದರೆಯಾಗಬಾರದಾಗಿತ್ತು. ಆಗಲಿ, ಅವರೀಗ ಚಿರುಗುಟ್ಟಿ ಹೋದರು..ಆಸ್ಪತ್ರಿಯಲ್ಲಿ ಈ ಹೊತ್ತು ಅವರಿಗೆ ದೇವರ

ಹೆದರಿಕೆಯನ್ನೂ ಹಾಕಿದ್ದೇನೆ....ನೀವು ನಮ್ಮ ಆ ಪ್ರಸಿದ್ಧ ರಾಜನಿಷ್ಠನ ಮೊಮ್ಮಗನನ್ನು ನೋಡಬೇಕಿತ್ತು....' ಎಂದು ನೂರುದ್ದೀನನ್ನು ವರ್ಣಿಸುತ್ತ ಕೋತಿಯಂತೆ ಹಲ್ಲು ಕಿರಿದು 'ಅವನ ರೂಪವೆಲ್ಲ ಕೆಟ್ಟುಹೋಯಿತು! ಮೇಲಿನ ಐದು ಹಲ್ಲುಗಳು, ಕೆಳಗಿನವೆರಡು, ಒಂದು ಮೂಗು.. ..ಎಲ್ಲ ಹೋದವು....ನಮ್ಮ ಮುದುಕ ಪನ್ನಾಲಾಲನು ನಿನ್ನೆ ಅವನ ಮುಖಕ್ಕೆ ಕನ್ನಡಿಯನ್ನು ಹಿಡಿದನು....ನೋಡಿ ಅವನು ಗಟ್ಟಿಸಿ ಅತ್ತನು..ನಾನೂ ನಕ್ಕೆನು....ಹೊಟ್ಟೆ ಹುಣ್ಣಾಗುವಷ್ಟು ನಕ್ಕೆನು....ಹೇಳುತ್ತೇನೆ.. ನೋಡಿದ್ದರೆ ನೀವೂ ನಗುತ್ತಿದ್ದಿರಿ..ಈ ಕರಪರು ಹಾಗೇ ಇರತಕ್ಕವರೇ.. ಅವನೀಗ ಕೊಳೆಯುಹತ್ತಿದ್ದಾನೆ..ನಷ್ಟ..ಹಾಳಾಗಿಹೋಗಲಿ....ಅವನು ಹೇಳಲಾರದಷ್ಟು ರಾಂಡಬಾಜು ಇದ್ದನೆಂದೆನಿಸುತ್ತದೆ....ನಮ್ಮ ಮಾಜಿ ಅಸಿಸ್ಟೆಂಟನದೂ ಕತ್ತರಿಸಬೇಕಿತ್ತೆಂದು ನನಗೆನಿಸುತ್ತದೆ....ಈ ಜನರಿಗೆ ಏನು ಮಾಡಿದರೂ ಅಷ್ಟೆ....'

'ನೀವು ಇದ್ದದ್ದು ಇದ್ದಂತೆ ಬಹಳ ಚಲೋ ಮಾತಾಡಿದಿರಿ.' ಎಂದು ಮಿಸೆಸ್ ಟರ್ಟನ್ನಳು ತನ್ನ ಗಂಡನಿಗೆ ಬೇಡವಾಗಿದ್ದರೂ ನುಡಿದಳು.

'ನಾನನ್ನುವದೂ ಅದೇ. ಇಂಥ ಕೆಲಸವಾದ ಮೇಲೆ ಯಾವುದು ಮಾಡಿದರೂ ಅದು ಕ್ರೂರತನವೆನಿಸಲಾರದು.'

'ಹೌದು, ನೀವು, ಗಂಡಸರು ಹಿಂದುಗಡೆ ನೆನಸುವಿರಿ. ನೀವು ಕೈಸಾಗದವರು, ಕೈಸಾಗದವರು! ಇಂಗ್ಲೀಷ ಸ್ತ್ರೀಯು ಎದುರಿಗೆ ಬಂದರೆ ಅವರು ಇಲ್ಲಿಂದ ಗುಹೆಯ ವರೆಗೆ ಹೊಟ್ಟೆ ಹೊಸೆಯುತ್ತ, ಮೊಣಕಾಲು ಕೈಕಾಲುಗಳನ್ನೂರಿ ನಡೆಯಬೇಕು! ಅವರ ಜೊತೆಗೆ ಮಾತಾಡಬಾರದು- ಅವರ ಮುಖದ ಮೇಲೆ ಉಗುಳಬೇಕು- ಅವರನ್ನು ನುಚ್ಚುನೂರು ಮಾಡಬೇಕು- ಅವರನ್ನು ಧೂಳಿಗೂಡಿಸಬೇಕು- ನಾವು ಬ್ರಿಜ್‌ಪಾರ್ಟಿ ಮೊದಲಾದವುಗಳನ್ನು ಮಾಡಿ ಅವರಿಗೆ ಇಲ್ಲದ ಸಲಿಗೆ ಕೊಟ್ಟಿದ್ದೇವೆ.' ಎಂದು ಅವಳು ಸ್ವಲ್ಪ ತಡೆದಳು. ಸಿಟ್ಟಿನಿಂದ ಅವಳ ಮೈಯಲ್ಲಿ ಕಾವೇರಿತ್ತು. ಒಂದು ಲೆಮನ್ ತರಿಸಿ ಕುಡಿಯುತ್ತ ಮಧ್ಯಮಧ್ಯದಲ್ಲಿ 'ಕೈಸಾಗದವರು! ದುರ್ಬಲರು' ಎಂದು ಹಾಗೇ ಒಟಗುಟ್ಟುತ್ತಿದ್ದಳು. ಇವಳಕಿಂತಲೂ ಕ್ವೆಸ್ಟೆಡ್‌ಳ

ವಿಷಯ ಬಹಳ ಮಹತ್ವದ್ದಿದ್ದುದರಿಂದ ಜನರು ನಿರ್ವಾಹವಿಲ್ಲದೆ ಇವಳನ್ನು ಮರೆತುಬಿಟ್ಟರು.

ಕೂಡಲೆ ಖಟ್ಲೆಯನ್ನು ಕೂಗಿಸಿದರು.

ಅವರಕಿಂತ ಮೊದಲು ಅವರಿಗೆ ಕೂಡಲಿಕ್ಕೆ ಖುರ್ಚಿಗಳು ಕೋರ್ಟಿನಲ್ಲಿ ಹೋದವು. ಚಪ್ರಾಸಿಗಳು ಎಲ್ಲವನ್ನೂ ಸಜ್ಜುಗೊಳಿಸಿದ ಮೇಲೆ ಅವರು ಒಬ್ಬರ ಹಿಂದೊಬ್ಬರು ಸಮಾರಂಭದ ಮೆರವಣಿಗೆಯಲ್ಲಿಯವರಂತೆ ಬಂದು ಕುಳಿತರು. ಎಲ್ಲರ ಮುಖದ ಮೇಲೂ ಅನುಗ್ರಹಭಾವನೆಯಿತ್ತು. ಕಲೆಕ್ಟರರು ಕುಳಿತುಕೊಳ್ಳುವಾಗ ಯಾವುದೋ ಒಂದು ವಿನೋದದ ಮಾತನ್ನಾಡಿದರು. ಕೂಡಲೆ ಅವರ ಪರಿವಾರವೆಲ್ಲ ನಕ್ಕಿತು. ಹಿಂದೀ ಜನರು, ಅವರಾಡಿದ್ದು ಕೇಳಿಸದೆ, ಏನೋ ತಮ್ಮ ವಿರುದ್ಧ ಹೊಸದೊಂದು ಒಳಸಂಚು ನಡೆದಿರ ಬೇಕು; ಇಲ್ಲದಿದ್ದರೆ ಈ ಸಾಹೇಬರು ನಗುವವರೇ ! ಎಂದೇನೊ ಕಲ್ಪಿಸಿ ಕೊಂಡರು.

ಕೋರ್ಟಿನಲ್ಲಿ ಬಹಳ ಗದ್ದಲವಿತ್ತು; ಸೆಕೆ ಕುಚ್ಚುತ್ತಿತ್ತು. ಅಡೀಲಾಳ ಕಣ್ಣಿಗೆ ಮೊದಲು ಬಿದ್ದವನೆಂದರೆ ಆ ಖಟ್ಲೆಕ್ಕೆ ಏನೂ ಸಂಬಂಧವಿಲ್ಲದ, ಎಲ್ಲರ ಕಿಂತಲೂ ಅತಿ ದರಿದ್ರನಾದ, ಪಂಖಾ ಜಗ್ಗುವ ಮನುಷ್ಯ. ಅವನ ಮೈ-ಮೇಲೆ ದುಡ್ಡುತೂಕ ಅರಿವೆಯಿರಲಿಲ್ಲ. ಹುರಿಕಟ್ಟಾದ ಮೈಕಟ್ಟು; ಹರ ವಾದ ಎದೆ; ತುಂಬು-ಮುಖ. ಅವನು ಮಧ್ಯದಾರಿಯಲ್ಲಿದ್ದ ಒಂದು ಎತ್ತರ ವಾದ ಕಟ್ಟೆಯ ಮೇಲೆ ಕುಳಿತಿದ್ದನು. ಅಲ್ಲಿ ನಡೆಯತಕ್ಕ ಕೆಲಸಗಳನ್ನೆಲ್ಲ ಅವನೇ ನಿಯಂತ್ರಿಸುವಂತೆ ಕಂಡನು. ಅವನು ಹಗ್ಗವನ್ನು ತನ್ನೆಡೆಗೆ ಜಗ್ಗುತ್ತ, ತಾಳಗತ್ತಿನಿಂದ ಅದನ್ನು ಸಡಿಲುಬಿಡುತ್ತ ಅನ್ನಿಗರ ಮೇಲೆ ಗಾಳಿ-ಯಲೆಗಳನ್ನು ತೂರಿ ಬಿಡುತ್ತ, ತಾನು ಏನನ್ನೂ ತಕ್ಕೊಳ್ಳದೆ, ಅತಿಮಾನವ ನಂತೆ ಈ ಜೀವಗಾಳುಗಳನ್ನು ಮರದಲ್ಲಿ ಹಾಕಿ ಕೇರುವ ಗಂಡುಲಕುಮಿ ಯಂತೆ ಕಂಡನು. ಅವನ ಎದುರಿಗೆ ಮತ್ತೊಂದು ಎತ್ತರವಾದ ಕಟ್ಟೆಯ ಮೇಲೆ ಸುಶಿಕ್ಷಿತರೂ ಸ್ವಪ್ರಜ್ಞೆಯುಳ್ಳವರೂ ನ್ಯಾಯಪ್ರಿಯರೂ ಆದ ಅಸಿಸ್ಟೆಂಟ ಮ್ಯಾಜಿಸ್ಟ್ರೇಟರು ಕುಳಿತುಕೊಂಡಿದ್ದರು. ಪಂಖಾವಾಲಾನು ಇದಾವದಕ್ಕೂ ಸಂಬಂಧಪಟ್ಟವನಲ್ಲ; ತಾನಿದ್ದುದರ ಅರಿವೇ ಅವನಿಗಿದ್ದಿಲ್ಲ. ದಿನದಕಿಂತಲೂ ಈ ಹೊತ್ತು ಕೋರ್ಟು ಹೆಚ್ಚು ಯಾಕೆ ತುಂಬಿದೆಯೆಂಬುದೂ

ಅವನಿಗೆ ತಿಳಿಯದು. ಅವನಿಗೆ ಹಗ್ಗ ಜಗ್ಗುವದೊಂದು ಗೊತ್ತು. ಇಂಗ್ಲೆಂಡದ ಮಧ್ಯಮ ವರ್ಗದ ಆ ಹುಡುಗಿಯ ಮನಸ್ಸನ್ನು ಅವನ ಈ ನಿರ್ಲಿಪ್ತಜೀವ ನವು ಆಕರ್ಷಿಸಿತು. ಮತ್ತು ಅವಳು ಅತಿ ದೊಡ್ಡವೆಂದು ತಿಳಿದುಕೊಂಡ ತನ್ನ ಸಂಕಟಗಳನ್ನು ಅಣಕಿಸಿತು. ಅವಳು ಸುತ್ತಲೂ ನೋಡಿದಳು; ಆಗ ಅವಳಿಗೆ ಮಿಸೆಸ್ ಮೂರಳ ನೆನಪಾಯಿತು. ಅಷ್ಟರಲ್ಲಿ ಖಟ್ಲೆಯ ವಿಚಾರ-ಣೆಯೇ ಸುರುವಾಯಿತು. ಪೋಲಿಸ ಸುಪರಿಂಟೆಂಡೆಂಟರು ಸರಕಾರಿ ಪಕ್ಷ ದಿಂದ ಖಟ್ಲೆಯನ್ನು ಮಂಡಿಸಹತ್ತಿದರು.

'ಸರಕಾರಿ ಕಾಲೇಜದ ಪ್ರಿನ್ಸಿಪಾಲರು ಒಂದು 'ಟೀ ಪಾರ್ಟಿ'ಯನ್ನು ಕೊಟ್ಟಾಗ ಆರೋಪಿಯು ಮಿಸಾ ಕ್ವೆಸ್ಟೆಡಾಳಿಗೆ ಭೆಟ್ಟಿಯಾದನು. ಮತ್ತು ಅಲ್ಲಿಯೆ ಮುಂದೆ ತಾನು ಏನು ಮಾಡಬೇಕೆಂಬುದನ್ನು ಗೊತ್ತುಮಾಡಿ-ಕೊಂಡನು. ಆರೋಪಿಯಲ್ಲಿ ನೀತಿಯ ನಿರ್ಬಂಧಗಳೇನೂ ಇದ್ದಿಲ್ಲವೆಂಬು ದಕ್ಕೆ ಅವನನ್ನು ಬಂಧಿಸಿದಾಗ ದೊರೆತ ಅವನಲ್ಲಿಯ ಕಾಗದ-ಪತ್ರಗಳೇ ಸಾಕ್ಷಿಯಾಗಿವೆ. ಅವನ ಶೀಲ, ಸ್ವಭಾವಗಳ ವಿಷಯಕ್ಕೆ ಅವನೊಡನೆ ಕೆಲಸ ಮಾಡುವ ಡಾ. ಪನ್ನಾಲಾಲನೇ ಹೇಳುವನು; ಸ್ವತಃ ಮೇಜರ ಕ್ಯಾಲೆಂಡ-ರರೂ ತಕ್ಕಮಟ್ಟಿಗೆ ಹೇಳಬಲ್ಲರು.' ಎಂದು ಹೇಳಿ ಮ್ಯಾಕ್‌ಬ್ರಾಯಿಡನು ಸ್ವಲ್ಪಹೊತ್ತು ನಿಂತನು. ಅವನು ಆದಷ್ಟು ತನ್ನ ಮಾತುಗಳನ್ನು ಸ್ಪಷ್ಟ ವಾಗಿ ನಿರ್ವಿಕಾರಬುದ್ಧಿಯಿಂದ ಹೇಳಬೇಕೆಂದಿದ್ದನು. ಆದರೆ ಅವನ ಶಾಸ್ತ್ರೀಯ ಜ್ಞಾನವು ಒಮ್ಮೊಮ್ಮೆ ಅವನನ್ನು ತಪ್ಪುಹಾದಿಗೆ ಒಯ್ಯು ತ್ತಿತ್ತು. ಕನ್ನಡಕಗಳನ್ನು ಕೆಳಗೆ ತೆಗೆದಿಟ್ಟು 'ಕಪ್ಪು ಜನರು ಬಿಳಿ ಜನರನ್ನು ಕಂಡು ಮುಗ್ಧರಾಗುವರು. ಇದು ಸ್ವಾಭಾವಿಕ. ಇದು ದ್ವೇಷ ಹುಟ್ಟಿಸು ವದಕ್ಕಲ್ಲ, ಅಥವಾ ದೋಷ ಹೊರಿಸಲಿಕ್ಕಲ್ಲ; ನಾನು ಹೀಗೆ ಹೇಳುವದು;— ಇದೊಂದು ವಿಜ್ಞಾನಿಗಳು ಒಪ್ಪುವ ಸತ್ಯವಾಗಿದೆ..' ಎಂದು ತನ್ನ ಜ್ಞಾನ ಪ್ರದರ್ಶನವನ್ನು ಮಾಡಿಯೆ ಬಿಟ್ಟನು.

'ಪುರುಷನಕಿಂತಲೂ ಸ್ತ್ರೀಯು ಅತಿ ಕುರೂಪಿಯಾಗಿದ್ದಾಗೂ ಇದು ನಿಜವೇನು?' ಈ ಟೀಕೆಯು ಎಲ್ಲಿಂದ ಬಂತೋ ಗೊತ್ತೇ ಆಗಲಿಲ್ಲ; ಎಲ್ಲಿಯೊ ಹುಟ್ಟಿ ಗಾಳಿಗುಂಟ ತೇಲಿ ಬಂತು ಅಷ್ಟೆ.

ಮ್ಯಾಜಿಸ್ಟ್ರೇಟರಿಗೆ ಈ ತರಹದ ಮಾತುಗಳನ್ನು ನಿಲ್ಲಿಸಲಿಕ್ಕೇಬೇಕನಿ

ಸಿತು. ಕೂಡಲೆ ' ಯಾರವರು ? ಹಾಕು ಹೊರಗೆ ಅವರನ್ನು ! ' ಎಂದು ಗದ್ದರಿಸಿದನು. ದೇಶೀ ಸಿಪಾಯಿಯೊಬ್ಬನು ಏನೂ ಮಾತಾಡದೆ ಇದ್ದ ಒಬ್ಬನನ್ನು ಹಿಡಿದು ಹೊರಗೆ ದಬ್ಬಿಬಿಟ್ಟನು.

ಮಿ. ಮ್ಯಾಕ್‌ಬ್ರಾಯಿಡರು ಮತ್ತೆ ಕನ್ನಡಕಗಳನ್ನು ಹಾಕಿಕೊಂಡು ಮುಂದೆ ಸಾಗಿಸಿದರು. ಆದರೆ ಈ ಟೀಕೆಯಿಂದ ಕ್ವೆಸ್ಟೆಡ್‌ಳ ಮನಸ್ಸು ಮಾತ್ರ ಚಲವಿಚಲವಾಗಿತ್ತು. ತಾನು ಕುರೂಪಿಯೆಂದು ಜನರಾಡಿದ್ದಕ್ಕೆ ಅವಳಿಗೆ ಬಹಳ ಕೋಪಬಂದು ನಡುಗಹತ್ತಿದಳು.

' ನಿನಗೆ ಮೂರ್ಛೆಬಂದಂತೆಯಾಗುತ್ತಿದೆಯೇ ? ' ಎಂದು ಮಿಸ್ ಡೆರೆಕ್ಕಳು ಅವಳನ್ನು ರಮಿಸುತ್ತ ಕೇಳಿದಳು.

' ಇಲ್ಲ; ನಾನು ಹೇಗಾದರೂ ಮಾಡಿ ಈ ಕಿಚ್ಚಿನೊಳಗಿಂದ ದಾಟುವೆನು. ಆದರೂ ಇದು ಬಹಳ ಭಯಂಕರ ! '

ಅವಳ ಗೆಳತಿಯರು ಅವಳ ಸುತ್ತಲೂ ಗುಜುಗುಜು ಮಾಡಹತ್ತಿದರು; ಮೇಜರನು ಎದ್ದು ' ನನ್ನ ಈ ರೋಗಿಗೆ ಈಗಿದ್ದುದರಕಿಂತಲೂ ಹೆಚ್ಚು ಚೆನ್ನಾದ ವ್ಯವಸ್ಥೆ ಮಾಡಬೇಕು. ಅವಳಿಗೆ ಆ ಎತ್ತರವಾದ ಕಟ್ಟೆಯ ಮೇಲೆಯೆ ಏಕೆ ಸ್ಥಳವನ್ನು ಕೊಡಬಾರದು ? ' ಎಂದು ಕೇಳಿದನು.

ಇದರಿಂದ ಮಿ. ದಾಸರು ಗೊಂದಲಗೆಟ್ಟವರಂತೆ ತೋರಿದರು. ' ಅವಳ ಆರೋಗ್ಯದ ಈ ವಿಲಕ್ಷಣ ಸ್ಥಿತಿಯನ್ನು ನೋಡಿ ಅವಳಿಗೆ ಈ ಕಟ್ಟೆಯ ಮೇಲೆಯೆ ಒಂದು ಖುರ್ಚಿಯನ್ನು ಹಾಕಿ ಕೂಡಿಸಲಿಕ್ಕೆ ನನಗೇನೂ ಅಡ್ಡಿ ತೋರುವದಿಲ್ಲ. ' ಎಂದು ಚಪ್ರಾಸಿಗಳ ಕಡೆಗೆ ನೋಡಿದರು. ಕೂಡಲೆ ಅವರು—ಒಂದಲ್ಲ,—ಅನೇಕ ಖುರ್ಚಿಗಳನ್ನು ಕಟ್ಟೆಯ ಮೇಲೆ ಸಾಗಿಸಿದರು ಅಲ್ಲಿಂದ ಆ ಇಡಿ ಗುಂಪೇ ಆಡೀಲಾಳ ಹಿಂದೆ ಕಟ್ಟೆಯನ್ನೇರಿತು. ಯುರೋಪಿಯನ್ನನಿದ್ದೂ ಕೆಳಗೆ ಉಳಿದವನೆಂದರೆ ಫೀಲ್ಡಿಂಗನೊಬ್ಬನೇ.

' ಇದೀಗ ಚೆನ್ನಾಗಿ ಆಯಿತು ! ' ಎಂದು ಮಿಸೆಸ್ ಟರ್ಟನ್ನಳು ಸಾವರಿಸಿಕೊಂಡು ಕೂಡುತ್ತ ನುಡಿದಳು.

' ಅನೇಕ ಕಾರಣಗಳಿಂದ ಈ ಸ್ಥಾನಪಲ್ಲಟವಾದದ್ದು ಬಹಳ ಒಳ್ಳೆಯದಾಯಿತು ! ' ಎಂದು ಮೇಜರರು ಉತ್ತರಕೊಟ್ಟರು.

ಮ್ಯಾಜಿಸ್ಟ್ರೇಟರಿಗೆ ಈ ಮಾತನ್ನು ಖಂಡಿಸಬೇಕೆಂದೆನಿಸಿದರೂ ಹಾಗೆ ಮಾಡಲು ಧೈರ್ಯಸಾಲಲಿಲ್ಲ. ಅವನು ಹೆದರಿದ್ದನ್ನು ಕ್ಯಾಲೆಂಡರನು ತಿಳಿದು ಕೊಂಡು ಒಳ್ಳೆ ಅಧಿಕಾರಯುಕ್ತವಾಣಿಯಿಂದ 'ಹೌದು, ಮ್ಯಾಕ್-ಬ್ರಾಯಿಡ್! ಹೊಡೆ ಮುಂದೆ! ಭಪ್ಪರೆ!....ನಿನಗೆ ಅಡ್ಡಿ ಮಾಡಿದ್ದಕ್ಕೆ ಕ್ಷಮಿಸು' ಎಂದನು.

'ನಿಮಗೂ ಸರಿಯಾಗಿದೆಯೇ?' ಎಂದು ಸುಪರಿಂಟೆಂಡೆಂಟರು ಕೇಳಿದರು.

'ಆಗುವದು, ಎಲ್ಲವೂ ಸರಿಯಾಗುವದು!'

'ಇನ್ನು ಸಾಗಲಿ, ದಾಸರೇ! ನಾವು ಇಲ್ಲಿ ನಿಮಗೆ ತೊಂದರೆ ಕೊಡ ಬಾರದು.' ಎಂದು ಕಲೆಕ್ಟರರು ಅವನಿಗೆ ಆಶ್ರಯದಾತನ ಹಾಗೆ ಕಣ್ಣಾರಳಿಸಿ ಹೇಳಿದರು. ನಿಜವಾಗಿ ನೋಡಿದರೆ ಅವರು ಖಟ್ಲೆಕ್ಕೆ ಅಡ್ಡಬಂದಿದ್ದರಿಷ್ಟೇ ಅಲ್ಲ, ಇಡಿ ಖಟ್ಲೆಯನ್ನೆ ತಮ್ಮ ಕೈಯಲ್ಲಿ ತೆಗೆದುಕೊಂಡಿದ್ದರು.

ಇತ್ತ ಖಟ್ಲೆ ಸಾಗಿದಾಗ ಕ್ವೆಸ್ಟೆಡ್‌ಳು ಕುಳಿತಲ್ಲಿಂದಲೆ ಆ 'ಹಾಲಿ'ನ ಸುತ್ತೆಲ್ಲ ಕಣ್ಣು ತಿರುಗಿಸಿದಳು. ಆ ಪಂಖಾವಾಲಾನ ಎಡಬಲಕ್ಕೆ ಅರ್ಧ-ಮರ್ಧ ಗುರುತಿದ್ದ ಅನೇಕ ಮುಖಗಳು ನೆರೆದಿದ್ದವು. ನಿಜವಾದ ಹಿಂದು-ಸ್ತಾನವನ್ನು ನೋಡಬೇಕೆಂಬ ಅವಳ ಹುಚ್ಚು ಆಶೆಯ ಹಡಗವು ಒಡೆದು ಚೂರುಚೂರಾಗಿಹೋಗಿತ್ತು. ಒಂದು ಕಡೆ ಬ್ರಿಜ್‌ಪಾರ್ಟಿಯಲ್ಲಿ ಭೆಟ್ಟಿ ಯಾದ ಜನರು, ಇನ್ನೊಂದು ಕಡೆ ಅವಳಿಗೆ ಔತಣಕೊಟ್ಟು ಗಾಡಿಯನ್ನು ಕಳಿಸದೆ ಇದ್ದ ದಂಪತಿಗಳು, ಮಗುದೊಂದು ಕಡೆ ತನ್ನ ಕಾರನ್ನು ಕೊಡ ಲಿಕ್ಕೆ ಒಪ್ಪಿಕೊಂಡ ಮುದುಕ, ಇಷ್ಟಲ್ಲದೆ ಎಷ್ಟೋ ಚಾಕರರು, ಹಳ್ಳಿಗರು, ಅಧಿಕಾರಸ್ಥರು, ಮತ್ತು ಸ್ವತಃ ಕೈದಿ, ಹೀಗೆ ಎಲ್ಲರೂ ಅವಳ ಕಣ್ಣಿಗೆ ಬಿದ್ದರು. ಮನಸ್ಸಿನಲ್ಲಿ ಯಾವ ತರಹದ ವಿಚಾರವೂ ಇಲ್ಲದೆ ಅವಳು ಆ ಕೈದಿಯನ್ನು ನೋಡಿದಳು. ಅವನು ಅವಳಿಗೆ ಮೊದಲು ಕಂಡಂತೆಯೆ ಸಭ್ಯನಾಗಿ ಕಂಡನು. ಆಗ ಅವಳ ಮನಸ್ಸು 'ಇವನು ಅಪರಾಧಿಯೆಂದು ನಾನು ತಿಳಿಯುತ್ತೇನ-ಲ್ಲವೇ! ನಾನು ತಪ್ಪುಮಾಡಿರಬಹುದೇನು ಮತ್ತೆ?' ಎಂದು ಹೊಯ್ದಾಡ ಹತ್ತಿತು.

ವಕೀಲರಾದ ಮಹಮ್ಮದಲಿಯವರು ಎದ್ದುನಿಂತು ತಮ್ಮ ಪಕ್ಷಗಾರ

ನಿಗೂ ಆ ಕಟ್ಟೆಯ ಮೇಲೆ ಕೂಡಲಿಕ್ಕೆ ಸ್ಥಳವನ್ನೇಕೆ ಮಾಡಿಕೊಡಬಾರ ದೆಂದು ಹಿಂದೆಮುಂದೆ ವಿಚಾರವಿಲ್ಲದೆ ನಿಷ್ಠುರವಾಗಿ ಕೇಳಿದನು. ಈ ಪ್ರಸಂಗ ವನ್ನು ದಾಸನು ಹೇಗೆ ನಿರ್ವಹಿಸುವನೊ ನೋಡಬೇಕೆಂದು ರೋನಿಯು ಅವನ ಕಡೆಗೇ ತಿರುಗಿದನು. ದಾಸನು ಕೆರಳಿ ಮಹಮ್ಮಲಿಯನ್ನು ಚೆನ್ನಾಗಿ ತಲೆಬಡಿದು ಕುಳ್ಳಿರಿಸಿದನು.

'ಕ್ಷಮಿಸಬೇಕು—' ಈಗ ಕಲಕತ್ತೆಯ ಪ್ರಸಿದ್ಧ ಬ್ಯಾರಿಸ್ಟರ ಸವಾ ರಿಯು ಎದ್ದುನಿಂತಿತು. ನೋಡಲಿಕ್ಕೆ ಚೆಲುವ; ದೊಡ್ಡ ಆಳು, ತೆಳ್ಳಗೆ ಮೈ. 'ಕಟ್ಟೆಯಮೇಲೆ ಇಷ್ಟು ಯುರೋಪಿಯನ್ ಸ್ತ್ರೀ-ಪುರುಷರು ಇರಬಾರದು' ಎಂದು ಬ್ಯಾರಿಸ್ಟರರ ಥಾಟು-ಮಾಟಿನ ಏಟಿನಿಂದ ತಾನೂ ಇಂಗ್ಲೆಂಡಕ್ಕೆ ಹೋಗಿಬಂದಿದ್ದೇನೆಂಬ ಒಗರು ತೋರಿಸುವದಕ್ಕಾಗಿ 'ಆಕ್ಸಫರ್ಡ' ದನಿ ತೆಗೆದುಹೇಳಿದನು.' ಆದರಿಂದ ನಮ್ಮ ಸಾಕ್ಷೀದಾರರು ಬೆದರುವರು; ಅವರೂ ಉಳಿದ ಜನರೊಡನೆ 'ಹಾಲಿ'ನಲ್ಲಿ ಕುಳಿತುಕೊಳ್ಳಬೇಕು. ಮಿಸ್ ಕ್ವೆಸ್ಟೆಡ್‌ಳು ಅಸ್ವಸ್ಥಳಿರುವದರಿಂದ ಅವಳು ಅಲ್ಲಿ ಕೂಡಲಿಕ್ಕೆ ನಮ್ಮದೇನೂ ಅಡ್ಡಿಯಿಲ್ಲ. ಡಿ. ಎಸ್. ಪಿ ಯವರು ತಮ್ಮ ಅಗಾಧ-ಜ್ಞಾನ-ಪ್ರಕಾಶದಿಂದ ಅದೆಷ್ಟೋ ಅಜ್ಞಾತ ಸಂಗತಿಗಳ ಮೇಲೆ ಬೆಳಕು ಕೆಡವಿದ್ದರೂ ನಾವು ಅವಳಿಗೆ ಕೊನೆಯ ವರೆಗೆ ಎಲ್ಲ ರೀತಿಯಿಂದಲೂ ಸೌಜನ್ಯವನ್ನು ತೋರಿಸುವೆವು. ಆದರೆ ಎರಡನೆ ಯವರು ಅಲ್ಲಿ ಕುಳಿತುಕೊಳ್ಳಲಿಕ್ಕೆ ನನ್ನ ತಕರಾರು ಇದೆ.'

'ಈ ಹುಚ್ಚು ಹರಟೆ ಸಾಕು; ನಿರ್ಣಯವನ್ನು ಹೇಳಿಬಿಡಿರಿ.' ಎಂದು ಮೇಜರ ಕ್ಯಾಲೆಂಡರನು ಗೊಗ್ಗರದನಿಯಲ್ಲಿ ಬೆದರಿಸಿದನು.

ದಾಸನು ತನ್ನ ಮುಖವನ್ನು ಕಾಗದಗಳಲ್ಲಡಗಿಸಿ ನಿರುಪಾಯನಾಗಿ 'ಅದಕ್ಕೆ ನಾನು ಒಪ್ಪುತ್ತೇನೆ; ನಾನು ಮಿಸ್ ಕ್ವೆಸ್ಟೆಡ್‌ಳಿಗೆ ಮಾತ್ರ ಅಲ್ಲಿ ಕುಳಿತುಕೊಳ್ಳಲಿಕ್ಕೆ ಅಪ್ಪಣೆಯನ್ನು ಕೊಟ್ಟಿದ್ದೆನು. ಅವಳ ಮಿತ್ರರು ದಯ ವಿಟ್ಟು ಕೆಳಗೆ ಇಳಿಯಬೇಕು.' ಎಂದನು

'ಸರಿಯಾಗಿ ಮಾಡಿದಿರಿ; ದಾಸರೆ! ಯೋಗ್ಯ ನಿರ್ಣಯ ಕೊಟ್ಟಿರಿ.' ಎಂದು ರೋನಿಯು ಪ್ರಾಂಜಲಮನಸ್ಸಿನಿಂದ ನುಡಿದನು.

"'ಕೆಳಗೆ ಇಳಿಯಿರಿ!' ಎಂತಹ ಉನ್ಮತ್ತತನವಿದು!" ಎಂದು ಮಿಸೆಸ್ ಟರ್ಟನ್ನಳು ಉದ್ಗಾರ ತೆಗೆದಳು

'ಮೇರಿ! ಸುಮ್ಮನೆ ಕೆಳಗಿಳಿದು ಬಾ.' ಎಂದು ಅವಳ ಗಂಡನು ಕರೆದನು.

'ಹಿ: ನನ್ನ ರೋಗಿಯನ್ನು ಹತ್ತಿರ ಯಾರೂ ಇಲ್ಲದೆ ಬಿಡಲಾರೆನು.'

'ಏಂ. ಅಮೃತರಾವ! ಅವಳೊಡನೆ ಸಿವ್ಹಿಲ್ ಸರ್ಜನ್ನರಿರುವದಕ್ಕೂ ತಮ್ಮ ತಕರಾರಿದೆಯೋನು?'

'ಇದೆ. ಕಟ್ಟೆಯ ಮೇಲೆ ಕೂಡುವದರಿಂದ ಅಧಿಕಾರವು ಬರುತ್ತದೆ.'

'ಒಂದೇ ಪೂಟು ಎತ್ತರವಿದ್ದರೂ? ಹಾಗಾದರೆ ಬಂದುಬಿಡಿರಿ ಎಲ್ಲರೂ' ಎಂದು ಕಲೆಕ್ಟರನು ನಗಲಿಕ್ಕೆ ಪ್ರಯತ್ನಮಾಡುತ್ತ ಕರೆದನು.

'ನಿಮ್ಮೆಲ್ಲರ ಉಪಕಾರವು ಬಹಳವಾಯಿತು.' ಎಂದು ದಾಸನು ದೊಡ್ಡದೊಂದು ಭಾರ ಇಳಿದಂತಾಗಿ ನುಡಿದನು.

ಮಿಸ್ ಕ್ವೆಸ್ಟೆಡ್‌ಳ ಸಹಿತ ಆ ಗುಂಪು ಕೆಳಗಿಳಿಯಿತು. ಈ ಗರ್ವಭಂಗದ ಸುದ್ದಿಯು ಬೇಗನೆ ಎಲ್ಲ ಕಡೆಗೂ ಹಬ್ಬಿತು. ಜನರು ಹೊರಗೆ ಚೇಷ್ಟೆ ಮಾಡಹತ್ತಿದರು. ಆ ಗುಂಪು ಕೆಳಗೆ ಬಂದೊಡನೆ ಅವರ ಖುರ್ಚಿಗಳೂ ಬಂದವು. ಮಹಮ್ಮದಲಿಯು ಮೂರ್ಖತನದ ಅತಿರೇಕಕ್ಕೆ ಹೋಗಿ ಅದಕ್ಕೂ 'ಯಾರ ಅಪ್ಪಣೆಯಿಂದ ಈ ಸ್ಪೆಶಲ್ ಖುರ್ಚಿಗಳು ಇಲ್ಲಿ ಬಂದವು?' ಎಂದು ತಕರಾರು ತೆಗೆದನು. ಇಂತಹವೇ ಹಚ್ಚುಚ್ಚು ಮಾತುಗಳು ಹೊರಟವು. ನೆರೆದ ಜನರೆಲ್ಲರೂ ಅದರ ಒಗ್ಗೆಯೆ ಗುಜುಗುಜು ಮಾತನಾಡಹತ್ತಿದರು.

ಈ ಸರಿವಾಟದಿಂದಲೆ ಕ್ವೆಸ್ಟೆಡ್‌ಳ ತಲೆಗೆ ಸ್ವಲ್ಪ ವಿಶ್ರಾಂತಿ ದೊರೆಯಿತು. ತಾನೀಗ ಏನೂ ತೊಂದರೆಯಿಲ್ಲದೆ ಪಾರಾಗಬಲ್ಲೆನೆಂದು ಅವಳಿಗೆ ಭರವಸೆ ಹುಟ್ಟಿತು. ಇದನ್ನು ರೋನಿಗೂ ಮಿಸೆಸ್ ಟರ್ಟನ್ನಳಿಗೂ ತಿಳಿಸಿ, ಜಾತಿಭ್ರಷ್ಟನಾದ ಫೀಲ್ಡಿಂಗನನ್ನು ಕುಳಿತಲ್ಲಿಂದಲೆ ಇನ್ನೊಮ್ಮೆ ನೋಡಿದಳು. ಅವನ ತೊಡೆಯ ಮೇಲೆ ಒಂದು ಹಿಂದೀ ಜನರ ಕೂಸು ಕುಳಿತಿತ್ತು. ಅವನೂ ಅವಳನ್ನೇ ನೋಡುತ್ತಿದ್ದನು. ಇಬ್ಬರ ದೃಷ್ಟಿಗಳೂ ಕೂಡಿದ ಕೂಡಲೆ ಅವನು ತನ್ನ ದೃಷ್ಟಿಯನ್ನು ಬೇರೆ ಕಡೆಗೆ ಹೊರಳಿಸಿದನು.

ಮ್ಯಾಜಿಸ್ಟ್ರೇಟರಿಗೂ ಈಗ ಸ್ವಲ್ಪ ಸಮಾಧಾನವಾಗಿತ್ತು. ಅವನು ಆ ಕಟ್ಟೆಯ ಮಹಾಯುದ್ಧಗಲ್ಲಿ ಗೆದ್ದು, ಉಳಿದವರ ವಿಶ್ವಾಸವನ್ನು ಸಂಪಾದಿಸಿದ್ದನು. ಅಂತೇ ಯಾವ ಮನಸಿನ ಜಂಜಾಟವೂ ಇಲ್ಲದೆ ಪುರಾವೆಗಳನ್ನು

ಕೇಳಹತ್ತಿದನು. ಸುಪರಿಂಟೆಂಡೆಂಟರು ಮತ್ತೆ ಮುಂದೆ ಸಾಗಿದರು. ಅವರು ತಮ್ಮ ಜವಾಬಿನಲ್ಲಿ ಫೀಲ್ಡಿಂಗನೂ, ಚಾಕರನಾದ ಎಂಟೋನಿಯೂ, ಸವಾಬ ಬಹದ್ದೂರರೂ ಇವನ 'ಚೇಲಾ'ಗಳಾದರೆಂದು ಅತಿ ವಿಸ್ತಾರವಾಗಿ ಹೇಳಿದರು. ಇದು ಮಾತ್ರ ಕ್ವೆಸ್ಟೆಡ್‌ಳಿಗೆ ಸಂಶಯಾಸ್ಪದವಾಗಿ ತೋರಿತು. ಅವಳು ಸುಪರಿಂಟೆಂಡೆಂಟರಿಗೆ ಅದನ್ನು ಇಷ್ಟು ಬೆಳೆಸಬೇಡಿರೆಂದೂ ಹೇಳಿಕೊಂಡಳು. ಆದರೆ ಅವರು ಅವನಿಗೆ ಕಠಿಣಶಿಕ್ಷೆಯನ್ನು ಕೊಡಿಸುವದಕ್ಕೇ ಪಂಚಿಕೆ ಹಾಕಿ, ಅವನು ಅವಳ ಮೈಮೇಲೆ ಹೋದದ್ದು ಪೂರ್ವತಯಾರಿಯಿಂದಲೇ ಎಂದು ಸಿದ್ಧಮಾಡಲಿಕ್ಕೆ ಹೊರಟಿದ್ದರು. ತಮ್ಮ ಈ ಕುಯುಕ್ತಿಯನ್ನು ಸ್ಪಷ್ಟಮಾಡಲಿಕ್ಕೆ ಅವರು ಮಾರವಾರ ಗುಡ್ಡಗಳ ಒಂದು ನಕಾಶವನ್ನೂ ಅದರಲ್ಲಿ ಅವರು ಹೋದ ದಾರಿಯನ್ನೂ ಅವರು ಇಳಿಕೊಂಡ ಕಠಾರಿ ಕೆರೆಯನ್ನೂ ಕಾಣಿಸಿ ಅದನ್ನು ಕೋರ್ಟಿನೆದುರಿಗೆ ಇಟ್ಟರು.

ಮ್ಯಾಜಿಸ್ಟ್ರೇಟರು ಪ್ರಾಚ್ಯಸಂಶೋಧನೆಯ ಶಾಸ್ತ್ರದಲ್ಲಿಯೂ ತಮ್ಮ ಅಭಿರುಚಿಯನ್ನು ವ್ಯಕ್ತಗೊಳಿಸಬೇಕಾಯಿತು, ವ್ಯಕ್ತಗೊಳಿಸಿದರು.

ಒಂದು ಮಾದರಿ ಗುಹೆಯ ಸಾದಾ ಚಿತ್ರವನ್ನು ಹಾಜರು ಮಾಡಿದರು. ಅದಕ್ಕೆ 'ಬುದ್ಧರ ಗವಿ' ಎಂದು ಬರೆದಿದ್ದರು.

'ಅದು ಬುದ್ಧರದಲ್ಲ; ಜೈನರದೆಂದೆನಿಸುತ್ತದೆ.'

'ಯಾವ ಗುಹೆಯಲ್ಲಿ ಗುನ್ಹೆಯಾಗಿದೆಯೆಂದು ತಾವು ಹೇಳುತ್ತೀರಿ?' ಬುದ್ಧರ ಗುಹೆಯಲ್ಲಿಯೋ, ಜೈನರ ಗುಹೆಯಲ್ಲಿಯೋ?' ಎಂದು ಮಹಮ್ಮದಲಿಯು ಒಳಸಂಚನ್ನೇ ಹೊರಗೆಡಹುವವನ ಹುಮ್ಮಸದಿಂದ ಕೇಳಿದನು.

'ಎಲ್ಲ ಮಾರವಾರ ಗುಹೆಗಳೂ ಜೈನರವು.'

'ಹೌದು, ಆದರೆ ಯಾವ ಜೈನ ಗುಹೆಯಲ್ಲಿ?'

'ನಿಮಗೆ ಈ ತರಹದ ಪ್ರಶ್ನೆಗಳನ್ನು ಕೇಳಲಿಕ್ಕೆ ಮುಂದೆ ಅವಕಾಶವು ದೊರಕುವದು.'

ವಿ.ಮ್ಯಾಕ್‌ಬ್ರಾಯಿಡರು ಅವರ ಮಂಕುತನವನ್ನು ನೋಡಿ ನಕ್ಕರು. ಹಿಂದೀ ಜನರು ಇಂತಹ ಯಾವುದೊ ಒಂದು ವಿಷಯವಲ್ಲದ ವಿಷಯದಲ್ಲಿಯೆ ಸುತ್ತಾಡಿ ಕೊನೆಗೆ ಅದರಲ್ಲಿಯೆ ಬಿದ್ದುಬಿಡುತ್ತಾರೆ. ಆರೋಪಿಯು ಆಗ ಮತ್ತೆಲ್ಲಿಯೋ ಇದ್ದನೆಂದು ಸಿದ್ಧಮಾಡುವ ಹುಚ್ಚು ಆಸೆಯನ್ನು ಅವರು

ಹಿಡಿದಿದ್ದರು. ಅವರಿಗೆ ಆ ಹಾದಿ-ತೋರಿಸುವವನ ಗುರುತು ಹಿಡಿಯುವದಕ್ಕೇ ಸಾಧ್ಯವಿದ್ದಿಲ್ಲ. ಮತ್ತು ಫೀಲ್ಡಿಂಗ, ಹಮೀದುಲ್ಲಾ ಇವರು ಒಂದು ದಿನ ಬೆಳುದಿಂಗಳಲ್ಲಿ ಕಾವಾದೋಲಕ್ಕೆ ಹೋಗಿ ಅದನ್ನು ಹೆಜ್ಜೆಯಿಟ್ಟು ಅಳೆದುಕೊಂಡು ಬಂದಿದ್ದಾರೆನ್ನುವದೂ ಅವನಿಗೆ ಗೊತ್ತಿತ್ತು. 'ಮಿ. ಲೆಸ್ಲಿಯವರು ಅವು ಬೌದ್ಧರವೆಂದು ಹೇಳುತ್ತಾರೆ. ಆ ವಿಷಯಕ್ಕೆ ಯಾರಿಗಾದರೂ ಗೊತ್ತಿದ್ದರೆ ಅದು ಅವರಿಗೇ ಗೊತ್ತಿದೆ. ಆದರೆ ನಾನು, ಅದರ ಆಕೃತಿಯ ಕಡೆಗೆ ತಾವು ಲಕ್ಷ್ಯಕೊಡಬೇಕೆಂದು ಕೇಳಿಕೊಳ್ಳುತ್ತೇನೆ.' ಎಂದು ಹೇಳಿ ಅವನು, ಅಲ್ಲಿಗೆ ಮಿಸ್ ಡೆರೆಕ್ಕಳು ಬಂದುದನ್ನೂ, ಅದೇ ಹೊತ್ತಿಗೆ ಕ್ವೆಸ್ಟೆಡ್‌ಳು ಕೊಳ್ಳದೊಳಗೆ ಜರಿದು ಬಿದ್ದುದನ್ನೂ, ಡೆರೆಕ್ಕಳು ಹೋಗಿ ಎತ್ತಿ ಅವಳನ್ನು ಚಂದ್ರಪುರಕ್ಕೆ ತಂದುದನ್ನೂ ಅಲ್ಲಿಂದ ಅವರ ಜವಾಬು ಕೇಳಿಕೊಂಡುದನ್ನೂ ವಿವರವಾಗಿ ಹೇಳಿದನು. ಆಮೇಲೆ ಬಂತು ಕೊನೆಯ ಪುರಾವೆ, ದುರ್ಬಿಣಿ ದೊರೆತದ್ದು. ಅವನು ಕನ್ನಡಕಗಳನ್ನು ತೆಗೆದು 'ಸದ್ಯಕ್ಕೆ ನಾನು ಹೆಚ್ಚಿಗೇನೂ ಹೇಳುವದಿಲ್ಲ. ಇದನ್ನೊಂದು ನೋಡಿಬಿಟ್ಟರೆ ಸಾಕು. ಕೈದಿಯ ಇಬ್ಬಗೆಯ ಜೀವನವು ನಿಮಗೆ ತಾನಾಗಿಯೇ ಗೊತ್ತಾಗುವದು. ಅವನು ಮಹಾ ಚಾಣಾಕ್ಷನಿದ್ದಾನೆ. ಸಭ್ಯಗೃಹಸ್ಥನ ಸೋಗು ಹಾಕಿ ಸರಕಾರಿ ನೌಕರಿಯನ್ನು ಸಹ ದೊರಕಿಸಿದ್ದಾನೆ. ಒಳಗೆ ನೋಡಿದರೆ ಹೀಗೆ ಕೊಳೆತಿದ್ದಾನೆ. ಇಂಥವನನ್ನು ದಾರಿಗೆ ತರುವದು ಅಸಾಧ್ಯದ ಮಾತೇ ಸರಿ! ಇವನು ಆ ಇನ್ನೊಬ್ಬ ಇಂಗ್ಲಿಷ ಸ್ತ್ರೀಯೊಡನೆ ಪಶುವಿನಂತೆ ನಡೆದುಕೊಂಡಿದ್ದಾನೆ. ತನ್ನ ಮುಂದಿನ ಕಾರ್ಯಸಾಧನೆಗಾಗಿ ಅವಳು ಅಡ್ಡಿಯಾಗಬಹುದೆಂದು ತಿಳಿದು ಅವಳನ್ನು ತನ್ನ ಜನರಿಂದ ತುಂಬಿದ ಒಂದು ಗುಹೆಯಲ್ಲಿ ನುಗಿಸಿ ತುಳಿಸಿದನು!'

ಅವನ ಕಡೆಯ ಮಾತಿನಿಂದ ಕೋರ್ಟಿನಲ್ಲಿ ಬಿರುಗಾಳಿಯೆದ್ದಿತು. ಮಿಸೆಸ್ ಮೂರಳ ಹೆಸರು ಸುಂಟರಗಾಳಿಯಂತೆ ತಿರುಗುತ್ತ ಎಲ್ಲಕಡೆಗೂ ಎದ್ದಿತು. ಮಹಮ್ಮದಲಿಯು ಸಿಟ್ಟಿಗೆದ್ದು ನಾಲಿಗೆಯನ್ನು ಸಿಕ್ಕಂತೆ ಹರಿಬಿಡಹತ್ತಿದನು. ಹುಚ್ಚನಂತೆ ಚೀರಿ ಕೊನೆಗೆ 'ನನ್ನ ಪಕ್ಷಕಾರನ ಮೇಲೆ ಕೊಲೆ ಮತ್ತು ಜಬರಿಯ ಆರೋಪಗಳೆರಡೂ ಹೊರಿಸಲ್ಪಟ್ಟಿವೆಯೆ?' ಎಂದು ಕೇಳಿದನು.

‘ಮೂರಳನ್ನು ಸಾಕ್ಷಿಗೆ ಕರೆಯಬೇಕೆಂದು ನಾನೇನು ಸೂಚಿಸುವದಿಲ್ಲ.’

‘ನೀವೇ ಅವಳನ್ನು ಈ ದೇಶದಿಂದ ತುಡುಗಿಲೆ ಪಾರುಮಾಡಿದ್ದೀರೆಂದ ಮೇಲೆ, ನೀವೇಕೆ ಸೂಚಿಸುವಿರಿ? ಅವಳು ನಮ್ಮ ಪಕ್ಷದವಳು. ಅವಳು ಈ ಹಿಂದುಸ್ಥಾನದ ಹಿತಬಯಸುವವಳು.’

‘ನೀವೇ ಅವಳನ್ನು ಕರೆಯಬಹುದಾಗಿತ್ತು. ಇಬ್ಬರೂ ಅವಳನ್ನು ಕರೆಯಲಿಲ್ಲ. ಈಗ ಇಬ್ಬರೂ ಅವಳನ್ನು ಪುರಾವೆಯಲ್ಲಿ ತರಬಾರದು.’ ಎಂದು ಮ್ಯಾಜಿಸ್ಟ್ರೇಟರು ಹೇಳಿದರು.

‘ಅವಳನ್ನು ಕೊನೆಯವರೆಗೂ ಮುಚ್ಚಿಟ್ಟರು—ಬಹಳ ತಡವಾಗಿ ನಮಗೆ ಗೊತ್ತಾಯಿತು. ಇದು ಇಂಗ್ಲಿಷರ ನ್ಯಾಯವು! ಇದು ಇಂಗ್ಲಿಷರ ರಾಜ್ಯವು! ಮಿಸೆಸ್ ಮೂರಳನ್ನು ಐದು ನಿಮಿಷ ಕರೆಯಿಸಿರಿ ಸಾಕು; ಅವಳು ನನ್ನ ಗೆಳೆಯನನ್ನು ಉಳಿಸುತ್ತಾಳೆ!—ಅವನ ಮಕ್ಕಳು-ಮರಿಗಳನ್ನು ಉಳಿಸುತ್ತಾಳೆ!—ಅವಳ ಪುರಾವೆ ಕಿತ್ತಿಹಾಕಬೇಡಿರಿ—ಮಿಸ್ಟರ ದಾಸರೇ! ನಿಮಗೂ ಮಕ್ಕಳಿರುವದರಿಂದ ನಿಮ್ಮ ಮಾತನ್ನು ತಿರುಗಿ ತೆಗೆದುಕೊಂಡು ಮಿಸೆಸ್ ಮೂರಳು ಬರುವಂತೆ ಮಾಡಿರಿ—’

‘ಅದಕ್ಕೆ ಅಷ್ಟು ಮಹತ್ವವಿದ್ದರೆ, ಈಗ ನನ್ನ ತಾಯಿಯು ಏಡನ್ನಕ್ಕೆ ಮುಟ್ಟಿರಬೇಕಲ್ಲ!’ ಎಂದು ರೋಸಿಯು ಎದ್ದುನಿಂತು ಹೇಳಿದನು. ಅವನು ಹೀಗೆ ಹೇಳಬಾರದಾಗಿತ್ತು. ಆದರೆ ಮಹಮ್ಮದಲಿಯ ಆರ್ಭಟಕ್ಕೆ ಗಾಬರಿಯಾಗಿ ಹಾಗೆ ಮಾಡಿದನು.

‘ಅವಳಿಗೆ ನಿಜವಾದ ಸಂಗತಿಯು ಗೊತ್ತಿದೆಯೆಂದು ಅವಳನ್ನು ಅಲ್ಲಿ ಮುಚ್ಚಿಟ್ಟಿದ್ದೀರೇನು?’ ಅವನಿಗೆ ಕೊನೆಗೆ ತಾಳ ತಪ್ಪಿತು; ತಲೆ ಕೆಟ್ಟಿತು, ಜನರ ಗೊಂದಲದೊಳಗಿಂದ ‘ನಾನು ನನ್ನ ಜೀವನವನ್ನು ಹಾಳುಮಾಡಿಕೊಳ್ಳುತ್ತಿದ್ದೇನೆ; ಆಗಲಿ, ನಾವು ಒಬ್ಬರ ಹಿಂದೊಬ್ಬರು ಹಾಳಾಗುವವರೇ!’

‘ಇದೇನು ನಿನ್ನ ಪಕ್ಷಕಾರನನ್ನು ಉಳಿಸುವ ಪದ್ಧತಿಯಲ್ಲ.’ ಎಂದು ಮ್ಯಾಜಿಸ್ಟ್ರೇಟರು ಮೂದಲಿಸಿದರು.

‘ನಾನು ಉಳಿಸಿಕೊಳ್ಳುವದೂ ನನ್ನ ಕೈಯಲ್ಲಿಲ್ಲ; ನೀನು ಉಳಿಸುವದೂ ನಿನ್ನ ಕೈಯಲ್ಲಿಲ್ಲ. ಇಬ್ಬರೂ ಗುಲಾಮರು!’

'ಮುಹಮ್ಮದಲಿಯುವರೇ, ನಾನು ಈ ಮೊದಲೆ ನಿಮಗೆ ಎಚ್ಚರಿಕೆ ಕೊಟ್ಟಿದ್ದೇನೆ. ನೀವಿನ್ನು ಕುಳಿತುಕೊಳ್ಳದಿದ್ದರೆ ನಾನು ನನ್ನ ಅಧಿಕಾರ ನಡೆಯಿಸಬೇಕಾಗುವದು.'

'ಹಾಗೇ ಮಾಡಿರಿ. ಈ ವಿಚಾರಣೆಯು ಒರಿ ಹುಡುಗಾಟಿಗೆಯಾಗಿದೆ; ನಾನು ಹೋಗುತ್ತೇನೆ.' ಎಂದು ಅವನು ಕಾಗದ-ಪತ್ರಗಳನ್ನು ಅವ್ಯವಸ್ಥಿತರಾಯುಸಿಗೊಪ್ಪಿಸಿ ಅತಿ ಉದ್ವೇಗದ ನಟನೆಯಿಂದ 'ಅಝೀಜ! ಅಝೀಜ! ನನ್ನ ಕೊನೆಯ ನಮಸ್ಕಾರ!' ಎಂದು ಬಾಗಿಲದಿಂದ ಕೂಗಿದನು. ಗೊಂದಲವು ಹೆಚ್ಚಾಯಿತು; ಮೂರಳ ಹೆಸರನ್ನು ಕೂಗುವದು ಜೋರಾಯಿತು; ಜನರಿಗೆ ಅವಳ ಹೆಸರಿನ ಅರ್ಥವಾಗದೆ ಅದೊಂದು ಮಂತ್ರವೆಂದು ತಿಳಿದು ಉಚ್ಚರಿಸಿದರು. ಆ ಹೆಸರಿನ ಹಿಂದೀಕರಣವಾಗಿ ಅದು 'ಎಸ್ಮಿಸ್ ಮೂರ್' ಎಂಬ ರೂಪವನ್ನು ತಾಳಿತು. ಇದು ಹೊರಗೆ ಓಣಿಯಲ್ಲಿಯೂ ಹರಡಿತು. ಮ್ಯಾಜಿಸ್ಟ್ರೇಟರು ಬೆದರಿಸಿ ನೋಡಿದರು; ಹೊರಗೆ ಹಾಕಿ ನೋಡಿದರು; ಏನೂ ಪ್ರಯೋಜನವಾಗಲಿಲ್ಲ.

'ಹೀಗಾಗುವದೆಂದು ನಾನು ತಿಳಿದಿದ್ದಿಲ್ಲ.' ಎಂದು ಮಿ. ಟರ್ಟನ್ನನು ನುಡಿದನು.

'ಅವಳು ಪ್ರಯಾಣವನ್ನು ಬೆಳಸುವ ಮೊದಲು ಇಲ್ಲಿದ್ದಾಗ ಮಾ[illegible]ವಾರ ಗುಹೆಗಳ ವಿಷಯವನ್ನೇ ಮಲಗಿದಾಗ ಒಡಒಡಿಸುತ್ತಿದ್ದಳು. ಅದನ್ನು ಹೊರಗೆ ವ್ಹರಾಂಡಾದಲ್ಲಿಯ ಚಾಕರರು ಕೇಳಿಕೊಂಡು ರೊಕ್ಕಕ್ಕೆ ಮಾರಿಕೊಂಡಿರಬೇಕು.' ಎಂದು ರೋನಿಯು ಉತ್ತರಕೊಟ್ಟನು.

'ಇಂಥದೊಂದೇನಾದರೂ ಅವರು ಎಬ್ಬಿಸಿಯೆ ಎಬ್ಬಿಸುವರೆಂದು ನನಗೆ ಎನಿಸಿತ್ತು.'

ಮಿಸ್ ಡೆರೆಕ್ಕಳು ಮುಂದೆ ಬಾಗಿ 'ನಿಮ್ಮ ತಾಯಿಯನ್ನು ಇದರಲ್ಲಿ ಎಳೆದುದು ಎಂಥ ಅಪಮಾನ!' ಎಂದಳು

'ಅದೊಂದು ಕುಯುಕ್ತಿ; ತುಂಟು ನೆವ. ಹೊರಗೆ ಹೋದ ಮುಹಮ್ಮದಲಿಯನ್ನು ಅವರು ಏಕೆ ಕರೆತಂದರೆಂಬುದು ಈಗ ಗೊತ್ತಾಯಿತು— ಹೀಗೆಯೆ ಒಂದು ಗೊಂದಲವನ್ನೆಬ್ಬಿಸುವದಕ್ಕಾಗಿ!'

'ಎಸ್ ಮಿಸ್ ಮೂರ್! ಎಸ್ ಮಿಸ್ ಮೂರ್! ಎಸ್ ಮಿಸ್ ಮೂರ್....'

'ರೋನಿ!....'

'ಏನು?'

'ಇದೆಲ್ಲ ವಿಚಿತ್ರವಲ್ಲವೇ?'

'ಇದು ನಿನ್ನ ಮನಸ್ಸಿನಲ್ಲಿ ಮತ್ತೆ ಉದ್ವೇಗವನ್ನು ಹುಟ್ಟಿಸುವದೇ?'

'ಎಳ್ಳಷ್ಟೂ ಇಲ್ಲ; ನಾನದರ ಕಡೆಗೆ ಲಕ್ಷ್ಯವನ್ನೇ ಕೊಡುವದಿಲ್ಲ.'

'ಸರಿ, ಅದೇ ಒಳ್ಳೆಯದು.

ತನ್ನ ಗೆಳತಿಯರ ಕಡೆಗೆ ಬಾಗಿ 'ನನ್ನ ಸಲುವಾಗಿ ನಿಮಗೆ ಚಿಂತೆ ಬೇಡ. ನನಗೀಗ ಮೊದಲಿನಕಿಂತಲೂ ಗುಣವಾಗಿದೆ; ಈಗ ಸ್ವಲ್ಪವೂ ಅಶಕ್ತ ವೆನಿಸುವದಿಲ್ಲ. ನಿಮ್ಮೆಲ್ಲರ ಉಪಕಾರವು ಬಹಳವಾಯಿತು. ನೀವು ನನ್ನ ಮೇಲೆ ಎಷ್ಟು ದಯೆ ತೋರಿಸಿದಿರಿ!' ಎಂದು ಎಸ್ ಮಿಸ್ ಮೂರದ ಗೊಂದಲವು ನಡೆದಿರುವಾಗ ಕೂಗಿ ಹೇಳಿದಳು.

ಗೊಂದಲವು ಒಮ್ಮಿಂದೊಮ್ಮೆ ನಿಂತಿತು. ಎಲ್ಲಕಡೆಗೂ ನಿಶ್ಯಬ್ದವಾಯಿತು. 'ನನ್ನ ಸಹಕಾರಿಯ ಪರವಾಗಿ ನಾನು ಕ್ಷಮೆಬೇಡಿಕೊಳ್ಳುತ್ತೇನೆ.' ಎಂದು ಅಮೃತರಾಯನು ಎಲ್ಲರಿಗೂ ಆಶ್ಚರ್ಯವಾಗುವಂತೆ ನುಡಿದನು. 'ಅವನು ನಮ್ಮ ಪಕ್ಷಗಾರನ ಪರಮ ಸ್ನೇಹಿತನಾಗಿದ್ದುದರಿಂದ ವಿಕಾರವಶನಾಗಿ ಹಾಗೆ ಹೋದನು.'

'ಮಹಮ್ಮದಲಿಯು ಸ್ವತಃ ಕ್ಷಮೆ ಬೇಡಿಕೊಳ್ಳಬೇಕಾಗುವದು. ಎಂದು ಮ್ಯಾಜಿಸ್ಟ್ರೇಟರು ಗದ್ದರಿಸಿದರು.

'ಹೌದು, ಹಾಗೆ ಮಾಡಲಿಕ್ಕೇಬೇಕು; ಆದರೆ ಮಿಸೆಸ್ ಮೂರಳ ಹತ್ತಿರ ಮಹತ್ವದ ಪುರಾವೆಯಿತ್ತೆಂದೂ ಆದನ್ನವಳು ಸಾಕ್ಷಿಯಾಗಿ ಬಂದು ಹೇಳಬೇಕೆನ್ನುತ್ತಿದ್ದಳೆಂದೂ ನಮಗೆ ಈಗ ಗೊತ್ತಾಯಿತು. ಅಂತಹ ಸಾಕ್ಷಿಯನ್ನು ಇಲ್ಲದ ಅವಸರದಿಂದ ಈ ದೇಶವನ್ನೇ ಬಿಡಿಸಿ ಕಳಿಸಲಾಯಿತು. ಇದರಿಂದ ಮಹಮ್ಮದಲಿಯ ತಲೆ ತಿರುಗಿತು. ಪೋಲಿಸರು ಮಿಸೆಸ್ ಮೂರಳನ್ನು ಮೊದಲೆ ಕರೆದಿದ್ದರೆ ಮಹಮ್ಮದಲಿಯು ಏನೂ ಎನ್ನುತ್ತಿರಲಿಲ್ಲ' ಎಂದು ಹೇಳಿ ಕುಳಿತನು.

'ವಿಚಾರಣೆಯಲ್ಲೀಗ ಸಂಬಂಧವಿಲ್ಲದ ಹೊರಗಿನ ವಿಷಯವನ್ನು ಸೇರಿಸಿದಂತಾಯಿತು. ಮಿಸೆಸ್ ಮೂರಳು ಸಾಕ್ಷಿಯಾಗಲಾರಳೆಂದು ನಾನು ಮತ್ತೊಮ್ಮೆ ಹೇಳುತ್ತೇನೆ. ಆ ಮುದುಕಿಯು ಏನು ಹೇಳುತ್ತಿದ್ದಳೆಂಬು ದನ್ನು ಊಹಿಸಲಿಕ್ಕೆ—ಅಮೃತರಾವ!—ನಿಮಗೂ ಅಧಿಕಾರವಿಲ್ಲ,–ಮ್ಯಾಕ್ ಬ್ರಾಯಿಡರೇ!–ನಿಮಗೂ ಅಧಿಕಾರವಿಲ್ಲ. ಅವಳಿಲ್ಲಿಲ್ಲ; ಆದುದರಿಂದ ಅವಳು ಏನೂ ಹೇಳಲಾರಳು' ಎಂದು ಮ್ಯಾಜಿಸ್ಟ್ರೇಟರು ಹಾದಿಯನ್ನು ಮಾಡಿ ಕೊಟ್ಟರು.

ಕೊನೆಗೆ ಸುಪರಿಂಟೆಂಡೆಂಟರು ಬೇಸತ್ತು 'ಅವಳ ವಿಷಯವನ್ನೆತ್ತಿ ದ್ದನ್ನು ನಾನು ತಿರುಗಿ ತೆಗೆದುಕೊಳ್ಳುತ್ತೇನೆ. ನನಗೆ ಈ ಮೊದಲೆ ಅವಕಾಶವು ದೊರೆತಿದ್ದರೆ ಈಗ ಹದಿನೈದು ನಿಮಿಷಗಳ ಹಿಂದೆಯೆ ನಾನು ಹಾಗೆ ಮಾಡ ಬಹುದಿತ್ತು. ನನಗೆ ಅವಳ ಸಾಕ್ಷಿಯದು ಎಳ್ಳಷ್ಟೂ ಮಹತ್ವವಿಲ್ಲ' ಎಂದರು.

'ಆರೋಪಿಯ ಪಕ್ಷದಿಂದ ನಾನು ಈ ಮೊದಲೇ ತಿರುಗಿ ತೆಗೆದು ಕೊಂಡಿರುತ್ತೇನೆ' ಎಂದು ವಿನೋದವಾಡಿದನು. 'ತಾವು ಹೊರಗಿನ ಸದ್ಗೃಹಸ್ಥರಿಗೂ ತಿರುಗಿ ತೆಗೆದುಕೊಳ್ಳಲಿಕ್ಕೆ ಮನವೊಲಿಸಬಹುದೆಂದೆನಿಸು ತ್ತಿದೆ' ಎಂದು ಇನ್ನೂ ಓಣಿಯಲ್ಲಿ ನಡೆದಿದ್ದ ಆ ಎಸ್‌ಮಿಸ್ ಮೂರದ ದನಿಯು ಬರುವ ಕಡೆಗೆ ಕೈಮಾಡಿ ತೋರಿಸಿ ತಿವಿದಾಡಿದನು.

'ನನ್ನ ಅಧಿಕಾರವು ಅಲ್ಲಿಯ ವರೆಗೆ ಮುಟ್ಟುವದಿಲ್ಲೆಂದೆನಿಸುತ್ತದೆ' ಎಂದು ದಾಸನೂ ನಕ್ಕು ಉತ್ತರ ಕೊಟ್ಟನು.

ಅಂತೂ ಎಲ್ಲವೂ ಶಾಂತವಾಯಿತು. ಅಡೀಲಾ ಜವಾಬು ಕೊಡಲಿಕ್ಕೆ ಎದ್ದುನಿಂತಳು. ಸೂಜಿ ಬಿದ್ದರೂ ಕೇಳಿಸುವಷ್ಟು ಸ್ತಬ್ಧತೆ ಬಂದಿತ್ತಾಗ. ಎದ್ದಕೂಡಲೆ ಅವಳ ಮನಸ್ಸಿನೆದುರಿಗೆ ಮಾರವಾರದ ಪ್ರವಾಸವೆಲ್ಲ ಮೊದಲಿ ನಿಂದ ಕೊನೆಯ ವರೆಗೆ—ಆಡಿದ ಮಾತುಗಳು, ಆಡದಿದ್ದ ವಿಚಾರಗಳು, ನೋಡಿದ ಚಮತ್ಕಾರಗಳು, ಮಾಡಿದ ಲೀಲೆಗಳು—ಎಲ್ಲ ಒಂದೊಂದಾಗಿ ಹಾಯ್ದುಹೋದವು. ಮೊದಮೊದಲು ಉತ್ತರ ಕೊಡುವಾಗ ತಾನೆಲ್ಲಿ ತಡವರಿಸುವೆನೋ ಎಂದು ಅವಳು ಗಾಬರಿಯಾಗಿದ್ದಳು. ಆದರೆ ಯಾವುದೋ ಒಂದು ಹೊಸ ಅನಿವಾರ್ಯವಾದ ಭಾವನೆಯು ಮಂತ್ರಕವಚದಂತೆ ಅವ ಳನ್ನು ರಕ್ಷಿಸುತ್ತಿತ್ತು.

'ಆರೋಪಿಯೂ ಮತ್ತು ದಾರಿ-ತೋರಿಸುವವನೂ ನಿಮ್ಮನ್ನು ಕಾವಾಡೋಲಕ್ಕೆ ಕರೆದುಕೊಂಡು ಹೋದರು. ಆಗ ಉಳಿದವರಾರೂ ಇದ್ದಿಲ್ಲವಷ್ಟೇ ?'

'ಆ ಚಮತ್ಕಾರವಾದ ಗುಡ್ಡಕ್ಕಲ್ಲವೇ ? ಹೌದು.' ಎನ್ನುವಾಗ ಕಾವಾಡೋಲವೇ ಅವಳ ಕಣ್ಣೆದುರಿಗೆ ಕಟ್ಟಿದಂತಾಯಿತು; ಮತ್ತು ಅದರೊಳಗಿನ ಶಕೆಯೂ ಬಂದು ಮುಖಕ್ಕೆ ಉಗ್ಗಿದಂತೆ ಅವಳಿಗೆನಿಸಿತು. ಏನೂ ತಿಳಿಯದವಳಾಗಿ 'ನನಗೆ ನೆನಪಿದ್ದಮಟ್ಟಿಗೆ ನನ್ನ ಜೊತೆಗೆ ಯಾರೂ ಇದ್ದಿಲ್ಲ; ನಾವಿಷ್ಟೇ ಇದ್ದಂತೆ ತೋರುತ್ತದೆ.' ಎಂದು ಮತ್ತೆ ಜೋಡಿಸಿದಳು.

'ಒಳ್ಳೇದು, ಗುಡ್ಡದ ಮೇಲೆ ಅರ್ಧ ಹಾದಿಗೆ ಒಂದು ಕಿರಿದಾದ ಸಮಭೂಮಿಯಿದೆ; ಅಲ್ಲಿ ಒಂದು ಸರುವಿನ ದಂಡೆಯ ಮೇಲೆ ಗುಹೆಗಳು ನಿಂತಿವೆಯಲ್ಲವೇ ?'

'ಓ! ನೀವು ಹೇಳುವ ಸ್ಥಳವು ನನಗೆ ಗೊತ್ತಾಯಿತು.'

'ಅವುಗಳೊಳಗಿನ ಒಂದು ಗುಹೆಯಲ್ಲಿ ನೀವೊಬ್ಬರೇ ಹೋದಿರಲ್ಲವೆ?'

'ಹೌದು, ಸರಿಯಾಗಿ.'

'ಮತ್ತು ಕೈದಿಯು ನಿಮ್ಮ ಬೆನ್ನುಹತ್ತಿದನು ?'

'ಈಗ ಮಾತ್ರ ಸಿಕ್ಕನು ನೋಡು!' ಎಂದು ಮೇಜರರ ಬಾಯಿಂದ ಹೊರಬಿತ್ತು.

ಅಡೀಲಾ ಸುಮ್ಮನಿದ್ದಳು. ಕೋರ್ಟು, ಪ್ರಶ್ನೆ ಕೇಳಿದವರು, ಅವಳ ಉತ್ತರಕ್ಕಾಗಿ ಕಾದುನಿಂತಿದ್ದರು. ಆದರೆ ಅಝೀಜನು ಅಲ್ಲಿ ನ್ಯಾಯಾಸ್ಥಾನದ ಎದುರಿಗೆ ಬಂದು ನಿಲ್ಲುವ ವರೆಗೆ ಅವಳಿಂದ ಉತ್ತರಕೊಡುವದಾಗಲಿಲ್ಲ.

'ಕೈದಿಯು ನಿಮ್ಮ ಬೆನ್ನುಹತ್ತಿ ಬಂದನಲ್ಲವೇ ?' ಎಂದು ಒಂದೇ ತರದ ದನಿಯಲ್ಲಿ ಮತ್ತೆ ಕೇಳಿದನು. ಅವನೀಗ ಅವರಿಗೊಪ್ಪಿಗೆಯಾಗುವಂತಹ ಮಾತುಗಳನ್ನೇ ಆಡುತ್ತಿದ್ದುದರಿಂದ ವಿಚಾರಣೆಯು ಪ್ರೇಕ್ಷಕರ ಕುತೂಹಲವನ್ನು ಅಷ್ಟೇನು ಕೆರಳಿಸಲಿಲ್ಲ.

'ಮಿ. ಮ್ಯಾಕ್‌ಬ್ರಾಯಿಡರೆ, ನಿಮ್ಮ ಪ್ರಶ್ನೆಗೆ ಉತ್ತರ ಕೊಡುವ ಮೊದಲು ಒಂದರ್ಧ ನಿಮಿಷ ಅವಕಾಶ ಕೊಡುತ್ತೀರಾ ?'

'ಬೇಲಾಷಕ್'

'ನ-ನ-ಗೆ....' ಎಂದು ತಡವರಿಸಿದಳು. ಅವಳಿಗೆ ಆ ಹಿಂದಿನ ನೆನಪು ನುಗ್ಗಿಬಂದು ಅವಳ ಮಾತನ್ನೆ ಅಡಗಿಸಿತು. ಆದರೂ ಧೈರ್ಯ ತಾದುಕೊಂಡು 'ನನಗದು ಅಷ್ಟು ನಿಶ್ಚಿತವಾಗಿ ಗೊತ್ತಿಲ್ಲ.' ಎಂದಳು.

'ದಯವಿಟ್ಟು ಇನ್ನೊಮ್ಮೆ ಹೇಳುವಿರಾ?' ಸುಪರಿಂಟೆಂಡೆಂಟರು ಕೇಳಿದರು.

'ನನಗೆ ನಿಶ್ಚಿತವಾಗಿ ಹೇಳಲಿಕ್ಕೆ ಬರುವಂತಿಲ್ಲ....'

'ನನಗೆ ನೀವಂದಿದ್ದರ ಅರ್ಥವು ಸರಿಯಾಗಿ ಆಗಲಿಲ್ಲ!' ಎಂದು ಅವನು ದಿಗ್ಭ್ರಾಂತನಾಗಿ ನೋಡಿ ತುಟಿಕಚ್ಚಿ, 'ಇಕಾ, ಆ ಮರಡಿಯ ಮೇಲೆ—ಆ ಸ್ಥಳಕ್ಕೆ ಏನಾದರೂ ಎನ್ನಿರಿ—ನೀವು ಈಗ ಇದ್ದೀರೆಂದು ತಿಳಿಯಿರಿ; ಮತ್ತು ನೀವು ಗುಹೆಯನ್ನು ಪ್ರವೇಶಿಸಿದಿರೆಂದೂ ತಿಳಿಯಿರಿ. ಆಗ ನಿಮ್ಮನ್ನು ಕೈದಿಯು ಅನುಸರಿಸಿದನು?' ಎಂದು ಕೇಳಿ, ಹೌದೆನ್ನಿರೆಂದು ತಲೆಹಾಕಿ ಸೂಚಿಸಿದನು.

ಇಲ್ಲೆಂದು ಅವಳು ತಲೆಯನ್ನಲ್ಲಾಡಿಸಿದಳು.

'ಏನು! ಏನು! ನೀವನ್ನುವದಾವದೂ ಏನು?'

'ಇಲ್ಲ.' ಎಂದು ಅವಳು ನಿರ್ದಾಕ್ಷಿಣ್ಯವಾಗಿ ಹೇಳಿದಳು. ಕೂಡಲೆ ಆ 'ಹಾಲಿ'ನಲ್ಲಿ ಗುಜುಗುಜು ನಡೆಯಿತು. ಆದರೆ ಫೀಲ್ಡಿಂಗನೊಬ್ಬನನ್ನು ಬಿಟ್ಟು ಇನ್ನಾರಿಗೂ ಏನು ನಡೆದಿದೆಯೆಂಬದರ ಅರ್ಥವೇ ಆಗಿರಲಿಲ್ಲ.

'ಅದೇನು? ನೀವೆನ್ನುವಿರಿ? ದಯವಿಟ್ಟು ಹೇಳಿ.' ಎಂದು ಮ್ಯಾಜಿಸ್ಟ್ರೇಟರು ಮುಂದೆ ಬಾಗಿದರು.

'ನಾನು ತಪ್ಪುಮಾಡಿದೆನೆಂದು ನನಗೆನಿಸುತ್ತದೆ.'

'ಎಂತಹ ತಪ್ಪು?'

'ಡಾ. ಅಝೀಜನೆಂದೂ ನನ್ನ ಬೆನ್ನುಹಿಂದೆ ಗುಹೆಯಲ್ಲಿ ಬರಲಿಲ್ಲ.'

ಸುಪರಿಂಟೆಂಡೆಂಟರು ತಮ್ಮ ಕಾಗದಗಳನ್ನು ಕೆಳಗಪ್ಪಳಿಸಿ ಮತ್ತೆ ಮೇಲೆತ್ತಿ ಶಾಂತರಾಗಿ 'ಮಿಸ್ ಕ್ವೆಸ್ಟೆಡ್! ಇಲ್ಲಿ ಕೇಳಿರಿ, ಇದೆಲ್ಲ ಆದ ಎರಡೇ ತಾಸಿನ ನಂತರ ನೀವು ಸಹಿ ಹಾಕಿ ನನ್ನ ಬಂಗ್ಲೆಯಲ್ಲಿ ಬರೆದು ಕೊಟ್ಟ 'ಜಬಾನಿಯನ್ನು ಓದಿತೋರಿಸುತ್ತೇನೆ.'

'ಕ್ಷಮಿಸಿರಿ, ಮ್ಯಾಕ್‌ಬ್ರಾಯಿಡರೇ! ನೀವಿನ್ನು ಮುಂದೆ ನಡಿಸಲಾರಿರಿ. ನಾನೇ ಸಾಕ್ಷೀದಾರಳೊಡನೆ ಮಾತನಾಡುತ್ತೇನೆ—ಜನರೆಲ್ಲ ಸುಮ್ಮ-ನಾಗಬೇಕು—ಇಲ್ಲದಿದ್ದರೆ ನಾನು ಕೋರ್ಟನ್ನು ಬರಿದುಮಾಡಿಸಬೇಕಾಗುತ್ತದೆ—ಮಿಸ್ ಕ್ವೆಸ್ಟೆಡ್! ನೀವು ನನ್ನೊಡನೆ ಮಾತನಾಡಬೇಕು—ನಾನು ನಿಮ್ಮ ಖಟ್ಲೆ ನಡಿಸುವ ಮ್ಯಾಜಿಸ್ಟ್ರೇಟನು ಗೊತ್ತಿರಲಿ—ಮತ್ತು ನೀವಿಲ್ಲಿ ಶಪಥವನ್ನು ಮಾಡಿ ಮಾತಾಡುತ್ತಿರುವದನ್ನು ನೆನಪಿಸಲ್ಲಿಡಬೇಕು.'

'ಡಾ. ಅಝೀಜನು ಎಂದೂ....'

'ಅವಳ ಅಸ್ವಸ್ಥತೆಯ ನಿಮಿತ್ತದಿಂದ ಈ ಖಟ್ಲೆಯನ್ನು ನಾನು ನಿಲ್ಲಿಸುತ್ತೇನೆ.' ಎಂದು ಮೇಜರನು ಕೂಗಿದನು. ಎಲ್ಲ ಇಂಗ್ಲಿಷ ಜನರೂ ಒಮ್ಮೆಲೆ ತಮ್ಮ ಸ್ಥಳವನ್ನು ಬಿಟ್ಟು ಎದ್ದರು. ಆ ಭವ್ಯ ಬಿಳಿ ಮೂರ್ತಿಗಳ ಹಿಂದೆ ಆ ಮ್ಯಾಜಿಸ್ಟ್ರೇಟನು ಮರೆಯಾದನು. ಹಿಂದೀ ಜನರೂ ಎದ್ದರು. ಕೋರ್ಟಿನಲ್ಲಿ ಗೊಂದಲವೆದ್ದಿತು

'ನೀವು ಖಟ್ಲೆಯನ್ನು ತಿರುಗಿ ತೆಗೆದುಕೊಳ್ಳುವಿರಾ? ನನಗೆ ಉತ್ತರ ಕೊಡಿರಿ' ಎಂದು ಮ್ಯಾಜಿಸ್ಟ್ರೇಟನು ಗದ್ದಲದಲ್ಲಿಯೆ ಕಿರಿಚಿಕೊಂಡನು.

'ನಾನು ಎಲ್ಲವನ್ನೂ ತಿರುಗಿ ತೆಗೆದುಕೊಳ್ಳುವೆನು.' ಎಂದು ಅಡೀಲಾ ಸರಳವಾಗಿ ಹೇಳಿದಳು.

'ಸಾಕು, ಕುಳಿತುಕೊಳ್ಳಿರಿ. ಮ್ಯಾಕ್‌ಬ್ರಾಯಿಡರೇ! ಇಷ್ಟಾದರೂ ನೀವು ಇನ್ನೂ ಮುಂದೆ ನಡಿಸಬೇಕೆನ್ನುವಿರೊ?'

ಮುರಿದುಹೋದ ಯಂತ್ರದ ಕಡೆಗೆ ನೋಡುವ ಹಾಗೆ ಸುಪರಿಂಟೆಂಡೆಂಟರು ಅವಳ ಕಡೆಗೆ ನೋಡಿ 'ನಿನಗೇನು ಹುಚ್ಚು ಹಿಡಿದಿದೆಯೋ?' ಎಂದು ಕೇಳಿದರು.

'ನೀವು ಪ್ರಶ್ನೆಮಾಡಕೂಡದು. ನಿಮಗಿನ್ನು ಅವಳನ್ನು ಕೇಳುವ ಅಧಿಕಾರವಿಲ್ಲ.'

'ನನಗೆ ವಿಚಾರಮಾಡಲಿಕ್ಕೆ ಅವಕಾಶವನ್ನು ಕೊಡಬೇಕು.'

'ಸಾಹೇಬರೇ, ನೀವು ತಿರುಗಿ ತೆಗೆದುಕೊಳ್ಳಬೇಕಾಗುವದು. ಇಲ್ಲವಾದರೆ ನಿಮ್ಮ ಕೀರ್ತಿಕಳಸವು ಉರುಳುವದು.' ಎಂದು ನವಾಬಬಹುದ್ದೂರರು ಒಮ್ಮಿಂದೊಮ್ಮೆ ಹಿಂದಿನ ಮಗ್ಗುಲಿಂದ ಗದ್ದರಿಸಿದರು.

' ಎಂದೂ ಹಿಂತೆಗೆದುಕೊಳ್ಳುವದಿಲ್ಲ. ' ಎಂದು ಮಿಸೆಸ್ ಟರ್ಟನ್ನಳು ಹೆಚ್ಚಾಗುತ್ತಿರುವ ಗದ್ದಲದಲ್ಲಿಯೂ ಕೇಳುವಂತೆ ಕೂಗಿದಳು. 'ಬೇರೆ ಸಾಕ್ಷಿದಾರರನ್ನು ಕರೆಯಿಸಿರಿ; ಈಗ ನಾವಾರೂ ಸುರಕ್ಷಿತರಿಲ್ಲ....' ಅವಳನ್ನು ತಡೆಯಲಿಕ್ಕೆ ರೋನಿಯು ಯತ್ನಿಸಿದನು. ಆದರೆ ಅವಳು ಆವನಿಗೊಂದು ಏಟನ್ನು ಕೊಟ್ಟು ಅಡೀಲಾಳನ್ನು ಬಾಯಿಗೆ ಬಂದಹಾಗೆ ಬೈಯುಹತ್ತಿದಳು.

ಸುಪರಂಟೆಂಡೆಂಟನು ತನ್ನ ಮಿತ್ರರಿಗೆ ಸಹಾಯುಮಾಡಲಿಕ್ಕೆ ಎದ್ದು ಹೋಗುವಾಗ ಏನೂ ಉದ್ವೇಗಗೊಳ್ಳದೆ ಮ್ಯಾಜಿಸ್ಟ್ರೇಟರಿಗೆ ' ಸರಿ, ನಾನು ತಿರುಗಿ ತೆಗೆದುಕೊಳ್ಳುತ್ತೇನೆ. ' ಎಂದು ಹೇಳಿದನು.

ದಾಸನು ಈ ತಿಕ್ಕಾಟದಿಂದ ದಣಿದು ಹೆಣವಾಗಿ ಎದ್ದನು. ಆರೋಪಿಯು ಅವನ ಶೀಲಕ್ಕೆ ಯಾವ ಕಲಂಕವೂ ಇಲ್ಲದೆ ಬಿಡಲ್ಪಟ್ಟಿದ್ದಾನೆ. ಇನ್ನು ಖರ್ಚಿನ ವಿಷಯು ಹಿಂದುಗಡೆ ನಿರ್ಣಯಿಸಲ್ಪಡುವದು.' ಎಂದು ಸಾರಿದನು.

ಅಲ್ಲಿಂದ ಕೋರ್ಟಿನ ಬಿಗಿಕಟ್ಟು ಸಡಿಲಾಯಿತು. ನಿಂದೆಯ, ಸಿಟ್ಟಿನ, ಸೇಡಿನ ನುಡಿಗಳು ಮೇಲೆದ್ದವು. ಜನರು ಕೂಗಾಡಿದರು, ಶಪಿಸಿದರು, ವಿಕಾರವಶರಾಗಿ ಅತ್ತರು; ಇತ್ತ ಚಾಕರರಿಂದ ಸಂರಕ್ಷಿಸಲ್ಪಟ್ಟ ಇಂಗ್ಲಿಷರು ನಿಂತಿದ್ದರು; ಅತ್ತ ಹಮಿಾದುಲ್ಲಾನ ತೋಳುಗಳ ಅಪ್ಪಿಗೆಯಲ್ಲಿ ಅಝೀಜನು ಮೂರ್ಛೆಹೋಗಿದ್ದನು. ಇತ್ತ ಕಡೆಗೆ ಗೆಲುವು; ಅತ್ತ ಕಡೆಗೆ ಸೋಲು. ಜನರು ಒಬ್ಬರಮೇಲೊಬ್ಬರು ಬೀಳುತ್ತ, ನೂಕುತ್ತ, ಆ ಕೋರ್ಟಿನಿಂದ ಹೊರಗೆ ಬಂದು ತಮ್ಮ ತಮ್ಮ ಕೆಲಸಗಳಿಗೆ ಹೋದರು. ಸ್ವಲ್ಪ ಹೊತ್ತಿನಲ್ಲಿಯೆ ಆ ' ಹಾಲು ' ತೆರವಾಯಿತು. ಅರೆಬತ್ತಲೆಯಿದ್ದ ಆ ಪಂಖಾವಾಲಾನು ಇದಾವುದರ ಅರಿವೂ ಇಲ್ಲದೆ, ಹಗ್ಗವನ್ನು ಇನ್ನೂ ಜಗ್ಗುತ್ತ, ಅಸ್ತವ್ಯಸ್ತವಾಗಿ ಬಿದ್ದ ಆ ಖುರ್ಚಿಗಳನ್ನು ನೋಡುತ್ತ ಏಕಾಕಿಯಾಗಿ ಕುಳಿತಿದ್ದನು.

—

## ಪ್ರಕರಣ ೨೫

ಮಿಸ್ ಕ್ವೆಸ್ಟೆಡ್‌ಳು ಅದುಹೇಗೋ ತನ್ನ ಜನರಿಂದ ತಪ್ಪಿಸಿಕೊಂಡು, ಹಿಂದೀ ಜನರ ಸುಗ್ಗಾಟದಲ್ಲಿ ಸಿಕ್ಕಿಕೊಂಡು, ಆ ಜನಪ್ರವಾಹದಗುಂಟ ಹೊರಟಿರುವಾಗ ಆಕಸ್ಮಾತ್ತಾಗಿ ಫೀಲ್ಡಿಂಗನಿಗೆ ಒಂದು ಅಪ್ಪಳಿಸಿದಳು. ಅವನು ಗಾಬರಿಯಾಗಿ ಹಿಂತಿರುಗಿ ನೋಡಿ 'ಯಾರು? ನೀನೇ! ಇಲ್ಲಿ ಹೇಗೆ ಬಂದೆ? ಏನು ಬೇಕು ನಿನಗೆ?' ಎಂದು ಕೇಳಿದನು. ಅವಳದಕ್ಕೆ ಏನನ್ನೂ ಮಾತನಾಡದೆ ಸುಮ್ಮನೆ ಬಿಸಿಲಲ್ಲಿ ಮುಂದೆ ಹೊರಟುಹೋದಳು.

'ಕ್ವೆಸ್ಟೆಡ್! ನೀನೆತ್ತ ಹೊರಟಿರುವೆ?' ಎಂದು ಫೀಲ್ಡಿಂಗನು ಹಿಂದಿನಿಂದ ಮತ್ತೆ ಕೂಗಿ ಕೇಳಿದನು.

'ನನಗೆ ಗೊತ್ತಿಲ್ಲ.' ಎಂದು ಉತ್ತರ ಬಂತು.

'ನೀನು ಹೀಗೆ ಒಬ್ಬಳೆ ತಿರುಗಾಡಬಾರದು. ನೀನು ಬಂದ 'ಕಾರು' ಎಲ್ಲಿದೆ?'

'ಅದೇನೂ ಗೊತ್ತಿಲ್ಲ. ನಾನೀಗ ನಡೆಯುತ್ತ ಹೋಗುವೆನು.'

'ಎಂಥ ಹುಚ್ಚುತನ!....ಈಗ ದಂಗೆಯೇಳುವದಿದೆಯಂತೆ.... ಪೋಲಿಸರೂ ಮುಷ್ಕರ ಹೂಡಿದ್ದಾರೆ..ಮುಂದೇನಾಗುವದೋ ಯಾರಿಗೂ ತಿಳಿಯದು....ನೀನು ನಿನ್ನ ಜನರೊಡನೇಕೆ ಕೂಡಿರಲಿಲ್ಲ?..'

'ನಾನು ಅವರ ಕೂಡಿರಬೇಕೇ?'

'ಆಯಿತು, ಇನ್ನುಮೇಲೆ ನಿನ್ನಿಂದಾಗದು; ಒಹಳ ತಡವಾಯಿತು— ನೀನು ಅತ್ತ ಆ ಸಣ್ಣ ಬಾಗಿಲ ಕಡೆಗೆ ಹೋಗುವದು ಹೇಗೆ?—ಹಂ, ಹೀಗೆ ನನ್ನೊಡನೆ ಬಾ, ಬೇಗ—ನಾನು ನಿನ್ನನ್ನು ನನ್ನ ಗಾಡಿಯಲ್ಲಿ ಕೂಡಿಸುವೆನು—'

'ಸಿರಿಲ್! ಸಿರಿಲ್! ನನ್ನನ್ನು ಬಿಟ್ಟುಹೋಗಬೇಡ! ಎಂದು' ಅಝೀಜನು ಬಿದ್ದ ದನಿಯಲ್ಲಿ ಕೂಗಿದನು.

'ನಾನೀಗ ತಿರುಗಿ ಬರುತ್ತೇನೆ—ಹೀಗೆ ಬಾ ಕ್ವೆಸ್ಟೆಡ್, ನೀನೀಗ ಚರ್ಚಿಸುತ್ತ ನಿಲ್ಲಬೇಡ—' ಎಂದು ಅವನು ಅವಳ ರಟ್ಟೆಯನ್ನು ಗಟ್ಟಿಯಾಗಿ ಹಿಡಿದು 'ರೀತಿ-ಭಾತಿ ಬಿಟ್ಟದ್ದಕ್ಕಾಗಿ ಕ್ಷಮಿಸಬೇಕು. ನನಗೆ ಯಾರ

ಮರ್ಯಾದೆ ಎಷ್ಟು ಎನ್ನುವದು ಗೊತ್ತಿಲ್ಲ. ನಾಳೆ ಬೇಕಾದಾಗ ಈ ಗಾಡಿಯನ್ನು ತಿರುಗಿ ಕಳಿಸಬಹುದು.'

'ಆದರೆ ಅದರಲ್ಲಿ ಕುಳಿತು ನಾನೆಲ್ಲಿಗೆ ಹೋಗಬೇಕು ?'

'ನಿನಗೆ ಬೇಕಾದಲ್ಲಿಗೆ; ನಿನ್ನ ವ್ಯವಸ್ಥೆಯನ್ನು ನಾನೇನು ಬಲ್ಲೆ ?'

ಅವನ ವ್ಹಿಕ್ಟೋರಿಯಾ ಗಾಡಿಯು ಬೀದಿಯ ಒಂದು ಬದಿಗೆ ನಿಂತಿತ್ತು. ಆದರೆ ಕುದುರೆಗಳೇ ಇರಲಿಲ್ಲ. ಕುದುರೆ-ಚಾಕರನು ಖಟ್ಲೆಯು ಒಮ್ಮೆಲೆ ಹೀಗೆ ಮುಗಿಯುವದೆಂಬದು ಗೊತ್ತಾಗದೆ ಅವನ್ನು ತೆಗೆದುಕೊಂಡು ತನ್ನ ಗೆಳೆಯನ ಮನೆಗೆ ಹೋಗಿದ್ದನು. ಅವಳು ನಿರ್ವಾಹವಿಲ್ಲದೆ ಅವನಿಗೆ ವಿಧೇಯಳಾಗಿ ಆ ಗಾಡಿಯಲ್ಲಿ ಹತ್ತಿ ಕುಳಿತುಕೊಂಡಳು. ಆ ಗೊಂದಲವಿನ್ನೂ ಮತ್ತೆ ಬೆಳೆದು ಅತಿರೇಕಕ್ಕೇರುವ ಚಿನ್ಹಗಳು ತೋರಿದ್ದರಿಂದ ಫೀಲ್ಡಿಂಗನು ಅವಳನ್ನು ಬಿಟ್ಟು ಕದಲಲಿಲ್ಲ. ಬಜಾರದೊಳಗಿನ ಮುಖ್ಯ ಮಾರ್ಗವು ಬಂದಾಗಿತ್ತು. ಉಳಿದ ಇಂಗ್ಲಿಷರು ಆ ರಸ್ತೆಯನ್ನೆ ಬಿಟ್ಟು ಸಂದಿಗೊಂದಿಗಳೊಳಗಿಂದ ಹಾಯ್ದು ಸಿವ್ಹಿಲ್ ಸ್ಟೇಶನ್ನಕ್ಕೆ ಹೋಗುತ್ತಿದ್ದರು. ಒಂದುವೇಳೆ ಅವರು ಬಜಾರದಲ್ಲಿ ಸಿಕ್ಕಿದ್ದರೆ ಅವರನ್ನು ಹುಳುಗಳಂತೆ ಕಾಲಿಂದ ತುಳಿದು ತುಳಿದು ಅವರು ಕೊಲ್ಲಬಹುದಾಗಿತ್ತು.

'ಏನು—ಇದನ್ನೇನು ಮಾಡುತ್ತಿರುವಿ ? ಇದೇನು ಆಟವೊ ಕಾಟವೊ? ಏನಿದು ?' ಎಂದು ಫೀಲ್ಡಿಂಗನು ಒಮ್ಮೆಲೆ ಕವುಕ್ಕೆಂದು ಅಡರಿದನು.

'ಇಲ್ಲ, ಸರ್; ನಿಮ್ಮ ದೆಸೆಯಿಂದ ಇವು..' ಎಂದು ಒಬ್ಬ ವಿದ್ಯಾರ್ಥಿಯು ಮಲ್ಲಿಗೆಯ ಮಾಲೆಯನ್ನು ಕೈಮೇಲೆ ಹಾಕಿಕೊಂಡು ಓಣಿಯೊಳಗಿಂದ ಓಡುತ್ತೋಡುತ್ತ ಬಂದು ಅವನನ್ನು ತಡೆದನು.

'ಈ ಹೊಲಸು ಬೇಡ ನನಗೆ. ಹೋಗು ಆಚೆಗೆ!'

ಅಷ್ಟರಲ್ಲಿ ಇನ್ನೊಬ್ಬನು ಬಂದು ಆ ವ್ಹಿಕ್ಟೋರಿಯಾದ ತೋಳುಗಳನ್ನು ಮೇಲಕ್ಕೆತ್ತಿ 'ಸರ್, ನಾನು ಕುದುರೆ—ನಾವು ನಿಮ್ಮ ಕುದುರೆಗಳಾಗುವೆವು....' ಎಂದನು

'ನಮ್ಮ ಗಾಡಿ-ಹೊಡೆಯುವವನನ್ನು ಕರೆ,ರಫೀ! ಅವನೆಲ್ಲ ಒಯ್ಯುತ್ತಾನೆ.'

'ಇಲ್ಲ ಸರ್, ಇದೊಂದು ನಮಗೆ ಮರ್ಯಾದೆ.'

ಫೀಲ್ಡಿಂಗನಿಗೆ ತನ್ನ ಶಿಷ್ಯರ ಈ ನಡತೆಯಿಂದ ಬೇಜಾರು ಒಂದಿತು. ಅವನನ್ನು ಅವರು ಆದರಿಸಿದರೂ ಅವನ ಮಾತು ಮಾತ್ರ ಕೇಳದಾದರು. ಮಲ್ಲಿಗೆ-ಗುಲಾಬಿ ಮಾಲೆಗಳಿಂದ ಅವನಿಗೆ ಉರುಲು ಹಾಕಿದರು. ಗಾಡಿಯು ಮುಂದಿನ ಮಣೆಯನ್ನು ಗೋಡೆಗೆ ತಿಕ್ಕಿದರು; ಪದ್ಯಗಳನ್ನು ಹಾಡಹತ್ತಿದರು. ಈ ಗೊಂದಲಕ್ಕೆ ಒಣಿಯೊಳಗಿನ ಜನರೆಲ್ಲ ನೆರೆದರು.

'ಸರ್, ಅವಸರಮಾಡಿರಿ, ನಿಮ್ಮನ್ನೂ ಅಝೀಜನ ಆ ದೊಡ್ಡ ಮೆರೆವಣಿಗೆಯ ಮುಂದೇ ಎಳೆದೊಯ್ಯುವೆವು.' ಎಂದು ಅರ್ಧ ಪ್ರೇಮದಿಂದ, ಅರ್ಧ ಉದ್ಧಾಮತನದಿಂದ ಅವರು ಅವನನ್ನು ಮೊಟ್ಟೆಕಟ್ಟಿ ಗಾಡೀಯಲ್ಲಿ ಹಾಕಿಯೆಬಿಟ್ಟರು.

'ಇದೆಲ್ಲ ನಿನಗೆ ಒಗ್ಗುತ್ತದೋ ಇಲ್ಲವೋ ಗೊತ್ತಿಲ್ಲ. ಏನೇ ಆಗಲಿ, ನೀನಂತೂ ಸುರಕ್ಷಿತಳಾದಿ.' ಎಂದು ಕ್ವೆಸ್ಟೆಡ್‌ಳಿಗೆ ಹೇಳಿದನು.

ಗಾಡಿಯು ಅಝೀಜನ ಮೆರೆವಣಿಗೆಯ ಮುಂದೆಯೆ ಹೊಯ್ದಾಡುತ್ತ ಮುಖ್ಯಪೇಟೆಯ ಕಡೆಗೇ ಹೊರಟಿತು. ಜನರು ಈ ಮೆರೆವಣಿಗೆಯನ್ನು ನೋಡಿ ಬಹಳ ಉದ್ವೇಗಗೊಂಡರು. ಏನೇನೋ ಸುಳ್ಳು ಸುದ್ದಿಗಳು, ಕಾಲಿಲ್ಲದ ಕತೆಗಳು, ಆಗಲೆ ಊರಲ್ಲಿ ಹಬ್ಬಿದ್ದವು. ಅವಳು ಫೀಲ್ಡಿಂಗನೊಡನೆ ಕುಳಿತದ್ದನ್ನು ನೋಡಿ ಕೆಲರು ಅತಿ ಹರ್ಷದಿಂದ ಕೂಗಿದರು; ಕೆಲವರು ಅವಳನ್ನು ಮಿಸೆಸ್ ಮೂರ್ ಎಂದು ತಿಳಿದು ಅವಳಿಗೂ ಮಾಲೆಗಳನು ಹಾಕಿದರು.

ಆ ದೊಡ್ಡ ಮೆರೆವಣಿಗೆಯು ಎಲ್ಲೆಲ್ಲಿಯೋ—ಬೇಕಾದಲ್ಲಿ, ಬೇಡಾದಲ್ಲಿ—ಸುತ್ತಾಡಿಕೊಂಡು ಬರುವದಿತ್ತು. ಆದರೆ ವಿದ್ಯಾರ್ಥಿಗಳು ಅದು ಗವ್ಹರ್ನಮೆಂಟ ಕಾಲೇಜಿಗೇ ಹೋಗಬೇಕಾಗಿದೆಯೆಂದು ತಿಳಿದುಕೊಂಡು, ತಾವು ಅದರಕಿಂತಲೂ ಮೊದಲಿಗೇ ಅಲ್ಲಿ ಹೋಗಿರಬೇಕೆಂದು ತಮ್ಮ ಗಾಡಿಯನ್ನು ಒಮ್ಮೆಲೆ ಬಲಕ್ಕೆ ಹೊರಳಿಸಿ ಮಗ್ಗುಲೋಣಿಯುಗುಂಟ ಓಡುತ್ತ ಹೋಗಿ, ಮುಂದೆ ಮಾವಿನ ತೋಪಿನ ಹತ್ತಿರಿದ್ದ ದಿಬ್ಬದ ಕೆಳಗೆ ನಿಲ್ಲಿಸಿ 'ಸರ್, ಎರಡನೆಯವರನ್ನು ಕರೆದುಕೊಂಡು ಬರುತ್ತೇವೆ. ಇದನ್ನಿನ್ನು ನಮಗೆ ಎಳೆಯಲಿಕ್ಕಾಗದು.' ಎಂದು ತಿರುಗಿದರು. ಫೀಲ್ಡಿಂಗನು ಇದಾದದ್ದೆಲ್ಲ

ಒಳ್ಳೆಯದೆ ಆಯಿತೆಂದು ಬಗೆದು ಅಲ್ಲಿಂದ ಅವಳನ್ನು ನಡೆಯಿಸುತ್ತ ತನ್ನ ಆಫೀಸಿಗೆ ಕರೆದುಕೊಂಡು ಹೋದನು. ಅಲ್ಲಿ ವ್ಯಾಕ್‌ಬ್ರಾಯಿಡನಿಗೆ ಟೆಲಿಫೋನಿನಿಂದ ತಿಳಿಸಬೇಕೆಂದು ಯತ್ನಿಸಿದನು. ಆದರೆ ತಂತಿಗಳೆ ಕತ್ತರಿಸಲ್ಪಟ್ಟಿದ್ದರಿಂದ ಸಾಧ್ಯವಾಗಲಿಲ್ಲ. ಅವಳಿಗೆ ಅಲ್ಲಿಯೆ ಎರಡು ಕೋಣೆಗಳನ್ನು ಕೊಟ್ಟನು. ಬಿಸ್ಕೀಟುಗಳನ್ನೂ ಪೇಯಗಳನ್ನೂ ಒದಗಿಸಿ, ಅದಾದಮೇಲೆ ಅವಳಿಗೂ ವಿಶ್ರಾಂತಿಯನ್ನು ಪಡೆಯಲಿಕ್ಕೆ ಹೇಳಿ ತಾನೂ ತನ್ನ ಕೋಣೆಯಲ್ಲಿ ಹೋಗಿ ಮಲಗಿಕೊಂಡನು.

ಇತ್ತ, ತನ್ನ ಮಕ್ಕಳು, ನವಾಬಬಹದ್ದೂರರು, ಹಮೀದುಲ್ಲಾ, ಮಹಮ್ಮದಲಿ ಮೊದಲಾದವರಿಂದ ತುಂಬಿ ಕಕ್ಕಸಬಡುತ್ತಿರುವ ಗಾಡಿಯಲ್ಲಿ ಅರ್ಝೀಜನೂ ಸಿಕ್ಕಿಕೊಂಡು, ಮೆರೆವಣಿಗೆಯಲ್ಲಿ ಮುಂದೆ ಬಂದಿದ್ದರೂ ಇನ್ನೂ ಹಿಂದಿರುಗಿ ನೋಡುತ್ತ 'ಈಗ ಬರುತ್ತೇನೆಂದಿದ್ದ ಸಿರಿಲ್, ಯಾಕೆ ಬರಲಿಲ್ಲವೋ ಏನೋ? ನಾವೇ ಒಂದು ಸ್ವಲ್ಪ ಹಿಂದಿರುಗಿ ಇನ್ನೊಮ್ಮೆ ಆ ಜಾಗಾಕ್ಕೆ ಹೋಗಿಬರೋಣವೇ?' ಎಂದು ಒಂದೇಸಮನೆ ಚಡಪಡಿಸುತ್ತಿದ್ದನು.

'ಮುಂದೆ! ಮುಂದೆ' ಎಂದು ಮಹಮ್ಮದಲಿಯು ಅರ್ಝೀಜನ ಈ ಯಾವ ಮಾತನ್ನೂ ಗಣನೆಗೆ ತಾರದೆ ಕೂಗಿದನು. ಆತನೀಗ ಎಲ್ಲ ಮಾತನ್ನೂ ಏರಿಕೆಯ ದನಿಯಲ್ಲಿಯೆ ಆಡುತ್ತಿದ್ದನು. 'ಕಲೆಕ್ಟರನನ್ನು ಹಾಕಿರಿ!.... ಸುಪರಿಂಟೆಂಡೆಂಟನನ್ನು ಹಣಿಯಿರಿ!....' ಎಂದು ಜನಜಂಗುಳಿಯನ್ನೂ ಹುರಿದುಂಬಿಸುತ್ತಿದ್ದನು.

'ಮಹಮ್ಮದಲಿಯವರೇ! ಹೀಗೆಲ್ಲ ದಯಮಾಡಿ ಕಿರಿಚಬೇಡಿರಿ! ಅದರಿಂದೇನಾಗುವದು? ಇಂಗ್ಲಿಷರೀಗ ತಾವು ತೋಡಿದ ತಗ್ಗಿನಲ್ಲಿ ತಾವೇ ಬಿದ್ದುದರಿಂದ ಅವರನ್ನಲ್ಲಿಯೆ ಬಿಡುವದು ಒಳಿತು. ಅವರ ಮೈಮೇಲೆ ಹೋಗುವದರಲ್ಲಿ ಏನೂ ಅರ್ಥವಿಲ್ಲ.' ಎಂದು ನವಾಬಬಹದ್ದೂರರು ತಾವು ಒಳಗೆ ಅಂಜಿದ್ದರೂ ಅದನ್ನು ತೋರಗೊಡದೆ ಬುದ್ಧಿವಾದವನ್ನು ಹೇಳಿದರು

'ಆದರೂ ವ್ಯವಸ್ಥಿತ ರೀತಿಯಿಂದ ನಾವೀಗ ಏನಾದರೂ ಮಾಡಿ ತೋರಿಸಲಿಕ್ಕೇಬೇಕು. ಇಲ್ಲವಾದರೆ ಇನ್ನೂ ನಾವು ಅಂಜಿದ್ದೇವೆಂದೇ ತಿಳಿಯುವರು.' ಹಮೀದುಲ್ಲಾ ಉತ್ತರಕೊಟ್ಟನು.

'ಸಿವ್ಹಿಲ್‌ಸರ್ಜನ್ನನನ್ನು ಹಾಕಿರಿ!....ನೂರುದ್ದೀನನನ್ನು ಪಾರು ಮಾಡಿರಿ!....'

'ಏನು! ನೂರುದ್ದೀನನೇ?'

'ಹೌದು, ಅವರು ಅವನನ್ನು ಹಿಂಸಿಸಲಿಕ್ಕೆಹತ್ತಿದ್ದಾರೆ.'

'ಅಯ್ಯೋ ಪಾಪ! ಅವನೂ ನನ್ನ ಗೆಳೆಯ!'

'ಇಲ್ಲ, ಅವರು ಹಿಂಸಿಸುತ್ತಿರುವದಿಲ್ಲ; ಆಸ್ಪತ್ರಿಯ ಮೇಲೆ ದಾಳಿ-ಯಿಡುವದಕ್ಕಾಗಿ ನನ್ನ ಮೊಮ್ಮಗನನ್ನು ಕಾರಣಮಾಡುವದು ನನಗೆ ಬೇಕಿಲ್ಲ.' ಎಂದು ಆ ಮುದುಕನು ನಿಷೇಧಿಸಿದನು.

'ನಿಮಗೇನು ಗೊತ್ತಿದೆ? ಅವರು ಹಿಂಸಿಸುತ್ತಾರೆ. ಖಟ್ಲೆ ನಡೆಯುವ ಮೊದಲು ಕ್ಯಾಲೆಂಡರನೇ ಆದರಂತೆ ಜಂಭಕೊಚ್ಚಿಕೊಂಡು ಹೇಳಿದ್ದಾನೆ. ನಾನೇ ದಾಯಿಗಳ ಬಾಯಿಂದ ಕೇಳಿದ್ದೇನೆ. 'ಆ ನಿಗ್ಗರನನ್ನು ನಾನು ಹಿಂಸಿಸಿದ್ದೇನೆ' ಎಂದನಂತೆ!'

'ಅಯ್ಯೋ ದೇವರೇ! ಅವನು ನನ್ನ ಹುಡುಗನನ್ನು 'ನಿಗ್ಗರ್' ಎಂದು ಕರೆದನೇ?'

'ಇಷ್ಟೇ ಅಲ್ಲ, ಗಾಯಗಳಿಗೆ ಮಾಯುವ ಔಷಧವನ್ನು ಹಾಕುವದು ಬಿಟ್ಟು ಮೆಣಸಿನ ಪುಡಿಯನ್ನು ಹಾಕಿದನಂತೆ!' ಎಂದು ಹುಣ್ಣಿನ ಮೇಲೆ ಬರೆಕೊಟ್ಟಂತೆ ಆ ಮುದುಕನನ್ನು ಗಾಯಗೊಳಿಸಿದರು.

'ಮುಹಮ್ಮದಲಿ! ಇದು ಅಶಕ್ಯ. ಅಷ್ಟಿಷ್ಟಾದರೆ ಅವನು ಸಹಿಸಿ-ಕೊಳ್ಳಲೇಬೇಕು. ಯಾಕಂದರೆ ಶಿಸ್ತು ಬೇಕಲ್ಲವೇ ಜೀವನದಲ್ಲಿ?'

'ಮೆಣಸು....ಸಿವ್ಹಿಲ್ ಸರ್ಜನ್ನರೇ ಹಾಗೆಂದರು....ಅವರು ಒಬ್ಬೊಬ್ಬರನ್ನೇ ಹೀಗೆ ನಾಶಮಾಡಬೇಕೆಂದು ಹಂಚಿಕೆ ಹೂಡಿದ್ದಾರೆ.... ಅವರಿಗದರಲ್ಲಿ ಜಯವಿಲ್ಲ....'

ಈ ಎಲ್ಲ ಮಾತುಗಳಿಂದ ಜನರು ಹೆಡೆಮುಟ್ಟಿದ ಹಾವಿನಂತೆ ಭುಸು-ಗುಟ್ಟಹತ್ತಿದರು. ಇಲ್ಲಿಯ ವರೆಗೆ ಅವರ ಸಿಟ್ಟಿಗೆ ಒಂದು ಗುರಿಯಿದ್ದಿಲ್ಲ, ಕಾರಣವಿದ್ದಿಲ್ಲ. ಈಗ ಎರಡೂ ಸಿಕ್ಕಂತಾದವು. ಮೈದಾನವನ್ನು ಮುಟ್ಟಿದ ಕೂಡಲೆ ವಿಂಟೋ ಆಸ್ಪತ್ರಿಯ ಕಮಾನುಗಳೇ ಅವರ ಕಣ್ಣಿಗೆಬಿದ್ದವು. ತೀರಿತು, ಕೂಡಲೆ ಅವರು ಜಿಗಿಯುತ್ತ, ಚೀರುತ್ತ ಅತ್ತಕಡೆಗೇ ನುಗ್ಗಿದರು.

ನಡುಮಧ್ಯಾಹ್ನವಾಗಿತ್ತು; ಬಿಸಿಲು ರಣಗುಟ್ಟುತ್ತಿತ್ತು; ಭೂಮಿ ಆಕಾಶಗಳೂ ಕರಾಳ ರೂಪವನ್ನು ತಾಳಿದ್ದವು. ಪಾಪವು ಮತ್ತೆ ಹೊರಹೊರಟಿತು. ನವಾಬಬಹದ್ದೂರನೊಬ್ಬನೇ ಅದನ್ನು ತಡೆಯಲಿಕ್ಕೆ ಒದ್ದಾಡಿದನು. ಆದರೆ ಅವನೂ ಇಳುಕಲಿನಲ್ಲಿ ಜಾರಹತ್ತಿದನು. ಮೊದಲು ನೂರುದ್ದೀನನನ್ನು ಬಿಡಿಸಿಕೊಳ್ಳುವದು; ಆಮೇಲೆ ಮೇಜರ ಕ್ಯಾಲೆಂಡರರ ಉತ್ತರಪೂಜೆ ಮಾಡುವದು; ಕೊನೆಗೆ ಸಿವ್ಹಿಲ್ ಸ್ಟೇಶನ್ನೆಲ್ಲವನ್ನೂ ನೋಡಿಕೊಳ್ಳುವದು; ಹೀಗಿತ್ತು ಅವರ ಕಾರ್ಯಕ್ರಮ.

ಆದರೆ ಈ ದುರಂತವನ್ನು ಪನ್ನಾಲಾಲನೇ ತಪ್ಪಿಸಿದನು.

ಇಂಗ್ಲಿಷ ಜನರನ್ನು ಸಂತೋಷಗೊಳಿಸುವದಕ್ಕಾಗಿ, ಅಝೀಜನ ಮೇಲಿನ ಸಿಟ್ಟು ತೀರಿಸಿಕೊಳ್ಳುವದಕ್ಕಾಗಿ ಪನ್ನಾಲಾಲನು ಸರಕಾರದ ಪಕ್ಷದಿಂದ ಸಾಕ್ಷಿ ಹೇಳಲಿಕ್ಕೆಂದು ಕೋರ್ಟಿಗೆ ಬಂದಿದ್ದನು. ಖಟ್ಲೆ ಬಿದ್ದುಹೋದ ಕೂಡಲೆ ಅವನಿಗೆ ಬಹಳ ಸಂಕಟಕ್ಕಿಟ್ಟಿತು. ಮುಂದೆ ಒದಗಬಹುದಾದ ಗಂಡಾಂತರಗಳನ್ನೆಲ್ಲ ಎಲ್ಲರಕಿಂತಲೂ ಮೊದಲೇ ಕಂಡುಹಿಡಿನು, ದಾಸನಿನ್ನೂ ನಿರ್ಣಯವನ್ನು ಹೇಳುವ ಮೊದಲೆ ಅವನಲ್ಲಿಂದ ನುಸುಳಿ ಮೆಲ್ಲನೆ ಪಾರಾಗಿ ಬಂದನು. ಆಸ್ಪತ್ರಿಯಲ್ಲಿ ಮೇಜರ ಕ್ಯಾಲೆಂಡರರು ತನ್ನನ್ನು ಸಂರಕ್ಷಿಸಬಹುದೆಂದು ಅವನು ಅಲ್ಲಿಗೆ ಧಾವಿಸಿ ಬರುವಷ್ಟೊತ್ತಿಗೆ ಮೇಜರರೇ ಇನ್ನೂ ಅಲ್ಲಿಗೆ ಬಂದಿದ್ದಿಲ್ಲ. ಹೊರಗೆ ಜನ ಹಸಿದ ಹುಲಿಯಂತೆ ಬಾಯ್ದೆರೆದು ನಿಂತಿತ್ತು. ಅವನ ಅಡ್ಲೀ ಜನಗೂ ಅವನಿಗೆ ಆಗ ವಿರೋಧಿಗಳಾಗಿ ನಿಂತುದರಿಂದ ಹಿಂದಿನ ಗೋಡೆಯನ್ನು ಸಹ ಜಿಗಿದು ಹೋಗಲಿಕ್ಕೆ ಅನುವು ದೊರೆಯಲಿಲ್ಲ. ಕೊನೆಗೆ ಅವರೇ ಅವನನ್ನು ಗೋಡೆಯ ಮೇಲೆ ನಿಲ್ಲಿಸಿ ಆಚೆಗೆ ಕೆಳಗೆ ಉರುಳಿಸಿದರು. ಆ ನೋವನ್ನು ತಾಳಲಾರದೆ 'ಅಯ್ಯೋ! ಮನುಷ್ಯನು ಸಾಯುವದು ಒಮ್ಮೇ ಸಾಯುತ್ತಾನೆ!' ಎಂದು ಒದರುತ್ತ, ಮುಗ್ಗರಿಸುತ್ತ ಕಂಪೌಂಡಿನೊಳಗಿಂದ ಜನರು ಮುತ್ತಿದ ಕಡೆಗೇ ಹೊರಟನು. ಒಂದು ಕೈಯಲ್ಲಿ ಹಳದಿಯ ಚತ್ತರಿಗೆಯನ್ನು ಹಿಡಕೊಂಡು ಇನ್ನೊಂದು ಕೈಯಿಂದ ಕಂಡವರಿಗೆಲ್ಲ ಸಲಾಮ್ ಮಾಡುತ್ತ ನಡೆದನು. 'ಅಯ್ಯೋ! ಕ್ಷಮಿಸಿರಿ! ಪ್ರಿಯ ಅಝೀಜ! ನಾನು ಹೇಳಿದ ಸುಳ್ಳು ಮಾತನ್ನು ಕ್ಷಮಿಸು.' ಎಂದು ಅವರ ಸಮೀಪಕ್ಕೆ ಬಂದಹಾಗೆ ದೈನ್ಯದಿಂದ ಅಂಗಲಾಚಿ ಹೇಳಿಕೊಂಡನು.

ಅಝೀಜನು ಸುಮ್ಮನಿದ್ದನು. ಆದರೆ ಉಳಿದವರು ಮಾತ್ರ ತಮ್ಮ ತಿರಸ್ಕಾರ ವನ್ನು ತೋರಿಸದೆ ಬಿಡಲಿಲ್ಲ. 'ನಾನು ಮೋಸಹೋದೆನೆಂದೆನಿಸುತ್ತಿದೆ— ಇಲ್ಲಿ—ಅಲ್ಲಿ—ಎಲ್ಲಕಡೆಯಲ್ಲಿಯೂ—ಮೋಸಹೋದೆನು !—ಅಯ್ಯೋ !— ನೀನು ಬೇನೆಬಿದ್ದಾಗ ಹಾಲು ಕೊಟ್ಟ ಈ ಹಕೀಮನನ್ನು ಕ್ಷಮಿಸು !— ನವಾಬಬಹದ್ದೂರರೇ ! ಯಾವಾಗಲೂ ನೀವು ದಯಾವಂತರು !—ನಿಮಗೆ ಈ ಆಸ್ಪತ್ರಿಯು ಬೇಕಾಗಿದೆಯಷ್ಟೇ ?—ನೀವು ಬೇಕಾದ ಬಾಟ್ಲಿಯನ್ನು ತೆಗೆದುಕೊಳ್ಳಿರಿ—ಇಕಾ, ಕೀಲಿ ಕೈ—ಬೇಕಾದರೆ ನಾನೇ ಒಂದು ತೆರೆಯು ತ್ತೇನೆ—' ಎಂದು ಹಲ್ಲು ಕಿರಿದನು. ಅವರೆಲ್ಲರೂ ಪ್ರಕ್ಷುಬ್ಧರಾಗಿದ್ದರೂ ಇವನ ಈ ವಿದೂಷಕಪಾತ್ರವನ್ನು ನೋಡಿ ನಗಲಾರಂಭಿಸಿದರು. ಅಷ್ಟೇ ಅವನಿಗೆ ಎಳೆ ಸಿಕ್ಕಂತಾಯಿತು; ಕೂಡಲೆ ಅವನು ಮತ್ತಿಷ್ಟು ನಕಲಿಯನ್ನು ಸುರುವುಮಾಡಿದನು. ತನ್ನ ಕೊಡೆಯನ್ನು ಕೆಳಗೊಗೆದು ಅದರ ಮೇಲೆ ಮೊಳಕಾಲೂರಿ ಮೂಗು ನೆಲಕ್ಕೆ ತಿಕ್ಕಿದನು. ಎಲ್ಲರೂ ಮತ್ತೆ ನಕ್ಕರು. ಇಂಥ ಮನುಷ್ಯನ ಅವಮರ್ಯಾದೆ ಮಾಡುವದರಲ್ಲೇನಿದೆ ? ಅವನಲ್ಲಿ ಮರ್ಯಾದೆ ಇದ್ದರಲ್ಲವೆ, ಹೋಗುವದು ? ಎಂದುಕೊಂಡು ಸುಮ್ಮನೆ ಬಿಟ್ಟರು. ಅವರಿಗೆ ನೂರುದ್ದೀನನು ಬೇಕಾಗಿದ್ದಾನೆಂದು ತಿಳಿದ ಕೂಡಲೆ ಅವನು ಕಳ್ಳ ಬೆಕ್ಕಿನಂತೆ ಜಾರಿಹೋಗಿ ಅವನನ್ನು ತೋರಿಸಿದನು, ಆಸ್ಪತ್ರಿ ಯನ್ನುಳಿಸಿದನು.

ನೂರುದ್ದೀನನು ಹೊರಬಿದ್ದಾಗ ಅವನ ಮುಖಕ್ಕೆಲ್ಲ ಅರಿವೆ ಸುತ್ತಿ- ದ್ದರು. ಅವನನ್ನು ನೋಡಿ ಜನರಿಗೆ ತಾವೇನೋ ಒಂದು ಮಹಾಕಾರ್ಯ ಮಾಡಿದೆವೆಂಬ ಹುಮ್ಮಸ, ಹುರುಪು ಬಂದಿತ್ತು. ವೀರಾವೇಶದಿಂದ ಗರ್ಜಿ- ಸುತ್ತಿದ್ದರು. ನವಾಬಬಹದ್ದೂರರೇ ಬಹಳ ಜಾಣ್ಮೆಯಿಂದ ಆ ಸಂದುಕಟ್ಟನ್ನು ಪಾರುಮಾಡಿದರು. ಆ ತರುಣನನ್ನು ತಬ್ಬಿಕೊಂಡು ಅವರು ನ್ಯಾಯ, ಧೈರ್ಯ, ಸ್ವಾತಂತ್ರ್ಯ, ವಿವೇಕ—ಇವುಗಳ ಮೇಲೆ ವ್ಯವಸ್ಥಿತವಾಗಿ ಒಂದು ಮಹಾ ಉಪನ್ಯಾಸವನ್ನೇ ಮಾಡಿದರು. ಅದರಿಂದಲೆ ಜನಸಮುದಾಯವು ಶಾಂತ ವಾಯಿತು. ಆಮೇಲೆ ಬಹದ್ದೂರರು ಮತ್ತೆ ಎದ್ದುನಿಂತು ಬ್ರಿಟಿಶರು ತಮಗೆ ಕೊಟ್ಟ ಪದವಿಯನ್ನು ಬಿಟ್ಟುಬಿಡುವೆವೆಂದೂ ಒಬ್ಬ ಸಾದಾ ಝುಲ್‌ಫಿಕೀರ ನಾಗಿ ಇನ್ನುಮೇಲೆ ಕಾಲಕಳೆಯುವೆವೆಂದೂ ಸಾರಿದರು. ಅಲ್ಲಿಂದ ಅವರ

ಗಾಡಿಯು ತಿರುಗಿತು. ಜನರೂ ಬೆನ್ನುಹತ್ತಿದರು; ಬಂದ ಕುತ್ತಂತೂ ಪಾರಾಗಿತ್ತು.

‘ಈಹೊತ್ತು ನಾವೊಂದು ಸಮಾರಂಭವನ್ನು ಹೂಡೋಣ; ಹಮೀದುಲ್ಲಾ, ನಿಮಗೆ ನಿಮ್ಮ ಮಿತ್ರರಾದ ಫೀಲ್ಡಿಂಗ ಮತ್ತು ಅನ್ಯಮತರಾಯರನ್ನು ಕರೆತರುವ ಕೆಲಸವನ್ನು ಒಪ್ಪಿಸಲಾಗಿದೆ. ಉಳಿದವರು ನನ್ನ ಜೊತೆಗೇ ಇರಲಿ. ನಾವು ದಿಲ್‌ಖುಶಕ್ಕೆ ಸಂಜೆಯವರೆಗಂತೂ ಹೋಗುವದಿಲ್ಲ. ಇದಕ್ಕೆ ಉಳಿದವರ ಅಭಿಪ್ರಾಯವೇನಿದೆಯೋ ನನಗೆ ಗೊತ್ತಿಲ್ಲ. ನನ್ನಮಟ್ಟಿಗೆ ಮಾತ್ರ ನನಗೆ ತಲೆಶೂಲಿಯೆದ್ದಿದ್ದರಿಂದ ಬರಲಿಕ್ಕಾಗುವದಿಲ್ಲ.’ ಎಂದು ಆ ಮುದುಕನು ಸೂಚಿಸಿದನು

ಬಿಸಿಲು ಜೋರಾಗಿತ್ತು. ಅದರ ತಾಪಕ್ಕೆ ಸುಂದುಹಿಡಿದಂತಾಗಿ ಚಂದ್ರಪುರದ ವೀರಭಟರೆಲ್ಲರೂ ಬಿದ್ದುಕೊಂಡರು. ಸಿವ್ಹಿಲ್ ಸ್ಟೇಶನ್ನಿನವರೂ—ಜನರು ಬಂದು ತಮ್ಮನ್ನು ಮುತ್ತಬಹುದೆಂಬ ಗಾಬರಿಯಿದ್ದರೂ—ಮಲಗಿ ಕನಸು ಕಂಡರು.

—

## ಪ್ರಕರಣ ೨೬

ಫೀಲ್ಡಿಂಗನು ಎದ್ದುಹೋಗಿ ಕ್ವೆಸ್ಟೆಡ್‌ಳನ್ನು ಕಂಡಾಗ ಸಂಜೆಯಾಗುತ್ತ ಬಂದಿತ್ತು. ತಾನು ಎದ್ದು ಹೋಗುವದರೊಳಗಾಗಿ ಯಾರಾದರೂ ಬಂದು ಅವಳನ್ನು ಕರಕೊಂಡು ಹೋಗಿರಬಹುದೆಂದು ಭಾವಿಸಿದ್ದನು. ಆದರೆ ಕಾಲೇಜು, ಊರು ಬಿಟ್ಟು ಬಹಳ ದೂರವಿದ್ದುದರಿಂದ ಅವನು ಭಾವಿಸಿದಂತೇನೂ ಆಗಿರಲಿಲ್ಲ.

‘ತಮ್ಮನ್ನು ಕಾಣಬಹುದೋ?’ ಎಂದು ಅವಳು ಕೇಳಿದಾಗ ಫೀಲ್ಡಿಂಗನು ಉತ್ತರವನ್ನೇ ಕೊಡಲಿಲ್ಲ. ಆಗ ಮತ್ತೆ ಅವಳು ‘ಕೋರ್ಟಿನಲ್ಲಿ ನಾನೇಕೆ ಅಷ್ಟು ವಿಚಿತ್ರವಾಗಿ ನಡೆದುಕೊಂಡೆನೆಂಬುದರ ಕಾರಣವನ್ನು ತಮಗೇನಾದರೂ ಹೇಳಲಿಕ್ಕೆ ಬರುತ್ತದೆಯೋ?’ ಎಂದು ಕೇಳಿದಳು.

'ಇಲ್ಲ.' ಎಂದು ಥಟ್ಟನೆ ಉತ್ತರಕೊಟ್ಟು 'ನೀನು ತಿರುಗಿ ತಕ್ಕೊಳ್ಳ ಬೇಕಾಗಿದ್ದರೆ ಇಂತಹ ದೊಡ್ಡ ಆರೋಪವನ್ನು ಹೊರಿಸಿದೆಯಾದರೂ ಏತಕ್ಕೆ?' ಎಂದು ಕೇಳಿದನು.

'ಯಾಕೆ, ನಿಜವಾಗಿ!'

'ನಾನು ನಿನಗೆ ಕೃತಜ್ಞನಾಗಿರಬೇಕೆಂದೆನಿಸುತ್ತಿದೆ; ಆದರೆ..'

'ನನಗೆ ನಿಮ್ಮ ಕೃತಜ್ಞತೆ ಬೇಡ. ನಾನು ಹೇಳುವದನ್ನಷ್ಟು ಕೇಳು ತ್ತೀರೆಂದು ನನ್ನ ಆಶೆಯಿದೆ.'

'ಒಳ್ಳೇದು; ನಮ್ಮಿಬ್ಬರ ನಡುವೆ ಇಲ್ಲದ ಚರ್ಚೆ ಯೋಗ್ಯವಲ್ಲವೆಂದೇ ನನ್ನ ತಿಳಿವಳಿಕೆ. ಇನ್ನೂ ಅದನ್ನು ಸ್ಪಷ್ಟವಾಡಿ ಹೇಳಬೇಕೆಂದರೆ ಈ ಅನರ್ಥೋತ್ಪಾತದಲ್ಲಿ ನಾನು ನಿಮ್ಮ ವಿರುದ್ಧ ಪಕ್ಷಕ್ಕೆ ಸೇರಿದವನು.'

'ಅಂದರೆ ನನ್ನ ಪಕ್ಷವನ್ನು ಕೇಳಿಕೊಳ್ಳುವಷ್ಟೂ ನಿನಗೆ ಕತೂಹಲ- ವಿಲ್ಲವೇ?'

'ಬಹಳಷ್ಟಿಲ್ಲ.'

'ಅಂತಹ ಗೌಪ್ಯದ ಮಾತನ್ನೇನು ನಾನು ನಿನಗೆ ಹೇಳುತ್ತಿಲ್ಲ. ನಾನು ಹೇಳುವ ಎಲ್ಲ ಮಾತುಗಳನ್ನೂ ಬೇಕಾದರೆ ನಿನ್ನ ಜನರಿಗೆ ಒಪ್ಪಿಸಬಹುದು; ಯಾಕಂದರೆ ಈ ಹೊತ್ತಿನ ಎಲ್ಲ ದುಃಖದೊಳಗಿಂದ ಒಂದು ಒಳಿತು ಹುಟ್ಟಿದೆ. ಆದರಿಂದ ನನ್ನ ಹತ್ತಿರ ಗೌಪ್ಯಸಂಗತಿಗಳೇ ಉಳಿದಿಲ್ಲ—ಆ ಪ್ರತಿಧ್ವನಿಯೂ ಈಗ ಹೋಗಿದೆ—ನಾನು ಆ ಗುಹೆಗಳಿಗೆ ಹೋಗಿ ಬಂದಂದಿನಿಂದ ಅಸ್ವಸ್ಥ- ಳಾಗಿದ್ದೇನೆ—ಮೊದಲಿಗೂ ಇರಬಹುದು—'

ಈಗ ಮಾತ್ರ ಆವಳ ಮಾತು ಕೇಳಬೇಕೆಂಬ ಲವಲವಿಕೆಯು ಫೀಲ್ಡಿಂಗ ನಲ್ಲಿ ಹುಟ್ಟಿತು. ಅವನಿಗೂ ಒಮ್ಮೆ ಇದೇ ಸಂಶಯು ಬಂದಿತ್ತು. 'ಯಾವ ಬೇನೆ?' ಎಂದು ಕುತೂಹಲದಿಂದ ಕೇಳಿದನು.

ಅವಳು ಬಲಗೈ ಬೆರಳುಗಳಿಂದ ತನ್ನ ತಲೆಯನ್ನು ತಟ್ಟಿಕೊಂಡು ಬೇನೆ ಯಾವುದೆಂಬುದನ್ನು ಸೂಚಿಸಿದಳು.

'ಅವನನ್ನು ಕೈದುಮಾಡಿದ ದಿವಸವೇ ಅದು ನನ್ನ ತಲೆಯಲ್ಲಿ ಬಂದು ಹೋಗಿತ್ತು. ಅದು ಚಿತ್ತವಿಭ್ರಮೆಯಲ್ಲವೇ?'

'ಇದು ನಿಮಗೆ ಆದೇ ಇರಬಹುದೆಂದೆನಿಸುತ್ತಿದೆಯೇ? ನನಗೇಕೆ ಈ ಚಿತ್ತವಿಭ್ರಮೆಯಾಗಿರಬೇಕು?' ಎಂದು ನಮ್ರಳಾಗಿ ಕೇಳಿದಳು.

'ಹಾಗಾದರೆ ಮೂರವಾರದಲ್ಲಿ ಆದದ್ದು ಈ ಮೂರರಲ್ಲಿ ಒಂದಾಗಿರಬೇಕು: ನಿನ್ನ ಮಿತ್ರರು ತಿಳಿಯುವಂತೆ ಅಝೀಜನೇ ಅಪರಾಧಿಯಾಗಿರಬೇಕು ಒಂದು; ಇಲ್ಲವೆ ನನ್ನ ಮಿತ್ರರು ತಿಳಿಯುವಂತೆ ನೀನೇ ಅಸೂಯೆಯಿಂದ ಈ ಅಪರಾಧವನ್ನು ಅವನ ಮೇಲೆ ಹೊರಿಸಿರಬೇಕು; ಅಥವಾ ನಿನಗೇ ಚಿತ್ತವಿಭ್ರಮೆಯಾಗಿರಬೇಕು.' ಎಂದು ಹೇಳಿ ಮೇಲಕ್ಕೆದ್ದು ಅತ್ತಿತ್ತ ಓಡಾಡುತ್ತ ಮತ್ತೆ 'ನೀನು ಮೊದಲೆ ಅಸ್ವಸ್ಥಳಾಗಿದ್ದೇನೆಂದು ಹೇಳುವದರಿಂದ- ಇದೇ ಅತ್ಯಂತ ಮಹತ್ವದ ಪುರಾವೆ—ದುರ್ಬಿಣಿಯ ಪಟ್ಟಿಯನ್ನು ನೀನೇ ಹರಿದಿರಬೇಕೆಂದು ನನಗೆನಿಸುತ್ತಿದೆ. ಆ ಗುಹೆಯಲ್ಲಿ ಇದ್ದಷ್ಟು ಹೊತ್ತೆಲ್ಲ ನೀನು ಒಬ್ಬಳೇ ಇದ್ದಿ?' ಎಂದನು.

'ಇರಬಹುದು.'

'ನಿನಗೆ ಈ ಚಿತ್ತವಿಭ್ರಮೆ ಮೊದಲು ಯಾವಾಗ ಆಯಿತು, ಹೇಳಬಲ್ಲೆಯಾ?'

'ಬ್ರಿಜ್‌ಪಾರ್ಟಿ ಏರ್ಪಡಿಸಿದಾಗ ಆ ತೋಟದ ಮನೆಯಲ್ಲಿ ಮೊಟ್ಟ ಮೊದಲು ನಿಮ್ಮ ಕೂಡ ಚಹಾ ತೆಗೆದುಕೊಳ್ಳಲಿಕ್ಕೆ ಬಂದಾಗ.'

'ಆಹಾಂ! ಅದೇ? ಹೌದು; ಅಂದು ಅದು ಸ್ವಲ್ಪ ದುರಂತವೇ ಆಯಿತು. ನಮ್ಮ ಆಝೀಜನೂ ಗೋಣಬೊಲೆಯುವರೂ ಅಲ್ಲಿಂದ ಬಂದ ಮೇಲೆ ಬೇನೆಬಿದ್ದರು.'

'ನನಗೆ ಮಾತ್ರ ಏನೂ ಆಗಲಿಲ್ಲ. ಅದು ಏಕೆ ಹಾಗಾಯಿತೋ ಹೇಳಲಿಕ್ಕೇ ಬರದಂತಾಗಿದೆ. ಅದೆಲ್ಲ ಈಗ ಮರೆತುಹೋಗಿದೆ. . . .ಅಂದಿನ ಸಂಗೀತ ಸ್ವಲ್ಪೇನೊ ನೆನಪಿದೆ. . . .ಅಲ್ಲಿಂದ ಏನಾಯಿತೋ ಏನೋ. .ಹಂ, ಮಿ. ಹೆಸ್ಲೊಪರೊಡನೆ ಮೈದಾನದ ಮೇಲೆ ಪೋಲೊ ಆಡಲಿಕ್ಕೆ ಹೋದದ್ದೂ ನೆನಪಿದೆ. . . .ಆಗ ಅವೆಲ್ಲವುಗಳನ್ನೂ ತಡಕೊಳ್ಳುವಷ್ಟು ನನಲ್ಲಿ ತ್ರಾಣವಿರಲಿಲ್ಲ. . . .ನಾನು ಗುಹೆಗೆ ಬಂದಾಗಲೂ ಅದೇ ಸ್ಥಿತಿಯಲ್ಲಿದ್ದೆನು. . . .ನೀವು ಸೂಚಿಸುವಂತೆ—ಅದರಿಂದ ನನಗೇನು ಅಂಜಿಕೆಯೂ ಇಲ್ಲ, ಅಪಾಯವೂ ಇಲ್ಲ—ನನಗೆ ಅಲ್ಲಿ ಚಿತ್ತವಿಭ್ರಮೆಯಾಯಿತೆಂದು ಹೇಳಬಹುದು. . . .ಅದು

ಭಯಂಕರವಾದದ್ದು!....ಆದರಿಂದ ಹೆಣ್ಣುಮಕ್ಕಳಿಗೆ ಯಾರು ಏನು ಕೇಳಿದರೂ ಮದುವೆಯಾಗೆಂದು ಕೇಳಿದಂತೆಯೆ ಎನಿಸುತ್ತದೆ....'

'ಏನೇ ಆದರೂ ನೀನು ನಿರ್ವಂಚನೆಯಿಂದ ಹೇಳುತ್ತಿರುವಿ!'

'ನಾನು ಹುಟ್ಟಿ ಬೆಳೆದದ್ದೇ ಅಂತಹ ವಾತಾವರಣದಲ್ಲಿ. ಆದರೆ ನನ್ನ ಈ ಗುಣದಿಂದ ನಾನಿನ್ನೂ ಯಾವ ದಂಡೆಗೂ ಮುಟ್ಟಲಿಕ್ಕಾಗಿಲ್ಲ.'

ಅವಳ ಮೇಲೆ ಮತ್ತಿಷ್ಟು ಮಮತೆಯಿಂದ ಅವನು ನಕ್ಕು 'ಅದೇಕೆ, ಅದು ನಮ್ಮನ್ನು ಸ್ವರ್ಗಕ್ಕೆ ಮುಟ್ಟಿಸುವದು ' ಎಂದು ನುಡಿದನು.

'ಮುಟ್ಟಿಸುವದೇ?'

'ಸ್ವರ್ಗವಿದ್ದದ್ದೇ ಆದರೆ ಮುಟ್ಟಿಸುವದು.

'ನಿಮಗೆ ಸ್ವರ್ಗದಲ್ಲಿ ನಂಬಿಕೆಯಿಲ್ಲವೇ ಫೀಲ್ಡಿಂಗ್?' ಎಂದು ನಾಚಿಕೆಯಿಂದ ಅವನ ಕಡೆಗೆ ನೋಡುತ್ತ ಕೇಳಿದಳು.

'ನನಗೆ ನಂಬಿಗೆಯಿಲ್ಲ. ಆದರೂ ಪ್ರಾಮಾಣಿಕತನದಿಂದ ಸ್ವರ್ಗಕ್ಕೆ ಹೋಗುತ್ತೇವೆಂದು ನನ್ನ ನಂಬಿಗೆಯಿದೆ.'

'ಅದು ಹೇಗೆ?'

'ಅದಿರಲಿ; ಈಗ ಮತ್ತೆ ನಿನ್ನ ಚಿತ್ತವಿಭ್ರಮೆಯ ವಿಚಾರವನ್ನೇ ಮಾಡೋಣ. ಈಹೊತ್ತು ಮುಂಜಾನೆ ನೀನು ಸಾಕ್ಷಿ ಹೇಳುವಾಗ ನಾನು ನಿನ್ನನ್ನು ಸೂಕ್ಷ್ಮವಾಗಿ ನೋಡುತ್ತಿದ್ದೆನು. ನಾನು ನೋಡಿದ್ದು ಸರಿಯಿದ್ದರೆ ನಿನ್ನ ಆ ಚಿತ್ತವಿಭ್ರಮೆಯು ಒಮ್ಮೆಲೆ ಮಾಯವಾಯಿತು, ಅಲ್ಲವೇ?'

ತನಗೆ ಕೋರ್ಟಿನಲ್ಲಿ ಎನಿಸಿದ್ದೆಲ್ಲವನ್ನೂ ನೆನಪಿಗೆ ತಂದುಕೊಳ್ಳಲು ಯತ್ನಿಸಿದಳು. ಆದರೆ ಅದು ಸಾಧ್ಯವಾಗಲಿಲ್ಲ. ಹಿಡಿಯ ಹೋಗಲು ಬಿಸಿಲುಗುದುರೆಯಂತೆ ಆ ದೃಶ್ಯಗಳೇ ಮಾಯವಾಗುತ್ತಿದ್ದವು.

'ನೀನೆಲ್ಲಿ ತಪ್ಪುವಿಯೊ ಎಂದು ಮೈಯೆಲ್ಲ ಕಿವಿಮಾಡಿಕೊಂಡು ನಾನು ಕುಳಿತಿದ್ದೆ. ಆದರೆ ನೀನು ತಪ್ಪಲೇ ಇಲ್ಲ. ಮಾಟಗಾರನಾದ ಮ್ಯಾಕ್-ಬ್ರಾಯಿಡನೇ ನಿನ್ನಲ್ಲಿಯ ಆ ಭೂತೋಚ್ಚಾಟನೆಯನ್ನು ಮಾಡಿದನೆಂದು ನನ್ನ ನಂಬಿಗೆ.'

'ನನಗೆ ದೆವ್ವ ಬಡಿದಿದೆಯೆಂದು ನಿಮ್ಮ ಅಭಿಪ್ರಾಯವೇ?'

'ಅಷ್ಟು ದೂರ ನನ್ನ ಅಭಿಪ್ರಾಯವಿಲ್ಲ.'

'ನಾನು ನಂಬಿದ ಜನರು ದೆವ್ವಗಳಿರುವವೆಂದು ನಂಬುತ್ತಾರೆ. ಮಿಸೆಸ್ ಮೂರಳೊಬ್ಬಳು ಇಂಥವಳೇ.'

'ಇರಬಹುದು; ಅವಳು ಮುದುಕಿಯಾಗಿದ್ದಾಳಲ್ಲವೇ ?'

'ಅಂದರೇನು, ಚೇಷ್ಟೆಮಾಡುವಿರಾ ?'

'ಚೇಷ್ಟೆ ಅಲ್ಲ. ಮನುಷ್ಯನಿಗೆ ವಯಸ್ಸಾದಂತೆ ಪಾರಲೌಕಿಕದ ಹುಚ್ಚು ಹತ್ತುವದು ತೀರ ಸ್ವಾಭಾವಿಕ. ಅದನ್ನು ತಪ್ಪಿಸುವದು ಅವರಿಗೆ ಸಾಧ್ಯವಿಲ್ಲವೆಂದೇ ನನ್ನ ಅಭಿಪ್ರಾಯ. ಈಗೀಗ ನಾನೂ ಅದೇ ಹಾದಿ ಹಿಡಿದಿದ್ದೇನೆಂದೆನಿಸಹತ್ತಿದೆ. ನಾಲವತ್ತೈದಕ್ಕೆ ಮುಟ್ಟಿದ ಕೂಡಲೆ ಮನುಷ್ಯನು ಭಾವಿಕನಾಗುತ್ತಾನೆ; ಪುನರ್ಜನ್ಮ ನಂಬುತ್ತಾನೆ.'

'ಹಾಗಾದರೆ ಸತ್ತವರು ಮತ್ತೆ ಹುಟ್ಟುವದಿಲ್ಲವೇ ?'

'ಇಲ್ಲಿಂದೇ ನನ್ನ ಸಂಶಯ.'

'ನನಗೂ ಹಾಗೆಯೇ.'

ಇಬ್ಬರೂ ಸ್ವಲ್ಪಹೊತ್ತು ಸುಮ್ಮನೆ ಕುಳಿತರು.

'ಡಾ. ಅಖ್ಖೀಜನು ನನ್ನ ವಿಷಯಕ್ಕೇನೆನ್ನುತ್ತಾನೆ ?' ಎಂದು ಅವಳೇ ಮತ್ತೆ ಕೇಳಿದಳು.

'ಅವನೇ ?—ಪಾಪ! ತನ್ನ ದುಃಖದಲ್ಲಿಯೆ ಮುಳುಗಿದ್ದಾನೆ.—ಅವನೀಗ ಪರರ ವಿಚಾರವನ್ನೇ ಬಿಟ್ಟಿದ್ದಾನೆ.—ಅವನಿಗೆ ನಿನ್ನ ಮೇಲೆ ಬಹಳ ದ್ವೇಷ ಹುಟ್ಟಿರಬೇಕು.' ಎಂದು ಕರುಣೆಯು ಹೊಟ್ಟೆಯಲ್ಲಿ ಕೊಂಕಿಟ್ಟು ಉತ್ತರಕೊಟ್ಟನು. ಆದರೆ ಮರುಕ್ಷಣವೇ ಅವನು 'ಅಂತೂ ಅವನೂ ದುಷ್ಟನಲ್ಲ, ನೀನೂ ದುಷ್ಟಳಲ್ಲ; ಇಷ್ಟೆಲ್ಲ ಆಟವಾಡಿದ್ದು ಆ ನಿನ್ನ ಚಿತ್ತವಿಭ್ರಮೆಯೆಂದು ನಮಗೂ ಆಗ ಸ್ಪಷ್ಟವಾಗಿ ಗೊತ್ತಾಗಲಿಲ್ಲ. ಇರಲಿ, ಇನ್ನು ನಾಲ್ಕನೆಯ ಪಕ್ಷವೊಂದಿದೆ; ಅದೆಂದರೆ ಅಪರು ಮತ್ತೆ ಯಾರಾದರೂ ಇರಬಹುದೇ ? ಎಂಬುದು.' ಎಂದು ಆ ಮಾತನ್ನು ಸುಧಾರಿಸಿಕೊಂಡನು.

'ದಾರಿ-ತೋರಿಸುವವನು ?'

'ಹೌದು, ಅವನೇ. ಅಖ್ಖೀಜನು ಅವನ ಮುಖದ ಮೇಲೆ ಹೊಡೆದದ್ದೇ ನೆವಮಾಡಿಕೊಂಡ ಅವನು ನುಸುಳಿಬಿಟ್ಟನು. ಪೋಲಿಸರಿಗೂ

ಆವನನ್ನು ಹಿಡಿಯುವದು ಬೇಕಾಗಿದ್ದಿಲ್ಲ; ಅಂತೇ ಅವರು ಆ ವಿಷಯವನ್ನೇ ಹಾರಿಸಿಬಿಟ್ಟಿದ್ದಾರೆ. ಈಗೇನು ಮಾಡಬೇಕು ? '

' ಅವನೇ ಇದ್ದರೂ ಇರಬಹುದು. ' ಎಂದು ಮತ್ತೆ ಹೇಳಿದಳು.

' ಅಥವಾ ಈ ಜಿಲ್ಲೆಯಲ್ಲಿ ಓಡಾಡುತ್ತಿರುವ ಪಠಾಣರ ಗ್ಯಾಂಗಿನಲ್ಲಿ ಯಾವನಾದರೂ ಒಬ್ಬನಾಗಿರಬಹುದೇನು ? '

' ಅದೂ ಇರಬಹುದು. ಮತ್ತೊಂದು ಗುಹೆಯಲ್ಲಿ ಅವನು ಕಾಯ್ದಿರಬೇಕು; ನಮ್ಮ ದಾರಿ-ತೋರಿಸುವವನು ಮತ್ತೊಂದು ಕಡೆ ನೋಡುತ್ತಿದ್ದಾಗ ಅವನು ಬಹುಶಃ ಹಿಂದೆ ಬಂದಿರಬೇಕು. '

ಇದೇ ಹೊತ್ತಿಗೆ ಹಮೀದುಲ್ಲಾ ಅಲ್ಲಿಗೆ ಬಂದನು. ಅವರಿಬ್ಬರೂ ಈ ರೀತಿ ಏಕಾಂತದಲ್ಲಿ ಕುಳಿತದ್ದು ಅವನ ಮನಸ್ಸಿಗೆ ಬರಲಿಲ್ಲ. ಚಂದ್ರಪುರದಲ್ಲಿ ಎಲ್ಲರಿಗೂ ಕ್ವೆಸ್ಟೆಡ್‌ಳ ನಡತೆಯ ವಿಷಯದಲ್ಲಿ ಸಂಶಯ ಬಂದಿತ್ತು. ಹಮೀದುಲ್ಲಾನಿಗೂ ಹಾಗೆಯೆ ಎನಿಸಿತ್ತು. ಅವನು ಅವರ ಕೊನೆಯ ಮಾತುಗಳನ್ನು ಕೇಳಿ ' ಓ ! ಫೀಲ್ಡಿಂಗ್, ಕೊನೆಗೊಮ್ಮೆ ನಿಮ್ಮನ್ನು ಹಿಡಿದೆ ! ನೀವು ಈಗಲೇ ದಿಲ್‌ಖುಷಕ್ಕೆ ಹೊರಡಬೇಕು. '

' ಈಗಲೇ ? '

' ನಾನು ಇನ್ನೊಂದು ನಿಮಿಷದಲ್ಲಿ ಹೊರಡುವೆನು; ನನ್ನಿಂದ ನಿಮಗೆ ತೊಂದರೆಯಾಗುವದು ಬೇಡ. ' ಅಡೀಲಾ ಎಂದಳು.

' ಟೆಲಿಫೋನಿನ ತಂತಿಗಳನ್ನು ಕತ್ತರಿಸಿದ್ದಾರೆ; ಮಿಸ್ ಕ್ವೆಸ್ಟೆಡ್‌ಳೀಗ ತನ್ನ ಗೆಳತಿಯರಾರನ್ನೂ ಕರೆಯಲಾರಳು ! ' ಎಂದು ಫೀಲ್ಡಿಂಗನು ಸ್ಪಷ್ಟ ಮಾಡಿದನು.

' ಹೌದು, ಬಹಳ ಕಡೆ ಕತ್ತರಿಸಿಬಿಟ್ಟಿದ್ದಾರೆ. ಅದನ್ನು 'ರಿಪೇರಿ' ಮಾಡುವದೇ ಕಷ್ಟ. ಆದರೂ ಆವಳನ್ನು ಹೇಗಾದರೂ ಮಾಡಿ ಸಿವ್ಹಿಲ್ ಲಾಯಿನಿಗೆ ಮುಟ್ಟಿಸಬಹುದು. ' ಅವನು ಕ್ವೆಸ್ಟೆಡ್‌ಳ ಕಡೆಗೆ ನೋಡದೇ ಮಾತನಾಡುತ್ತಿದ್ದುದರಿಂದ ಅವಳು ತನ್ನ ಕೈಯಿಂದ ಫೀಲ್ಡಿಂಗನಿಗೆ ಸನ್ನೆ ಮಾಡಿದ್ದು ಅವನಿಗೆ ಕಾಣಲಿಲ್ಲ.

' ಮಿಸ್ ಕ್ವೆಸ್ಟೆಡ್‌ಳು ತಾನು ಮುಂಜಾನೆ ಕೋರ್ಟಿನಲ್ಲಿ ಏಕೆ ಹಾಗೆ

ಮಾಡಿದಳೆಂಬುದನ್ನು ಹೇಳುತ್ತಿದ್ದಾಳೆ.' ಎಂದು ಫೀಲ್ಡಿಂಗನೆ ನೇರವಾಗಿ ಮಾತಿತ್ತಿದನು.

'ಹಾಗಾದರೆ ಪವಾಡ-ಯುಗವೆ ಮತ್ತೆ ತಿರುಗಿದಂತೆ ಕಾಣುತ್ತದೆ! ಎಲ್ಲದಕ್ಕೂ ಎದೆಗೊಟ್ಟು ನಿಲ್ಲಬೇಕೆಂದು ನಮ್ಮ ಜ್ಞಾನಿಗಳು ಹೇಳುತ್ತಾರೆ.'

'ಪ್ರೇಕ್ಷಕರಿಗೇನೊ ಅದೊಂದು ಪವಾಡದಂತೆ ತೋರಿರಬೇಕು. ಆದರೆ ನಿಜವಾದ ಸಂಗತಿಯೆಂದರೆ ನನಗೆ, ತಪ್ಪುಮಾಡಿದೆನೆಂದು ಬಹಳ ತಡ ಮಾಡಿ ತಿಳಿಯಿತು. ಆಗ ಅದನ್ನು ಹೇಳುವ ಧೈರ್ಯವಿಷ್ಟೆ ಉಳಿದಿತ್ತು. ಮತ್ತೇನೂ ಉಳಿದಿರಲಿಲ್ಲ' ಅಡೀಲಾ ನಡುಗುತ್ತ ಅವನಿಗೆ ಹೇಳಿದಳು.

'ಹೌದು, ಅದೇ ನಿಜ.' ಎಂದು ಎದುರುತ್ತರ ಕೊಟ್ಟು, ಏರುತ್ತಿರುವ ಸಿಟ್ಟನ್ನು ಹಿಡಿತದಲ್ಲಿಟ್ಟುಕೊಂಡು 'ನನ್ನಮಟ್ಟಿಗೆ ಸ್ಪಷ್ಟವಾಗಿ, ಏನೂ ಉಪಚಾರವನ್ನಿಟ್ಟುಕೊಳ್ಳದೆ ಹೇಳಬೇಕೆಂದರೆ, ನಿನ್ನ ನಡತೆಯನ್ನು ನೋಡಿ ನನಗೆ ಆಶ್ಚರ್ಯವಾಯಿತು. ನಮ್ಮ ಉತ್ಸಾಹಿ ತರುಣ ವಿದ್ಯಾರ್ಥಿಗಳು ನಿನಗೂ ಮಾಲೆ ಹಾಕಿದ್ದನ್ನು ನೋಡಿ ಸಂತೋಷವಾದರೂ ಫೀಲ್ಡಿಂಗನಂತೆ ನಾನೂ ವಿಸ್ಮಯಬಟ್ಟೆ—ನೀನು ನನ್ನ ಮಿತ್ರನನ್ನು ಕೊಳಚೆಯಲ್ಲಿ ಎಳೆದು, ಅವನ ಆರೋಗ್ಯವನ್ನು ಹಾಳುಮಾಡಿ, ಅವನ ಭಾವೀಚರಿತ್ರೆಯನ್ನು ನಾಶ ಮಾಡಿದೆ—ನಮ್ಮ ಸಮಾಜದ ಮತ್ತು ಧರ್ಮದ ಪರಿಸ್ಥಿತಿಯು ನಿನಗೆ ಗೊತ್ತಿಲ್ಲದ್ದರಿಂದ ಅವನಿಗಾದ ಹಾನಿಯು ಕಲ್ಪನೆಯೆ ನಿನಗೆ ಬಾರದು—ಆ ಮೇಲೆ ಅಲ್ಲಿ ನಿಂತು ಸಾಕ್ಷಿಹೇಳುವಾಗ ಒಮ್ಮೆಂದೊಮ್ಮೆ 'ಇಲ್ಲ, ಮ್ಯಾಕ್‌ಬ್ರಾಯಿಡರೇ! ಏನೇ ಆದರೂ ನನಗಷ್ಟು ನಿಶ್ಚಿತವಾಗಿ ಗೊತ್ತಿಲ್ಲ. ಅವನನ್ನು ನೀವು ಬಿಟ್ಟುಬಿಡಬಹುದು.' ಎಂದು ಹೇಳಿಬಿಟ್ಟೆಯಲ್ಲ! ಹೀಗಾದದ್ದೇನು ಕನಸೇ, ನನಗೇ ಹುಚ್ಚು ಹಿಡಿದಿದೆಯೇ ಎಂದು ನನ್ನನ್ನು ನಾನೇ ಕೇಳಿಕೊಳ್ಳುತ್ತಿದ್ದೇನೆ. ಈ ಕನಸಿನ್ನೂ ಮುಗಿಯುವ ಹಾಗೆ ಕಾಣುವದಿಲ್ಲ. ಈಗ ಆಝೀಜನದಾಯಿತು; ಇನ್ನುಮೇಲೆ ಪಾಪ, ಆ ದಾರಿ-ತೋರಿಸುವವನ ಪಾರಿಯು ಬಂದಂತೆ ತೋರುತ್ತದೆ—' ಎಂದು ಅವಳು ಮತ್ತೊಂದು ಬಲಿ ಬೇಸಿರುವಳೆಂದೇ ತಿಳಿದುಕೊಂಡು ದುಡುಕಿ ನುಡಿದನು.

'ಛೇ, ಅದೇನೂ ಇಲ್ಲ. ಅದು ಆದದ್ದಾದರೂ ಹೇಗೆ ಆಗಿರಬಹುದೆಂದು ಊಹಿಸುತ್ತಿದ್ದೆವು.' ಎಂದು ಫೀಲ್ಡಿಂಗನು ಮಧ್ಯದಲ್ಲಿಯೆ ತಡೆದನು.

' ಈ ವಿನೋದವೇನೊ ಬಹಳ ರಂಜಕವಾಗಿದೆ; ಆದರೆ ಅದಿನ್ನೂ ಬಹಳ ದೂರ ಹೋಗುವಂತೆ ಕಾಣುತ್ತದೆ. ನಮ್ಮ ಈ ಪ್ರಸಿದ್ಧವಾದ ದ್ವೀಪಕಲ್ಪದಲ್ಲಿ ಹದಿನೇಳು ಕೋಟಿ ಹಿಂದೀಜನರಿದ್ದಾರೆ. ಅವರಲ್ಲಿ ಯಾವನಾದರೊಬ್ಬನು ಏಕೆ ಹೊಕ್ಕಿರಬಾರದು? ನಿಜವಾಗಿ ಒಬ್ಬ ಹಿಂದೀ ಮನುಷ್ಯನೇ ಅಪರಾಧಿ ಇದ್ದಾನೆ ಎನ್ನುವದರಲ್ಲಿ ಏನೂ ಸಂಶಯವಿಲ್ಲ ಫೀಲ್ಡಿಂಗ್.' ಎಂದು ಸಲುಗೆಯಿಂದ ಅವನ ಹೆಗಲ ಮೇಲೆ ಕೈಹಾಕಿ 'ನೀವು ನವಾಬಬಹದ್ದೂರರ—ಅಲ್ಲ, ಅಲ್ಲ, ಝುಲ್‌ಫಿಕೀರರ—ಕಡೆಗೆ ಬರುವದಿಲ್ಲವೇ? ಎಂದು ಕೇಳಿದನು.

' ಸಂತೋಷದಿಂದ; ಒಂದು ನಿಮಿಷ; ಈಗ ಬರುವೆನು.

' ಆಯಿತು, ನೀವು ಹೊರಡಿ ಹಾಗಾದರೆ; ನಾನಿನ್ನು ಎಲ್ಲಿ ಹೋಗಬೇಕೆಂಬದನ್ನು ಆಗಲೆ ನಿರ್ಧರಿಸಿದ್ದೇನೆ.' ಎಂದು ಕ್ವೆಸ್ಟೆಡ್‌ಳು ಮುಂಗಡವಾಗಿಯೆ ಹೇಳಿದಳು.

' ಎಲ್ಲಿಗೆ?'

' ಡಾಕ್ ಬಂಗ್ಲೆಗೆ.'

' ಟರ್ಟನ್ನರ ಕಡೆಗೆ ಹೋಗುವದಿಲ್ಲವೇ? ನೀನು ಅವರ ಅತಿಥಿಯೆಂದು ನನಗನಿಸಿತ್ತು.'

ಚಂದ್ರಪುರದ ಡಾಕ್ ಬಂಗ್ಲೆಯೆಂದರೆ ತೀರ ಕೀಳಾಗಿ ಕಿಗ್ಗಳಾಗಿತ್ತು. ಮೇಲಾಗಿ ಅಲ್ಲಿ ಚಾಕರರು ಯಾರೂ ಇದ್ದಿಲ್ಲ. 'ಮಿಸ್ ಕ್ವೆಸ್ಟೆಡ್! ಅದರಕಿಂತಲೂ ನೀನು ಹೀಗೆ ಮಾಡಿದರೆ ಹೇಗೆ? ನೀನೀಗ ಇಲ್ಲಿಯೆ ಕಾಲೇಜದಲ್ಲಿ ಇರು; ನಾನು ಎರಡು ದಿವಸಗಳ ವರೆಗಂತೂ ಬರುವದಿಲ್ಲ; ಅಲ್ಲಿಯ ವರೆಗೆ ಇಡಿ ಕಾಲೇಜೇ ನಿನ್ನದಿದೆ. ಆ ಎರಡು ದಿನಗಳಲ್ಲಿ ನೀನು ಬೇಕಾದ ನಿನ್ನ ಮುಂದಿನ ಹಂಚಿಕೆಗಳನ್ನು ಹಾಕಿಕೊಳ್ಳಬಹುದು. ಹೇಗೆ?'

' ಇದಕ್ಕೆ ನಾನೊಪ್ಪುವದಿಲ್ಲ.' ಎಂದು ಹಮೀದುಲ್ಲಾ ನಡುವೆಯೆ ಬಾಯಿಹಾಕಿದನು. ' ಈ ವಿಚಾರವೇ ಪೂರ್ತಿಯಾಗಿ ತಪ್ಪು. ಈಹೊತ್ತು ರಾತ್ರಿ ಮತ್ತೊಂದು ಮೆರೆವಣಿಗೆಯು ಏಳಬಹುದು; ಮತ್ತು ಅದು ಕಾಲೇಜದ ಮೇಲೆ ಬಂದರೆ ಈ ಹೆಣ್ಣುಮಗಳ ಸಂರಕ್ಷಣೆಯ ಭಾರವು ನಿನ್ನ ತಲೆಯ ಮೇಲೆ ಬರುವದು.'

'ಅವರು ಡಾಕ್ ಬಂಗ್ಲೆಯನ್ನೂ ಮುತ್ತಬಹುದಲ್ಲ?'

'ಮುತ್ತಿದರೂ ನಿನ್ನ ಮೇಲಿನ ಜವಾಬ್ದಾರಿಯು ತಪ್ಪುತ್ತದೆ.'

'ಅವರಾಡುವ ಮಾತು ತೀರ ನಿಜ. ನಾನು ನಿಮಗೆ ಸಾಕಷ್ಟು ತೊಂದರೆ ಕೊಟ್ಟಿದ್ದೇನೆ, ಸಾಕಿನ್ನು.'

'ನೋಡಿದೆಯಾ ಫೀಲ್ಡಿಂಗ್? ಅವಳೇ ಅದನ್ನೊಪ್ಪುತ್ತಾಳೆ. ನಮ್ಮ ಜನರು ಹಾಗೆ ಮುತ್ತುವದಿಲ್ಲ, ಮೈಮೇಲೆ ಹೋಗುವದಿಲ್ಲ, ಆ ಮಾತು ಬೇರೆ. ಆಸ್ಪತ್ರಿಯಲ್ಲಿ ಹೇಗೆ ವ್ಯವಸ್ಥಿತ ರೀತಿಯಿಂದ ನಡೆದುಕೊಂಡರೆಂಬುದು ನಿಮಗೇ ಗೊತ್ತಿದೆ. ಆದರೆ ಪೋಲಿಸರು ನಿನ್ನ ಮೇಲಿನ ವಿಶ್ವಾಸವನ್ನು ಹಾರಿಸಲಿಕ್ಕೆ ಒಳಗಿಂದೊಳಗೆ ಗೊಂದಲವನ್ನೆಬ್ಬಿಸದಂತೆ ನಾವೀಗ ಜಾಗರೂಕರಾಗಿರಬೇಕಾಗಿದೆ. ಮ್ಯಾಕ್‌ಬ್ರ್ಯಾಯಿಡನು ಈ ಕೆಲಸದ ಸಲುವಾಗಿ ಎಷ್ಟೋ ಹುಂಬರನ್ನೂ ಸಾಕಿದ್ದಾನೆ! ಮತ್ತು ಇದಂತೂ ಅವನಿಗೆ ಉತ್ತಮ ಸಂಧಿಯು ಸಿಕ್ಕಂತಾಗುವದು.'

'ಏನು ಬಂದದ್ದು ಬರಲಿ; ಅವಳು ಡಾಕ್ ಬಂಗ್ಲೆಗೆ ಹೋಗುವದಿಲ್ಲ.' ಎಂದು ಫೀಲ್ಡಿಂಗನು ಧೈರ್ಯದಿಂದ ಹೇಳಿದನು.

'ಹಾಗಾದರೆ ಅವಳ ಕಾಟವಿನ್ನೂ ನಮಗೆ ತಪ್ಪುವಂತೆ ಕಾಣುವದಿಲ್ಲ! ಅವಳು ಎಲ್ಲಿಗೆ ಹೋಗಬೇಕು? ಊಟವನ್ನೆಲ್ಲಿ ಮಾಡಬೇಕು? ಮಲಗಬೇಕೆಲ್ಲಿ? ಇಗೋ, ಇಲ್ಲಿಯೆ ಹೌದಲ್ಲೋ? ಇನ್ನು ಹುಂಬರು ಒಂದು ತಲೆಯ ಮೇಲೆ ಹೊಡೆದರೆ, ಹೊಡೆದರು. ಅದಕ್ಕೇನು ಮಾಡುವದು! ಅಲ್ಲವೆ ಮಿಸ್ ಕ್ವೆಸ್ಟೆಡ್?'

'ಹೌದು. ಫೀಲ್ಡಿಂಗ್, ನೀನು ಬಹಳ ದಯಾಳು! ನಾನು ನಿನ್ನ ಮಾತಿಗೇ ಒಪ್ಪುತ್ತಿದ್ದೆನು; ಆದರೆ ಈಗ ಹಮಿದುಲ್ಲಾ ಹೇಳಿದಂತೆಯೆ ಕೇಳುತ್ತೇನೆ. ಇನ್ನು ನಿಮಗೆ ಹೆಚ್ಚಿಗೆ ತೊಂದರೆ ಕೊಡಲಾರೆ ನಾನಿನ್ನು ಟರ್ಟನ್ನರ ಮನೆಗೆ ಮೊದಲು ಹೋಗಿ ಅವರು ನನಗೆ ಮಲಗಿಕೊಳ್ಳಲಿಕ್ಕೆ ಜಾಗಾ ಕೊಡುವರೇ ಹೇಗೆ, ತಿಳಿದುಕೊಳ್ಳುತ್ತೇನೆ. ಒಂದುವೇಳೆ ಅವರೂ ಹೊರಗೇ ಹಾಕಿದರೆ ನಾನು ಡಾಕ್ ಬಂಗ್ಲೆಗೇ ಹೋಗುತ್ತೇನೆ. ಕಲೆಕ್ಟರರು ನನ್ನನ್ನು ಒಳಗೆ ಕರೆದುಕೊಳ್ಳುವರೆಂದು ನನಗೆ ಗೊತ್ತಿದೆ. ಆದರೆ ಮಿಸೆಸ್

ಟರ್ಟನ್ನಳು ಮಾತ್ರ ಈಹೊತ್ತು ಮುಂಜಾನೆ 'ನಿನ್ನ ಮುಖವನ್ನೆಂದೂ ನೋಡುವದಿಲ್ಲ' ಎಂದು ಆಣೆಮಾಡಿದ್ದಾಳೆ.'

'ಆ ಅಪ್ರಬುದ್ಧ ಹೆಣ್ಣುಮಗಳಿಂದ ಅವಮಾನವನ್ನು ಹೊಂದುವದರ-ಕಿಂತಲೂ ಇಲ್ಲಿಯೆ ಉಳಿಯುವದು ಹೆಚ್ಚು ಯೋಗ್ಯವೆಂದು ನನಗೆನಿಸುತ್ತದೆ.'

'ಅವಳು ನಿಮಗೂ ಅಪ್ರಬುದ್ಧಳೆಂದು ತೋರಿದಳೋ? ನನಗೂ ಮೊದಲು ಹಾಗೇ ಎನಿಸಿತ್ತು. ಆದರೆ ಈಗ ಹಾಗೆನಿಸುವದಿಲ್ಲ.'

'ಇದೆಲ್ಲಕ್ಕೂ ಹೆಚ್ಚಿನ ಒಂದು ಪರಿಹಾರವಿಲ್ಲಿ ಬರಹತ್ತಿದೆ.' ಎಂದು ಬ್ಯಾರಿಸ್ಟರನು ಕಿಟಿಕೆಯ ಕಡೆಗೆ ಹೋಗಿ 'ಅಹಾ, ಸಿಟಿ ಮ್ಯಾಜಿಸ್ಟ್ರೇಟರು! ಇತ್ತಕಡೆಗೇ ಬರುತ್ತಿದ್ದಾರೆ! ಯಾರಿಗೂ ತಿಳಿಯಬಾರದೆಂದು ಮೂರನೆಯ ವರ್ಗದ ಬಂಡಘಾರಿಯಲ್ಲಿ ಬಂದಿದೆ ಸವಾರಿ. ಜೊತೆಗೂ ಆಳು-ಹೋಳು ಯಾರೂ ಇಲ್ಲ. ಬಂದರು ಸಿಟಿಮ್ಯಾಜಿಸ್ಟ್ರೇಟರು!'

'ಕೊನೆಗೆ....' ಎಂದು ಆಡೀಲಾ ಧಟ್ಟನೆ ನುಡಿದಳು. ಇದನ್ನು ಕೇಳಿ ಫೀಲ್ಡಿಂಗನು ಅವಳ ಕಡೆಗೆ ನೋಡಿದನು.

'ಬಂ-ದ-ನು, ಬಂ-ದ-ನು ಅವನು!—ಅವನಡಿಗೆ ಬೀಳುವೆನು—ಬೇಡುವೆನು....ಮಿ. ಫೀಲ್ಡಿಂಗ್! ಅವನಿಗೆ ಏನು ಬೇಕು ನೀವೇ ಕೇಳು ವಿರಾ?....'

'ಅವನಿಗೆ ಬೇಕಾದ್ದು ಗೊತ್ತೇ ಇದೆ. ಅವನಿಗೆ ನೀನು ಬೇಕು.'

'ನಾನಿಲ್ಲಿರುವದು ಸಹ ಅವನಿಗೆ ಗೊತ್ತಿರಲಿಕ್ಕಿಲ್ಲ..'

'ನಿನಗೆ ಬೇಕಿದ್ದರೆ, ನಾನೇ ಮೊದಲು ಅವನನ್ನು ಕಾಣುವೆನು.'

ಫೀಲ್ಡಿಂಗನು ಹೊರಗೆ ಹೋದಮೇಲೆ ಹಮೀದುಲ್ಲಾ ಅವಳಿಗೆ ಚುಚ್ಚು ವಂತೆ ಹೀಗೆ ಮಾತಾಡಿದನು: 'ನಿಜವಾಗಿ, ನಿಜವಾಗಿ. ಫೀಲ್ಡಿಂಗನನ್ನು ಮತ್ತೆ ಈ ತೊಂದರೆಗೆ ಯಾಕೆ ಗುರಿಮಾಡಬೇಕಿತ್ತು? ಪಾಪ, ಮೊದಲೇ ಅದು ಅಭಿಮಾನಿ!'

ಅವಳು ಉತ್ತರವನ್ನೇ ಕೊಡಲಿಲ್ಲ.

'ನಿನಗೇನೋ ಸುದ್ದಿ ಹೇಳಬೇಕಾಗಿದೆಯಂತೆ; ಅವನು ಹೊರಂಗಳ ದಲ್ಲಿದ್ದಾನೆ; ಅವನೀಗ ಒಳಗೆ ಬರದೆ ಇರುವದೇ ವಿಹಿತವಾಗಿ ಕಾಣುತ್ತದೆ.'

'ನಾನು ಹೊರಗೆ ಬರಬೇಕೆಂದು ಅವನು ಹೇಳಿದನೇ?'

'ಅವನು ಹೇಳಲಿ, ಹೇಳದಿರಲಿ, ನೀನೇ ಹೋಗುವಿಯೆಂದು ನಾನು ತಿಳಿಯುತ್ತೇನೆ.' ಎಂದು ಹವಿೂದುಲ್ಲಾ ಆಧಿಕಪ್ರಸಂಗಿಯಂತೆ ಹೇಳಿದನು. ಅವಳು ಸ್ವಲ್ಪ ತಡೆದು 'ಹೌದು, ನಿಮ್ಮ ಮಾತೂ ಸರಿಯಾಗಿದೆ.' ಎಂದು ಇಷ್ಟೆಲ್ಲ ಸಹಾಯಮಾಡಿದ್ದಕ್ಕೆ ಫೀಲ್ಡಿಂಗನಿಗೆ ತನ್ನ ಕೃತಜ್ಞತೆಗಳನ್ನರ್ಪಿಸಿ ಹೊರಗೆ ಹೊರಟುಬಿಟ್ಟಳು.

ಫೀಲ್ಡಿಂಗನು 'ಛೇ, ನಾನೇನು ಅಂಥ ಮಹಾಭಾರದ ಉಪಕಾರವನ್ನು ಮಾಡಿದ್ದೇನೆ!' ಎಂದು ಅವಳೊಡನೆ ಹೊರಗೆ ಹೋಗದೆ ಹಿಂದುಳಿದನು.

'ಅವನು ಒಳಗೆ ಬಾರದಿರುವದು ನಮಗೆ ಅಪಮಾನವನ್ನು ಮಾಡಿದಂತೆ!' ಎಂದು ಹವಿೂದುಲ್ಲಾ ಮತ್ತೆತ್ತಿದನು.

'ಕ್ಲಬ್ಬಿನಲ್ಲಿ ಮೊನ್ನೆ ಆದ ಪ್ರಸಂಗದಿಂದ ಅವನಿಗೆ ನಮ್ಮನ್ನು ಭೆಟ್ಟಿಯಾಗಲಿಕ್ಕೆ ಮಾರಿಯಿಲ್ಲದಂತಾಗಿದೆ. ಅದೂ ಈ ಹೊತ್ತೇ ದೈವವು ಅವನನ್ನು ಮತ್ತೆ ಸಾಕಷ್ಟು ಕಾಡಿದೆ. ಇನ್ನೂ ಒಂದು, ತಾಯಿಯನ್ನು ತೀರಿಕೊಂಡಳೆಂದು ಅವನಿಗೆ 'ಕೇಬಲ್ಲು' ಬೇರೆ ಬಂದಿದೆ! ಪಾಪ, ಬಡಪ್ರಾಣಿ!'

'ಹೀಗಿಯೇ? ಮಿಸೆಸ್ ಮೂರಳು....! ಅಯ್ಯೋ ಪಾಪ! ಬಹಳ ಕೆಡಕೆನಿಸುತ್ತದೆ!' ಎಂದು ಹವಿೂದುಲ್ಲಾ ಮರುಗಿದನು.

'ಅವಳು ಹಡಗದಲ್ಲಿಯೆ ತೀರಿಕೊಂಡಳಂತೆ!'

'ಅತಿ ಉಷ್ಣತೆಯಿಂದೇ?'

'ಹಾಗೇ ಇರಬಹುದೆಂದು ತಿಳಿದುಕೊಂಡಿದ್ದೇನೆ.'

'ಮುಪ್ಪಿನವರಿಗೆ ಪ್ರವಾಸಮಾಡಲಿಕ್ಕೆ ಮೇ ತಿಂಗಳವೆಂದೂ ಯೋಗ್ಯವಲ್ಲ.'

'ತೀರ ನಿಜ. ತನಗೆ ಗೊತ್ತಿದ್ದೂ ಹೆಸ್ಲೊಪನು ಅವಳನ್ನು ಹೋಗಗೊಡಬಾರದಿತ್ತು. ನಾವಿನ್ನು ಹೊರಡೋಣವೇ?'

'ಸ್ವಲ್ಪ ತಡೆ; ಈ ದಂಪತಿಗಳು ಈ ಕಾಂಪೌಂಡು ಬಿಟ್ಟು ಒಮ್ಮೆ ಹೊರಗೆ ಹೋಗಲಿ. ಪಾಪ! ಎಷ್ಟೊತ್ತು ಸುಮ್ಮನೆ ನಿಂತಿದ್ದಾರ!—ಓ, ಫೀಲ್ಡಿಂಗಾ! ನಿನಗಂತೂ ದೇವರಲ್ಲಿ ನಂಬಿಕೆಯಿಲ್ಲ; ನನಗೆ ಇದೆ. ಹೆಸ್ಲೊಪನಿಗೆ ತನ್ನ ತಾಯಿಯನ್ನು ಊರುಬಿಟ್ಟು ಕಳಿಸಿದ ತಪ್ಪಿಗಾಗಿ ದೇವರು ಚೆನ್ನಾಗಿ ದಂಡಿಸಿದನೆಂದೇ ನನಗೆನಿಸುತ್ತಿದೆ.'

'ಹಮೀದುಲ್ಲಾ ! ನೀನು ಬಹಳ ದೂರ ಹೋಗುತ್ತೀ. ಕೋರ್ಟಿನಲ್ಲಿ ಮಹಮ್ಮದಲಿಯು ಬೇಕಾದಷ್ಟು ಚೀರಲಿ, ಕೂಗಲಿ, ಆ ಮುದುಕಿಯ ಸಾಕ್ಷಿಗೆ ಏನೂ ಕಿಮ್ಮತ್ತು ಬರುತ್ತಿದ್ದಿಲ್ಲ. ಯಾಕೆಂದರೆ ಅವಳಿಗೆ ಬೇಕೆಂದಿದ್ದರೂ ಕಾವಾದೋಲದೊಳಗೆ ಹೋಗಿ ನೋಡಲಿಕ್ಕೆ ಶಕ್ಯವೇ ಇದ್ದಿಲ್ಲ. ಇನ್ನು ಕ್ವೆಸ್ಟೆಡ್‌ಳಿಗೆ ಮಾತ್ರ ಅವನನ್ನುಳಿಸಲಿಕ್ಕೆ ಬರುತ್ತಿತ್ತು.'

'ಅವಳು ಅಝೀಜನನ್ನೂ ಮತ್ತು ಹಿಂದುಸ್ಥಾನವನ್ನೂ ಪ್ರೀತಿಸುತ್ತಿದ್ದಳೆಂದು ಅವನೇ ಎನ್ನುತ್ತಾನೆ. ಅಲ್ಲದೆ ಅವನೂ ಅವಳನ್ನು ಪ್ರೀತಿಸುತ್ತಿದ್ದನಂತೆ.'

'ಸಾಕ್ಷಿಯಲ್ಲಿ ಪ್ರೇಮವೇನೂ ಪ್ರಯೋಜನದ್ದಲ್ಲವೆಂದು ಬ್ಯಾರಿಸ್ಟರಿದ್ದವರಿಗಂತೂ ಮೊದಲೆ ತಿಳಿಯುತಕ್ಕದ್ದಿತ್ತು. ಹೋಗಲಿ, ಚಂದ್ರಪುರದಲ್ಲೀಗ ಒಂದು 'ಎಸ್-ಮಿಸ್-ಮೂರಳ ಕತೆಯೇ ಹುಟ್ಟುವಂತೆ ತೋರುತ್ತದೆ?'

ಹಮೀದುಲ್ಲಾ ಮುಗುಳುನಗೆ ನಗುತ್ತ ತನ್ನ ಕೈಗಡಿಯಾರದ ಕಡೆಗೆ ನೋಡಿದನು. ಇಬ್ಬರಿಗೂ ಮೂರಳ ಮರಣವಾರ್ತೆಯಿಂದ ಬಹಳ ವಿಷಾದವಾಗಿತ್ತು. ಆದರೆ ಅದೂ ಬಹಳ ಹೊತ್ತು ನಿಲ್ಲಲಿಲ್ಲ. ಮತ್ತೆ ತಮ್ಮ ನಿತ್ಯ ವ್ಯವಹಾರದಲ್ಲಿ ತೊಡಗಿಕೊಂಡರು. ಅಝೀಜನು ತನಗೆ ದೊರೆತ ಜಯಕ್ಕಾಗಿ ಹೂಡಿದ ಆನಂದಸಮಾರಂಭದಲ್ಲಿರುವಾಗ ಮೂರಳು ಸತ್ತ ಈ ಕೆಟ್ಟ ಸುದ್ದಿಯನ್ನು ಈಗಲೆ ಹೇಳಿ ಅವನ ಹಿಗ್ಗನ್ನು ಕುಗ್ಗಿಸುವದಕ್ಕಿಂತ ನಾಳೆಯ ವರೆಗೆ ಅದನ್ನು ತಡೆಹಿಡಿಯಬೇಕೆಂದು ಇಬ್ಬರೂ ಗೊತ್ತುಮಾಡಿಕೊಂಡರು.

ಕ್ವೆಸ್ಟೆಡ್‌ಳು ತಿರುಗಿ ಬಂದದ್ದನ್ನು ನೋಡಿ 'ಮತ್ತೆ ಬಂತಲ್ಲ ಪೀಡಾ; ಇನ್ನು ಸಹನೆ ಮೀರಿತು.' ಎಂದು ಹಮೀದುಲ್ಲಾ ಚುಚ್ಚಿ ನುಡಿದನು.

'ಮಿ. ಫೀಲ್ಡಿಂಗ್ ! ನಿಮಗೆ ರೋನಿಯು ತನ್ನ ಹೊಸ ದುಃಖವನ್ನೇನಾದರೂ ಹೇಳಿರುವನೇ ?'

ಫೀಲ್ಡಿಂಗನು ತಲೆಬಾಗಿಸಿದನು.

'ಅಯ್ಯೋ !' ಎಂದು ಅವಳು ಕಲ್ಲಿನ ಮೂರ್ತಿಯಂತೆ ಕುಳಿತುಕೊಂಡಳು.

'ಹೆಸ್ಲೊಪನು ನಿನ್ನ ಸಲುವಾಗಿ ದಾರೀನೋಡುವಂತೆ ಕಾಣುತ್ತದೆ?' ಎಂದು ಹಮೀದುಲ್ಲಾ ಕೆಣಕಿದನು.

'ಇಲ್ಲ, ಈಗ ನಾನೊಬ್ಬಳೇ ಆಗಬೇಕೆಂದು ಬಯಸುತ್ತೇನೆ; ಅವಳು ಅವನಕಿಂತ ನನಗೆ ಜೀವದ ಮಿತ್ರಳು. ನಾನಿನ್ನು ಮಾತ್ರ ರೋಣಿಯೊಡನೆ ಇರುವದು ಅಸಾಧ್ಯ—ಯಾಕೊ ನನಗೇ ತಿಳಿಯದು....ನನ್ನನ್ನು ದಯ ವಿಟ್ಟು ಇಲ್ಲಿಯೆ ಇರಗೊಡುವಿರಾ ?....'

ಹಮಿದುಲ್ಲಾ ತನ್ನ ಭಾಷೆಯಲ್ಲಿ ಅವಾಚ್ಯವಾಚ್ಯ ಮಾತನಾಡಿದನು.

'ಅದಕೇನು ಬೇಕಾದ ಹಾಗೆ ಇರಬಹುದು; ಬಹಳ ಸಂತೋಷ; ಆದರೆ ಇದು ಹೆಸ್ಲೊಪನ ಮನಸ್ಸಿಗೆ ಬರುವದೇ ?'

'ನಾನು ಅವನಿಗದನ್ನು ಕೇಳಿಯೇ ಇಲ್ಲ. ನಮಗಿಬ್ಬರಿಗೂ ಬಹಳ ದಿಗಿಲುಬಿದ್ದಿದೆ. ದುಃಖವು ನಾವು ತಿಳಿದುಕೊಂಡ ಹಾಗೆ ಇರುವದಿಲ್ಲ; ಪ್ರತಿಯೊಬ್ಬನೂ ಏಕಾಂತದಲ್ಲಿ ಅದರ ವಿಚಾರಮಾಡಬೇಕು; ಹೋಗುವಾಗ ರೋನಿಯನ್ನಷ್ಟು ಕಂಡು ಹೋಗಿರಿ.'

'ಆದೇಕೆ, ಅವನೇ ಈಗ ಒಳಗೆ ಬರಬಹುದಲ್ಲ?' ಎಂದು ಫೀಲ್ಡಿಂಗನು ತನ್ನ ಗೌರವಕ್ಕೆ ತಕ್ಕುದೆಂದು ನೆನೆದು 'ಅವನಿಗೆ ಬರಹೇಳು.' ಎಂದನು.

ಅವಳು ಹೋಗಿ ಅವನನ್ನು ಕರೆದುಕೊಂಡು ಬಂದಳು. ಅವನು ಅರ್ಧ ದುಃಖಿಯೂ ಅರ್ಧ ಒಗರಿನವನೂ ಆಗಿ ಬಂದೊಡನೆ 'ನಾನು ಮಿಸ್ ಕ್ವೆಸ್ಟೆಡ್‌ಳನ್ನು ಕರೆದುಕೊಂಡು ಹೋಗಲಿಕ್ಕೆ ಬಂದಿದ್ದೇನೆ—ಇನ್ನವಳು ಟರ್ಟನ್ನಳ ಕಡೆಗೂ ಹೋಗುವಂತಿಲ್ಲ—ಅಲ್ಲಿ ಬಿಟ್ಟು ಬೇರೆ ಕಡೆಗೆಲ್ಲಿಯೂ ವ್ಯವಸ್ಥೆ ಇಲ್ಲ— ನನ್ನದೊ ಏಕಾಂಗಿಯ ಮನೆ—' ಎಂದು ಒಮ್ಮಿಂದೊಮ್ಮೆ ಹರಕುಮುರುಕಾಗಿ ಮಾತಾಡತೊಡಗಿದನು.

ಫೀಲ್ಡಿಂಗನು ಅವನನ್ನು ನಡುವೆಯೆ ಒಳ್ಳೆ ಮರ್ಯಾದೆಯಿಂದ ತಡೆದು 'ಹೆಚ್ಚಿಗೆ ಮಾತು ಬೇಡ. ಮಿಸ್ ಕ್ವೆಸ್ಟೆಡ್‌ಳು ಇಲ್ಲಿಯೆ ಇರಬೇಕೆನ್ನುತ್ತಾಳೆ. ಅದಕ್ಕೆ ನಿಮ್ಮ ಸಮ್ಮತಿಯಿದೆಯೆಂಬ ಭರವಸೆಯಿಷ್ಟೆ ಬೇಕಿತ್ತು. ಮಿಸ್ ಕ್ವೆಸ್ಟೆಡ್, ನಿನ್ನ ಚಾಕರನು ಸಿಕ್ಕರೆ ಅವನನ್ನು ಕರೆಕಳುಹಿಸು; ಬೇಕಾದರೆ ನನ್ನ ಚಾಕರರಿಗೇ ಶಕ್ಯವಿದ್ದಷ್ಟು ನಿನಗೆ ನೆರವಾಗಲಿಕ್ಕೆ ತಿಳಿಸುತ್ತೇನೆ; ಅದ ರಂತೆಯೆ ಸ್ಕ್ಯಾಟರಿಗೂ ತಿಳಿಸುತ್ತೇನೆ. ಇಲ್ಲಿ ನೀನು ಸುರಕ್ಷಿತಳಾಗಿ ಇರ ಬಹುದು. ನಾನು ಗುರುವಾರ ತಿರುಗಿ ಬರುವೆನು.' ಎಂದು ಹೇಳಿದನು.

ಅಷ್ಟರಲ್ಲಿ ಹಮಿದುಲ್ಲಾ ಬೇಕೆಂತಲೆ ದುಃಖಕೊಡಬೇಕೆಂದು ನಿಶ್ಚ

ಯಿಸಿ ರೋನಿಗೆ 'ನಿಮ್ಮ ತಾಯಿಯು ತೀರಿಕೊಂಡಳೆಂದು ಕೇಳುತ್ತೇವೆ; 'ಕೇಬಲ್ಲು' ಎಲ್ಲಿಂದ ಬಂತು?' ಎಂದು ಕೇಳಿದನು.

'ಏಡನ್ನಿನಿಂದ.'

'ಓ! ನೀವು ಕೋರ್ಟಿನಲ್ಲಿ ಅವಳು ಏಡನ್ನಕ್ಕೆ ಮುಟ್ಟಿರುತ್ತಾಳೆಂದು ಗುಳಿಗೆ ಕೊಟ್ಟಿದ್ದಿರಲ್ಲ?'

'ಆದರೆ ಅವಳು ಮುಂಬೈ ಬಿಟ್ಟ ಕೂಡಲೆ ತೀರಿಕೊಂಡಳು.' ಎಂದು ತಡೆಯಲಾರದೆ ಅಡೀಲಾ ಮಧ್ಯದಲ್ಲಿಯೆ ಹೇಳಿದಳು. 'ಕೋರ್ಟಿನಲ್ಲಿ ಈ ಹೊತ್ತು ಮುಂಜಾನೆ ಅವಳ ಹೆಸರನ್ನೆತ್ತಿದಾಗ ಅವಳು ಸತ್ತಿದ್ದಳು! ಅವ ಳನ್ನು ಅಲ್ಲಿಯೆ ಜಲಸಮಾಧಿ ಮಾಡಿರಬೇಕು!'

ಇದರಿಂದ ಹೇಗೋ ಹಮೀದುಲ್ಲಾ ಸುಮ್ಮನಾದನು; ಮತ್ತು ತನ್ನ ಪಶುವೃತ್ತಿಯನ್ನು ಬಿಟ್ಟು 'ಸರ್, ಫೀಲ್ಡಿಂಗನಾಗಲಿ, ನಮ್ಮಲ್ಲಿ ಯಾರಾ ದರೂ ಆಗಲಿ, ಅವಳು ಈ ಗವರ್ನ್‌ಮೆಂಟ ಕಾಲೇಜದಲ್ಲಿರುವ ವರೆಗೆ ಅವಳ ಸುರಕ್ಷತೆಗೆ ಜವಾಬ್ದಾರರಲ್ಲೆಂದು ತಾವು ಸ್ಪಷ್ಟವಾಗಿ ತಿಳಿದುಕೊಳ್ಳತಕ್ಕದ್ದು' ಎಂದು ರೋನಿಗೆ ಹೇಳಿದನು. ಅದಕ್ಕೆ ರೋನಿಯೂ ಒಪ್ಪಿದನು. ಆಮೇಲೆ ಅವರು ತಡವಾಗಿದ್ದರೂ ದಿಲ್‌ಖುಷಕ್ಕೆ ಹೊರಟರು. ಅಮೃತರಾಯನೂ ಬಂದು ಅವರನ್ನು ಕೂಡಿದನು. ಹಮೀದುಲ್ಲಾ ಅವನನ್ನು 'ಅಮೃತರಾವ! ಮಿಸ್ ಕ್ವೆಸ್ಟೆಡ್‌ಳು ಆಝೀಜನ ಮಾನಹಾನಿಯನ್ನು ತುಂಬಿಕೊಡಲಿಕ್ಕೆ ಎಷ್ಟು ದುಡ್ಡು ಕೊಡಬೇಕೆನ್ನುವದನ್ನು ವಿಚಾರಮಾಡಿರುವಿರಾ?' ಎಂದು ಭೆಟ್ಟಿಯಾದೊಡನೆ ಕೇಳಿದನು.

'ಇಪ್ಪತ್ತು ಸಾವಿರ ರೂಪಾಯಿ.'

ಆಮೇಲೆ ಏನೂ ಮಾತಾಗಲಿಲ್ಲ. ಆದರೆ ಅಮೃತರಾಯನ ಮಾತಿನಿಂದ ಫೀಲ್ಡಿಂಗನು ಮಾತ್ರ ಗಾಬರಿಯಾದನು. ಕ್ವೆಸ್ಟೆಡ್‌ಳು ಇದರಿಂದ ಹಾಳಾಗಿ ಹೋಗುವಳೆಂದು ಅವನು ಬಗೆದನು. ಇದ್ದ ಹಣವನ್ನೆಲ್ಲ ಕಳೆದುಕೊಳ್ಳುವ ದಲ್ಲದೆ ಗುಣವನ್ನೂ ಕಳೆದುಕೊಂಡ, ನಿಲ್ಲಲಿಕ್ಕೆ ದೊರೆಯಬಹುದಾಗಿದ್ದ ನೆಲೆ ಯನ್ನೂ ತಪ್ಪಿಸಿಕೊಂಡ ಅವಳ ಭಯಾನಕ, ದಾರುಣ, ರುದ್ರ ಚಿತ್ರವು ಅವನ ಮನಸ್ಸಿನಲ್ಲಿ ಮೂಡಿ ಅವನನ್ನು ನಡುಗಿಸಿಬಿಟ್ಟಿತು.

—

## ಪ್ರಕರಣ ೨೭

'ಆಝೀಜ! ಇನ್ನೂ ಎಚ್ಚತ್ತೀಯಾ?'

'ಹುಂ; ಸ್ವಲ್ಪ ಮಾತಾಡೋಣ ಬಾ; ಮುಂದಿನ ಹಂಚಿಕೆಗಳನ್ನಾದರೂ ಹಾಕಿಡೋಣ.'

'ಆ ಮುಂದಿನದೆಲ್ಲ ನನಗೇನೂ ತಿಳಿಯುವದಿಲ್ಲ.'

'ಹಾಗಾದರೆ ಮಲಗಿಕೋ, ಸಾಕು.'

ಆಝೀಜನ ವಿಜಯುಸಮಾರಂಭವು ಮುಗಿದಿತ್ತು. ಅದಕ್ಕೆ ಬಂದವರೆಲ್ಲ ಝುಲ್‌ಫಿಕೀರನ ಮಾಳಿಗೆಯ ಮೇಲೆ ಮಲಗಿಕೊಂಡಿದ್ದರು. ಕೆಲವರು ಇನ್ನೂ ಮಚ್ಚಿರದಾನಿಯೊಳಗಿಂಡ ನಕ್ಷತ್ರಗಳನ್ನು ನೋಡುತ್ತಿದ್ದರು.

ಮತ್ತೆ ಮಾತು ಸುರುವಾದವು.

'ಸಿರಿಲಾ! ನಮ್ಮ ಈ ದಿವಸದ ಕೆಲಸದಿಂದ ನಿನಗೆ ಸಮಾಧಾನವಾಗಿದೆಯೇ?' ಒಬ್ಬನ ಎಡಗಡೆಯಿಂದ ದನಿಯೊಂದು ಎದ್ದು ಬಂತು.'

'ನೀನೇ!'

'ಈ ವಿಂತಿಪೂರಿ ತಿಂದ ಊಟವೊಂದನ್ನು ಬಿಟ್ಟು ಎಲ್ಲ ಮನಸಿಗೆ ಬಂತು. 'ಹೊಟ್ಟೆ! ಹೇಗಿದ್ದೀಯಾ? ತಲೆ! ಹೇಗಿದ್ದೀಯಾ?' ಎಂದು ಅವುಗಳ ಸಮಾಚಾರ ತಕ್ಕೊಳ್ಳುತ್ತಿದ್ದೇನೆ—ಇದು ನೋಡು, ಪನ್ನಾಲಾಲನನ್ನೂ ಕ್ಯಾಲೆಂಡರನನ್ನೂ ನೌಕರಿಯಿಂದ ತೆಗೆದುಬಿಡುವರು!'

'ಹಾಗಾದರೆ ಚಂದ್ರಪುರದಲ್ಲಿಯೆ ಬಹಳ ಬದಲಾವಣೆಗಳಾಗುವವು.'

'ಮತ್ತೆ, ನಿನಗೆ ಬಡತಿ ಸಿಗುವದು!'

'ಸಿಗದೆ ಏನು? ಅವರ ಮನಸ್ಸಿನಲ್ಲಿ ಏನೇ ಇದ್ದರೂ ನನ್ನನ್ನು ಮಾತ್ರ ಅವರು ಕೆಳಗೆ ಹಾಕಲಾರರು.'

'ಏನೇ ಆಗಲಿ, ನಾವು ರಜೆಯನ್ನಂತೂ ಕೂಡಿಯೆ ಕಳೆಯೋಣ. ಮತ್ತು ನನಗೀಗ ಬೇಕಾದಷ್ಟು ರೊಕ್ಕ ಸಿಗುವದರಿಂದ ಕಾಶ್ಮೀರ, ಶಕ್ಯವಾದರೆ ಪರ್ಶಿಯಾದೇಶಗಳನ್ನೂ ಕೂಡಿಯೆ ನೋಡೋಣ....'

'ಇಷ್ಟೆಲ್ಲ ಹಣ ಎಲ್ಲಿಂದ ಬರುತ್ತದೆ?'

‘ ನನ್ನ ಮಾನಹಾನಿಯನ್ನು ತುಂಬಿಸಲು ಕೋರ್ಟು ಕೊಡಿಸುತ್ತದೆ. ’

‘ ಹಾಗಾದರೆ ನೀನೊಂದು ಮಹಾ ವಿಜಯವನ್ನೇ ಸಂಪಾದಿಸಿದಂತಾಯಿತು !. . . . ’ ಫೀಲ್ಡಿಂಗನೆಂದನು.

‘ ಓ ! ಅದೆಲ್ಲ ನನಗೆ ಗೊತ್ತಿದೆ. ನೀನು ಮುಂದೆ ಏನು ಹೇಳುವಿಯೆಂಬುದೂ ನನಗೆ ಗೊತ್ತಿದೆ. ಮಿಸ್ ಕ್ವೆಸ್ಟೆಡ್‌ಳನ್ನು ಈ ಹಣ ಕೊಡುವದರಿಂದ ಮುಕ್ತಮಾಡೆಂದು, ಹೌದಲ್ಲೋ ? ಎಷ್ಟೇ ಆದರೂ ನೀವೂ ಅವಳೂ ಒಂದೇ ಜಾತಿಯವರಲ್ಲವೇ ? ಆಗದು, ಅದಾಗದು ! ನಾನೀಗ ಬ್ರಿಟಿಶರ ವಿರೋಧಿಯಾಗಿದ್ದೇನೆ ! ’

‘ ನನ್ನ ಕೂಡಾ ? ’

‘ ಆ ಮಾತಿರಲಿ. ಇದುನೋಡು; ಆ ಮಹಮ್ಮದ-ಲತೀಫನ ಮುಖದ ಮೇಲೆ ನೀರೆರಚೋಣವೇ ? ಅಂದರೆ ಏನು ಹೇಳಲಿ ತಮಾಷೆಯನ್ನು ? ’ ಎಂದು ಆ ಮಾತನ್ನೇ ಹಾರಿಸಿ ನುಡಿದನು.

‘ ಆಗಬಹುದು. ಆದರೆ ಇನ್ನೊಂದು ಮಾತು: ನೀನು ಮಿಸ್ ಕ್ವೆಸ್ಟೆಡ್‌ಳನ್ನು ಸರಳವಾಗಿ ಬಿಟ್ಟುಬಿಡಬೇಕು. ಅವಳು ನಿನ್ನ ಖರ್ಚುಗಳನ್ನೆಲ್ಲ ಕೊಡುವದು ನ್ಯಾಯವೇ ಆದರೂ ಅವಳನ್ನು ನೀನು ಗೆದ್ದ ವೈರಿಯಂತೆ ನಡಿಸಿಕೊಳ್ಳಬೇಡ. ’ ಎಂದು ಹೆದರಹೆದರುತ್ತ ಹೇಳಿದನು.

‘ ಅವಳು ಶ್ರೀಮಂತಳಿದ್ದಾಳೇನು ? ಅಥವಾ ಅವಳ ಪರಿಸ್ಥಿತಿಯನ್ನು ತಿಳಿದುಕೊಂಡು ಬರುವ ಕೆಲಸವನ್ನು ನಿನಗೇ ಒಪ್ಪಿಸುತ್ತೇನೆ, ಆಗಲಿ. ’

‘ ಊಟದ ಕಾಲಕ್ಕೆ ನೀವೆಲ್ಲರೂ ರಂಗಿಗೇರಿ ಹೇಳಿದ ಆ ಅಂಕಿಯು ನನ್ನ ಕಲ್ಪನೆಗೂ ನಿಲುಕದ್ದು. ಅದರಿಂದ ಅವಳು ಹಾಳಾಗಿಹೋಗುವಳು. ಇಲ್ಲಿ ನೋಡು. . . . ’

‘ ಹೂಂ, ಕತ್ತಲೆಯಿದ್ದರೂ ನೋಡುತ್ತಿದ್ದೇನೆ. ನಮ್ಮ ಸಿರಿಲ್ ಫೀಲ್ಡಿಂಗನು ಒಳ್ಳೆಯ ಹುಡುಗ, ನನ್ನ ಜೀವದ ಗೆಳೆಯ; ಆದರೆ ಕೆಲವೊಂದು ಮಾತಿನಲ್ಲಿ ಮೂರ್ಖ. ಇಲ್ಲಿ ನೋಡು ಸಿರಿಲ್, ಮಿಸ್ ಕ್ವೆಸ್ಟೆಡ್‌ಳನ್ನು ಹ್ಞಾಗೇ ಬಿಟ್ಟರೆ ನನಗೂ, ಸಾಮಾನ್ಯವಾಗಿ ಎಲ್ಲ ಹಿಂದೀ ಜನರಿಗೂ ನಾನು ಒಂದು ಮಹಾಕೀರ್ತಿಯನ್ನು ಗಳಿಸುವೆನೆಂದು ನೀನು ತಿಳಿದಂತೆ ಕಾಣುತ್ತದೆ. ಆದರೆ ಹಾಗೆ ಇಲ್ಲ ಅದು; ಹಾಗೆ ಬಿಟ್ಟರೆ ನಾವು ಕೈಲಾಗದವರೆಂದೂ ಕೈ-

ಸಾಗದವರೆಂದೂ ಹೇಡಿಗಳೆಂದೂ ನೌಕರಿಯಲ್ಲಿ ಬಡತಿ ದೊರಕಿಸುವದಕ್ಕಾಗಿ ಹಾಗೆ ಮಾಡಿದೆವೆಂದೂ ಜನರು ತಿಳಿಯುತ್ತಾರೆ. ಆಯಿತು, ನಾನಿನ್ನು ಬ್ರಿಟಿಶ ಹಿಂದುಸ್ತಾನದ ಸಂಬಂಧವನ್ನೇ ತಪ್ಪಿಸಿಕೊಳ್ಳಬೇಕೆಂದು ಮಾಡಿದ್ದೇನೆ. ನಾನು ಹೈದರಾಬಾದ, ಭೋಪಾಳದಂತಹ ಮುಸಲ್ಮಾನ ಸಂಸ್ಥಾನದಲ್ಲಿ ಹೋಗಿ ನೌಕರಿಯನ್ನು ಹಿಡಿಯುವೆನು. ಅಲ್ಲಿ ಏನು ಇಂಗ್ಲಿಷರು ಬಂದು ನನ್ನನ್ನು ತಿರಸ್ಕರಿಸಲಾರರು. ಇನ್ನು ನನಗೆ ನಿನ್ನ ಉಪದೇಶ ಸಾಕು.'

'ಮಿಸ್ ಕ್ವೆಸ್ಟೆಡ್‌ಳೊಡನೆ ಬಹಳಹೊತ್ತು ಮಾತಾಡುವಾಗ....'

'ಸಾಕು, ಸಾಕು; ನಿನ್ನ ಮಾತುಗಳನ್ನೇ ಕೇಳುವದು ಸಾಕು.'

'ಶಾಂತನಾಗು ಅಝೀಜ! ಒಮ್ಮೆಲೆ ಹಾಗೆ ಸಿಡಿದುಬೀಳಬೇಡ. ನಾನು ಅವಳೊಡನೆ ಬಹಳ ಹೊತ್ತು ಮಾತನಾಡಿದಮೇಲೆ ಅವಳ ನಿರ್ಮಲ ಸ್ವಭಾವವು ನನಗೆ ಗೊತ್ತಾಯಿತು. ಅವಳೂ ಮಾನಿಯಾದ ಹೆಂಗುಸಿದ್ದಾಳೆ. ಹಣ ಬರುವದು ಅಷ್ಟು ಸುಲಭವಿಲ್ಲ. ಆದರೆ ಸತ್ಯಪ್ರಿಯಳೂ ಇದ್ದಾಳೆ; ಎದೆಗಾರಳಿದ್ದಾಳೆ. ತಾನು ತಪ್ಪಿನಲ್ಲಿದ್ದದ್ದು ಅವಳಿಗೆ ಗೊತ್ತಾದ ಕೂಡಲೆ ಅವಳು ಧೈರ್ಯದಿಂದ ಎದ್ದುನಿಂತು ಅದನ್ನೊಪ್ಪಿಕೊಂಡಳು. ಅದಕ್ಕಾಗಿ ಅವಳ ಸುತ್ತಲಿರುವ ಎಲ್ಲ ಮಿತ್ರರು, ಅದೇಕೆ ಇಡಿ ಈ ಬ್ರಿಟಿಶ ಸಾಮ್ರಾಜ್ಯವೇ ಅವಳನ್ನು ಹಿಂಡಿ ಹಿಪ್ಪೆಮಾಡಬೇಕೆಂದು ಹವಣಿಸಿತು. ಆದರೆ ಸತ್ಯಕ್ಕಾಗಿ ಎಲ್ಲವನ್ನೂ ಸಹಿಸಿದಳು, ಎದುರಿಸಿದಳು. ನಾನೇ ಅವಳ ಸ್ಥಳದಲ್ಲಿ ಇದ್ದರೆ ಹುಚ್ಚಾಗಿ ಹೋಗುತ್ತಿದ್ದೆ. ಅವಳೆಂದೇ ಅದನ್ನು ತಡೆದಳು. ಇಷ್ಟೇ ಅವಳೊಡನೆ ವಿಚಾರದಿಂದ ಮಾತ್ರ ನಡೆಯಬೇಕು. ಈ ಎಲ್ಲರಿಗೂ—(ಮಾಳಿಗೆಯ ಮೇಲೆ ಮುಸುಕುಹಾಕಿಕೊಂಡು ಮಲಗಿದ ಆಕೃತಿಗಳನ್ನು ತೋರಿಸಿ) —ಏನು ಬೇಕಾಗಿದೆಯೆಂಬುದು ನನಗೆ ಗೊತ್ತಿದೆ. ಆದರೆ ನೀನು ಅವರಿಗೆ ಕಿವಿಗೊಡಬಾರದು. ದಯೆತೋರಿಸು! ನಿಮ್ಮ ಆರು ಜನ ಮೊಗಲ ಸಮ್ರಾಟರಂತೆ ನಡೆದುಕೋ!'

'ಮೊಗಲ ಸಮ್ರಾಟರು ಸಹ ಕ್ಷಮೆ ಬೇಡಿಕೊಳ್ಳದೇ ಎಂದೂ ದಯೆ ತೋರಿಸುತ್ತಿರಲಿಲ್ಲ.'

'ಅದೇ ನಿನಗೆ ಬೇಕಿದ್ದರೆ ಅವಳು ಕ್ಷಮೆಬೇಡಿಕೊಳ್ಳುವಳು. ನಿನಗೆ

ಯಾವ ಶಬ್ದಗಳಲ್ಲಿ ಬೇಕೋ ಹಾಗೆ ಹೇಳು; ಬರೆದುಕೊಳ್ಳುತ್ತೇನೆ; ನಾಳೆ ಈ ಹೊತ್ತಿಗೆ ಅವಳ ಸಹಿಮಾಡಿಸಿ ತಂದುಕೊಡುತ್ತೇನೆ. ಇದೂ ಸಾಕಾಗದಿದ್ದರೆ ಅವಳು ಸಾರ್ವಜನಿಕರೀತಿಯಿಂದ ಕೋರ್ಟಿನಲ್ಲಿಯೆ ಬೇಕಾದರೆ ಕ್ಷಮೆ ಬೇಡಬಹುದು.' ಎಂದು ಎದ್ದು ಕುಳಿತು ಹೇಳಿದನು.

'ಪ್ರಿಯ ಡಾ. ಅಝೀಜ! ಎಚ್ಚರಿಕೆ! ಇದಕ್ಕೆ ಅವಳು ಸಹಿ ಮಾಡುವಳೋ?' ಎಲ್ಲಿಂದಲೊ ಒಂದು ದನಿ ಬಂತು.

'ಸಿರಿಲ್! ಸಾಕು ಈಗ; ಮಲಗುವ ಹೊತ್ತಾಯಿತು, ಆಮೇಲೆ ನೋಡೋಣ.'

'ಹೌದು ಹೊತ್ತಾಯಿತೆಂದು ತೋರುತ್ತದೆ.'!

ಎಲ್ಲವೂ ಸ್ತಬ್ಧವಾಯಿತು. ಆಮೇಲೆ ಕನಸಿನೊಳಗಿಂದ ಬಂದಂತೆ ಒಂದು ದನಿ ಬಂತು. 'ಸಿರಿಲ್! ನಿನ್ನ ಕೋಮಲ ಅಂತಃಕರಣಕ್ಕೂ ಸಮಾಧಾನವಾಗುವಂತೆ ನಾನೊಂದು ಹಾದಿ ಹುಡುಕಿದ್ದೇನೆ. ಅದೆಂದರೆ ಮಿಸೆಸ್ ಮೂರಳನ್ನು ವಿಚಾರಿಸಿ ಅವಳು ಹೇಳಿದಂತೆಯೆ ಕೇಳುವದು.'

ಫೀಲ್ಡಿಂಗನು ಕಣ್ಣುತೆರೆದು ನೋಡಿದನು; ಸಾವಿರಾರು ನಕ್ಷತ್ರಗಳು ಮೌನದಿಂದ ಅವನನ್ನೇ ನೋಡುತ್ತಿದ್ದವು. ಅವುಗಳ ಆ ಮೌನವು ಅವನನ್ನೂ ಅತ್ತ ಎಳೆದೊಯ್ದಿತು.

'ಮೂರಳ ಅಭಿಪ್ರಾಯವೇ ಎಲ್ಲವನ್ನೂ ಸರಿಯಾಗಿ ಬಿಡಿಸುವದು. ಅವಳಲ್ಲಿ ನನ್ನ ಪೂರ್ಣ ವಿಶ್ವಾಸವಿದೆ. ಈ ಹುಡುಗಿಯನ್ನು ಕ್ಷಮಿಸಬೇಕೆಂದು ಅವಳು ಹೇಳಿದರೆ ನಾನು ಹಾಗೇ ಮಾಡುವೆನು. ಅವಳೆಂದೂ ನಿನ್ನಂತೆ ನನ್ನ ಮರ್ಯಾದೆಗೆ ಭಂಗ ಬರುವಂತೆ ಉಪದೇಶಮಾಡುವದಿಲ್ಲೆಂದು ನನಗೆ ಗೊತ್ತಿದೆ.'

'ಅದನ್ನು ನಾಳೆ ಮುಂಜಾನೆ ವಿಚಾರಮಾಡೋಣ.'

'ಇದು ಉಚಿತವಲ್ಲವೇ, ಸಿರಿಲ್? ಅವಳು ಹಿಂದುಸ್ತಾನವನ್ನು ಬಿಟ್ಟು ಹೋಗಿದ್ದಾಳೆಂದು ಅವಳನ್ನು ಮರೆಯುತ್ತಿದ್ದೇನೆ!..ಕೋರ್ಟಿನಲ್ಲಿ ಅವಳ ಹೆಸರನ್ನು ಕೂಗಿದಾಗ ಅವಳು ಅಲ್ಲಿ ಇದ್ದಾಳೆಂದೇ ತಿಳಿದಿದ್ದೆನು..ನಾನಾಗ ಕಣ್ಣುಗಳನ್ನು ಮುಚ್ಚಿದ್ದೆನು....ದುಃಖವನ್ನು ಮರೆಯಲಿಕ್ಕೆಂದು ಹಾಗೆ

ಮಾಡಿದ್ದೆನು....ನಾನಿನ್ನು ಅವಳಿಗೆ ಕಾಗದ ಬರೆಯಬೇಕಾಗುವದು.... ಅವಳು ದೂರ, ದೂರ ರಾಲ್ಫ ಮತ್ತು ಸ್ಟೆಲಾ ಇವರ ಕಡೆಗೆ ಹೊರಟಿದ್ದಾಳೆ.'

' ಯಾರು ? '

' ತನ್ನ ಉಳಿದ ಮಕ್ಕಳು. '

' ನನಗವಳ ಉಳಿದ ಮಕ್ಕಳ ವಿಷಯವೇ ಗೊತ್ತಿರಲಿಲ್ಲ! '

' ನನಗೆ ಹೇಗೆ ಇಬ್ಬರು ಹುಡುಗರು, ಒಬ್ಬ ಹುಡುಗಿ ಇದ್ದಾರೊ ಹಾಗೆ ಅವಳಿಗೂ ಇದ್ದಾರೆ. ಅವಳು ಇದನ್ನು ನನಗೆ ಮಸೀದೆಯಲ್ಲಿ ಹೇಳಿದ್ದಳು. '

' ಅವಳ ಪರಿಚಯವೇ ನನಗೆ ಬಹಳ ಕಡಿಮೆಯಿತ್ತು. '

' ನಾನೂ ಅವಳನ್ನು ಮೂರೇ ಸಾರೆ ಕಂಡಿದ್ದೆನು. ಅವಳ ಮನಸ್ಸು ಎಷ್ಟು ವಿಶಾಲವಾಗಿತ್ತು! ಅದರ ಪಡಿಯಚ್ಚು ನಮ್ಮಹಾಗೆಯೆ ಇತ್ತು.'

' ಎಂತಹ ಹುಚ್ಚು ಕಲ್ಪನೆಯಿದು!......ಕ್ವೆಸ್ಟೆಡ್‌ಳನ್ನು ಸಹಾನುಭೂತಿಯಿಂದ ನೋಡದಿದ್ದ ನೀನು ಮೂರಳ ಮೇಲೆ ಎಂತಹ ಅಗಾಧವಾದ ವಿಶ್ವಾಸವಿಟ್ಟಿದ್ದೀಯಲ್ಲ!....ಅವಳು ನಿನ್ನನ್ನು ರಕ್ಷಿಸಲಿಕ್ಕೆ ಬರುವಳೆಂಬ ಮಾತು ಕೇವಲ ಕಲ್ಪನೆಯದು......ನಿನ್ನ ಆ ಸೇವಕರ ಮಾತಿನ ಮೇಲೆ ವಿಶ್ವಾಸವಿಟ್ಟು ಬೇಕಾದರೆ ಅದನ್ನು ನಂಬಬೇಕು......ಅಝೀಜ! ನೀನು ಯಾರನ್ನು ಎಷ್ಟು ಗೌರವಿಸಬೇಕೊ ಅಷ್ಟು ಗೌರವಿಸುತ್ತಿಲ್ಲ.....ನಿನ್ನ ಮನಸ್ಸಿಗೆ ಪ್ರಮಾಣ ಗೊತ್ತಿಲ್ಲ. '

' ಮನಸ್ಸೆಂದರೆ ಅದೊಂದು ಒಟಾಳಿಯ ಚೀಲವೇನು, ಇಷ್ಟು ಸೇರು ಇವರಿಗೆಂದು ಅಳೆದುಕೊಡಲಿಕ್ಕೆ? ನಾನೇನು ಯಂತ್ರವೇ? ಭಾವನೆಗಳನ್ನು ಉಪಯೋಗಿಸುವದರಿಂದ ಅವೇನು ಸವೆದುಹೋಗುತ್ತವೆಯೆ? '

' ನಿನ್ನ ಪ್ರಕೃತಿ ಚೆನ್ನಾಗಿದೆಯಷ್ಟೆ? '

' ಯಾಕೆ, ಅದಕ್ಕೇನಾಗಿದೆ? '

' ಏನೂ ಇಲ್ಲ, ನೀನು ಹೇಗೆಹೇಗೊ ಅಡ್ಡತಿಡ್ಡ ಮಾತಾಡುತ್ತಿದ್ದುದನ್ನು ನೋಡಿ ಹಾಗೆನಿಸಿತು ಅಷ್ಟೆ. '

' ಹೌದು, ಹೌದು; ಆದರೆ ನೀವು ಮಾಡಿದ ಅನ್ಯಾಯವು ಯಾವ ಅಡ್ಡಮಾತಿಗೂ ಮಿಕ್ಕಿ ನಿಂತಿದೆ! '

‘ ಸಾಗಲಿ; ಇನ್ನೂ ಮತ್ತೇನಾದರೂ ನಮ್ಮ ವಿರುದ್ಧ ಇದ್ದರೆ ಅಂದು ಬಿಡು. ’

‘ ಹಾಗಲ್ಲ ಫೀಲ್ಡಿಂಗ್ ! ನಾವು ಕೊನೆಯುವರೆಗೆ ಗೆಳೆಯರಾಗಿ ಉಳಿಯು ಬೇಕಾದರೆ ನಿನ್ನ ಸಂಕಟಗಳನ್ನೆಲ್ಲ ನೀನು ನನ್ನೆದುರಿಗೆ ಇಡುವದೊಳ್ಳೆಯದು. ನಿನಗೆ ಮೂರಳ ಸೇರಿಕೆಯಾಗದ್ದರಿಂದಲೆ ನನ್ನ ಮೇಲಿಷ್ಟು ರೇಗಿದಿ ? ಆದರೂ ಮುಂದೆ ನೀನೂ ಅವಳ ಬಗ್ಗೆ ನಿನ್ನ ಮನಸ್ಸನ್ನು ತಿದ್ದಿಕೊಳ್ಳುವಿ. ’

ಮೂರಳು ಸತ್ತದ್ದು ಅಝೀಜನಿಗೆ ಗೊತ್ತಿರಲಿಲ್ಲ. ಫೀಲ್ಡಿಂಗನಿಗೆ ಗೊತ್ತಿತ್ತು. ಅವನು ತಡೆಯಲಾರದೆ ಕೊನೆಗೆ ‘ ಮೂರಳು ತೀರಿಕೊಂಡಳು!' ಎಂದುಸಿರಿಬಿಟ್ಟನು

ಆದರೆ ಹಮೀದುಲ್ಲಾ ಅವರು ಮಾತನಾಡುವದನ್ನೆಲ್ಲ ಕೇಳುತ್ತಿದ್ದರೂ ಅವರ ಮಾತಿನಲ್ಲೇಕೆ ತಾನು ಹೋಗಬೇಕೆಂದು ಇಷ್ಟೊತ್ತಿನವರೆಗೆ ಸುಮ್ಮ ನಿದ್ದನು. ಈಗ ‘ ಅಝೀಜ ! ಅವನು ನಿನ್ನನ್ನು ಬಲೆಯಲ್ಲಿ ಹಿಡಿಯಬೇಕೆನ್ನು ತ್ತಾನೆ ! ಈ ದುಷ್ಟನನ್ನು ನಂಬಬೇಡ. ’ ಎಂದು ಹಾಸಿಗಿಯಿಂದಲೆ ಕೂಗಿದನು.

‘ ಇಲ್ಲ, ಅವನನ್ನು ನಂಬುವದಿಲ್ಲ. ’ ಎಂದು ಅಝೀಜನು ಉತ್ತರ ಕೊಟ್ಟನು.

ಫೀಲ್ಡಿಂಗನಿಗೆ ಈ ತರಹದ ಚೇಷ್ಟೆಗಳ ದಡ್ಡೂ ಬಿದ್ದಿತ್ತು. ಅವನು ಹೆಚ್ಚು ಮಾತನಾಡಲಿಲ್ಲ; ಮುಂಜಾನೆ ಪ್ರತಿಯೊಬ್ಬರಿಗೂ ಮೂರಳು ತೀರಿ- ಕೊಂಡದ್ದು ತಾನೇ ಗೊತ್ತಾಗುವದು; ತಾನೇಕೆ ಈಗ ಒದ್ದಾಡಬೇಕೆಂದು ಅವನು ಸುಮ್ಮನಿದ್ದನು. ನಿಜವಾಗಿ ಮೂರಳು ಸತ್ತಿದ್ದರೂ ಅವಳು ಸತ್ತಿ ರುವಳೆಂದು ಅವರೇನು ಆಗ ನಂಬುವ ಹಾಗಿರಲಿಲ್ಲ. ಅಂತೂ ಪರಿಸ್ಥಿತಿಯು ಶಾಂತವಾಗಿಯೆ ಉಳಿಯಿತು ಕೂಡಲೆ ಚಂದ್ರನು ಮೂಡಿದನು; ಅದಾದ ಸ್ವಲ್ಪ ಹೊತ್ತಿನಲ್ಲಿಯೆ ಹಕ್ಕಿಗಳು ಚಿಲಿಪಿಲಿಗುಟ್ಟಹತ್ತಿದವು; ಒಕ್ಕಲಿಗರು ದನ ಬಿಟ್ಟುಕೊಂಡು ಹೋರೆಗಾಗಿ ಹೊರಟರು. ರಾತ್ರಿಯು ಮುಗಿಯಿತು.

—

ಪ್ರಕರಣ ೨೮

ಮೂರಳು ಸತ್ತಳು!—ದಕ್ಷಿಣಕ್ಕೆ ಹೋಗುವಾಗ ದಾರಿಯಲ್ಲಿಯೆ ಅವಳನ್ನು ಸಮುದ್ರದ ವಶಕ್ಕೆ ಕೊಟ್ಟರು! ಅವಳ ಸಾವಿನಿಂದ ಹಡಗದ ಮೇಲಿನ ಎಲ್ಲರಿಗೂ ಬಹಳ ಪೇಚಾಟವಾಯಿತು. ಅವಳ ಮರಣದಿಂದ ಹಡಗಕ್ಕೊಂದು ಕೆಟ್ಟ ಹೆಸರು ಬರಬಹುದೆಂದು ಆ ಕಂಪೆನಿಯವರು ಕೂಡ ಗಾಬರಿಯಾಗುವ ಸಂಭವವಿತ್ತು. ಏಡೆನ್ನವು ಬಂದ ಕೂಡಲೆ ಲೇಡಿ ಮೆಲೆನ್‌ಬಿಯು 'ಕೇಬಲ್' ಮಾಡಿದಳು, ಕಾಗದ ಬರೆದಳು, ತನ್ನ ಕೈಯಲ್ಲಿದ್ದದ್ದನ್ನೆಲ್ಲವನ್ನೂ ಮಾಡಿದಳು. ಅವಳಿಗೆ ತನ್ನ ಇಡಿ ಜೀವನದಲ್ಲಿ ಈ ತರದ ಸಾವು ನೋಡುವ ಕಟು ಅನುಭವ ಬಂದಿದ್ದು ಇದೇ ಮೊದಲು. ಅವಳು 'ಈ ಬಡ ಪ್ರಾಣಿಯನ್ನು ಜಡ್ಡು ಆದಾಗೇನೊ ಸ್ವಲ್ಪಹೊತ್ತು ನೋಡಿದ್ದೆನು. ಇದು ಸುಮ್ಮನೆ ತೊಂದರೆಯಾಯಿತು. ಮನೆಗೆ ಹೋಗುವ ನನ್ನ ಸುಖವನ್ನೆಲ್ಲ ಕೆಡಿಸಿ ಬಿಟ್ಟಿತು!' ಎಂದುಕೊಂಡಳು. ಕೆಂಪುಸಮುದ್ರದಲ್ಲಿಯೆಲ್ಲ ಹಡಗದಗುಂಟ ಒಂದು ದೆವ್ವವು ಬೆನ್ನುಹತ್ತಿ ಬಂದಂತೆ ಅವಳಿಗೆನಿಸಿತು. ಆದರೆ ಮುಂದೆ ಅದು ಭೂಮಧ್ಯ ಸಮುದ್ರವನ್ನು ಸೇರಲಿಲ್ಲ. ಸುಯೇಝುದ ಸಮೀಪದಲ್ಲಿ ಎಲ್ಲಿಯೋ ಒಂದೆಡೆಗೆ ಮಿಸೆಸ್ ಮೂರಳು ತೊಲಗಿದ್ದಳು.

ಚಂದ್ರಪುರದಲ್ಲಿಯೂ ಈ ಮರಣವು ತನ್ನ ಸುತ್ತಲೂ ಚಮತ್ಕಾರವಾದ ಅನೇಕ ಕತೆಗಳನ್ನು ನೆಯ್ದುಕೊಂಡಿತು. ಒಬ್ಬ ಇಂಗ್ಲಿಷ ಮನುಷ್ಯನು ಒಬ್ಬ ಹಿಂದೀ ಮನುಷ್ಯನನ್ನು ಉಳಿಸಲಿಕ್ಕೆ ತನ್ನ ತಾಯಿಯನ್ನು ಕೊಂದನೆಂದು ಒಂದು ಕತೆ; ಆಕಳವೇ ಕೊಲ್ಲಲ್ಪಟ್ಟಿತೆಂದು ಇನ್ನೊಂದು; ಮೊಸಳಿಯು ಕಾಡಹಂದಿಯಂತೆ ಕೋರೆಗಳನ್ನು ಬಿಟ್ಟುಕೊಂಡು ಗಂಗೆಯೊಳಗಿಂದ ಹೊರಬಿದ್ದಿತೆಂದು ಮೂರನೆಯದು; ಹೀಗೆಯೆ ಇನ್ನೂ ಏನೇನೋ ಹುಟ್ಟಿಕೊಂಡವು. ಒಮ್ಮೆಯಂತೂ ಎಸ್-ಮಿಸ್-ಮೂರಳ ದೇಹವನ್ನೇ ಹುಗಿದ ಎರಡು ಕುಣಿಗಳು—ಒಂದು ಚರ್ಮ ಹದಗೊಳಿಸುವವನ ಮನೆಯ ಹತ್ತಿರ, ಇನ್ನೊಂದು 'ಗೂಡ್ಸೆಡ್ಡಿ'ನ ಹತ್ತಿರ— ಇವೆಯೆಂದು ವರದಿ ಬಂದಿತು. ಮ್ಯಾಕ್‌ಬ್ರಾಯಿಡನು ಹೋಗಿ ಎರಡನ್ನೂ ನೋಡಲಾಗಿ ಅಲ್ಲಿ ಗಡಿಗಿ ಪರಿವಾಣಗಳೇ ಬಿದ್ದಿದ್ದವು. ಅವನು ಅವಕ್ಕೇನೂ ಮಹತ್ವ ಕೊಡದೆ ಸುಮ್ಮನೆ

ಇದ್ದುಬಿಟ್ಟನು. ಆದರಿಂದ ಒಂದೆರಡು ವಾರಗಳಲ್ಲಿ ಜನರ ಬಾಯೊಳಗಿಂದ ಆ ಮಾತೇ ಅಡಗಿಹೋಯಿತು.

ರೋನಿಗೆ ತನ್ನ ತಾಯಿಯು ತಾನಾಗಿ, ತನ್ನ ಇಚ್ಛೆಯಿಂದ ಹಿಂದು-ಸ್ತಾನವನ್ನು ಬಿಟ್ಟು ಹೋಗಿದ್ದರೂ ತಾನೇ ತಪ್ಪುಮಾಡಿದಂತೆ ಎನಿಸುತ್ತಿತ್ತು. ಅವಳಿಲ್ಲಿದ್ದಾಗ ಅವನು ಅವಳೊಡನೆ ಬಹಳ ಕೆಟ್ಟರೀತಿಯಿಂದ ನಡೆಕೊಂಡಿದ್ದನು. ಈ ಪಶ್ಚಾತ್ತಾಪದ ಒಂದು ಸುಳಿಗಾಳಿಯು ಅವನ ಮನಸ್ಸಿನ ಮೇಲೆ ಸುಳಿದುಹೋಯಿತು. ಆದರೂ ಅವಳ ವಿಷಯದಲ್ಲಿ ಇನ್ನೂ ಅವನು ಅಷ್ಟು ಮೃದುವಾಗಿದ್ದಿಲ್ಲ. ಅವಳು ಇದ್ದಾಗೆಷ್ಟೋ ತೊಂದರೆ ಕೊಡುತ್ತಿದ್ದಳೆಂದರೆ ಸತ್ತಮೇಲೂ ಗೋರಿಗಳನ್ನೆಬ್ಬಿಸಿ, ದೇಶಿಜನರಲ್ಲಿ ಕೂಡಿಕೊಂಡು ನಾನಾರೀತಿಯಿಂದ ತೊಂದರೆ ಕೊಡಹತ್ತಿದ್ದಳು.

ರೋನಿಗೆ ತನ್ನ ತಾಯಿಯದಿಷ್ಟೇ ಅಲ್ಲ ಗೋಳು; ಮತ್ತೆ ಬಿಸಿಲಿನ ಗೋಳು, ಊರಲ್ಲಿಯ ತಿಕ್ಕಾಟದ ಗೋಳು, ಲೆಫ್ಟನೆಂಟ ಗವ್ಹರ್ನರರ ಭೆಟ್ಟಿಯ ಗೋಳು, ಇವೆಲ್ಲದರ ಮೇಲೆ ಅಡೀಲಾಳ ಸಂಬಂಧದ ಗೋಳು. ಇಷ್ಟೆಲ್ಲ ಕೂಡಿ ಆ ತರುಣನನ್ನು ಹಿಂಡಿ ಹಿಪ್ಪೆಮಾಡಿದ್ದವು. ಇಷ್ಟಿದ್ದರೂ ಅವನು ಯಥಾವಕಾಶದಲ್ಲಿ ಅನುಕೂಲಮಾಡಿಕೊಂಡು ಹೋಗಿ ತನ್ನ ಮಲತಮ್ಮ ಮಲತಂಗಿಯರೊಡಗೂಡಿ ಅವಳು ಮೊದಲು ಪ್ರಾರ್ಥನೆ ಮಾಡಿದ 'ನಾರ್ಥ ಹಾಂಪಟನಾ 'ಶಾಯರದ ಚರ್ಚಿನಲ್ಲಿ ಅವಳ ಹೆಸರಿನಲ್ಲಿ ಒಂದು ಗೋರಿಗಲ್ಲು ನಿಲ್ಲಿಸಿ, ಅದರ ಮೇಲೆ ಅವಳು ಹುಟ್ಟಿದ, ಸತ್ತ ತಾರೀಖುಗಳನ್ನೂ ಸಮುದ್ರದಲ್ಲಿ ಸಮಾಧಿಹೊಂದಿದ ಸಂಗತಿಯನ್ನೂ ಕೊರೆಯಿಸಿ ಕೃತಾರ್ಥನಾದೆನೆಂದು ಬಗೆದನು.

ಇತ್ತ ಅಡೀಲಾ ? ಅವಳೂ ಬರಬಹುದೆಂದು ರೋನಿಯು ಬಗೆದಿದ್ದನು. ಮತ್ತು ಹೊರಡುವ ಮೊದಲು ತನಗೆ ಅವಳು ಸೂಚಿಸುವಳೆಂದೂ ಅವನು ಆಶಿಸಿದ್ದನು. ಅವನಂತೂ ಇನ್ನು ಅವಳನ್ನು ಮದುವೆಯಾಗಲಾರ, ಆದರೆ ಮಾತ್ರ ಅವನ ಚರಿತ್ರೆಯ ಕೊನೆಯೆಂದೇ ತಿಳಿಯಬೇಕು;—ಪಾಪ,ದುರ್ದೈವಿ ಅಡೀಲಾ ! . . . . ಅಯೋಗ್ಯವೆನಿಸಿದರೂ, ನಗೆಗೀಡಾದರೂ ಅವಳು ಗವ್ಹರ್ನ-ಮೆಂಟ ಕಾಲೇಜದಲ್ಲಿ ಫೀಲ್ಡಿಂಗನ ದಯೆಯಿಂದ ನಿರ್ವಾಹವಿಲ್ಲದೆ ಇಳಿದಿದ್ದಳು . . . . ಯಾರೂ ಅವಳನ್ನು ಸಿವ್ಹಿಲ್ ಸ್ಟೇಶನ್ನದಲ್ಲಿ ಬರಮಾಡಿಕೊಂಡಿರ

ಲಿಲ್ಲ..........ಅವಳ ಮೇಲೆ 'ಅವಾರ್ಡು' ಠರಾಯಿಸುವ ವರೆಗೆ ರೋಸಿಯೂ ಅವಳೊಡನೆ ಏಕಾಂತದಲ್ಲಿ ಮಾತುಕತೆಯಾಡುವದನ್ನು ಬಿಟ್ಟು ಬಿಟ್ಟನು....ಅಝೀಜನು ಅವಳ ಮೇಲೆ ಅಬುರು ಲುಕ್ಸಾನಿ ದಾವೆಯನ್ನು ಸಬ್ ಜಜ್ ಕೋರ್ಟಿನಲ್ಲಿ ಮಾಡಿದ ಮೇಲೆ—ಮಾಡಿಯೆ ಮಾಡುತ್ತಾನೆ—ಅವಳಿಂದ ತಾನು ಒಮ್ಮೆ ಪರಲು ಹರಕೊಂಡುಬಿಟ್ಟರಾಯಿತೆಂದು ರೋಸಿಯು ಲೆಕ್ಕಹಾಕಿದ್ದನು. ಅವಳ ಮೇಲಿನ ಅವನ ಪ್ರೇಮವೂ ಕಮರಿಹೋಗಿತ್ತು. ನವಾಬಬಹದ್ದೂರರ ಕಾರಿಗೆ ಹೊಡತವೇ ಬೀಳದಿದ್ದರೆ ಅವರಲ್ಲಿ ಈ ಪ್ರಕಾರ ಪ್ರೇಮವೇ ಹುಟ್ಟುತ್ತಿರಲಿಲ್ಲ. ಯಾಕಂದರೆ ಅವಳದಿನ್ನೂ ಕಾಲೇಜದ ಗಾಳಿ ಯಲ್ಲಿಯೆ ಹಾರಾಡುವ ಭಾವನಾಮಯ ಜೀವನವಾಗಿತ್ತು; ರೋಸಿಯದು ಅದನ್ನು ದಾಟಿ ರೆಕ್ಕೆಸೋತು ನೆಲಕ್ಕಿಳಿದಿತ್ತು.

—

## ಪ್ರಕರಣ ೨೯

ಮಾರವಾರ ಪ್ರಕರಣವು ಜನಮನದಿಂದ ಮರೆಯಾಗಲಿಕ್ಕೆ ಲೆಫ್ಟನೆಂಟ ಗವ್ಹರ್ನರರಾದ ಸರ್ ಗಿಲ್ಬರ್ಟರ ಆಗಮನವೂ ಒಂದು ಕಾರಣವಾಯಿತು. ಗಿಲ್ಬರ್ಟರು ಸ್ವತಃ ದಡ್ಡರಿದ್ದರೂ ಒಲ್ಲವರ ಮಾತೂ ಕೇಳದಷ್ಟು ದುರಭಿ-ಮಾನಿಗಳಿದ್ದಿಲ್ಲ. ಬಹಳ ದಿವಸ ಸೆಕ್ರೆಟೇರಿಯೆಟ್‌ದಲ್ಲಿಯೆ ಕೆಲಸ ಮಾಡಿದ್ದ ರಿಂದ ಹಿಂದೀಜನರ ಸ್ವಭಾವಪರಿಚಯವಾಗಲಿ, ಅವರ ಸಹವಾಸವಾಗಲಿ ಅವರಿಗೆ ಒಂದಿಷ್ಟೂ ಇದ್ದಿಲ್ಲ. ಅವರಿಗಿನ್ನೂ ಈ ಕಪ್ಪು ಮತ್ತು ಬಿಳಿ ಜನರ ನಡುವಿದ್ದ ಕ್ಷಾರೋದಧಿಯ ಪರಿಚಯವಿದ್ದಿಲ್ಲ. ಎಲ್ಲರೂ ಮನುಷ್ಯರು, ಎಲ್ಲರೂ ಒಂದೇ ಎಂಬ ಹುಚ್ಚುಭಾವನೆಯು ಒಗರಿನ್ನೂ ಕಡಿಮೆಯಾಗಿರ ಲಿಲ್ಲ. ಅಂತೆಯೆ ದಾಸರು ಖಟ್ಲೆಯಲ್ಲಿ ಕೊಟ್ಟ ನಿರ್ಣಯವನ್ನು ಬಾಯಿ ತುಂಬ ಹೊಗಳಿದನು; ಫೀಲ್ಡಿಂಗನನ್ನು ಅವನ ವಿಶಾಲದೃಷ್ಟಿಗಾಗಿ ಅಭಿ ನಂದಿಸಿದನು; ಇಷ್ಟೇ ಅಲ್ಲದೆ ಅವನನ್ನು ತಿರುಗಿ ಕ್ಲಬ್ಬಿನ ಸದಸ್ಯನನ್ನಾಗಿ ಮಾಡಿಕೊಳ್ಳಲೇಬೇಕೆಂದು ಒತ್ತಾಯಪಡಿಸಿ ಕ್ಲಬ್ಬಿನವರಿಂದಲೆ ಅವನಿಗೆ

ಆಮಂತ್ರಣವನ್ನೂ ಕೊಡಿಸಿದನು; ಮತ್ತು ಫೀಲ್ಡಿಂಗನಿಗೂ ಅದನ್ನು ಸ್ವೀಕರಿಸಬೇಕೆಂದು ಹೇಳಿದನು.

ಕ್ವೆಸ್ಟೆಡ್‌ಳು ಇನ್ನೂ ಗವ್ಹರ್ನಮೆಂಟ ಕಾಲೇಜದಲ್ಲಿಯೆ ತನ್ನ ಪ್ರವಾಸದ ಕಾಲಮರ್ಯಾದೆಯು ತೀರುವದನ್ನೆ ಪ್ರತೀಕ್ಷಿಸುತ್ತ ಕಾಲಕಳೆಯುತ್ತಿದ್ದಳು. ಫೀಲ್ಡಿಂಗನೆ ಹೊರಗಿದ್ದುಕೊಂಡೂ ಅವಳಿಗೆ ಎಲ್ಲ ರೀತಿಯಿಂದಲೂ ಸಹಾಯಮಾಡುತ್ತಿದ್ದನು. ಆದರೆ ರೋನಿಯು ಮಾತ್ರ ಅತ್ತ ಕಡೆಗೆ ಹಾಯುವದನ್ನೇ ನಿಲ್ಲಿಸಿಬಿಟ್ಟಿದ್ದನು. ಒಂದು ದಿನ ಫೀಲ್ಡಿಂಗನು ಅವಳಲ್ಲಿಗೆ ಹೋಗಿ 'ಕ್ವೆಸ್ಟೆಡ್ ಅಝೀಜನಿಗೆ ಸ್ವತಃ ನೀನೊಮ್ಮೆ ಕ್ಷಮೆ ಬೇಡಬೇಕು.' ಎಂದು ಹೇಳಿದನು. ಅದಕ್ಕೆ ಅವಳು ದುಃಖದಿಂದ 'ಹೌದು, ಹೌದು. ಈ ಮೊದಲೇ ನಾನದನ್ನು ಮಾಡಬೇಕಿತ್ತು. ಆದರೆ ನನ್ನ ಬುದ್ಧಿ ಈಗ ಸ್ವಾಧೀನದಲ್ಲಿಲ್ಲ. ಖಟ್ಲೆ ಮುಗಿದ ಕೂಡಲೆ ನಾನೇ ಅವನ ಕಡೆಗೆ ಧಾವಿಸಿ ಹೋಗಬೇಕಿತ್ತು; ಯಾಕೆ ಹೋಗಲಿಲ್ಲವೋ ಏನೋ!....ಸರಿ, ನಾನವನಿಗೊಂದು ಪತ್ರ ಬರೆದುಬಿಡುವೆನು; ಆದರೆ ದಯವಿಟ್ಟು ಅದನ್ನು ಬರೆಯಲಿಕ್ಕೆ ನೀನೇ ಹೇಳುವಿಯಾ?..' ಎಂದು ಅಂಗಲಾಚಿ ಕೇಳಿಕೊಂಡಳು. ಫೀಲ್ಡಿಂಗನು ಅದಕ್ಕೆ ಒಪ್ಪಿದನು. ಅಲ್ಲಿಂದ ಇಬ್ಬರೂ ಕೂಡಿ ಆ ಪತ್ರ ಬರೆದರು. ಅದರಲ್ಲಿ ನಿರ್ವಂಚನೆಯಿಂದ ಒಪ್ಪಿಕೊಳ್ಳಬೇಕಾದದ್ದನ್ನೆಲ್ಲ ಒಪ್ಪಿಕೊಂಡಿದ್ದರು. ಆದರೂ ಅದನ್ನು ಮತ್ತೆ ಓದಿದಾಗ ಅವಳಿಗೆ ಅಷ್ಟೊಂದು ಸಮಾಧಾನವಾಗಲಿಲ್ಲ. 'ಮತ್ತೊಂದು ಬರೆಯಲೇನು? ಹೇಗಾದರೂ ಆಗಲಿ, ನಾನು ಮಾಡಿದ ಅಪಾಯವು ದೂರಾದರೆ ಸಾಕು.' ಎಂದು ಫೀಲ್ಡಿಂಗನನ್ನು ಕೇಳಿದಳು. ಅದಕ್ಕೆ ಅವನು 'ಬೇಡ' ಎಂದು ಹೇಳಿದನು. ನಿರ್ವಾಹವಿಲ್ಲದೆ ಅದಕ್ಕೇ ಒಪ್ಪಿಕೊಂಡಳು.

ಇಂಥ ನಿರ್ಮಲ ಸ್ವಭಾವದವಳ ಬಗ್ಗೆ ಅಝೀಜನು ಇಷ್ಟು ಉದಾಸೀನನಾದದ್ದನ್ನು ನೋಡಿ ಫೀಲ್ಡಿಂಗನಿಗೆ ಅಸಮಾಧಾನವಾಯಿತು. ಅದನ್ನು ಹಾಗೇ ಒಳಗೆ ಹತ್ತಿಟ್ಟುಕೊಂಡು ಅಝೀಜನೇ ಒಮ್ಮೆ 'ಫೀಲ್ಡಿಂಗ್! ನಿನ್ನ ಸಹಾಯಕ್ಕಾಗಿ ನಾನು ಅತ್ಯಂತ ಕೃತಜ್ಞನಾಗಿದ್ದೇನೆ. ಆ ನಿನ್ನ ಸಹಾಯದ ಉಪಕಾರವನ್ನು ಹೇಗೆ ತೀರಿಸಲಿ, ಹೇಳು?' ಎಂದು ಜಂಭ

ದಿಂದ ಕೇಳಿದಾಗ ‘ ನಿನಗೆ ಹಾಗೆ ತೀರಿಸಬೇಕೆಂದೇ ಮನಸ್ಸಿದ್ದರೆ ಮಿಸ್ ಕ್ವೆಸ್ಟೆಡ್‌ಳನ್ನು ಆ ಹಣ ಕೊಡುವದರಿಂದ ಮುಕ್ತಮಾಡಿ, ತೀರಿಸು. ’ ಎಂದು ಅವನ ಮೇಲೆಯೆ ಮಾತನ್ನು ಹೊರಳಿಸಿದನು.

‘ ಓ ! ಫಿಲ್ಡಿಂಗ್ ! ನಿನ್ನ ಗತ್ತು ನನಗೆ ತಿಳಿಯಿತು. ಆದಾಗದು. ನನಗೆ ಅವರ ಮೇಲೆ ಸೇಡು ತೀರಿಸಿಕೊಳ್ಳಬೇಕಾಗಿದೆ. ನನ್ನ ಖಾಸಗಿ ಪತ್ರಗಳನ್ನು ಕೋರ್ಟಿನಲ್ಲಿ ಓದಿಸಿ, ನನ್ನ ಹೆಂಡತಿಯ ಫೋಟೊ ಪೋಲಿಸ ಕಚೇರಿಗೆ ಒಯ್ದು ನನ್ನನ್ನು ಅವಮಾನಗೊಳಿಸಬೇಕೇ ? ಇಂಥವರನ್ನು ನಾನು ಕ್ಷಮಿಸಬೇಕೇ ? ನಾನು ಈ ಮೊದಲೆ ಅವಳಿಗೆ ತಿಳಿಸಿ ಹೇಳಿದ್ದೆ, ನೀನು ಕೊಡುವ ಹಣವನ್ನು ನಾನೇನು ತೆಗೆದುಕೊಳ್ಳುವದಿಲ್ಲ; ನನ್ನ ಮಕ್ಕಳಿಗೆ ಕಲಿಸಲಿಕ್ಕೆ ಖರ್ಚು ಮಾಡುತ್ತೇನೆ ಎಂದು. ’

ಈಗ ಮಾತ್ರ ಫೀಲ್ಡಿಂಗನು ಸ್ವಲ್ಪ ನುಡುಗಾಡನಿದ್ದರ ಆಟವನ್ನು ಹೂಡಿದನು. ಹಣ ತುಂಬುವ ಮಾತು ಹೊರಟೊಡನೆ ಅವನು ಸತ್ತ ಮೂರಳ ಹೆಸರೆತ್ತಿ, ನುಳ್ಳೊಂದು-ಪೊಟ್ಟೊಂದು ಹೇಳಿ, ಅಝೀಜನ ಹೃದಯದಲ್ಲಿ ಅವಳ ಮೂರ್ತಿಯು ಮೂಡುವಂತೆ ಮಾಡಿದನು. ಇದರಿಂದ, ಕಚ್ಚಬೇಕೆಂದೆದ್ದ ಅಝೀಜನ ಹೆಡೆಯು ಫೀಲ್ಡಿಂಗನ ಈ ಪುಂಗಿಗೆ ಮೈಮರೆತು ತೂಗಾಡಹತ್ತಿತು. ‘ ನಾನು ಎಲ್ಲ ಹಣವನ್ನೂ ಬಿಟ್ಟುಬಿಟ್ಟಿದ್ದೇನೆ. ಕೇವಲ ಆದ ಖರ್ಚನ್ನು ಮಾತ್ರ ತೆಗೆದುಕೊಳ್ಳುತ್ತೇನೆ. ’ ಎಂದು ಒಳ್ಳೇ ಆವೇಶದಿಂದ ಒಮ್ಮೆಂದೊಮ್ಮೆ ಹೇಳಿಬಿಟ್ಟನು. ಫೀಲ್ಡಿಂಗನಿಗೆ ತುಂಬ ಸಂತೋಷವಾಯಿತು.

ಈ ಖಟ್ಲೆಯ ಪ್ರಕರಣವೆಲ್ಲ ಸರಕಾರಿಯ ರೀತಿಯಿಂದ ಮುಗಿದ ಮೇಲೆ ರೋನಿಗೆ ಆ ಪ್ರಾಂತದ ಇನ್ನೊಂದು ಭಾಗಕ್ಕೆ ಬದಲಿಯಾಗತಕ್ಕದ್ದಿತ್ತು. ಅವನು ಬಹಳ ಹುದುಗಿಕೊಂಡು ಫೀಲ್ಡಿಂಗನ ಕಡೆಗೆ ಬಂದು ‘ ಮಿಸ್ ಕ್ವೆಸ್ಟೆಡ್‌ಳಿಗೆ ಸಹಾಯಮಾಡಿದ್ದಕ್ಕಾಗಿ ನಿಮಗೆ ನಾನು ಬಹಳ ಉಪಕೃತನಾಗಿದ್ದೇನೆ. ಇನ್ನೇನು ಅವಳು ಹೆಚ್ಚು ಕಾಲ ನಿಮ್ಮ ಅತಿಥಿಯಾಗಿ ತೊಂದರೆ ಕೊಡುವದಿಲ್ಲ. ಅವಳಿನ್ನು ಇಂಗ್ಲಂಡಕ್ಕೇ ಹೋಗಬೇಕೆಂದು ನಿಶ್ಚಯಿಸಿರುತ್ತಾಳೆ. ಅವಳಿಗಾಗಿ ನಾನೀಗ ಹಡಗದಲ್ಲಿ ಸ್ಥಳ ಗೊತ್ತುಮಾಡಿದ್ದೇನೆ. ಆದರೆ ಹೋಗುವ ಮೊದಲು ನಿಮ್ಮನ್ನೊಮ್ಮೆ ಕಾಣಬಯಸುತ್ತಾಳೆ. ’ ಎಂದು ಹೇಳಿದನು,

'ಹೀಗೇನು ? ಹಾಗಾದರೆ ಈಗಲೆ ಹೋಗಿ ಬರುತ್ತೇನೆ.' ಎಂದು ತಡ ಮಾಡದೆ ಫೀಲ್ಡಿಂಗನು ಹೊರಟೇಬಿಟ್ಟನು. ಕಾಲೇಜಕ್ಕೆ ಹೋಗಿ ನೋಡಿದಾಗ ಅವಳು ಅಸ್ತವ್ಯಸ್ತವಾಗಿ ಕೂದಲು ಹರಹಿಕೊಂಡು, ತೀರ ಸೋತವಳಂತೆ ಕಳೆಗೆಟ್ಟು ಕುಳಿತಿದ್ದಳು. 'ಏನು ಕ್ವೆಸ್ಟೆಡ್! ಏನಿದು? ಏನಾಯಿತು?' ಎಂದು ಅವಳ ಆ ದೈನ್ಯಸ್ಥಿತಿಯನ್ನು ನೋಡಿ ಗಾಬರಿಯಾಗಿ ಕೇಳಿದನು.

'ಮದುವೆ ಮುರಿದುಹೋಯಿತು ಫೀಲ್ಡಿಂಗ್! ಆಯಿತು, ಅವನಾಗಿ ಹೇಳಿದ್ದು ಒಂದು ರೀತಿಯಿಂದ ಒಳ್ಳೆಯದೆ ಆಯಿತು. ಹಾಗೆ ನೋಡಿದರೆ ನಾನೇ ಮೊದಲು ಹೇಳಬೇಕಿತ್ತು. ಆದರೆ ಈ ಖಟ್ಲೆಯದ್ದೊಂದು ಮುಂದೆ ಏನಾಗುವದೊ ಏನೋ ಎಂಬ ದಿಗಿಲಿನಲ್ಲಿಯೆ ನನ್ನ ಮನಸ್ಸಿತ್ತು. ನನ್ನ ಈ ಹೊಯ್ದಾಟದಲ್ಲಿ ಅವನ ಜೀವನವನ್ನೇ ನಾನು ಹಾಳುಮಾಡುತ್ತ ನಡೆದಿದ್ದೆನು!..ಏನು ಮಾಡಬೇಕು?..ತಿಳಿಯದೆ ಎಲ್ಲರಿಗೂ ತೊಂದರೆ ಕೊಡುತ್ತಿದ್ದೇನೆ..ಇದು ಹಿಂದುಸ್ತಾನದ ಮಟ್ಟಿಗೆ ಮಾತ್ರ ಹತ್ತುತ್ತದೆ; ಇಂಗ್ಲೆಂಡದಲ್ಲಿ ನಾನೆಂದೂ ಹೀಗೆ ಅಡ್ಡಹೋಗುವದಿಲ್ಲ—ಹೀಗೆ ಇನ್ನೊಬ್ಬರನ್ನು ತೊಡಕಿನಲ್ಲಿ ಹಾಕುವದಿಲ್ಲ. ಫೀಲ್ಡಿಂಗ್, ನಾನಿನ್ನು ತಿರುಗಿ ಹೋಗುತ್ತೇನೆ, ಹೋಗಲೇಬೇಕಾಗಿದೆ. ಅಲ್ಲಿ ಹೋಗಿ ಯಾವುದೊ ಒಂದು ರೀತಿಯಿಂದ ನನ್ನ ಜೀವನವನ್ನು ಸ್ಥಿರಪಡಿಸುತ್ತೇನೆ. ಸುರುವು ಮಾಡಲಿಕ್ಕಂತೂ ನನ್ನ ಹತ್ತಿರ ಸಾಕಷ್ಟು ಹಣವಿದೆ; ಮಿತ್ರರನೇಕರೂ ನನಗೆ ಸಹಾಯ ಮಾಡಲಿಕ್ಕೆ ಅಲ್ಲಿ ಇದ್ದಾರೆ; ಅಲ್ಲಿ ಎಲ್ಲವೂ ಸರಿಯಾಗಿ ನಡೆಯುವದು...ಆದರೆ.. ಅಯ್ಯೋ! ಇಲ್ಲಿ ಎಲ್ಲರಿಗೂ ನಾನೆಷ್ಟು ತೊಂದರೆಕೊಟ್ಟೆನಲ್ಲ!..ಈ ಮನಸ್ಸಿನ ವ್ಯಥೆಯಿಂದ ನಾನೆಂದೂ ಪಾರಾಗಲಾರೆನು!..ಕೊನೆಗೆ ರೋನಿ ಮತ್ತು ನಾನು ಅಗಲಿದೆವು!..ಅದಕ್ಕಾಗಿ ನನಗೇನು ಅಂಥ ದುಃಖವಾಗಿಲ್ಲ ಮತ್ತೆ.. ನಾವು ಮೊದಲೇ ಈ ಮದುವೆಯ ವಿಚಾರವನ್ನು ಮಾಡಬಾರದಾಗಿತ್ತು!.. ನಾವಿಬ್ಬರೂ ಮದುವೆಯಾಗುವವರಿದ್ದೇವೆಂಬ ಮಾತನ್ನು ಮೊಟ್ಟಮೊದಲು ನೀವು ಕೇಳಿದಾಗ ನಿಮಗೆ ಆಶ್ಚರ್ಯವೆನಿಸಿರಬಹುದಲ್ಲವೇ?..'

"ಅಷ್ಟೇನು ಇಲ್ಲ. ನನ್ನ ಈ ವಯಸ್ಸಿಗೆ ಹಾಗೆಲ್ಲ ಆಶ್ಚರ್ಯ ಬಡುವದೇ ಸ್ವಲ್ಪಕಡಿಮೆ." ಎಂದು ನಗುತ್ತ ಹೇಳಿ "ಯಾವಾಗ ನೋಡಿ

ದರೂ, ಎಂಥಲ್ಲಿ ನೋಡಿದರೂ ಈ ಮದುವೆಯು ಗಂಟೊಂದು ಶುದ್ಧ ಬ್ರಹ್ಮ ಗಂಟು ! ಯಾವ ಕಾರಣದಿಂದ, ಈ ಗಂಟು ಬೀಳುತ್ತದೋ, ಯಾವ ಕಾರಣದಿಂದ ಬಿಚ್ಚುತ್ತದೋ ಹೇಳಲಿಕ್ಕಾಗದು!.... ನನ್ನ ಮಿತ್ರರಲ್ಲಿ ಕೆಲವರಿಗೆ ತಾವು ಯಾಕೆ ಮದುವೆಮಾಡಿಕೊಂಡರೆಂಬುದೂ ನೆನಪಿಲ್ಲ; ಅವರ ಹೆಂಡಂದಿರಿಗೂ ಗೊತ್ತಿಲ್ಲ. ಆದೆನೋ ದೈವಯೋಗದಿಂದ ಒಮ್ಮೆ ಸಂಭವಿಸಿದೆಯಂದೆ ಅವರ ಭಾವನೆ. ಏನೇ ಇದ್ದರೂ ಮದುವೆಯಲ್ಲಿ ನನಗೇನೂ ವಿಶ್ವಾಸವಿಲ್ಲ.''

'ನನಗಿದ್ದದ್ದೇ ನನ್ನನ್ನು ಈ ಸಂಕಟಕ್ಕೀಡುಮಾಡಿತು. ನಾನು ರೋನಿಗೆ ಏನು ಅರ್ಪಿಸಬೇಕಿತ್ತೋ ಅದನ್ನರ್ಪಿಸಲಿಲ್ಲ. ಅಂತೆಯೆ ಅವನು ನನ್ನನ್ನು ಸ್ವೀಕರಿಸಲಿಲ್ಲ. ಆ ಗುಹೆಯನ್ನು ಪ್ರವೇಶಿಸಿದಾಗ ನಾನು ನಿಜವಾಗಿ ಅವನನ್ನು ಪ್ರೀತಿಸುತ್ತಿದ್ದೆನೇ ?.. ಫೀಲ್ಡಿಂಗ್, ನಾನಿನ್ನೂ ನಿನಗದನ್ನು ಹೇಳಿಲ್ಲ...ನಾನು ಮಾಡಿದ್ದು ಯೋಗ್ಯವೆಂದು ಹೇಳಲಾರೆನು...ದಯೆ, ಮಾನ, ಸಲುಗೆ..ಇವನ್ನು ಸಲ್ಲದ ಸ್ಥಾನದಲ್ಲಿ ನೀಡಿದೆನು....ಇನ್ನು ಮುಂದೆ—'

'—ಈ ಪ್ರೇಮವೇ ಬೇಡ.' ಎಂದು ವಾಕ್ಯಪೂರ್ತಿಮಾಡಿದನು.

'ಹೌದು, ನನಗಾದರೂ ಎಲ್ಲಿ ಬೇಕಾಗಿದೆ ? ಇಲ್ಲಿಯ ಅನುಭವದಿಂದ ನಾನು ಎಚ್ಚತ್ತಿದ್ದೇನೆ. . ಆದರೆ ಪರರಿಗೆ—ನನಗಿಲ್ಲದಿದ್ದರೂ—ಆ ಪ್ರೇಮ ಲಭಿಸಲೆಂದೇ ನನ್ನ ಹಾರೈಕೆ.'

'ಹಂ, ಇನ್ನು ಆ ಮೊದಲಿನ ವಿಷಯವನ್ನಷ್ಟು ಮಾತಾಡಿಬಿಡೋಣ, ಯಾಕಂದರೆ ಇದೇ ನಮ್ಮ ನಿಮ್ಮ ಕಡೆಯ ಮಾತೆಂದು ತೋರುತ್ತದೆ. ನೀನು ಆ ಗುಹೆಯಲ್ಲಿ ಹೋಗುವಾಗ ನಿನ್ನ ಬೆನ್ನ ಹಿಂದೆ ಯಾರು ಬಂದರು ? ಅಥವಾ ಯಾರೂ ಬರಲೇ ಇಲ್ಲವೋ ? ಈ ಮಾತನ್ನು ಹಾಗೆಯೆ ಗಾಳಿಯಲ್ಲಿ ಬಿಟ್ಟು ಬಿಡುವದು ಒಳಿತಲ್ಲ.'

'ಒಳ್ಳೇದು, ದಾರಿ-ತೋರಿಸುವವನೇ ಬಂದನೆನ್ನೋಣ.' ಎಂದು ಸ್ವಲ್ಪ ಬೇಸರದಿಂದ ಉತ್ತರಕೊಟ್ಟು 'ಅದು ತಿಳಿಯುವದೇ ಸಾಧ್ಯವಿಲ್ಲ; ಆ ನುಣುಪಾದ ಗೋಡೆಯ ಮೇಲೆ ಕತ್ತಲೆಯಲ್ಲಿ ಕೈಯಾಡಿಸಿದಂತೆ.... ಮುಂದೆ ಗೊತ್ತಿಲ್ಲ...ಅದೆಲ್ಲ ಮಿಸೆಸ್ ಮೂರಳಿಗೆ ಗೊತ್ತಿತ್ತು.'

'ನಮಗೇ ಗೊತ್ತಿಲ್ಲದ್ದು ಅವಳಿಗೆ ಹೇಗೆ ಗೊತ್ತು ?'

'ಬಹುಶಃ ಅಂತರ್ಜ್ಞಾನದಿಂದ.'

ಈ ಮಾತನ್ನು ಈಗ ಒರೆಹಚ್ಚಿ ನೋಡಲು ಸಾಧ್ಯವಿಲ್ಲದ್ದರಿಂದ ಇಬ್ಬರೂ ಕೆಲಹೊತ್ತು ಆ ಅಂತರ್ಜ್ಞಾನ ಶಬ್ದದ ಮೇಲೆಯೆ ವಿಚಾರಿಸುತ್ತ ಕುಳಿತರು.

'ನಾನು ಇಂಗ್ಲೆಂಡಕ್ಕೆ ಮುಟ್ಟಿದ ಮೇಲೆ ನೀನು ನನಗೆ ಪತ್ರಗಳನ್ನು ಬರೆಯುವಿಯಷ್ಟೆ ?'

'ಅಗತ್ಯವಾಗಿ ; ಮೇಲಿಂದ ಮೇಲೆ ಬರೆಯುತ್ತೇನೆ.'

'ನಿನ್ನ ಉಪಕಾರ ನನ್ನ ಮೇಲೆ ಬಹಳಾಯಿತು; ಪ್ರತಿಯಾಗಿ ಏನಾದರೂ ಮಾಡಿ ಅದನ್ನು ತೀರಿಸಬೇಕೆಂದರೆ ಏನಿದೆ ನನ್ನ ಹತ್ತಿರ ? ನಿನಗೆ ಬೇಕಾದುದೆಲ್ಲ ಇದ್ದೇ ಇದೆ.'

'ನನಗೂ ಹಾಗೆಯೆ ಅನಿಸುತ್ತಿದೆ. ಇಲ್ಲಿ ನಾನು ಸುರಕ್ಷಿತವಾಗಿಲ್ಲ. ಆದರೂ ನಾನು ಹಿಂದೀ ಜನರೊಡನೇ ಸಾಗುವೆನು; ಅವರು ನನ್ನನ್ನು ನಂಬುತ್ತಾರೆ. ನಾನು ಕೆಲಸಕ್ಕೆ ರಾಜೀನಾಮೆ ಕೊಡುವಂತೆ ಆಗದಿದ್ದದ್ದೊಂದು ಸಂತೋಷವೇ; ಲೆಫ್ಟನೆಂಟ ಗವ್ಹರ್ನರರು ನನ್ನನ್ನು ಹೊಗಳಿದ್ದೂ ಒಂದು ಸಂತೋಷದ ಸಂಗತಿಯೇ—ಇನ್ನೇನು ನಾನು ಇಲ್ಲಿಂದ ಕದಲುವ ಹಾಗೆ ಕಾಣುವದಿಲ್ಲ.'

'ಆವಷ್ಟು ಶಾಂತ ಮನಸ್ಸಿನಿಂದ ಊರಿಗೆ ಹೋಗಬೇಕೆಂದರೆ ಆ ಮೂರರ ಮರಣವೊಂದು ಕಣ್ಣೆದುರಿಗೆ ಕಟ್ಟಿದಂತಾಗಿ ಮನಸ್ಸು ಕದಡುತ್ತದೆ; ಏನುಮಾಡಲಿ ?'

'ಅಝೀಜನಿಗೂ ಹಾಗೆಯೆ ಆಗಿದೆ.'

'ಆದರಿಂದ ನಾವೆಲ್ಲರೂ ಮರಣಾಧೀನರೆಂಬ ಮಾತು ನೆನಪಿಗೆ ಬರುತ್ತದೆ. ಸಂಸಾರದಲ್ಲಿಯ ಈ ನಮ್ಮ ದೈಹಿಕಸಂಬಂಧಗಳೆಲ್ಲ ನಶ್ವರ !'

'ನಿಜ; ಆದರೆ ನಾವು ಸಾವಿನ ಬಗ್ಗೆಯೆ ಯಾವಾಗಲೂ ವಿಚಾರ ಮಾಡುತ್ತ ಕೂಡಬಾರದು. ನಾವು ಮೊದಲು ಬದುಕಲಿಕ್ಕೆ ಹವಣಿಸಬೇಕು.'

'ನಾನು ಹಾಗೆಂದಾಕ್ಷಣಕ್ಕೆ ಸಾಯಬೇಕೆಂದು ನನ್ನ ಆಶೆಯಿದೆಯೆಂದಲ್ಲ; ನನಗೂ ಬದುಕಬೇಕಾಗಿದೆ.'

ಇಬ್ಬರೂ ಕೈಕುಲುಕಿ ಹೊರಡಲನುವಾದರು. ಆತ್ಮೀಯಭಾವವು ಇಬ್ಬರನ್ನೂ ಜಗಿದಿತ್ತು. ತೃಪ್ತಿ-ಅತೃಪ್ತಿಗಳೆರಡೂ ಅವರಲ್ಲಿ ತೂಗಾಡುತ್ತಿದ್ದವು. ಇಷ್ಟೊತ್ತಿನ ಅವರ ಮಾತುಗಳ ಹಿಂದೆ ನಿರ್ವಂಚನೆಯ ನಿರ್ಮಲ ಭಾವವಿತ್ತು; ಒಬ್ಬರನ್ನೊಬ್ಬರು ತಿಳಿದುಕೊಳ್ಳಬೇಕೆಂಬ ಕುತೂಹಲವಿತ್ತು. ಮತ್ತು ಅವರಿಗೆ ತಿಳಿಯದಂತೆ ಅವರ ಭವಿಷ್ಯಜೀವನದ ಕನಸೂ ಒಮ್ಮೊಮ್ಮೆ ಅವರ ಮಾತಿಗೆ ಬಣ್ಣಕೊಟ್ಟು ಅವರನ್ನು ಮೋಹಿಸುತ್ತಿತ್ತು.

'ಅಡೀಲಾ! ಮನಸ್ಸಿನಲ್ಲಿ ಬಂದೊಂದ ಮಾತನ್ನು ಹೇಳಿಬಿಡಲೇ?' ಎಂದು ಅವಳನ್ನು ದಿಟ್ಟಿಸಿ ನೋಡಿ ಕೇಳಿದನು.

'ಹುಂ, ಏನದು?'

'ನಿನ್ನ ರೀತಿ-ನೀತಿ, ಮಾತು-ಕತೆ, ಎಲ್ಲ ನನ್ನ ಮನಸಿಗೆ ಬಂತು.'

'ನನಗೂ ಹಾಗೆಯೇ. ಫೀಲ್ಡಿಂಗ್, ಮತ್ತೆ ಭೆಟ್ಟಿ ಯಾವಾಗ?'

'ನಾನೂ ರಜೆ ತೆಗೆದುಕೊಂಡು ಇಂಗ್ಲೆಂಡಕ್ಕೆ ಬಂದಾಗ.'

'ಆದರೆ ಯಾವಾಗ ಅದು? ಈಗ ನೋಡಿದರೆ ನೀನೇನು ಬೇಗ ಬರುವ ಲಕ್ಷಣವಿಲ್ಲ?'

'ಇಲ್ಲ, ಬೇಗನೆ ಬರುತ್ತೇನೆ. ಈಗಲೆ ಬಂದು ಯೋಚನೆ ಹಾಕಿಟ್ಟಿದ್ದೇನೆ.'

'ಹಾಗಿದ್ದರೆ ಬಹಳ ಚೆನ್ನಾಯ್ತು.'

ಇಬ್ಬರೂ ಕುಲುಕುಲು ನಗುತ್ತ ಅಗಲಿದರು.

ಹತ್ತು ದಿನಗಳಾದ ಮೇಲೆ ಅಡೀಲಾ ತನ್ನ ಗೆಳತಿ ಮೂರಳು ಹೊರಟು ಹೋಗಿದ್ದ ದಾರಿಯಿಂದಲೆ ಹಡಗ ಹತ್ತಿ ಹೊರಟಳು. ಅವಳನ್ನು ಕಳಿಸಲಿಕ್ಕೆಂದು ಎಂಟೊನಿಯು ಮುಂಬೈಯ ವರೆಗೆ ಬಂದಿದ್ದನು. ಅವಳಿಂದ ಆದಷ್ಟು ರೊಕ್ಕ ಕೆತ್ತಬೇಕೆಂದು ಅವನಾಶೆ. ಅಡೀಲಾ ಕೊಟ್ಟದ್ದು ಅವನಿಗೆ ತೃಪ್ತಿಯಾಗಲಿಲ್ಲ. ಮೊದಲು ದೈನ್ಯದಿಂದ ಕೇಳಿ ನೋಡಿದ; ಬಗೆಹರಿಯಲಿಲ್ಲ. ಅಲ್ಲಿಂದ 'ನಿನ್ನದೆಲ್ಲ ಗೊತ್ತೈತಿ ಹೋಗ s ಯವ್ವಾ! ಫೀಲ್ಡಿಂಗನ್ನ ಇಟಕೊಂಡು ಇನ್ನೂ ಗರತಿ ಅಂತ ಜಂಭ ಬಡೀತೀದಲ್ಲ!' ಎಂದು ಬಾಯಿ ಹರಿಬಿಟ್ಟ. ಕೂಡಲೆ ಕೇಬಲ್‌ಗಂಟೆಯನ್ನು ಬಾರಿಸಿ ಅವನನ್ನು ಹೊರಗೆ ಹಾಕಿಸಿದಳು. ಆದರೆ ಅವನಾಡಿದ ಮಾತು ಮಾತ್ರ ಪ್ರವಾಸದುದ್ದಕ್ಕೂ ಅವಳ

ಮನಸ್ಸಿನಲ್ಲಿ ಆಳುಕುತ್ತಿತ್ತು. ಇದರಿಂದಲೇ ಅವಳು ಯಾರೊಡನೆಯೂ ಮಾತನಾಡದೆ, ಚಂದ್ರಪುರದಲ್ಲಿಯ ತನ್ನ ಹಿಂದಿನ ಜೀವನವನ್ನೇ ನೆನೆಯುತ್ತ ಒಬ್ಬಳೇ ಕುಳಿತು ನಡೆದಳು.

—

## ಪ್ರಕರಣ ೩೦

ಈ ಖಟ್ಲೆಯ ಪರಿಣಾಮವಾಗಿ ಹಿಂದೂ-ಮುಸಲ್ಮಾನರಲ್ಲಿ ಸೌಮನಸ್ಯೆಯೂ ಹುಟ್ಟಿತು. ಮುಖ್ಯ ಮುಖ್ಯ ನಾಗರಿಕರು ಒಬ್ಬರೊಬ್ಬರಿಗೆ ಸೌಹಾರ್ದವನ್ನು ತೋರಿಸಹತ್ತಿದರು. ಒಂದು ದಿನ, ಅಝೀಜನು ಆಸ್ಪತ್ರಿಯಲ್ಲಿ ತನ್ನ ಕೆಲಸದಲ್ಲಿದ್ದಾಗ ಎಂ. ದಾಸರು ಬಂದು ಭೆಟ್ಟಿಯಾದರು. ಅವರಿಗೆ ಅಝೀಜನಿಂದ ಎರಡು ಕೆಲಸಗಳಾಗಬೇಕಾಗಿದ್ದವು. ಒಂದು, ತನ್ನ ದದ್ದಿಗೆ ಔಷಧ; ಇನ್ನೊಂದು, ತನ್ನ ಭಾವಮೈದುನನ ಮಾಸಪತ್ರಕ್ಕೆ ಅವನದೊಂದು ಕವನ.

'ಎಂ. ದಾಸ, ನೀನು ನನ್ನನ್ನು ಜೇಲಿಗೆ ಕಳಿಸಲಿಕ್ಕೂ ಸಿದ್ಧನಾದಾಗ ನಾನು ನಿಮ್ಮ ಭಟ್ಟಾಚಾರ್ಯರಿಗೆ ನನ್ನ ಕವನ ಕೊಡಬೇಕೇ ? ಛೀ !....' ಎಂದು ನಗನಗುತ್ತ ಹೇಳಿ 'ದಾಸ, ನೀವು ಸಿಟ್ಟಿಗೇಳಬೇಡಿರಿ ಮತ್ತೆ, ಸುಮ್ಮನೆ ಚೇಷ್ಟೆ ಮಾಡಿದೆ.....ಆಗಲಿ, ಅವಶ್ಯವಾಗಿ ಇದ್ದುದರಲ್ಲಿಯೆ ಒಳ್ಳೆಯದೊಂದನ್ನು ಆಯ್ದು ಕಳಹುತ್ತೇನೆ; ಆದರೆ ನಿಮ್ಮ ಮಾಸಪತ್ರವು ಕೇವಲ ಹಿಂದುಗಳ ಸಲುವಾಗಿದೆಯೆಂದು ಕೇಳುತ್ತೇನೆ ? '

'ಹೆಃ ಹೆಃ; ಹಾಗೇನೂ ಇಲ್ಲ. ಸಾಮಾನ್ಯವಾಗಿ ಎಲ್ಲ ಹಿಂದೀ ಜನರ ಸಲುವಾಗಿದೆ. ' ಎಂದು ಅವನು ಸ್ವಲ್ಪ ಅಂಜುತ್ತ ಹೇಳಿದನು.

'ಎಂ. ದಾಸ, ನಿಮ್ಮ ಆ ಸಾಮಾನ್ಯ ಹಿಂದೀ ಮನುಷ್ಯನೆಂದರೆ ಯಾರು ? ನನಗಂತೂ ಅವನು ಅಸ್ತಿತ್ವದಲ್ಲಿಲ್ಲೆಂದೇ ಎನಿಸುತ್ತದೆ. '

'ಇಲ್ಲಿಯ ವರೆಗೆ ಇರಲಿಕ್ಕಿಲ್ಲ. ಆದರೆ ನಿನ್ನ ಕವನ ಬಂದಮೇಲೆ ಅವನು ಹುಟ್ಟಬಹುದು; ಹುಟ್ಟಿಯೆ ಹುಟ್ಟುವನೆಂಬ ನಂಬಿಗೆಯಿದೆ ನನಗೆ. ನೀನೇ ನಮ್ಮ ಮುಂದಾಳು; ನಿನ್ನ ಬೆಂಬಲಕ್ಕೆ ಜಾತಿಭೇದವಿಲ್ಲದೆ ಇಡೀ ಊರೇ ಸಿದ್ಧವಿದೆ. '

'ಅದೆಲ್ಲ ನನಗೆ ಗೊತ್ತಿದೆ; ಆದರೆ ಅದು ತಾಳುವದೇ ?'

'ನಿಸ್ಸಂಶಯವಾಗಿ.'

'ತಾಳಿ, ಒಂದರ್ಧ ನಿಮಿಷ.' ಎಂದು ಅಝೀಜನು 'ಪೆನ್ಸಿಲ್ಲನ್ನು' ಬಾಯಿಂದ ಕಡಿಯುತ್ತ ರೋಗಿಗಳಿಗೆ 'ಪ್ರಿಸ್ಕ್ರಿಪ್ಶನ್' ಬರೆದು 'ಇಲ್ಲಿ ನೋಡಿರಿ...ಇದು ಆ ಕಾವ್ಯದಕಿಂತಲೂ ಚೆನ್ನಾಗಿಲ್ಲವೇ ?' ಎಂದು ಆ ಕಾಗದ ತೋರಿಸಿ ಕೇಳಿದನು.

'ಎರಡನ್ನೂ ಬರೆಯುವವನು ನಿಜವಾಗಿಯೂ ದೊಡ್ಡವನು !'

'ಯಾಕೆ, ಈ ಹೊತ್ತು ಬರಿ ಹೊಗಳುಭಟ್ಟಂಗಿಗಳಾದಂತೆ ತೋರುತ್ತದೆ? ಅಲ್ಲ, ನಾನು ಕವನಗಳನ್ನು ಬರೆಯುತ್ತೇನೆಂದು ನಿಮಗೆ ಹೇಳಿದ್ದಾದರೂ ಯಾರು ?'

'ಪ್ರೊ. ಗೋಡಬೊಲೆಯವರೇ ಇಲ್ಲಿಂದ ಹೋಗುವ ಮೊದಲು ಹೇಳುತ್ತಿದ್ದರು.'

'ಅವನಿಗೆ ಹೇಗೆ ಗೊತ್ತು ?'

'ಅವನೂ ಕವಿಯಿದ್ದಾನೆ! ಯಾಕೆ, ನೀವಿನ್ನೂ ಒಬ್ಬರೊಬ್ಬರ ಪರಿಚಯ ಮಾಡಿಕೊಂಡಿಲ್ಲೇನು ?'

ಅಝೀಜನು ಸುಮ್ಮನಾದನು. ಮಾತೂ ಅಷ್ಟಕ್ಕೇ ಮುಗಿದು ಇಬ್ಬರೂ ಒಬ್ಬರೊಬ್ಬರ ಅಪ್ಪಣೆ ಪಡೆದು ಹೊರಟುಹೋದರು.

ಅಲ್ಲಿಂದ ಅಝೀಜನು ದಾಸರ ಮಾತುಗಳಿಂದ ಉಬ್ಬಿ ಏನಾದರೊಂದು ಬರೆಯಬೇಕೆಂದು ಮನೆಗೆ ಹೋದಮೇಲೆ ಕುಳಿತುಕೊಂಡನು. ಬೆರಳುಗಳ ನಡುವೆ ಲೆಕ್ಕಣಿಕೆಯನ್ನು ಹಿಡಿದೊಡನೆಯೆ—ಆ ಸಂಸರ್ಗಬಲದಿಂದಲೋ ಏನೋ—ಕಾವ್ಯವು ಧಾರೆಯಾಗಿ ಹರಿದು ಬಂತು. ಇಸ್ಲಾಮದ ಅಳಿಗಾಲವೂ ಪ್ರೇಮದ ಅಲ್ಪಕಾಲವೂ ಆ ಕವನದ ವಸ್ತುಗಳಾಗಿದ್ದವು. ಕರುಣರಸವೇ ಪ್ರಧಾನರಸವಾಗಿತ್ತು. ಇಷ್ಟಿದ್ದರೂ ಅದರಲ್ಲಿ ಸ್ವಾನುಬವರಸ ಬೆರಕೆಯಾಗದ್ದರಿಂದ ಅದಕ್ಕಿನ್ನೂ ಬರಬೇಕಾದಷ್ಟು ಹದ ಬಂದಿರಲಿಲ್ಲ. ಅವನೂ ಅದರಿಂದ ತೃಪ್ತನಾಗಿರಲಿಲ್ಲ. ಅಂತೆಯೆ ಮತ್ತೊಂದನ್ನು ಬರೆದನು. ಅದರಲ್ಲಿ ಕಟಕುವಂತಹ ಹಾಸ್ಯವಿದ್ದುದರಿಂದ ಅದನ್ನು ಅಚ್ಚುಹಾಕುವದಕ್ಕೆ ಕಳಿಸಲು ಸಾಧ್ಯವಿದ್ದಿಲ್ಲ. ಮತ್ತೊಂದನ್ನು ಬರೆಯಬೇಕೆಂದು ಹವಣಿಸಿದನು. ಅದು

ಜಾತಿ, ಮತ, ಪಂಥಗಳನ್ನು ಮೀರಿ ಎಲ್ಲರೂ ಹಾಡುವಂತಾಗಬೇಕೆಂದು ಮನಸ್ಸಿನಲ್ಲಿಯೆ ಏನೇನೊ ಲೆಕ್ಕ ಹಾಕಿದನು; ಆದರೆ ಮನಸ್ಸಿನಲ್ಲಿಯದು ಮನಸಿನಲ್ಲಿಯೆ ಉಳಿಯಿತು. ಹೊರಕ್ಕೆ ಬರಲಿಲ್ಲ. ಹೊರಕ್ಕೆ ಬರದಿದ್ದರೂ ಆ ವಿಚಾರವು ಆವನ ಮನಸ್ಸನ್ನು ತಿದ್ದದೆ ಬಿಡಲಿಲ್ಲ. ಅವನಲ್ಲಿ ದೇಶಪ್ರೇಮದ ಚಿಗುರೊಡೆಯಿಸಿತು. ಹಿಂದುಸ್ಥಾನವು ಒಂದಾಗಬೇಕು, ಒಂದು ರಾಷ್ಟ್ರವಾಗಬೇಕು; ಆಗದಿದ್ದರೆ ಅವಳ ಮಕ್ಕಳಿಗೆ ಎಲ್ಲಿಯೂ ಮರ್ಯಾದೆಯಿಲ್ಲ; ಅವರು ಹೀಗೆಯೆ ದಾಸ್ಯದಲ್ಲಿ, ಬಡತನದಲ್ಲಿ ಕೊಳೆಯಬೇಕಾಗುವದು; ಎಂಬ ಭಾವನೆಯೂ ಅವನ ಮೈದುಂಬಿತು.

ಮರುದಿವಸ ಅವನು ಹಮೀದುಲ್ಲಾನ ಕಡೆಗೆ ಹೋಗಿ 'ಹಮೀದುಲ್ಲಾ! ನಮ್ಮನ್ನಾಳುವ ಅರಸರನ್ನು ತುಚ್ಛರೆಂದು ತಿಳಿದುಕೊಂಡದ್ದೇ ನಮ್ಮ ತಪ್ಪು.' ಎಂದು ಹಿಂದಿನ ಗುಂಗಿನಲ್ಲಿಯೆ ಮಾತು ಸುರುಮಾಡಿದನು. ಅದಕ್ಕೆ ಅವನು 'ಅಝೀಜ, ನಿನ್ನ ಮಾತು ಕಡೆಪೂರೈಸುವ ಮಾತಲ್ಲ. ನಿನಗೆ ಬಂದಂಥ ಸಂಕಟ ಮುಂದೆ ಎಲ್ಲರಿಗೂ ಒದಗಬಹುದು. ನಾವೆಲ್ಲ ನೀನಂದಂತೆ ಅವರೊಡನೆ ನಡೆದುಕೊಂಡರೂ ಅವರ ಅಭಿಪ್ರಾಯವೇನು ಎಳ್ಳಷ್ಟೂ ಬದಲಾಗುವದಿಲ್ಲ. ಈಗ ಪ್ರತ್ಯಕ್ಷ ದೇವರೇ ಬಂದು ಅವರ ಕ್ಲಬ್ಬಿನಲ್ಲಿಳಿದು ನೀನು ನಿರ್ದೋಷಿ ಇರುವಿಯೆಂದು ಸಾರಿಹೇಳಿದರೂ ಅವರೇನು ನಂಬುವದಿಲ್ಲ. ಅದಕ್ಕೇ ಮಹಮ್ಮದಲಿ ಮತ್ತು ನಾನು ಒಳಸಂಚು ಮೊದಲಾದವುಗಳಲ್ಲಿ ಇಷ್ಟು ಹೊತ್ತು ಕಳೆಯುತ್ತಿರುವದು. ಮತ್ತು ರಾಮಚಂದನಂಥವನೊಡನೆಯೂ ಏಕೆ ನಾವು ಕೂಡುತ್ತೇವೆಂಬುದು ಈಗಾದರೂ ನಿನಗೆ ಗೊತ್ತಾಯಿತೇ ?'

'ನನಗಂತೂ ಈ ಕಮೀಟಿಗಳ ಬೇಸರ ಬಂದುಹೋಗಿದೆ. ನಾನಿನ್ನು ನೇರವಾಗಿ ಎಲ್ಲಿಗಾದರೂ ಹೊರಟು ಹೋಗುತ್ತೇನೆ.'

'ಎಲ್ಲಿಗೆ ? ಎಲ್ಲಿ ಹೋದರೂ ಈ ಟರ್ಟನ್-ಬರ್ಟನ್ನರ ಕಾಟ ನಿನಗೆ ತಪ್ಪುವದಿಲ್ಲ.'

'ನಾನು ದೇಶೀ ಸಂಸ್ಥಾನಗಳಿಗೆ ಹೋಗುತ್ತೇನೆ. ಅಲ್ಲಿ ಬೇರೆ ಇವರು ಇರುವದಿಲ್ಲವಲ್ಲ!'

ಆಝೀಜ! ನೀನು ಏನೇ ಅನ್ನು, ರಾಜಕಾರಣಿಗಳೂ ಒಳ್ಳೆಯ ನಡತೆಯನ್ನು ಕಲಿಯಬೇಕಾಗುವದು, ಅದೇ ಮುಖ್ಯ. '

' ಅಂತೆಯೆ ನಾನು ಈ ಬ್ರಿಟಿಶ್ ಹಿಂದುಸ್ತಾನವನ್ನು ಬಿಟ್ಟು ಸಂಸ್ಥಾನಗಳಿಗೆ ಹೋಗುವದು. ಬೋಳಿ ತನ್ನ ತುರುಬು ನೆನೆಸುವಂತೆ ಸುಮ್ಮನೆ ಹಿಂದಿನ ವೈಭವವನ್ನು ನೆನೆಸುತ್ತ ಕೂಡುವದರಲ್ಲೇನು ಪುರುಷಾರ್ಥವಿದೆ? ಹವಿಊದುಲ್ಲಾ, ನಮಗೊಬ್ಬ ರಾಜನು ಬೇಕು; ಆದರಿಂದಲೆ ನಮ್ಮ ಜೀವನವು ಸುಲಭವಾಗುವದು. ನಾನೀಗ ಹಿಂದುಗಳ ಸಂಸ್ಥಾನಗಳೊಂದರಲ್ಲಿ ಡಾಕ್ಟರ ಸ್ಥಳವನ್ನು ದೊರಕಿಸಬೇಕೆಂದು ಪ್ರಯತ್ನ ನಡಿಸಿದ್ದೇನೆ. '

' ಛೀ! ಛೀ! ಆಝೀಜ, ನೀನು ಬಹಳ ದೂರ ಹೋಗಿರುವಿ! '

' ಎಷ್ಟೇ ಆದರೂ ರಾಮಚಂದನಷ್ಟು ಬೇರೆ ಹೋಗಿಲ್ಲವಲ್ಲ ? '

' ಆದರೆ ಹಣ? – ಹಣ! ಈ ಸಂಸ್ಥಾನಿಕರು ಸಾಕಷ್ಟು ಪಗಾರ ಕೊಡುವದಿಲ್ಲ. '

' ನಾನೇನು ಶ್ರೀಮಂತನಾಗಬೇಕೆಂದು ಅಲ್ಲಿಗೆ ಹೋಗುವದಿಲ್ಲ; ಶ್ರೀಮಂತನಾಗುವದು ನನ್ನ ಸ್ವಭಾವಕ್ಕೂ ಒಗ್ಗುವದಿಲ್ಲ. '

' ಹೌದು, ಹೌದು; ಅದು ಮಾತ್ರ ನಿಜ; ಇಲ್ಲದಿದ್ದರೆ ಕ್ವೆಸ್ಟೆಡ್‌ಳ ದುಡ್ಡು ವಸೂಲು ಮಾಡದೆ ಹಾಗೇ ಬಿಡುತ್ತಿದ್ದಿಯಾ? '

' ನನಗದು ಬೇಕಾಗಿದ್ದಿಲ್ಲ. ಹೋಗಲಿ, ಹಿಂದಿನದನ್ನು ತೆಗೆದರೆ ಬರುವದೇನು? ಅವಳು ತನ್ನ ದುಡ್ಡು ಉಳಿಸಿಕೊಂಡು, ಒಬ್ಬ ಗಂಡನನ್ನು ದೊರಕಿಸಿಕೊಂಡು, ಇಂಗ್ಲೆಂಡದಲ್ಲಿ ಸುಖವಾಗಿ ಬಾಳಲಿ! ಇನ್ನು ಆ ವಿಷಯವನ್ನೆ ಎತ್ತಬೇಡ. '

' ಒಳ್ಳೆಯದು; ಆದರೆ ನಾನು ಹೇಳುವಷ್ಟು ಹೇಳುತ್ತೇನೆ; ಬೇಕಾದರೆ ಕೇಳು, ಸಾಕಾದರೆ ಬಿಡು; ಇನ್ನು ನೀನು ಬಡತನದ ರೀತಿಯಿಂದಲೆ ಜೀವನ ಸಾಗಿಸಬೇಕಾಗುವದು; ನಿನ್ನ ಉದ್ಯೋಗಕ್ಕೇ ಹೊಂದಿಕೊಂಡು ದೊಡ್ಡ ಸ್ಥಳವನ್ನು ಪಡೆಯಬೇಕು; ಇದನ್ನು ಬಿಟ್ಟು ಯಾವುದೊ ಒಂದು ಕಾಡು ಸಂಸ್ಥಾನಕ್ಕೆ ಹೋಗಿ ಕವಿತೆ ಬರೆಯುತ್ತ ಕೂಡಬೇಡ; ನಿನ್ನ ಮಕ್ಕಳಿಗೆ ಶಿಕ್ಷಣ ಕೊಡು; ಹೊಸ ಹೊಸ ವಿಜ್ಞಾನದ ಪತ್ರಿಕೆಗಳನ್ನು ಓದು;

ಯುರೋಪಿಯನ್ ಡಾಕ್ಟರರು ಸಹ ನಿನಗೆ ಮರ್ಯಾದೆ ಮಾಡುವಂತೆ ಮಾಡಿಕೊ; ನಿನ್ನ ಕರ್ಮದ ಫಲವನ್ನು ನಿಜಧೀರನಂತೆ ಉಣ್ಣು. . . . '

' ಹಮೀದುಲ್ಲಾ ! ನಾವೀಗ ಕೋರ್ಟಿನಲ್ಲಿಲ್ಲ. ನಾವು ಮನುಷ್ಯರು; ವಿವೇಕಕ್ಕೆ ತಿಳಿದಂತೆ ಬಾಳುವದು ನಮ್ಮ ಧರ್ಮ. '

' ಅಝೀಜ, ಇಂಥ ಮಾತಿಗೆ ನಿಜವಾಗಿ ಉತ್ತರವೇ ಇಲ್ಲ. ' ಎಂದು ನಿರುಪಾಯನಾಗಿ ಹೇಳಿ ' ಮಹಮ್ಮದ ಲತೀಫನು ತಂದ ಆ ಸುದ್ದಿಯನ್ನು ಕೇಳಿದ್ದೀಯಾ ?' ಎಂದು ಬೇರೆ ಮಾತನ್ನೆ ತೆಗೆದನು.

' ಯಾವುದು ? '

' ಮಿಸ್ ಕ್ವೆಸ್ಟೆಡ್‌ಳು ಕಾಲೇಜದಲ್ಲಿರುವಾಗ ನಿಮ್ಮ ಫೀಲ್ಡಿಂಗನು ಅವಳಲ್ಲಿಗೆ ಮೇಲಿಂದ ಮೇಲೆ ಹೋಗುತ್ತಿದ್ದನಂತೆ ! ರಾತ್ರಿ ಕೂಡ !

' ಇರಬಹುದು, ಅದರಲ್ಲೇನು; ಅವಳ ಬೇಸರಕಳೆಯುವದಕ್ಕೆ ಹೋಗುತ್ತಿರಬಹುದು. '

' ಅಝೀಜ, ನಿನಗೆ ನನ್ನ ಅರ್ಥ ತಿಳಿಯಿತೇ ? '

' ಸ್ವಲ್ಪ. ಆದರೂ ನಿನ್ನ ಆ ಅರ್ಥವು ನನ್ನನ್ನು ನನ್ನ ಸಂಕಟಗಳೊಳಗಿಂದೇನು ಪಾರುಮಾಡುವದಿಲ್ಲ. ನಾನಂತೂ ಚಂದ್ರಪುರವನ್ನು ಬಿಟ್ಟು ಹೋಗಬೇಕೆಂದೇ ಮಾಡಿರುತ್ತೇನೆ. ಆದರೆ ಎಲ್ಲಿಗೆ ? ಇನ್ನೂ ಗೊತ್ತಿಲ್ಲ. ಕವನವನ್ನು ಬರೆಯಬೇಕೆಂದಿದ್ದೇನೆ. ಆದರೆ ವಿಷಯ ? ಅದೂ ಗೊತ್ತಿಲ್ಲ. ಇದರಲ್ಲಿ ನೀನೇನಾದರೂ ನೆರವಾಗಬಹುದೇ ? ' ಎಂದು ಒಂದು ಕ್ಷಣ ಸುಮ್ಮನಿದ್ದು ಆಲ್ಲಿಂದ ಒಮ್ಮಿಂದೊಮ್ಮೆ ' ನನಗಾರು ನೆರವಾಗುತ್ತಾರೆ ! ನನಗೆ ಗೆಳೆಯರಾರೂ ಇಲ್ಲ ! ಎಲ್ಲರೂ ವಿಶ್ವಾಸಘಾತಕರು ! ನನ್ನ ಮಕ್ಕಳೂ ಹಾಗೆಯೆ ! ನನಗೆ ಈ ಗೆಳೆಯರಿಂದ ಸಾಕುಬೇಕಾಯಿತು ! ' ಎಂದು ಕೂಗಿದನು.

' ಏನು ಅಝೀಜ ! ಏನಿದು ಹುಚ್ಚುಚ್ಚಾರ ! ನಾನು ಅಂದದ್ದೇನು, ನೀನು ತಿಳಿದುಕೊಂಡದ್ದೇನು ?. . . . '

' ಕ್ಷಮಿಸು, ಹಮೀದುಲ್ಲಾ ! ನಾನು ಜೇಲಿನಿಂದ ಬಂದಾಗಿನಿಂದ ನನ್ನ ಮನಸ್ಸಿನ ಸ್ಥಿತಿಯೆ ಒಂದು ರೀತಿಯಾಗಿದೆ; ನನ್ನನ್ನು ಹೇಗಾದರೂ ಮಾಡಿ ಕ್ಷಮಿಸು. '

' ಅಝೀಜ, ನೂರುದ್ದೀನನ ತಾಯಿಯು ನನ್ನ ಹೆಂಡತಿಯನ್ನು ಕಾಣಲಿಕ್ಕೆಂದು ಒಳಗೆ ಬಂದಿದ್ದಾಳೆ. ಅದೂ ಒಂದು ಒಳ್ಳೆಯದೇ. ಅವರನ್ನು ಭೆಟ್ಟಿಯಾಗೋಣ ನಡೆ ಒಳಗೆ. '

ಇಬ್ಬರೂ ಒಳಗೆ ಹೊರಟು ಹೋದರು.

---

## ಪ್ರಕರಣ ೩೧

ಅಝೀಜನ ಸ್ವಭಾವದಲ್ಲಿ ಸ್ವಲ್ಪ ದುಡುಕು ಹೆಚ್ಚು; ಇನ್ನೊಬ್ಬರು ಹೇಳಿದ ಮಾತುಗಳನ್ನು ಒಳಹೊಕ್ಕು ನೋಡುವ ದೃಷ್ಟಿ ಕಡಿಮೆ. ಹಮಿದುಲ್ಲಾ ಹೇಳಿದ ಕ್ವೆಸ್ಟೆಡ್-ಫೀಲ್ಡಿಂಗರ ಪ್ರಣಯ ಕಥೆಯನ್ನು ತೀರ ನಿಜವೆಂದೇ ನಂಬಿ, ನೀತಿಯ ದೃಷ್ಟಿಯಕಿಂತಲೂ ತಮ್ಮ ಗೆಳೆತನದಲ್ಲಿ ಇಲ್ಲಿಯವರೆಗೆ ಅದನ್ನು ತನ್ನಿಂದ ಮುಚ್ಚಿಟ್ಟನಲ್ಲ ಎಂದು ಅವನ ಮೇಲೆ ಕಿಡಿಕಿಡಿಯಾಗಿ, ಒಮ್ಮೆ ಸ್ಪಷ್ಟವಾಗಿ ಅವನನ್ನೇ ಇದರ ಬಗ್ಗೆ ಕೇಳಿಬಿಡಬೇಕೆಂದೂ ಮನಸ್ಸಿನಲ್ಲಿ ಗೊತ್ತುಮಾಡಿಕೊಂಡನು. ಫೀಲ್ಡಿಂಗನು ಯಾವುದೆಂದೋ ಒಂದು ಪರಿಷತ್ತಿಗೆ ಹೋಗಿದ್ದವನು ತಿರುಗಿ ಬರುತ್ತಿದ್ದಾಗ ಅವನನ್ನು ಸ್ಟೇಶನ್ ಮೇಲೆಯೆ ಕಂಡನು. ಮತ್ತು ಅವನಲ್ಲಿಗೇ ಊಟಕ್ಕೆ ಒಪ್ಪಿಕೊಂಡು ನಡೆದನು. ಹಾದಿಯುದ್ದಕ್ಕೂ ಹರಟೆ ನಡೆಯಿತು. ಅದರಲ್ಲೆಲ್ಲ ಅಝೀಜನು ಯಾವ ಮಾತಿಗೂ ಸುತ್ತು ಸುತ್ತು ಹಾಯ್ದು ಅವನಿಗೆ ಚುಚ್ಚಿ ಮಾತಾಡಹತ್ತಿದನು. ಕೊನೆಗೆ ' ಸಿರಿಲ್ ! ನಿಮ್ಮ ಯುರೋಪಿಯನ್ನರ ಗುಂಪಿನಲ್ಲಿ ಒಂದು ಹುಯಿಲು ಎದ್ದಿದೆ, ಗೊತ್ತಿದೆಯೋ ಇಲ್ಲವೋ ನಿನಗೆ ? ' ಎಂದು ಮೂಲ ಮಾತಿಗೇ ಕೈಹಾಕಿದನು.

' ಇಲ್ಲ, ಏನದು ? '

' ಮಿಸ್ ಡೆರೆಕ್ಕಳು ಯಾಕೆ ಚಂದ್ರಪುರವನ್ನು ಗಟ್ಟಿಯಾಗಿ ಹಿಡಿದಿದ್ದಾಳೆಂಬುದರ ಗುಟ್ಟು ಈಗ ಹೊರಬಿತ್ತು, ನೋಡು ! ಮಿ. ಮ್ಯಾಕ್‌ಬ್ರಾಯಿಡರು ಅವಳ ಕೋಣೆಯಲ್ಲಿಯೆ ಸಿಕ್ಕರಂತೆ. ಅವರ ಹೆಂಡತಿ ಸೋಡಚೀಟಿ

ಯನ್ನು ಕೊಡುವದಕ್ಕೂ ಸಿದ್ಧಳಾಗಿದ್ದಳಂತೆ. ಇಷ್ಟಾದರೂ ಪಾಪ, ಅವನು ಒಳ್ಳೆಯ ಮನಸ್ಸಿನವನೇ ಎನಬೇಕು! ಹೀಗಾದದ್ದು ಹಿಂದುಸ್ತಾನದ ಹವೆಯ ಪರಿಣಾಮವೆಂದೇ ಅವನಿನ್ನೂ ತಿಳಿದಿದ್ದಾನೆ. ನಿಜವಾಗಿ ಎಲ್ಲವೂ ನಮ್ಮ ತಪ್ಪು ಎನ್ನುವದು ಅವನಿಗೇನು ಗೊತ್ತು? ಅಂತೂ ಸಿರಿಲಾ! ನಿನಗೊಂದು ಮಹತ್ವದ ಸುದ್ದಿ ಹೇಳಿದಂತಾಯಿತಲ್ಲವೇ?'

'ಅಂಥ ಮಹತ್ವದ್ದೇನೂ ಅಲ್ಲ ಇದು!' ಎಂದು ಫೀಲ್ಡಿಂಗನು, ಮಾಡಿದವರ ಪಾಪ ಆಡಿದವರ ಬಾಯಲ್ಲಿ ಎನ್ನುವಂತೆ ಅದಕ್ಕೆ ಅಷ್ಟೇನು ಮಹತ್ವಕೊಡದೆ ಉತ್ತರಕೊಟ್ಟು 'ಇಲ್ಲ ಕೇಳು.' ಎಂದನು.

ಅಝೀಜನ ಮುಖ ಕುತೂಹಲಭಾವವನ್ನು ಮೂಡಿಸಿತು.

'ಅಝೀಜ! ಪರಿಷತ್ತಿನಲ್ಲಿ ಹೀಗೆ ನಿರ್ಣಯಿಸಿದರು....'

'ಹುಂ, ನಾನೀಗ ನೇರವಾಗಿ ಮಿಂಟೋ ಆಸ್ಪತ್ರೆಗೆ ಹೋಗಬೇಕಾಗಿದೆ; ಕಾಲರಾ ಬಹಳ ಜೋರಾಗಿದೆ ಈಗ. ಈ ಊರ ರೋಗಿಗಳೂ ಇದ್ದಾರೆ,. ಪರಸ್ಥಳದವರೂ ಬಂದಿದ್ದಾರೆ. ಸಿರಿಲ್, ಯಾಕೋ ನನಗೆ ಜೀವವೇ ಬಹಳ ಬೇಸರಾಗಿದೆ. ಹೊಸ ಸಿವ್ಹಿಲ್ ಸರ್ಜನ್ನರೂ ಹಿಂದಿನವರಂತೆಯೆ ಇದ್ದಾರೆ ನಾನು ಪಟ್ಟ ಕಷ್ಟಗಳಿಂದ ಏನೂ ಪ್ರಯೋಜನನಾಗಲಿಲ್ಲ ಆದರೆ ಸಿರಿಲ್, ಇಲ್ಲಿ ನೋಡು, ನಿನ್ನ ವಿಷಯದಲ್ಲಿ ಮತ್ತು ಮ್ಯಾಕ್‌ಬ್ರಾಯಿಡರ ವಿಷಯ ಏನೋ ಗುಜಗುಜು ನಡೆದಿದೆ ಮಾತ್ರ. ನಿನ್ನ ಮತ್ತು ಕ್ವೆಸ್ಟೆಡ್‌ಳ ನಡುವಿನ ಸಖ್ಯ ಸಲುಗೆಯನ್ನು ಮೀರಿ ಪ್ರಣಯದ ಹೊಸ್ತಿಲವನ್ನೇರಿದೆಯೆಂದು ಹೇಳುತ್ತಾರೆ; ಇದು ನಿಜವೇ?'

'ಹೇಳುವವರೇನು, ಬೇಕಾದ್ದು ಹೇಳುತ್ತಾರೆ.'

'ಹಾಗಲ್ಲ, ಅದು ಇಡೀ ಪಟ್ಟಣದ ತುಂಬ ಹಬ್ಬಿದೆ; ಮತ್ತು ಅದು ನಿನ್ನ ಹೆಸರು ಕೆಡಿಸಬಹುದಲ್ಲವೇ?'

'ಅದರ ಚಿಂತೆ ನಿನಗೆ ಬೇಡ. ಮಿಸ್ ಕ್ವೆಸ್ಟೆಡ್‌ಳಂತೂ ಒಮ್ಮೆ ಇಲ್ಲಿಂದ ಪಾರಾಗಿದ್ದಾಳಲ್ಲ!'

'ಅವಳು ಪಾರಾದರೇನಾಯಿತು? ಇಲ್ಲಿ ಉಳಿದವರಿಗೆ ಇಂಥ ಮಾತುಗಳು ಕಾಡದೆ ಬಿಡುವದಿಲ್ಲ ಈ ದೇಶದಲ್ಲಿ. ಸಿರಿಲ್! ನನಗಂತೂ ನಿನ್ನ ಸಲುವಾಗಿ ಬಹಳ ಚಿಂತೆಯಾಗಿದೆ; ಕಣ್ಣಿಗೆ ಕಣ್ಣು ಹಚ್ಚಿಲ್ಲ! —ಇಲ್ಲಿ

ನೋಡು, ಮೊದಲು ನನ್ನ ಹೆಸರನ್ನು ಅವಳ ಹೆಸರಿಗೆ ಜೋಡಿಸಿದರು; ಈಗ ನಿನ್ನದನ್ನು ಜೋಡಿಸಿದ್ದಾರೆ.'

'ಸಾಕು, ಸಾಕು; ಅತಿಯಾಯಿತು.'

'ಅತಿಯೇನಾಯಿತು ಇದರಲ್ಲಿ? ಎಷ್ಟೆಂದರೂ ನಾನು ಹಿಂದುಸ್ಥಾನದಲ್ಲಿಯೆ ಹುಟ್ಟಿ ಬೆಳೆದವನು. ನನಗದು ಗೊತ್ತಿಲ್ಲವೇ?'

'ಇರಬಹುದು. ಆದರೆ ಹೇಳುವದಕ್ಕೇನಾದರೂ ಅಳತಿ-ಗಿಳತಿ ಇದೆಯೋ ಇಲ್ಲವೋ? ಅಝೀಜ! ನೀನು ಅಳತೆ ತಪ್ಪಿರುವಿ. ಇದು ಕೆಟ್ಟ ಸುದ್ದಿ.. ಸಾಕು, ಇನ್ನು ನಾವು ಬೇರೆ ವಿಷಯ ಮಾತಾಡೋಣ.'

'ಆದರೂ ಮಿಸ್ ಕ್ವೆಸ್ಟೆಡ್‌ಳ ವಿಷಯದಲ್ಲಿ ನೀನು ಜಾಗರೂಕನಾಗಿರಬೇಕು.'

'ಆಗಲಿ. ನಾನದನ್ನಷ್ಟು ಹಚ್ಚಿಕೊಂಡಿಲ್ಲ.'

'ಸಿರಿಲ್, ನಿನ್ನ ಈ ಜಂಭವೇ ನಿನ್ನ ನಾಶಕ್ಕೆ ಕಾರಣವಾಗುತ್ತದೆ. ಅದರಿಂದ ಎಲ್ಲ ಕಡೆಗೂ ನಿನಗೆ ವೈರಿಗಳು ಸುತ್ತುಹತ್ತಿದ್ದಾರೆ.'

'ಯಾವ ವೈರಿಗಳು?'

ಅಝೀಜನು ಉತ್ತರ ಕೊಡದಾದನು. ಅವನಿಗೆ ಈ ಪ್ರಶ್ನೆಯಿಂದ ಉಸಿರು ಕಟ್ಟಿದಂತಾಯಿತು. 'ಈ ಊರಲ್ಲಿ ನೀನು ನಂಬಬಾರದವರ ಯಾದಿ ಕೂಡ ಮಾಡಿ ನಿನಗೆ ಕೊಟ್ಟಿದ್ದೇನೆ; ಇನ್ನೂ ಯಾರು ಎಂದು ಹೇಳಬೇಕೇ? ಇಕಾ, ನಿನ್ನ ಕುದುರೆ ಚಾಕರನು ಹೊಸಬನಿದ್ದಾನಲ್ಲವೆ? ಅವನೂ ಗುಪ್ತಚಾರನಿರಲಿಕ್ಕಿಲ್ಲೆಂದು ಯಾತರ ಮೇಲಿಂದ? ಮೂರರಲ್ಲಿಯೂ ಒಬ್ಬನಿದ್ದಾನೆ..' ಎಂದು ಮೊದಲು ರೊಚ್ಚಿನ ಆವೇಶದಿಂದ ಮಾತಾಡಿದರೂ ಕೊನೆಗೆ ಕಳ್ಳದನಿಯಲ್ಲಿ ಹೇಳಿದನು.

'ಇದ್ದರೇನಾಯಿತು?' ಎಂದು ಫೀಲ್ಡಿಂಗನು ನಗುತ್ತ ಕೇಳಿದನು.

'ಸಿರಿಲ್, ಹಾಗೆ ನಗೆಯಾಡಬೇಡ. ಈ ಗುಪ್ತಚಾರರು ನೊಳ್ಳಿಗಳಂತೆ ಗುಂಪುಗುಂಪಾಗಿ ಎಲ್ಲಿಂದ ಬೇಕು ಅಲ್ಲಿಂದ ಒಳಸೇರಿ ಪ್ರಾಣಹಿಂಡುತ್ತಾರೆ. ಸಿರಿಲ್, ನಿನ್ನ ಮನಸ್ಸಿನಲ್ಲಿ ಏನೋ ಬೇರೆ ಇದ್ದಂತೆ ಕಾಣುತ್ತದೆ?'

ನೂವಿ ಇಲ್ಲ',.

' ಇದೆ; ನೀನು ಯಾವುದಕ್ಕಾಗಿಯೊ ನನ್ನ ಮೇಲೆ ಸಿಟ್ಟಿಗೆದ್ದಿರುವಿ. ಅದನ್ನೀಗ ನೀನು ಮುಚ್ಚಿಡಹತ್ತಿದ್ದೀ. '

' ಉಹುಂ. '

' ಏನು ತುಂಟಪಾ ನೀನು ! ಅಲ್ಲ, ಆಡೀಲಾಳ ಕೂಡ ಇಂದೇನೊ ಬಹಳ ವಿನೋದ ನಡಿಸಿದ್ದೆಯಂತಲ್ಲ ! '

ಅಝೀಜನು ಹಾರು ಸುದ್ದಿಯನ್ನು ನಂಬಿ ತನ್ನನ್ನು ಹೀಗೆ ಕೆರಳಿಸುತ್ತಿರುವದನ್ನು ನೋಡಿ ಫೀಲ್ಡಿಂಗನು ಬಹಳ ಹೇಸಿಕೊಂಡನು; ಅಲ್ಲದೆ ತನಗೆ ತುಂಟನೆಂದದ್ದಕ್ಕಂತೂ ಅವನು ಕಿಡಿಕಿಡಿಯಾಗಿ ' ಹೇಡಿ ! ಏನು ಮಾತಾಡುತ್ತಿದ್ದೀ ನೋಡು ! ವಿನೋದವು ಅಂತಹ ಹೊತ್ತಿನಲ್ಲಿಯೇ ? ' ಎಂದು ಗದ್ದರಿಸಿದನು.

' ಇಲ್ಲ ಫೀಲ್ಡಿಂಗ್ ! ನಾನಂದದ್ದು ತಪ್ಪಾಯಿತು; ಕ್ಷಮಿಸು. ' ಎಂದು ಅಂಜಿ ಒಮ್ಮೆಲೆ ಒಪ್ಪಿಕೊಂಡೇ ಬಿಟ್ಟನು.

' ಅಝೀಜ, ಕನಿಷ್ಟಕ್ಕೆ ನೀನಾದರೂ ಅಂತಹ ಮಾತುಗಳನ್ನು ನಂಬಬಾರದಾಗಿತ್ತು. ಯಾಕಂದರೆ ನೀನು ಎಲ್ಲ ಪರಿಸ್ಥಿತಿಯನ್ನೂ ಬಲ್ಲವನು.... ಇನ್ನೂ ಆ ಹುಡುಗೆಯು ಹೆಸ್ಲೊಪನಿಗೇ ನಿಶ್ಚಿತಳಾಗಿದ್ದಾಳೆ. '

' ಹೌದು, ಹೌದು. ನೀನು ನಾನು ಕೇಳಿದ ಮಾತಿಗೆ ಮೊದಲು ಸುಮ್ಮನಿದ್ದುದರಿಂದ ನಾನು ಹಾಗೆ ತಿಳಿದುಕೊಂಡೆ. ಸುಮ್ಮನೆ ತಪ್ಪು ತಿಳುವಳಿಕೆಯಾಗಿತ್ತು. ಆಗಲಿ, ಈ ನಿನ್ನ ಹೇಡಿಯನ್ನಷ್ಟು ಆಸ್ಪತ್ರಿಯಲ್ಲೆ ಬಿಡುವಿಯಾ ? '

' ನಾನು ಹಾಗಂದದ್ದಕ್ಕೆ ನಿನಗೆ ಸಿಟ್ಟಿಲ್ಲವಷ್ಟೇ ? '

' ಇಲ್ಲ, ಇಲ್ಲ. ಇದನ್ನು ಹುಟ್ಟಿಸಿ ಹೇಳಿದ ಆ ಲತೀಫನಿಗೆ ಮೊದಲು ಪ್ರಾಯಶ್ಚಿತ್ತ ಮಾಡುತ್ತೇನೆ. '

' ಹೋಗಲಿ ಬಿಡು; ತಾನೇ ಅಡಗುವದು, ಇದೆಲ್ಲ. '

' ಇಲ್ಲ; ಈ ಲತೀಫನು ಈಗೀಗ ಬಹಳ ಕಾರಸ್ಥಾನ ನಡಿಸಿದ್ದಾನೆ. ಅವನನ್ನು ತಿರುಗಿ ಮನೆಗೇ ಕಳಿಸಿಬಿಡಬೇಕು; ನಿಮಗೆ ಹೇಗೆನಿಸುತ್ತದೆ ? '

' ಆ ವಿಷಯವನ್ನು ಊಟದ ಕಾಲಕ್ಕೆ ವಿಚಾರಿಸೋಣ. '

' ಊಟ ! ಸಿರಿಲ್, ಬಹಳ ದಡ್ಡತನವಾಯಿತು ನನ್ನದು ! ದಾಸ

ನೊಡನೆ ಊಟಕ್ಕೆ ಬರುತ್ತೇನೆಂದು ವಚನಕೊಟ್ಟದ್ದನ್ನು ಮರೆತೇ ಬಿಟ್ಟಿದ್ದೇನೆ.'

'ಅದರಲ್ಲೇನು? ಅವನನ್ನೇ ಇಲ್ಲಿ ಕರಕೊಂಡು ಬಂದರಾಯಿತಲ್ಲ?'

'ಆದಾಗುವಂತಿಲ್ಲ; ಯಾಕಂದರೆ ಅವನು ತನ್ನ ಉಳಿದ ಗೆಳೆಯರನ್ನೂ ಕರೆದಿದ್ದಾನೆ.'

'ಅದೆಲ್ಲ ಆಗದು. ಮೊದಲೇ ಹೇಳಿದಂತೆ ನೀನು ನನ್ನೊಡನೆ ಊಟ ಮಾಡಬೇಕು, ಮಾಡಿಯೇ ಮಾಡುವಿ.' ಎಂದು ಬೇರೆ ಕಡೆಗೆ ನೋಡುತ್ತ ನುಡಿದನು.

ಹೀಗೆಯೆ ಮಾತಾಡುತ್ತ ಅವರು ಆಸ್ಪತ್ರೆ, ಪೋಸ್ಟ ಆಫೀಸು, ಮಸೀದೆ, ಮೈದಾನಗಳ ಮೇಲೆ ಹಾಯ್ದು ಕಾಲೇಜಕ್ಕೆ ಹೋಗಿ ಮುಟ್ಟಿದರು. ನಡುವೆ ಪೋಸ್ಟ ಆಫೀಸಿನ ಹತ್ತಿರ ಟರ್ಟನ್ನರ ಭೆಟ್ಟಿಯಾಯಿತು ಅವರಿಗೆ. ನಮಸ್ಕಾರಚಮತ್ಕಾರಗಳಾದ ಮೇಲೆ ಟರ್ಟನ್ನನು ಫೀಲ್ಡಿಂಗನಿಗೆ 'ಈ ಹೊತ್ತು ಸಾಯಂಕಾಲ ಕ್ಲಬ್ಬಿಗಷ್ಟು ನೀವು ಹಣಿಕಿ ಹಾಕಿ ಹೋಗಬೇಕು.' ಎಂದು ತಿಳಿಸಿದನು. ಅದಕ್ಕೆ ಫೀಲ್ಡಿಂಗನು 'ಯಾಕೆ, ನಾನು ಬರುವದು ಬಹಳ ಅಗತ್ಯವಿದೆಯೇನು? ಸಾಧ್ಯವಿದ್ದರೆ ನನ್ನನ್ನು ಕ್ಷಮಿಸಿ ಬಿಡಬೇಕು; ಅಂದರೆ ಬಹಳ ಒಳ್ಳೆಯದಾಗುವದು. ಯಾಕಂದರೆ ಸಾಯಂಕಾಲದಲ್ಲಿ ನನಗೊಂದು ಊಟದ ಆಮಂತ್ರಣ ಬೇರೆ ಇದೆ.' ಎಂದು ಹಾರಿಸಿಕೊಳ್ಳಲು ಯತ್ನಿಸಿದನು.

'ಲೆಫ್ಟನೆಂಟ ಗವ್ಹರ್ನರರ ಇಚ್ಛೆಯ ಪ್ರಕಾರ ನಾನಂತೂ ನಿಮಗೆ ಹೇಳಿದ್ದೇನೆ. ಇದರ ಮೇಲೆ ನಿಮ್ಮ ಇಷ್ಟ. ಬರುವದಾದರೆ ಸಂಜೆಯ ಆರು ಗಂಟೆಗೆ. ನಾನು ಅಲ್ಲಿಯೆ ಇರುತ್ತೇನೆ.' ಎಂದು ಅಷ್ಟೇ ಒಗರಿನಿಂದ ಹೇಳಿ ಹೊರಟುಹೋದನು.

ಫೀಲ್ಡಿಂಗನೂ ಏನೇ ಆಗಲಿ ಅಲ್ಲಿಗೆ ಹೋಗಿಬರಬೇಕೆಂದು ಗೊತ್ತು ಮಾಡಿಕೊಂಡನು.

ಊಟ ತೀರಿಸಿಕೊಂಡು ಇಬ್ಬರೂ ತೋಟದ ಮನೆಗೆ ಕೂಡಲಿಕ್ಕೆ ಹೋದರು. ಹೋಗುವಾಗ "ಆಯಿತು, . ನಾನಿನ್ನು ಬೇಗನೆ ಇಂಗ್ಲಂಡಕ್ಕೆ ಹೋಗಬೇಕಾಗುವದೆಂದು ಕಾಣುತ್ತದೆ, ಯಾಕಂದರೆ

ನಾನಿನ್ನು ಮೇಲೆ ಚಂದ್ರಪುರದಲ್ಲಿರುವದು ನಮ್ಮ 'ಡಿಪಾರ್ಟಮೆಂಟಿ' ಗೆ ಬೇಡಾದಂತೆ ಕಾಣುತ್ತದೆ! ಏನೋ ಒಂದು ಕೆಲಸದ ನೆವ ಹೂಡಿ ನನ್ನನ್ನು ಇಂಗ್ಲೆಂಡಕ್ಕೆ ಅಟ್ಟುವ ವಿಚಾರವಿದೆ ಅವರದು. ನೋಡು, ಹೇಗಿದೆ ತಮಾಷೆ !, ಎಂದು ಫೀಲ್ಡಿಂಗನು ಉಸುರಿದನು.

'ಯಾವದು, ಹೇಡಿಯೆಂದದ್ದೇ ?'

'ಹೌದು.'

'ಛೇ, ಅದೇತರದು ಬಿಡು. ನಾವೆಲ್ಲರೂ ತಪ್ಪು ಮಾಡಿಯೇ ಮಾಡು

'ಯಾವ ಕೆಲಸ ಅದು ? ಅದರಲ್ಲಿ ಬಿಡುವು ಹೆಚ್ಚು ಸಿಗುವದಷ್ಟೆ ?'

'ಹುಂ, ಮಿತ್ರರಿಗೆ ಭೆಟ್ಟಿಯಾಗುವಷ್ಟು.'

'ನೀನಿದನ್ನೇ ಹೇಳುವಿಯೆಂದು ಮೊದಲೇ ನಾನು ಊಹಿಸಿದ್ದೆ. ಅಲ್ಲಿ ನೀನು ಮಿಸ್ ಕ್ವೆಸ್ಟೆಡ್‌ಳನ್ನು ಕಾಣುವಿಯೆಂದು ತೋರುತ್ತದೆ ?'

'ಅವಕಾಶ ಸಿಕ್ಕರೆ. ಹ್ಯಾಂಪಸ್ಟೆಡ್‌ದಲ್ಲಿ ಆವಳನ್ನೀಗ ನೋಡಬೇಕು!'

'ಹ್ಯಾಂಪಸ್ಟೆಡ್ ಎಂದರೇನು ?'

'ಅಂದೊಂದು ಊರ ಹೆಸರು; ಪಂಡಿತರು, ಮಹಾಪಂಡಿತರು, ಮರ ಪಂಡಿತರು, ಇವರೇ ತುಂಬಿದ್ದಾರೆ ಅಲ್ಲಿ. ಲಂಡನ್ನದ ತೀರ ಸಮೀಪದಲ್ಲಿದೆ.'

'ಕ್ವೆಸ್ಟೆಡ್‌ಳು ಅಲ್ಲಿ ಸುಖಿಯಾಗಿರಬಹುದು; ಅಂತೂ ನೀನು ಆವಳನ್ನು ಮತ್ತೆ ಕಾಣುವ ಸುಖವನ್ನು ಪಡೆಯುವಿ! ......ಅಹಾ!...... ಈ ಹೊತ್ತು ನನಗೆಕೋ ತಲೆಶೂಲೆಯೆದ್ದಿದೆ!.... ನನಗೂ ಕಾಲೆರಾ ಬರುತ್ತ ದೆಯೋ ಏನು ಮತ್ತೆ ? ಸಾಕು, ನಾನಿನ್ನು ನಿಮ್ಮ ಅಪ್ಪಣೆ ಪಡೆದು ಬೇಗನೆ ಇಲ್ಲಿಂದ ಹೊರಡಬೇಕೆನ್ನುತ್ತೇನೆ.'

'ನಿನಗೆ ಗಾಡಿ ಬೇಕಲ್ಲವೆ ?'

'ಬೇಡ, ಸಾಯಕಲ್ಲಿದೆ; ಹತ್ತಿಹೋಗುವೆನು.'

'ಇಲ್ಲ, ನೀನು ಸಾಯಕಲ್ಲೇ ತಂದಿಲ್ಲ.'

'ಹೌದು, ಹೌದು; ಮರೆತಿದ್ದೆ.' ಎಂದು ತನ್ನ ಮರೆಗುಳಿತನಕ್ಕಾಗಿ ನಾಚಿ ನಾಲಿಗೆ ಕಚ್ಚಿಕೊಂಡನು.

'ಅಝೀಜ! ನಾನಂದ ಆ ಮಾತನ್ನು ಮಾತ್ರ ಮನಸ್ಸಿನಲ್ಲಿ ಹಿಡಿಯ ಬೇಡ.'

ತ್ತೇವೆ. ನಮ್ಮ ಈ ಗೆಳೆತನವು ಇಂತಹ ಒಂದೆರಡು ತಪ್ಪುಗಳಿಗೇನು ಬಗ್ಗು ವಂತಹದಲ್ಲ. ಆಗಲಿ ಹೋಗಿ ಬರುತ್ತೇನೆ.' ಎಂದು ಗಾಡಿಯಲ್ಲಿ ಕುಳಿತು ಹೊರಟನು. ಅಷ್ಟೊತ್ತಿಗಾಗಲೇ ಅವನ ಮನಸ್ಸು, ಮೈ ಎರಡೂ ಸೋತಿದ್ದವು; ಬಂಗ್ಲೆಗೆ ಬಂದವನೇ ತನ್ನ ಕೋಣೆಯಲ್ಲಿ ಹೋಗಿ ಹಾಸಿಗೆಯ ಮೇಲೆ ಬಿದ್ದುಕೊಂಡನು. ಹಸನನು ಬಂದು ಅವನ ಮೈ ತಿಕ್ಕಿದನು. ನೊರಜುಗಳು ಕಪಾಟಿನ ಮೇಲ್ಬದಿಗೆ ಇನ್ನೂ ಗುಂಪುಗಟ್ಟಿ ಕುಳಿತಿದ್ದವು. ತಂಬಾಕು ತಿಂದು ಉಗುಳಿದ ಕೆಂಪುಕಲೆಗಳು ಎಲ್ಲ ಮೂಲೆಗಳಲ್ಲಿಯೂ ಎದ್ದು ಕಾಣುತ್ತಿದ್ದವು. ಯಾಕಂದರೆ ಅವನು ಜೇಲಿನಲ್ಲಿದ್ದಾಗ ಅಲ್ಲಿ ಲಫೀಫರ ಸವಾರಿಯು ಪಸ್ತಿ ಹಾಕಿತ್ತು! ಟೇಬಲ್ಲಿನ ಡ್ರಾಅರದ ಮೇಲೆ ಪೋಲೀಸರು ಅದನ್ನು ಮುರಿದು ತೆಗೆದಿದ್ದರ ಗುರುತು ಇನ್ನೂ ಅಚ್ಚಳಿಯದೆ ಇತ್ತು.

'ಹುಜೂರ?' ಎಂದು ಹಸನನು ತನ್ನನ್ನ ಕರೆದನೆಂದು ತಿಳಿದು ಓಗೊಟ್ಟನು.

'ಅಲ್ಲಿ ನೋಡು ಮೇಲೆ, ನೊರಜುಗಳನ್ನು. ಅವುಗಳನ್ನು ಇನ್ನೂ ಮುಳುಗಿಸಿಲ್ಲವೇಕೆ?'

'ಹುಜೂರ! ಅವು ತಿರುಗಿ ಬರುತ್ತವೆ—'

'ಹೌದು, ನಾಚಿಗ್ಗೆಟ್ಟ ನಿನ್ನಂತೆ.' ಎಂದು ಭುಸುಗುಟ್ಟಿ ಅವನಿಗೆ ಅಲ್ಲಿಂದ ಹೊರಗೆ ಹೋಗಲಿಕ್ಕೆ ತಿಳಿಸಿದನು.

ಒಬ್ಬನೆ ಆದಕೂಡಲೇ ಮತ್ತೆ ಅವನ ತಲೆಯಲ್ಲಿ ಸಂಶಯ ಪಿಶಾಚಿಗಳು ಬಂದು ತಾಂಡವವಾಡಹತ್ತಿದವು. 'ಫಿಲ್ಡಿಂಗನು ಅವಳನ್ನು ತಾನೇ ಮದುವೆಯಾಗಬೇಕೆಂದು ನನ್ನಿಂದ ಆ ಹಣ ಬಿಡಿಸಿರಬಹುದೇನು? ಈಗ ಇಷ್ಟು ಬೇಗನೇ ಇಂಗ್ಲಂಡಕ್ಕೆ ಹೋಗುವದೂ ಅದಕ್ಕಾಗಿಯೇ ಇರಬಹುದೇನು? ನಾನಿವನನ್ನು ನನ್ನ ಗೆಳೆಯನೆಂದು ನಂಬಿ ನನ್ನ ಗುಟ್ಟು ಕೊಡಬಾರದಿತ್ತು! ಛೀ! ಅವನು ಕಾವಾದೋಲಕ್ಕೇ ಹೋಗಿರಲಿಲ್ಲ... ಅದು ಅಶಕ್ಯ....ಅವನು ಹಾಗಿರಲಾರನು!' ಎಂದು ಅತ್ತೊಮ್ಮೆ ಇತ್ತೊಮ್ಮೆ ಹೊಯ್ದಾಡುತ್ತ ಸುಮ್ಮನೆ ಬಿದ್ದುಕೊಂಡನು.

ಇತ್ತ ಫಿಲ್ಡಿಂಗನಿಗೂ ಅಝೀಜನ ಈ ಸಂಶಯವೃತ್ತಿಯು ಗೊತ್ತಾಯಿತು. ಅದನ್ನು ಹೋಗಲಾಡಿಸುವದಕ್ಕಾಗಿ ಅವನು ಅಝೀಜನಿಗೊಂದು

ಉದ್ದವಾದ ಪತ್ರವನ್ನು ಬರೆದನು. ಅದರಲ್ಲಿ ' ನಾನು ಹೆಣ್ಣುಮಕ್ಕಳನ್ನು ಕಂಡರೆ ದೂರ ಹೋಗುವ ಸ್ವಭಾವದವನಿರಬೇಕೆಂದು ನೀನು ಕಲ್ಪಿಸಿ ಕೊಂಡಂತೆ ಕಾಣುತ್ತದೆ. ನೀನು ನನ್ನ ವಿಷಯಕ್ಕೆ ಮತ್ತೆನಾದರೂ ಬೇರೆ ತಿಳಿದುಕೊಂಡಿದ್ದರೆ ನನ್ನ ಅಡ್ಡಿಯಿದ್ದಿಲ್ಲ. ನಿನ್ನ ಮನಸ್ಸಿಗೆ ಸುಮ್ಮನೆ ಶ್ರಮ ಮಾಡಿಕೊಂಡಿ. ನಾನು ಹೀಗೆ ಆ ತರಹದ ಏನೂ ದೋಷದ ಗಂಧವಿಲ್ಲದಂತೆ ಉಳಿದಿದ್ದರ ಕಾರಣವೆಂದರೆ ನಾನಾಗಳೇ ನಾಲ್ವತ್ತರ ಮನೆ ಏರಿದ್ದು. ನನಗೆ ಇವೆಲ್ಲ ಉಳಿದಿನ! ಇನ್ನೇನಿದೆ ನನ್ನದು ! ಒಂದು ಮಾತ್ರ ನಿನಗೆ ಸ್ಪಷ್ಟ ವಾಗಿ ಧೈರ್ಯವಾಗಿ ಹೇಳುತ್ತೇನೆ,—ಆದರಿಂದ ನನಗೆ ಸುಖ ಬರಲಿ, ದುಃಖ ಬರಲಿ, ಕೀರ್ತಿ ಬರಲಿ, ಅಪಕೀರ್ತಿ ಬರಲಿ, ಎದುರಿಸಲು ಗಟ್ಟಿಇದ್ದೇನೆ— ನನ್ನಲ್ಲಿ ನೀತಿಯು ಸ್ವಲ್ಪೂ ಇಲ್ಲ.........' ಎಂದು ಇನ್ನೂ ಏನೇನೋ ಬರೆ ದಿದ್ದನು.

ಅಬ್ಬೀಜನು ಆ ಪತ್ರಕ್ಕೆ ' ನೀನು ಇಂಗ್ಲಂಡಕ್ಕೆ ಹೊರಡುವದರೊಳ ಗಾಗಿ ನನಗೆ ಮಸೂರಿಯಿಂದ ತಿರುಗಿ ಅಲ್ಲಿಗೆ ಬಂದು ನಿನ್ನನ್ನು ಕಾಣಲಿಕ್ಕಾ ಗುವದಿಲ್ಲೆಂದು ವಿಷಾದದಿಂದ ಹೇಳಬೇಕಾಗಿದೆ. ದಯಮಾಡಿ ಕ್ಷಮಿಸಬೇಕು. ನೀನು ಇಂಗ್ಲಂಡದಿಂದ ತಿರುಗಿ ಬಂದಾಗ ನಾನೆಲ್ಲಿ ಇರುತ್ತೇನೋ ಏನೋ ಹೇಳಲಾರೆ. ' ಎಂದು ಔಪಚಾರಿಕವಾಗಿ ಉತ್ತರ ಬರೆದನು.

ಫೀಲ್ಡಿಂಗನೇನೊ ಇಂಗ್ಲಂಡಕ್ಕೆ ಹೊರಟುಹೋದನು. ಆದರೆ 'ಕ್ವೆಸ್ಟೆಡ್-ಫೀಲ್ಡಿಂಗ'ರ ಪ್ರಣಯಕಥೆಯು ಮಾತ್ರ ಜನಮನದಲ್ಲಿ ಇನ್ನೂ ಸ್ಥಿರವಾಗಿ ಉಳಿಯಿತು.

—

## ಪ್ರಕರಣ ೩೨

ಎರಡು ವರ್ಷಗಳಾದ ಮೇಲಿನ ಒಂದು ಮಧ್ಯರಾತ್ರಿ. ಮಳೆಯು ಒಂದೇ ಸಮನೆ ಕಲ್ಲು ಸುರಿದಂತೆ ಸುರಿಯುತ್ತಿದೆ. ಪ್ರೊ. ನಾರಾಯಣ ಗೋಡಬೊಲೆಯವರು ಅರಮನೆಯಲ್ಲಿಯ ಮುರಲೀಧರನ ಗುಡಿಯಲ್ಲಿ ಹಾಸಿದ ರತ್ನಗಂಬಳಿಯ ಮೇಲೆ ಬಣ್ಣ ಬಣ್ಣದ ಬೆಳಕಿನಲ್ಲಿ, ದೇವರಿಗಭಿಮುಖ ರಾಗಿ, ಕೈಯಲ್ಲಿ ತಾಳ ಹಿಡಿದು ಬಾಯಿಂದ ' ತುಕಾರಾಮ್, ತುಕಾರಾಮ್ ಎನ್ನ ತಂದೆ ನೀನೆ, ತಾಯಿ ನೀನೆ, ತುಕಾರಾಮ್ ' ಎನ್ನುತ್ತ, ಕಣ್ಣಿನಿಂದ ನೀರು ಸುರಿಸಿ ಭಕ್ತಿರಸವುಕ್ಕಿಸುತ್ತ ನಿಂತಿದ್ದರು. ಅಂದು ಗೋಕುಲಾಷ್ಟಮಿ. ಅದು ರಾಜರ ಕುಲದ ಹಬ್ಬ. ಎಲ್ಲ ಕಡೆಗಳಲ್ಲಿಯೂ ತಳಿರು-ತೋರಣಗಳಿಂದ, ಬಾಳೆಯಗಿಡಗಳಿಂದ, ಹೂ ಮಾಲೆಗಳಿಂದ ಸಿಂಗರಿಸಿದ್ದರು. ಕಣ್ಣು ಕುಕ್ಕು ವಂತೆ ವಿದ್ಯುತ್ ದೀಪಗಳು ಬೆಳಕನ್ನು ಹರಹಿದ್ದವು. ರಾಜಮಂದಿರ; ರಾಜರ ಹಬ್ಬ; ಅಂದಮೇಲೆ ಕೇಳುವದೇನು ? ಎಲ್ಲವೂ ರಾಜವೈಭವ, ರಾಜಶ್ರೀಯೆ ! ಜನರ ಗದ್ದಲಕ್ಕೂ ಕಡಿಮೆ ಇರಲಿಲ್ಲ. ಹೊತ್ತು ಹನ್ನೆರಡಕ್ಕೆ ಬಂದಿದ್ದರೂ ಶ್ರೀಕೃಷ್ಣನ ಜನ್ಮಕ್ಕಾಗಿ ಹುಡುಗರೂ, ಹಿರಿಯರೂ, ಹೆಣ್ಣುಮಕ್ಕಳೂ ಎಲ್ಲರೂ ಕುತೂಹಲದಿಂದ ದಾರಿಕಾಯುತ್ತಿದ್ದರು. ನಿಜವಾದ ಕೃಷ್ಣ ಹುಟ್ಟಿ ಎಷ್ಟು ಸಾವಿರವರ್ಷ ಆಗಿತ್ತೋ ! ಆದರೆ ಇನ್ನೂ ಹುಟ್ಟುತ್ತಲೇ ಇದ್ದಾನೆ ! ಈ ಕೃಷ್ಣನು ಹುಟ್ಟುವವರೆಗೆ ಕೀರ್ತನೆ, ಭಜನೆ, ಮೊದಲಾದವು ಗಳು ನಡೆಯಬೇಕಾದದ್ದು ವಾಡಿಕೆ. ಆಗುವದೆಲ್ಲ ಪ್ರತಿವರ್ಷದಂತೆ ಚಾ-ಚೂ ಬಿಡದೆ ಆಗಲೇ ಬೇಕಲ್ಲ ! ಯಾವದು ತಪ್ಪಿದರೂ ತಪ್ಪಬಹುದು; ಶ್ರೀಕೃಷ್ಣ ಪರಮಾತ್ಮನ ಜನ್ಮೋತ್ಸವ ಮಾತ್ರ ಹನ್ನೆರಡಕ್ಕೆಂದರೆ ಹನ್ನೆರಡಕ್ಕೇ—ಒಂದು ನಿಮಿಷವೂ ಹೆಚ್ಚು ಕಡಿಮೆಯಾಗದಂತೆ— ನಡೆಯಬೇಕು. ತಾಳ ಕಟಿಯು ವವರು ಕೆಲಜನ; ಕೈಪೇಟಿ ಬಾಜಿಸುವನೊಬ್ಬ; ಗಂಟಲು ಕಿತ್ತುಹೊಗುವಂತೆ ಮಂತ್ರಗಳನ್ನನ್ನುವವರು ಕೆಲರು, ಗರ್ಭಗುಡಿಯಲ್ಲಿ; ಇದೆಲ್ಲವನ್ನೂ ಅಡಗಿ ಸುವಂತೆ ಹೊರಗೆ ಬ್ಯಾಂಡು–ಬಜಂತ್ರಿ ! ಇದಷ್ಟೂ ಒಂದಾಗಿ ಅರಮನೆ ಯಲೆಲ್ಲ ಸುತಸ್ತಾಡಿ ಹೊರಗೆ ಬಂದು ಆಕಾಶದಲ್ಲಿಯ ಗುಡುಗಿನಲ್ಲಿ ಲೀನ ವಾಯಿತು.

ಶಿಕ್ಷಣ ಮಂತ್ರಿಗಳಾದ ಗೋಡಬೋಲೆಯವರು ಈ ವರ್ಷ ಸೂತ್ರ ಚಾಲಕರಾಗಿದ್ದರಿಂದ ಉತ್ಸವಕ್ಕೊಂದು ವಿಶೇಷ ಕಳೆ ಬಂದಿತ್ತು. ಅವರ ಶಿಷ್ಯಪರಿವಾರವೆಲ್ಲ ಬಂದು ಜನರನ್ನು ಹತೋಟಿಯಲ್ಲಿಡುವ ಸ್ವಯಂಸೇವಕರ ಕೆಲಸವನ್ನು ಮಾಡುತ್ತಿತ್ತು. ಗೋಡಬೋಲೆಯವರೀಗ ತಾವೇ ರಂಗಕ್ಕಿಳಿದರು. ಬರಿಗಾಲು; ಶುಭ್ರವಸ್ತ್ರ; ತಲೆಯ ಮೇಲೆ ತಿಳಿ ನೀಲಿಬಣ್ಣದ ಪಗಡಿ; ಕಣ್ಣಿಗೆ ಬಂಗಾರಕಟ್ಟಿನ ಕನ್ನಡ; ಕೊರಳಲ್ಲಿ ಮಲ್ಲಿಗೆಯ ಮಾಲೆ, ಮೊಳಕಾಲವರೆಗೆ ಜೋತುಬಿದ್ದಿದೆ. ಭಕ್ತಿರಸವಂತೂ ಧಾರೆಧಾರೆಯಾಗಿ ಕಣ್ಣಿನಿಂದ ಸುರಿಯುತ್ತಿದೆ.

ಅವರೆದುರಿಗೇ ಗರ್ಭಗುಡಿಯಿದೆ. ಬಾಗಿಲದ ಎಡಬಲಕ್ಕೂ ಬಾಳೆಯ ಗಿಡಗಳನ್ನು ನಿಲ್ಲಿಸಿದ್ದಾರೆ. ಬಾಗಿಲದ ಮೇಲುಗಡೆ ತೈಲಚಿತ್ರಗಳು ಸಾಲಾಗಿ ತೂಗಾಡುತ್ತಿವೆ. ಆ ಸಾಲಿನ ಮಧ್ಯದಲ್ಲಿ ಬಂಗಾರದ ಕಟ್ಟಿನ ಚಿತ್ರವೊಂದ ಸುತ್ತಲಿರುವ ವಿದ್ಯುತ್‌ದೀಪಗಳ ಬೆಳಕಿನಲ್ಲಿ ಎದ್ದುಕಾಣುತ್ತಿದೆ. ಅದೇ ಈ ರಾಜನ ಪೂರ್ವಜರದು. ನೆಲದ ಮೇಲೆ ನೂರಾರು ಬೆಳ್ಳಿಯ ತಾಟಿನಲ್ಲಿ ನಾನಾತರದ ನೈವೇದ್ಯ ಬಡಿಸಿಟ್ಟಿದ್ದಾರೆ. ಒಂದು ಕಡೆಗೆ, ಓದಲಿಕ್ಕೆ ಬಾರದ ಸ್ಥಳಗಳಲ್ಲಿ ತಮ್ಮ ಆಸ್ಥಾನ ಕವಿಗಳು ಮಾಡಿದ ಕವಿತೆಗಳನ್ನು ತಾಮ್ರಪಟಗಳ ಮೇಲೆ ಬರೆಯಿಸಿ ತೂಗುಹಾಕಿದ್ದಾರೆ. ಅದರಲ್ಲಿಯದೊಂದರಲ್ಲಿ, ಬರಹಗಾರನ ತಪ್ಪಿನಿಂದ ಹೀಗೆ ಬರೆಯಲ್ಪಟ್ಟಿದೆ, ಇಂಗ್ಲೀಷಿನಲ್ಲಿ: 'God is Love'

ಭಜನೆಯಂತೂ ಜೋರಿನಿಂದ ಸಾಗಿತ್ತು. ಹೊರಗೆ ಬ್ಯಾಂಡೂ ನಡೆದಿತ್ತು. ಗೋಡಬೋಲೆಯವರು ಒಂದು ತಾಳವನ್ನು ಕೆಳಗಿಟ್ಟು, ಇನ್ನೊಂದರಿಂದ ಬರಿ ಅವಕಾಶಕ್ಕೆ ಹೊಡೆಯುತ್ತ, ತಮ್ಮ ಕೊರಳೊಳಗಿನ ಹೂವುಗಳನ್ನು ಕಿತ್ತಾಡಿ ಮುಖ ಸೊಟ್ಟಮಾಡಿ ಹಾಡಹತ್ತಿದರು. ಹಾಡಹಾಡುತ್ತ ಕುಣಿತವೂ ಪ್ರಾರಂಭವಾಯಿತು. ಇವರನ್ನು ನೋಡಿ ಸುತ್ತಲಿನವರೂ ಅದನ್ನು ಸುರುವು ಮಾಡಿದರು. ಇದೇ ಹೊತ್ತಿಗೆ ಧೂಪಹಾಕಿದ ಹೊಗೆಯು ಎಲ್ಲ ಕಡೆಗೂ ತುಂಬಿಕೊಂಡಿತು; ಎಲ್ಲರ ಮೈಮೇಲೆಯೂ ಬೆವರು ಸುರಿಯ ಹತ್ತಿತು. ಹನ್ನೊಂದೂವರೆ ಗಂಟೆಯಾಗಿತ್ತು. ಕೃಷ್ಣ ಹುಟ್ಟುವ ಹೊತ್ತು ಸಮೀಪಿಸಿತು. ಇದ್ದಕಿದ್ದ ಹಾಗೆ ಒಮ್ಮೆಲೆ ಗದ್ದಲವನ್ನು ಚದರಿಸಿ ಹಾದಿ

ಮಾಡಿಕೊಂಡು ಜಯಪತಾಕುಗಳೊಂದಿಗೆ ಒಂದು ಮೇಣೆಯು ಅಲ್ಲಿಗೆ ಬಂತು. ಅದು ಆ ಸಂಸ್ಥಾನದ ಮುದುಕ ಮಹಾಜನದು.

ಒಳಗೆ ಬಂದೊಡನೆ ಮಹಾರಾಜರನ್ನು ಮೇಣೆಯಿಂದ ಕೆಳಗಿಳಿಸಿ ದೇವರ ಹತ್ತಿರವೇ ಒಯ್ದು ಕೂಡಿಸಿದರು; ಅವನ ಗಡ್ಡಗಳನ್ನು ಸರಿಮಾಡಿ ಕಾಲುಗಳನ್ನು ಮಡಚಿ ಪದ್ಮಾಸನದಲ್ಲಿ ಕುಳ್ಳಿರಿಸಿದರು. ಅಲ್ಲಿಂದ ಗುಲಾಲು ಹಾಕಿದ ಕಾಗದವನ್ನು ಅವನ ಕೈಯಲ್ಲಿ ಕೊಟ್ಟರು. ಬೆನೆಯಿಂದ ಹಣ್ಣಾಗಿದ್ದರಿಂದ ಅದನ್ನು ಕೈಯಲ್ಲಿಟ್ಟುಕೊಂಡು ಹಿಂದೆ ಕಂಬಕ್ಕೆ ಆತು ಕುಳಿತರು. ಅವನ ಕಣ್ಣುಗಳು ದೇವರನ್ನು ನೋಡುವ ತವಕದಿಂದ ಹಿಗ್ಗಿ ಇಷ್ಟಗಲಾದವು. ಅವನೇನು ಅಲ್ಲಿ ಬಹಳ ಹೊತ್ತು ಕೂಡಬೇಕಾಗಲಿಲ್ಲ. ಮೂರು ನಿಮಿಷ ಮೊದಲೇ ಒಬ್ಬ ಬ್ರಾಹ್ಮಣನು ಮಣ್ಣಿನಿಂದ ಮಾಡಿದ ಗೋಕುಲವನ್ನು ಒಂದು ಮಣೆಯ ಮೇಲೆ ತಂದು ಗದ್ದುಗೆಯ ಎದುರಿಗಿಟ್ಟನು. ಅಲ್ಲಿಂದ ಆಕಾಶವನ್ನು ಭೇದಿಸುವಂತೆ ಶಂಖಧ್ವನಿಯು ಮೊಳಗಿತು; ಅದರೊಡನೆಯೆ ಆನೆಗಳು ಘೀಳಿಟ್ಟವು. ಎಲ್ಲರೂ ತಮ್ಮ ಹತ್ತಿರಿದ್ದ ಗುಲಾಲನ್ನು ದೇವರಿಗೆ ಉಗ್ಗಿದರು. ಕೃಷ್ಣನು ಹುಟ್ಟಿದನೆಂದು ಎಲ್ಲ ಕಡೆಗೂ ಆನಂದವು ತುಂಬಿತು. ಕೆಲರು ಜಿಗಿದಾಡಿದರು,ಕೆಲರು ಸಾಷ್ಟಾಂಗ ಬಿದ್ದರು; ಪರದೆಯ ಹಿಂದೆ ಹೆಣ್ಣುಮಕ್ಕಳು ತಮ್ಮ ಇಷ್ಟಾರ್ಥಪೂರ್ತಿಗಾಗಿ ಗಲ್ಲಗಲ್ಲ ಬಡಕೊಂಡರು.

ಇದೇ ಹೊತ್ತಿಗೆ, ಮುಗಿಬಿದ್ದ ಜನರನ್ನು ರಾಜಸೇವಕರು ಸರಿಸಹತ್ತಿದರು. ಆಗ ಜಮಖಾನೆಯ ಮೇಲೆ ಕಾಗದದಿಂದ ಕುಟ್ಟಿ ಮಾಡಿದ ಒಂದು ನಾಗರಹಾವನ್ನೂ ಒಂದು ತೂಗುತೊಟ್ಟಿಲವನ್ನೂ ತಂದಿಟ್ಟರು. ಪ್ರೊ. ಗೋಡಬೊಲೆಯವರು ಕೈಯಲ್ಲಿ ಒಂದು ಕೆಂಪು ರೇಶಿಮೆಯ ವಸ್ತ್ರವನ್ನು ಹಿಡಿದುಕೊಂಡು ತೊಟ್ಟಿಲದ ಸಮೀಪಕ್ಕೆ ಹೋದರು. ಆ ವಸ್ತ್ರವೇ ದೇವರ ಪ್ರತಿನಿಧಿ. ಆ ವಸ್ತ್ರವನ್ನು ಕೂಸಿನ ಆಕಾರದಂತೆ ಮಡಿಚಿದ್ದರು. ಅದನ್ನು ಪ್ರೊಫೆಸರರು ತಮ್ಮ ಕೈಗಳ ಮೇಲೆ ಲಾಲಿಸುತ್ತ ಒಯ್ದು ರಾಜರ ಕೈಯಲ್ಲಿ ಕೊಟ್ಟರು. ಅವರು ಬಹಳ ಆಯಾಸದಿಂದ 'ಈ ಕೂಸಿಗೆ ಶ್ರೀಕೃಷ್ಣನೆಂದು ಹೆಸರಿಡುತ್ತೇನೆ' ಎಂದು ತೊಟ್ಟಿಲದಲ್ಲಿ ಅದನ್ನು ಹಾಕಿದರು. ಅಲ್ಲಿಂದ ರಾಜಸೇವಕರು ತಮ್ಮ ರಾಜನನ್ನು ಎತ್ತಿಕೊಂಡು ಗದ್ದಲವನ್ನು ಸರಿಸಿ

ದಾರಿಮಾಡಿಕೊಂಡು ಅರಮನೆಯ ಮತ್ತೊಂದು ಭಾಗಕ್ಕೆ ಹೋದರು. ಅಲ್ಲಿ ಅವರ ವೈದ್ಯನಾದ ಡಾಕ್ಟರ ಆಝೀಜನು ಅವರಿಗಾಗಿ ದಾರಿಕಾಯುತ್ತಿದ್ದನು. ಅವರ ಹಿಂದೂ ವೈದ್ಯನೊಬ್ಬನು ಅವರ ಜೊತೆಗೆಯೆ ಇದ್ದನು. ಇಷ್ಟು ಹೋಗಿ ಬರುವಷ್ಟರಲ್ಲಿಯೆ ರಾಜರಿಗೆ ಸಾಕಷ್ಟು ದಣುವೆಸಿಸಿತ್ತು. ಅದರ ಉಪಶಮನಕ್ಕಾಗಿ ಕೂಡಲೆ ಔಷದೋಪಚಾರ ನಡೆಯಿತು.

ಇತ್ತ ಗುಡಿಯಲ್ಲಿ ಉತ್ಸವದ ಮುಂದಿನ ಕಾರ್ಯಕ್ರಮಗಳೆಲ್ಲ ಯಥಾ ಪ್ರಕಾರವಾಗಿ ಸಾಗಿದವು. ತೊಟ್ಟಿಲದಲ್ಲಿ ಹಾಕಿ ನಾಮಕರಣವಾದ ಮೇಲೆ ಶ್ರೀಕೃಷ್ಣನ ಬಾಲಲೀಲೆಗಳಿಗಾರಂಭವಾಯಿತು. ತೊಟ್ಟಿಲವನ್ನು ಬದಿಗೆ ಸರಿಸಿಟ್ಟು ಸಂಸ್ಥಾನದ ಮುಖ್ಯ ಸರದಾರರೆಲ್ಲ ಒಟ್ಟುಗೂಡಿದರು. ತಲೆಯ ಮೇಲಿನ ತಮ್ಮ ಮುಂಡಾಸಗಳನ್ನು ತೆಗೆದಿಟ್ಟರು; ಅವರಲ್ಲಿ ಒಬ್ಬನು ಹಣೆಗೆ ಬೆಣ್ಣೆಯ ಮುದ್ದೆಯನ್ನೊತ್ತಿಕೊಂಡು, ಅದು ಕೆಳಗೆ ಜಾರಿ ತನ್ನ ಬಾಯಲ್ಲಿ ಬೀಳುವ ಹಾದಿಯನ್ನೆ ನೋಡುತ್ತಿದ್ದನು. ಆ ಮುದ್ದೆಯು ಬಾಯಲ್ಲಿ ಬೀಳುವದರೊಳಗಾಗಿ ಇನ್ನೊಬ್ಬನು ಅವನ ಹಿಂದಿನಿಂದ ಮೆಲ್ಲಗೆ ಬಂದು ಅದನ್ನು ಭರಕ್ಕನೆ ಕಸಿದುಕೊಂಡು ತಾನೇ ನುಂಗಿದನು. ಎಲ್ಲರೂ ಖೊಳ್ಳೆಂದು ನಕ್ಕರು. ಅಲ್ಲಿಂದ ಮತ್ತೊಂದು ಆಟವನ್ನು ಹೂಡಿದರು. ಶ್ರೀಕೃಷ್ಣನು ಕೂಸೆಂದು ತಿಳಿದು ಆಡಿಸುವದು. ಒಂದು ಬಂಗಾರದ ಕೆಂಪು ಚಂಡನ್ನು ತೂರುವದು. ಅದನ್ನು ಯಾರು ಹಿಡಿಯುವರೊ ಅವರ ಗುಂಪಿನೊಳಗಿಂದ ಒಂದು ಕೂಸನ್ನು ಆರಿಸಿ ತಮ್ಮ ಕೈಯಲ್ಲಿ ಹಿಡಿದು ಮೇಲೆತ್ತಿ ಸುತ್ತಲೂ ತಿರುಗಾಡುವದು; ಮತ್ತು ಎಲ್ಲರೂ ಅದಕ್ಕೆ ಮುದ್ದಿಡುವದು. ಅಲ್ಲಿಂದ ಅದನ್ನು ಅವರ ತಂದೆ-ತಾಯಿಗಳಿಗೆ ಒಪ್ಪಿಸುವದು. ಹೀಗೆಯೆ ಎಷ್ಟೋಹೊತ್ತು ನಡೆಯುವದು. ಇದಾದ ಮೇಲೆ ಕೋಲು ಹಾಕಿ ಕುಣಿಯಲಾರಂಭಿಸಿದರು. ತಾವೇ ಗೋಪಿಯರೆಂದು ತಿಳಿದು ಎಷ್ಟೋ ಜನ ನೃತ್ಯ ಮಾಡಿದರು. ಆಮೇಲೆ ಗೋಪಾಲ ಕಾಲಿಯು ಸುರುವಾಯಿತು. ಒಂದು ಜಂತಿಗೆ ನೆಲುವು ಕಟ್ಟಿ ಅದರಲ್ಲಿ ಒಂದು ಗಡಿಗೆಯನ್ನಿಟ್ಟರು. ಅದಕ್ಕೆ ಒಣಗಿದ ಅಂಜೀರಿಯ ಮಾಲೆಗಳನ್ನು ಹಾಕಿದರು: ಎಲ್ಲರೂ ನಾನಾತರದ ಭಂಗಿಗಳಿಂದ ತಮ್ಮ ಗೆಜ್ಜೆಗೋಲುಗಳನ್ನು ಮೇಲಕ್ಕೆತ್ತಿ ಆ ಗಡಿಗೆಗೆ

ಹೊಡೆಯಬೇಕೆಂದು ಜಗಿದಾಡಹತ್ತಿದರು. ಕೊನೆಗೆ ಯಾರದೂ ಹೊಡತ ಬಿದ್ದು ಅದು ಒಡೆಯಿತು. ಅದರೊಳಗಿಂದ ಹಾಲು-ಅನ್ನದ ಮುದ್ದೆಯು ಒಬ್ಬನ ಮುಖದ ಮೇಲೆ ಬಿದ್ದಿತು. ಎಲ್ಲರೂ ಅದಕ್ಕಾಗಿ ಕಚ್ಚಾಡಹತ್ತಿದರು. ಅದನ್ನು ಒಬ್ಬರೊಬ್ಬರ ಮುಖಕ್ಕೆ ಒರಸಿದರು; ಕೆಳಗೆ ಬಿದ್ದುದಕ್ಕಾಗಿ ಶಾಲೆಯ ಹುಡುಗರೂ ಓಡಿಬಂದರು. ಗದ್ದಲವೂ ಹೆಚ್ಚಾಯಿತು. ಈ ಗದ್ದಲದಲ್ಲಿ ಗೋಡಬೊಲೆಯವರು ಸುಗ್ಗುಸುಗ್ಗಾದರು. ಕೇಹೊತ್ತಾದ ಮೇಲೆ ಗದ್ದಲವು ತಾನೇ ಶಾಂತವಾಯಿತು. ಅಲ್ಲಿಂದ ಮಂತ್ರ ಪುಷ್ಪ, ಫಲ ಮಂತ್ರಾಕ್ಷತೆ, ಪ್ರಸಾದ ಹಂಚುವದು ಆದ ಮೇಲೆ ದೇವರ ಮೆರವಣಿಗೆ ತೆಗೆದುಕೊಂಡು ಹೊಗುವದಕ್ಕಾಗಿ ಎಲ್ಲರೂ ಹೊರಗಿನ ಪಾಕಾರದಲ್ಲಿ ಬಂದರು. ಅಷ್ಟೊತ್ತಿಗೆ ಬೆಳಗಾಗಿತ್ತು.

—

## ಪ್ರಕರಣ ೩೩

ಅದೇ ಹೊತ್ತಿಗೆ ಡಾ. ಅಘೋಜನೂ ಅರಮನೆಯನ್ನು ಬಿಟ್ಟು ಮುಖ್ಯ ಬೀದಿಯಲ್ಲಿ ಮೇಲ್ಗಡಿಗೆ ಒಂದು ಉದ್ಯಾಪನದಲ್ಲಿದ್ದ ತನ್ನ ಮನೆಗೆ ನಡೆದನು. ದಾರಿಯಲ್ಲಿಯೆ ಗೋಡಬೊಲೆಯುವರೂ ಅವನಿಗೆ ಭೆಟ್ಟಿಯಾದರು. ಅವರಿನ್ನೂ ಭಜನಿಯ ಗುಂಗಿನಲ್ಲಿಯೆ ಇದ್ದರು. 'ಹಲೋ!' ಎಂದು ಅಘೋಜನು ಕರೆದದ್ದಕ್ಕೆ ಏನೋ ತಿಳಿದುಕೊಂಡು, ಲಕ್ಷ್ಯವಿಲ್ಲದೆ "ಅವನು ಆ ಯುರೋಪಿಯನ್ನರ ಅತಿಥಿಭವನದಲ್ಲಿಳಿದಿದ್ದಿರಬಹುದು." ಎಂದು ಚೀರದನಿಯಲ್ಲಿ ಏನೋ ಉತ್ತರ ಕೊಟ್ಟರು.

'ಹಿಗೇನು? ಎಂದು ಬಂದಿದ್ದಾನೆ?' ಎಂದು ಮತ್ತೆ ಕೇಳಿದನು.

ಅಷ್ಟರಲ್ಲಿ ಗೋಡಬೊಲೆಯವರು ಕಾಣದಾಗಿದ್ದರು.

ಅಘೋಜನಿಗೂ 'ಅವನು' ಎಂದರೆ ಫಿಲ್ಡಿಂಗನೆಂಬುದು ಗೊತ್ತಿತ್ತು. ಆದರೆ ಅವನ ವಿಷಯಕ್ಕೆ ಹೆಚ್ಚು ವಿಚಾರಿಸಲು ಅವನ ಮನಸ್ಸು ಒಪ್ಪದಾಯಿತು. ಅಂತೆಯೆ ಅವನೂ ಹೆಚ್ಚಿಗೆ ಮಾತು ಬೆಳಿಸದೆ ಮುಂದೆ ಸಾಗಿದನು.

ಫೀಲ್ಡಿಂಗನು ಸರಕಾರಿ ಕೆಲಸದ ಸಲುವಾಗಿ ಅಲ್ಲಿಗೆ ಬಂದಿದ್ದನು. ಅವನಿಗೂ ಚಂದ್ರಪುರದಿಂದ ಮಧ್ಯಹಿಂದುಸ್ತಾನಕ್ಕೆ ಅಲ್ಲಿಯ ಸಂಸ್ಥಾನಗಳಲ್ಲಿಯ ಇಂಗ್ಲೀಷ ಶಿಕ್ಷಣವು ಹೇಗೆ ನಡೆದಿದೆಯೆಂಬುದನ್ನು ನೋಡುವದಕ್ಕಾಗಿ ಬದಲಿಯಾಗಿತ್ತು.

ಅಝೀಜನ ಭಾಗ್ಯಚಕ್ರವೂ ಈಗ ಸ್ವಲ್ಪ ತಿರುಗಿತ್ತು. ಅವನು ಪ್ರೊ. ಗೋಡಬೊಲೆಯವರ ಸಹಾಯದಿಂದ ಮಹಾರಾಜರಿಗೆ ವೈದ್ಯನಾಗಿ ಬಂದು ಅಲ್ಲಿ ನೆಲೆಸಿದ್ದನು. ಹೆಸರಿಗೆ ಒಬ್ಬ ಹಿಂದೂ ಡಾಕ್ಟರನ ಕೈಯಲ್ಲಿದ್ದರೂ ಇವನೇ ಸರಕಾರಕ್ಕೆ ಮುಖ್ಯ ವೈದ್ಯನಿದ್ದನು. ಆದರೆ ಪಾಶ್ಚಾತ್ಯ ಪದ್ಧತಿಯ ‘ ಇಂಜಕ್ಶನ್ ’ ಮೊದಲಾದ ಹುಚ್ಚುಚಾಳಿಗಳನ್ನು ಬಿಡಬೇಕಾಯಿತು, ಇಷ್ಟೆ. ಅಂತೂ ಒಳ್ಳೆ ನೌಕರಿ; ಉತ್ತಮ ಹವೆ; ಮಕ್ಕಳ ಸಹವಾಸ; ಹೊಸ ಮದುವೆ; ಹೊಸ ಸಂಸಾರ; ಮನೋರಂಜನೆಗೆ ಕಾವ್ಯ ಓದುವದು; ಬರೆಯುವದು; ಕುದುರೆಯಂತೂ ಇದ್ದೇ ಇತ್ತು; ಬೇಸರಾದಾಗ ಬೇಟೆಯಾಡಲಿಕ್ಕೆ ಹೋಗುವದು. ಅಂತೂ ಅವನಿಗೆ ಜೀವನದಲ್ಲೀಗ ಸವಿ ಬಂದಿತ್ತು.

ಆದರೆ ಇಂಗ್ಲೀಷರಿಂದ ಆದಷ್ಟು ದೂರಿರಬೇಕೆಂಬ ಪ್ರವೃತ್ತಿಯು ಅವನಲ್ಲೀಗ ಹೆಚ್ಚು ಹೆಚ್ಚು ಬೆಳೆದಿತ್ತು. ಅದಕ್ಕೆ ಕಾರಣ, ಒಮ್ಮೆ ಅವರ ಸಮೀಪ ಹೋಗಿ ಕೈಸುಟ್ಟುಕೊಂಡದ್ದೆ; ಫೀಲ್ಡಿಂಗನು ತನಗೆ ವಿಶ್ವಾಸಘಾತಮಾಡಿದ್ದಾನೆಂದು ಈ ಕ್ಷಣದ ವರೆಗೂ ಅವನ ಭಾವನೆಯಾಗಿತ್ತು. ಮೂರವಾರದಲ್ಲಿ ಅವನ ಖಟ್ಲೆ ಮುಗಿದ ಮೇಲೆ ಸಿರಿಲ್ಲನು ಅವನ ಮೆರವಣಿಗೆಯಲ್ಲಿ ಕೂಡದ್ದರಿಂದಲೆ ಈ ಭಾವನೆಯು ಮೊದಲಾಗಿ ಅವರ ಗೆಳೆತನದಲ್ಲಿ ಒಡಕು ತಂದಿತು. ಮುಂದೆ ಆ ಹುಡುಗಿಗೇ ಅವನು ಸಹಾಯ ಮಾಡಿದ್ದರಿಂದ ಅದು ದೃಢವಾಯಿತು. ಇದೆಲ್ಲಕ್ಕೂ ಶಿಖರ ಇಟ್ಟ ಹಾಗೆ ಹ್ಯಾಂಪ್‌ಸ್ಟೆಡ್‌ದಿಂದ ಬಂದ ಪತ್ರವಂತೂ ಅವನ ಮನಸ್ಸನ್ನೇ ಹೊರಳಿಸಿಬಿಟ್ಟಿತು. ಆ ಪತ್ರಬಂದಾಗ ಅವನ ಹತ್ತಿರ ಮಹಮ್ಮದಲಿ ಇದ್ದನು. ಪತ್ರದಲ್ಲಿ ‘ಇಕಾ, ನಿನಗೊಂದು ಆಶ್ಚರ್ಯದ ಸುದ್ದಿ ! ನಾನು ನಿನಗೆ ಗೊತ್ತಿದ್ದವಳನ್ನೆ ಮದುವೆಯಾಗತಕ್ಕವನಿದ್ದೇನೆ. . . . ’ ಎಂದು ಬರೆದದ್ದನ್ನು ನೋಡಿ, ಮುಂದೇನು ಓದುವದು, ಗೊತ್ತೇ ಇದೆ, ಎಂದು ಮನಸ್ಸಿನಲ್ಲಿ ಗೊತ್ತುಮಾಡಿಕೊಂಡು

ಅದನ್ನು ಮುಹಮ್ಮದಲಿಯು ಕಡೆಗೆ ಒಗೆದನು. ಮುಂದೆಯೂ ಆವನಿಂದ ಒಂದ ಪತ್ರಗಳನ್ನೆಲ್ಲ ಇದೇ ಜಿಗುಪ್ಸೆಯಿಂದ ತೆರೆಯದೆಯೆ ನಾಶಮಾಡಿದನು. ಇದರಿಂದಲೆ ಅವನ ಮನಸ್ಸು ಫೀಲ್ಡಿಂಗನ ಬಗ್ಗೆ ಅಷ್ಟು ಕಲ್ಲಾಗಿತ್ತು.

ಕರ್ನಲ್ ಮ್ಯಾಗ್ಸರು ಸುತ್ತು ಮುತ್ತಿನ ಸಂಸ್ಥಾನಗಳಿಗೆಲ್ಲ ' ಪೊಲಿಟಿಕಲ್ ಏಜಂಟ 'ರು. ಮತ್ತು ಅಝೀಜನ ಹಿತಶತ್ರು. ಸಿ. ಆಯ್. ಡಿ. ಯವರು ಮೂರವಾರ ಪ್ರಕರಣವಾದ ಮೇಲೆ ಅಝೀಜನ ಮೇಲೆ ನಜರಿಟ್ಟಿದ್ದರು. ಅವನ ಮೇಲೆ ಕೆಲಸ ನಡಿಸುವಂತೇನೂ ಇಲ್ಲದಿದ್ದರೂ ಜೀವವಿರುವ ವರೆಗೆ ಅವನ ಮೇಲೆ ನಜರು ಇದ್ದೇ ಇರತಕ್ಕದ್ದು! ಇದು ಮಿಸ್ ಕ್ವೆಸ್ಟೆಡಾಳ ತಪ್ಪಿನ ಮಹಿಮೆ! ದುರ್ದೈವಿ ಹಿಂದೀ ಜನರು ಹೀಗೆಯೆ ಅವರ ಕಟಾಕ್ಷಕ್ಕೆ ಪಾತ್ರರಾಗುವರು! ಕರ್ನಲ್ ಮಾಗ್ಸರಿಗೆ ' ಒಬ್ಬ ನಜರಬಂದಿಯು ಮಾವು ಸಂಸ್ಥಾನಕ್ಕೆ ಬರುತ್ತಾನೆ ' ಎಂದು ವರದಿ ಬಂತು. ಅವನು ಅಲ್ಲಿಂದ ಆ ಮುದಿ ಅರಸನ ಹತ್ತಿರ ಹೋಗಿ ' ಮುಸಲ್ಮಾನ ಡಾಕ್ಟರನನ್ನು ನಿಮ್ಮ ಪವಿತ್ರ ದೇಹ ಮುಟ್ಟಲಿಕ್ಕೆ ಅಪ್ಪಣೆ ಕೊಡುವದು ವಿಹಿತವಲ್ಲ. ' ಎಂದು ಉಪದೇಶಿಸಿದನು. ಅದು ನಾಟಲಿಲ್ಲ. ' ಇಷ್ಟು ಕ್ಷುದ್ರ ದೃಷ್ಟಿಯು ನಮಗಿಲ್ಲ. ' ಎಂದು ಉತ್ತರ ಬಂತು. ಕರ್ನಲ್ ಮ್ಯಾಗ್ಸರು ನಿರ್ವಾಹವಿಲ್ಲದೆ ಡಾ. ಅಝೀಜನನ್ನೆ ನೇಮಿಸಿಕೊಳ್ಳುವದಕ್ಕೆ ಒಪ್ಪಬೇಕಾಯಿತು.

ಇಷ್ಟೆಲ್ಲ ಸಂಕಟಗಳೊಳಗಿಂದ ಅಝೀಜನ ಜೀವನ-ನೌಕೆಯು ಪಾರಾಗಿ ಈಗೇನೊ ಆಚೆಯ ದಂಡೆಯನ್ನು ಮುಟ್ಟಬಹುದೆಂಬ ಭರವಸೆಯಿಂದ ಶಾಂತವಾಗಿ ನಿಶ್ಚಲವಾಗಿ ಸಾಗಿತ್ತು. ಆದರೆ ಫೀಲ್ಡಿಂಗನ ಬರವಿನಿಂದ ಮತ್ತೆ ಬಿರುಗಾಳಿ ಬೀಸಿದಂತಾಗಿ ಅವನ ನೌಕೆಯು ಹೊಯ್ದಾಡಹತ್ತಿತು.

ಫೀಲ್ಡಿಂಗನ ಪತ್ರ ಪ್ರೊ. ಗೋಡಬೋಲೆಯವರ ವಿಳಾಸಕ್ಕೇ ಬಂದಿತ್ತು. ಅವರು ಅದನ್ನು ನೋಡಿಕೊಂಡು ' ಇದು ಆನಂದದ ಸುದ್ದಿಯಲ್ಲವೇ ಅಝೀಜ? ಅವರು ಸಪರಿವಾರ ಬಂದಿದ್ದಾರಂತೆ. ಆದರೆ ನನಗೆ ಈ ಹೊತ್ತು ಧಾರ್ಮಿಕ ಕೆಲಸಗಳಿದ್ದುದರಿಂದ ನಾನವರನ್ನು ಕಾಣಲಾರೆ. ನೀನೇ ಭೆಟ್ಟಿಯಾಗಬಹು ' ಎಂದು ಅದರ ಮಗ್ಗುಲಿಗೇ ಬರೆದು ಅಝೀಜನ ಮನೆಗೆ ಕಳಿಸಿ ಕೊಟ್ಟಿದ್ದರು. ಅಝೀಜನು ಆ ಪತ್ರವನ್ನು ನೋಡಿಕೊಂಡು ಅದನ್ನು ಕೂಡಲೆ ಹರಿದುಹಾಕಿದನು. ತನ್ನ ಮುಖವನ್ನು ಆ ವಿಶ್ವಾಸಘಾತಕಿ,

ಘೋರ ರಾಕ್ಷಸಿಗೆ ತೋರಿಸುವದು ಅವನಿಗೆ ಬೇಡಾಗಿತ್ತು. ಸಂಪೂರ್ಣ ವಾಗಿ ಅವರಿಂದ ಆದಷ್ಟು ದೂರ ಇರಬೇಕೆಂದು ಅವನು ನಿಶ್ಚಯಿಸಿದನು. ಆದರೆ ತಾನಾಗಿ ಅವರಲ್ಲಿಗೆ ಹೋಗದಿದ್ದರೂ ಅವರನ್ನು ಭೆಟ್ಟಿಯಾಗದಿರು ವದು ಮಾತ್ರ ಅವನಿಗೆ ಅಸಾಧ್ಯವಾಗಿ ತೋರಿತು. ಮಿಂಚು, ಗುಡುಗು, ಮಳೆ ಅವನ ಜೀವನಾಕಾಶದ ಪ್ರತಿಬಿಂಬವೆಂಬಂತೆ ಹೊರಗೂ ಜೋರಾಗಿ ನಡೆಯಿತು.

—

## ಪ್ರಕರಣ ೩೪

ಎಷ್ಟೋ ವರ್ಷಗಳ ಹಿಂದೆ ಒಬ್ಬ ತರುಣ ಮುಹಮ್ಮದೀಯ ಸಾಧುವು ಮಾವುದಲ್ಲಿ ಆಗಿಹೋದನು. ಅವನ ತಾಯಿಯು ಅವನಿಗೆ 'ಬಂದೀ ಜನರನ್ನು ಮುಕ್ತಮಾಡು'ಎಂದುಹೇಳಿದಳು. ಕೂಡಲೆ ಸಾಧುವು ಕೈಯಲ್ಲಿ ಕತ್ತಿಯನ್ನು ಹಿಡಿದುಕೊಂಡು ಕಿಲ್ಲೆಯ ಮೇಲೆ ಸಾಗಿಹೋಗಿ ಕೀಲಿಯನ್ನು ಮುರಿದು ಜೇಲಿನ ಬಾಗಿಲನ್ನು ತೆರೆದನು. ಕೈದಿಗಳೆಲ್ಲ ಹೊರಬಿದ್ದು ಬಂದು ಊರಲ್ಲಿ ಸೇರಿದರು. ಇದರಿಂದ ಪೋಲಿಸರಿಗೆ ಬಹಳ ಸಿಟ್ಟು ಬಂದು ಆ ತರುಣನ ರುಂಡವನ್ನೆ ಹಾರಿಸಿಬಿಟ್ಟರು. ರುಂಡ ಕೆಳಗೆ ಬಿದ್ದರೂ ಅದನ್ನು ಲಕ್ಷ್ಯಕ್ಕೆ ತಾರದೆ ಪೋಲಿಸರ ಬೆನ್ನುಹತ್ತಿ ಅವರನ್ನು ತುಂಡರಿಸಿ, ತನ್ನ ತಾಯಿಯ ಅಪ್ಪಣೆಯಂತೆ ಅವಳ ಮನೆಯ ಹತ್ತಿರವೆ ಬಂದು ಬಿದ್ದನು. ಆದುದರಿಂದ ಅವನಿಗೆ ಎರಡು ಗೋರಿಗಳಾದವು; ಒಂದು ರುಂಡಕ್ಕೆ, ಇನ್ನೊಂದು ಧಡಕ್ಕೆ. ಸಮೀಪದ ಮುಸಲ್ಮಾನರೂ ಹಿಂದೂ ಜನರೂ ಕೂಡಿಯೆ ಇವುಗಳಿಗೆ ನಡ ಕೊಳ್ಳುತ್ತಾರೆ. ಅವನ ಧಡದ ಗೋರಿಯು ಅಝೀಜನ ತೋಟದಲ್ಲಿಯೆ ಇತ್ತು. ಮತ್ತು ಪ್ರತಿವಾರವೂ ಅಲ್ಲಿ ದೀಪೋತ್ಸವವಾಗುತ್ತಿತ್ತು. ಅಝೀಜನು ಈ ಮೂರ್ತಿಪೂಜೆಯನ್ನು ನೋಡಿ ಖತಿಗೊಂಡನು.

ಗೋಕುಲಾಷ್ಟಮಿಯ ಮಹಾಪೂಜೆಯಾದ ಮೇಲೆ ಮುಂಜಾನೆ ಅಝೀಜನಿಗೆ ದವಾಖಾನೆಯ ಕೆಲಸ ಇದ್ದಿಲ್ಲ. ಆದುದರಿಂದ ಜಮೀಲೆ,

ಅಹಮ್ಮದ ಮತ್ತು ಕರೀಮ ಇವರನ್ನು ಸಂಗಡ ಕರೆದುಕೊಂಡು ಆ ರುಂಡದ ಗೋರಿಯನ್ನು ನೋಡಲಿಕ್ಕೆ ಹೊರಟನು.

ಒಂದು ಸಣ್ಣ ಎತ್ತರವಾದ ಅಷ್ಟಪ್ಪೈಲು ಮಾಟದ ಕಟ್ಟಡ. ಇದೇ ರುಂಡದ ಗೋರಿ. ಸುತ್ತಲೂ ಕಂಟಿಗಳು ಬೆಳೆದು ನಿಂತಿವೆ. ಮೇಲೆ ಚಪ್ಪರ ಇಲ್ಲ. ಬರಿ ಮರೆಯ ಸಲುವಾಗಿ ಗೋಡೆಗಳನ್ನು ಮಾತ್ರ ಕಟ್ಟಿದಂತಿತ್ತು. ಅದರೊಳಗೆ ಒಂದು ಗುಮ್ಮಟವು ಹುದುಗಿಕೊಂಡಿತ್ತು. ಅದರ ಕಿಂಡಿಗಳೊಳಗಿಂದ ನೋಡಿದರೆ ಒಳಗೆ ಒಂದು ಒಡಕ ಗೋರಿಯು ಬನಾತಿನಲ್ಲಿ ಮುಚ್ಚಿದ್ದು ಕಾಣುತ್ತಿತ್ತು. ಈ ಗೋಡೆಗಳ ಒಳಮೂಲೆಯಲ್ಲಿ ಜೇನಹುಟ್ಟುಗಳಿದ್ದವು. ಉದುರಿದೆಲೆಗಳು ಕೆಳಗೆ ಹಾಸಿದ್ದವು. ಅಹಮ್ಮದನು ಧೈರ್ಯದಿಂದ ಮುಂದೆ ಸಾಗಿದನು. ಅವನ ತಂಗಿಯೂ ಬೆನ್ನುಹತ್ತಿದಳು. ಆ ಗೋರಿಯನ್ನು ದಾಟಿದ ಮೇಲೆ ಅವರು ಒಂದು ಮಸೀದೆಗೆ ಹೋದರು. ಅಲ್ಲಿಂದ ಮುಂದೆ ಅವರು ಆ ನಿರ್ಜನವಾದ ಹಳೆಯ ಕಿಲ್ಲೆಯ ಮೇಲೆ ತಿರುಗಾಡಿ ಬರುವದಕ್ಕಾಗಿ ಹೊರಟರು. ಹಿಂದಿನ ರಾತ್ರಿ ದೊಡ್ಡ ಮಳೆಯಾಗಿದ್ದರಿಂದ ಎಲ್ಲ ಕಡೆಗೂ ನೀರುನೀರಾಗಿತ್ತು. ನದಿ ಇನ್ನೂ ತುಂಬಿ ಹರಿಯುತ್ತಿತ್ತು. ಟಪ್ಪಾಲನ್ನು ಇನ್ನೂ ತಂತಿಗಳ ಮೇಲಿಂದ ಹಗ್ಗಹಚ್ಚಿ ಎಳೆಯುತ್ತಿದ್ದರು. ಆ ನದಿಯಾಚೆಗೆ ಬಂಡೆಗಲ್ಲುಗಳು ಬಿಸಿಲಿಗೆ ಮಿಂಚುತ್ತಿದ್ದವು. ಅಲ್ಲಿ ಕೆಳಗೆ, ಸಣ್ಣ ರಾಣಿಯ ಮಹಾಲು ಇತ್ತು. ಅತಿಥಿಭವನದಾಚೆಗೆ ಮತ್ತೊಂದು ನೀರು-ಹಸಿರು ಬಣ್ಣದ ಗುಡ್ಡಗಳ ಗುಂಪು ಕಾಣುತ್ತಿದ್ದವು. ಅದೊಂದೇ ದಿಕ್ಕಿನಲ್ಲಿ ಸುಮಾರು ಎರಡು ನೂರರಕ್ಕಿಂತ ಹೆಚ್ಚು ದೇವರಿದ್ದರು. ಈಗ ಆ ದೇವರಲ್ಲಿ ಕೆಲವರು ಊಟದ ಹೊತ್ತಾದುದರಿಂದ ಅರಮನೆಯಲ್ಲಿದ್ದರು; ಉಳಿದವರು ಬಹಳ ದೊಡ್ಡವರಿದ್ದುದರಿಂದ ಅಥವಾ ಅಭಿಮಾನಿಗಳಿದ್ದುದರಿಂದ ತಾವು ಸ್ವತಃ ಹೋಗಲಿಕ್ಕೆ ಮರ್ಯಾದೆ ಸಾಲದೆ ತಮ್ಮ ಪ್ರತಿನಿಧಿಗಳನ್ನು ಕಳಿಸಿದ್ದರು.

ಅಹಮ್ಮದ ಮತ್ತು ಕರೀಮರು ತಮ್ಮ ಬಿಳಿ ಶರ್ಟುಗಳನ್ನು ಗಾಳಿಯಲ್ಲಿ ಫಟಫಟ ಹಾರಿಸುತ್ತ ಕಿಲ್ಲೆಯ ಮೇಲೆ ಆನಂದದಿಂದ ಚೀರುತ್ತ ಓಡಾಡುತ್ತಿದ್ದರು. ಅವರು ಲತೀಫನ ಹಾಸಿಗೆಯಲ್ಲಿ ಹಾಕುವದಕ್ಕಾಗಿ ಒಂದು ಕಪ್ಪೆಯನ್ನು ಹುಡುಕುತ್ತಿದ್ದರು. ಅಷ್ಟರಲ್ಲಿ ಅವರು ಒಂದು ಕೈದಿಗಳ ಸಾಲು ಅಲ್ಲಿ ಹಾಯ್ದುಹೋಗುತ್ತಿರುವದನ್ನು ನೋಡಿದರು. ಅವರ ಕಾವಲುಗಾರನು

ಇದ್ದುದರಲ್ಲಿಯೆ ಸುಶಿಕ್ಷಿತನಿದ್ದುದರಿಂದ ಅಯ್ಗೋಜನನ್ನು 'ಸರಕಾರದ ಪ್ರಕೃತಿ ಹೇಗಿದೆ?' ಎಂದು ಕೇಳಿದನು. ಅದಕ್ಕೆ ಅಯ್ಗೋಜನು 'ಸುಧಾರಿಸುತ್ತ ನಡೆದಿದೆ' ಎಂದು ಉತ್ತರ ಕೊಟ್ಟನು. ನಿಜವಾಗಿ ನೋಡಿದರೆ ಹಿಂದಿನ ರಾತ್ರಿಯ ಸಮಾರಂಭದ ಶ್ರಮದಿಂದ ರಾಜನು ಸತ್ತೇ ಹೋಗಿದ್ದನು. ಆದರೆ ಉತ್ಸವದ ಉತ್ಸಾಹವನ್ನು ಕುಂದಿಸಬಾರದೆಂದು ಅದನ್ನು ಮುಚ್ಚಿಟ್ಟಿದ್ದರು. ಹಿಂದೂ ವೈದ್ಯ, ಪ್ರಾಯ್‌ವ್ಹೆಟ್ ಸೆಕ್ರೆಟರಿ, ಒಬ್ಬ ವಿಶ್ವಾಸದ ಸೇವಕ ಇವರಿಷ್ಟು ಜನ ಆ ಶವದ ಹತ್ತಿರ ಇದ್ದರು. ಅಯ್ಗೋಜನನ್ನು ಜನರಲ್ಲಿ ಓಡಾಡಿ ಅವರನ್ನು ತಪ್ಪು ಹಾದಿಗೆ ಒಯ್ಯಲಿಕ್ಕೆ ಬಿಟ್ಟಿದ್ದರು.

ಇದೇ ಹೊತ್ತಿಗೆ ಕೆಳಗೆ ಎರಡು ಸಾಹೇಬರ ಟೊಪ್ಪಿಗೆಗಳು ಮೇಲೇರಿ ಬರುತ್ತಿರುವದು ಅವರಿಗೆ ಕಂಡಿತು. 'ಕಲ್ಲು ಒಗೆಯಲೇನು?' ಎಂದು ಕರೀಮನು ಅವರನ್ನು ನೋಡಿ ಕೇಳಿದನು.

'ಅವರ ಊಟದ ತಟ್ಟೆಯಲ್ಲಿ ಗಾಜಿನ ಪುಡಿ ಹಾಕಲೇನು?' ಇನ್ನೊಬ್ಬನೆಂದ.

'ಅಹಮ್ಮದ! ಇಂಥ ಕೆಟ್ಟ ಕೆಲಸಗಳನ್ನು ಮಾಡಲಿಕ್ಕೇ ಇಲ್ಲಿ ಬಂದಿರುವಿರಾ?' ಎಂದು ಅಯ್ಗೋಜನು ಗದ್ದರಿಸಿದನು.

ಆ ಟೋಪಿಗಳು ಅಷ್ಟಪೈಲು ಮಾಟದ ಕಟ್ಟಡವನ್ನು ಹೊಕ್ಕವು; ಆದರೆ ಜೇನ್ನೊಣಗಳು ಬೆನ್ನುಹತ್ತಿದ್ದರಿಂದ ಒಮ್ಮೆಲೆ ಅಲ್ಲಿಂದ ಹೊರಬಿದ್ದು ಅತ್ತಿತ್ತ ತಲೆ ತಲೆ ಒಡಕೊಳ್ಳುತ್ತ ಓಡಾಡಹತ್ತಿದರು. ಹುಡುಗರು ಇದನ್ನು ನೋಡಿ ಅವರನ್ನು ಮತ್ತಿಷ್ಟು ಸುಮಾರು ಮಾಡಬೇಕೆಂದು ಕೂಗಾಡಹತ್ತಿದರು. ಅದೇ ಹೊತ್ತಿಗೆ ಧೋ ಧೋ ಎಂದು ಮಳೆಯೂ ಸುರಿಯಹತ್ತಿತು. ಅಯ್ಗೋಜನು ಮನಸ್ಸಿಲ್ಲದಿದ್ದರೂ ಔಪಚಾರಕ್ಕಾಗಿ 'ನಿಮಗೇನಾದರೂ ಸಹಾಯ ಮಾಡಬಹುದೇ?' ಎಂದು ಕೇಳಿದನು.

ಭಾವಮೈದುನನು 'ಜೇನ್ನೊಣಗಳು ಬೆನ್ನುಹತ್ತಿವೆ!' ಎಂದು ಗಟ್ಟಿಯಾಗಿ ಕೂಗಿ ಹೇಳಿದನು.

'ಹಾಗಾದರೆ ನೀರಿನಲ್ಲಿ ಹಾರಿರಿ. ಇತ್ತ ಬರಬೇಡಿರಿ.... ಎಲ್ಲರಿಗೂ ಬೆನ್ನುಹತ್ತುವವು....ಅವುಗಳನ್ನು ತಡೆಯುವದು ನನಗೂ ಸಾಧ್ಯವಿಲ್ಲ.. ಅವು ಸರಕಾರದ ನೊಣಗಳು....ಬೇಕಾದರೆ ಮಹಾರಾಜರೆದುರಿಗೇ ಅವು

ಗಳ ನಡತೆಯ ಬಗ್ಗೆ ನೀವು ದೂರು ಹೇಳಬಹುದು....' ಎಂದು ಚರ್ಚೆ ಯಾಡಿದನು.

'ಏನು! ಅಬ್ಝೀಜ! ಬಹಳ ದಿವಸಗಳಾದ ಮೇಲೆ ಭೆಟ್ಟಿಯಾಯಿತು, ಬಾ. ನೀನು ಹೇಗೆ ಇಲ್ಲಿ ಬಂದಿ?' ಎಂದು ಫೀಲ್ಡಿಂಗನು ಅವನನ್ನು ಕರೆದನು.

'ಇಲ್ಲ, ಇಲ್ಲ. ಬೇಕಾದರೆ, ಅತಿಥಿಭವನಕ್ಕೇ ಗಾಯಕ್ಕೆ ಹಚ್ಚುವ ಎಣ್ಣೆ ಕಳಿಸುತ್ತೇನೆ. ನೀವು ಅಲ್ಲೇ ಇರುವಿರಷ್ಟೇ?'

'ಅಬ್ಝೀಜ, ನನ್ನ ಪತ್ರಗಳಿಗೆ ಉತ್ತರವನ್ನೇಕೆ ಬರೆಯಲಿಲ್ಲ?' ಎಂದು ನೇರವಾಗಿ ಕೇಳಿದನು. ಆದರೆ ಮಳೆಯ ಸಪ್ಪಳದಲ್ಲಿ ಅದು ಅಬ್ಝೀಜನ ವರೆಗೆ ಹೋಗಿ ಮುಟ್ಟಲಿಲ್ಲ. ಅವನ ಸಂಗಡಿಗನು ತನ್ನ ಟೋಪಿಯ ಮೇಲೆ ಬೀಳು ತ್ತಿರುವ ಹನಿಗಳ ಟಪಟಪ ಸಪ್ಪಳಕ್ಕೆ ಜೇನ್ನೊಣಗಳು ಮುತ್ತಿ ತನ್ನನ್ನು ಮುತ್ತಿದವೆಂದು ಗಾಬರಿಯಾಗಿ ಕೂಗಿಕೊಂಡನು. ಫೀಲ್ಡಿಂಗನು ಅವನ ಕೂಗಾಟವನ್ನು ನಿಲ್ಲಿಸಿ 'ನಮ್ಮ ಗಾಡಿ ನಿಂತಲ್ಲಿಗೆ ಹೋಗಲು ಒಳದಾರಿ ಏನಾ ದರೂ ಇದೆಯೇನು? ನಮಗಿನ್ನು ತಿರುಗಾಡುವದು ಸಾಕಾಗಿದೆ. ಈ ಮಳೆ ಯೇನು ಬಿಡುವ ಲಕ್ಷಣ ತೋರುವದಿಲ್ಲ' ಎಂದು ಅಬ್ಝೀಜನಿಗೆ ಕೇಳಿದನು.

'ಉಂಟು; ಅತ್ತಕಡೆಗೆ....ಕೆಳಗೆ....ಹುಂ....'

'ನೀನೂ ಕೆಳಗೆ ಬರುವದಿಲ್ಲವೇ?'

ಅಬ್ಝೀಜನು ತಾನು ಬರುವದಕ್ಕೆ ಮನಸ್ಸಿಲ್ಲ ಎಂಬುದನ್ನು ತೋರಿಸು ವದಕ್ಕಾಗಿ ಚೇಷ್ಟೆಯಿಂದ ಒಂದು ಸಲಾಮ್ ಹೊಡೆದರೂ ಕೊನೆಗೆ ಕೆಳ ಗಿಳಿದು ಬಂದನು. ಎಲ್ಲರೂ ಕೂಡಿ ಬಂದ ದಾರಿಯಿಂದ ಹಿಂತಿರುಗಿ ಇಳಿಯ ಹತ್ತಿದರು.

'ಅದಿರಲಿ; ಈಗ ಹೇಗಿರುವೆ ಅಬ್ಝೀಜ?' ಎಂದು ಕೇಳಿದನು.

'ನಾನಿರುವಂತೆಯೆ ಇದ್ದೇನೆ.'

'ಇಲ್ಲೇನಾದರೂ ಹೆಚ್ಚಿಗೆ ಗಳಿಸಲಿಕ್ಕೆ ಹತ್ತಿರುವೆಯಾ?'

'ನೀನೆಷ್ಟು ಗಳಿಸಿರುವಿ?'

'ಈಗ ಅತಿಥಿಭವನ ಯಾರ ಕೈಯಲ್ಲಿದೆ?'

'ಬಹುಶಃ ಸರಕಾರದ ಪ್ರಾಯವ್ಹೇಟ್ ಸೆಕ್ರೆಟರಿಯವರ ಕೈಯಲ್ಲಿಯೆ ಇರಬಹುದು.'

'ಅವನೆಲ್ಲಿರುವನು ?'

'ನನಗೆ ಗೊತ್ತಿಲ್ಲ.'

'ನಾವಿಲ್ಲಿಗೆ ಬಂದ ಮೇಲೆ ಒಂದು ಪಿಳ್ಳೆಯೂ ನಮ್ಮ ಸಮೀಪಕ್ಕೆ ಹಾದಿಲ್ಲ! ಏನಿದು ?'

'ನಿಜವಾಗಿ ?'

'ಹೌದು. ನಾನು ಮೊದಲೇ ದರ್ಬಾರಕ್ಕೆ ಬರೆದು, ಸನ್ನಿಧಿಯನ್ನು ಕಾಣಬಹುದೇನೆಂದು ಕೇಳಿದ್ದೆನು. ಶಕ್ಯವಿದೆಯೆಂದು ಅವರಿಂದ ಉತ್ತರ ಬಂದ ಮೇಲೆ ನನ್ನ ಪ್ರವಾಸವನ್ನು ನಿರ್ಣಯಿಸಿದೆನು. ಆದರೆ ಈ ಅತಿಥಿಭವನದ ನೌಕರರಿಗೆ ಏನೂ ತಿಳಿಸಿಟ್ಟಂತೆ ಕಾಣುವದಿಲ್ಲ; ತತ್ತಿಗಳಿಲ್ಲ; ಏನೂ ಇಲ್ಲ. ನನ್ನ ಹೆಂಡತಿಗೆ ಬೋಟಿನಲ್ಲಿ ಕುಳಿತುಕೊಂಡು ತಿರುಗಾಡಿ ಬರಬೇಕಾಗಿದೆ. ಅದರ ವ್ಯವಸ್ಥೆಯೇನೊ ತಿಳಿಯದಾಗಿದೆ.'

'ಹೋಗಬಹುದು; ಎರಡು ಬೋಟುಗಳಿವೆಯಲ್ಲ!'

'ಹೌದು; ಆದರೆ ಅವರಲ್ಲಿ ಹುಟ್ಟುಗಳೇ ಇದ್ದಿಲ್ಲ!'

'ಓ! ಹೌದು, ಮೊನ್ನೆ ಕರ್ನಲ್ ವ್ಯಾಗ್ನರು ಬಂದಾಗ ಅವನ್ನು ಮುರಿದರು.'

'ನಾಲ್ಕೂ ?'

'ಆಸಾಮಿಯನ್ನು ನೋಡಿದ್ದರೆ ಗೊತ್ತಾಗುತ್ತಿತ್ತು.'

'ಆಗಲಿ, ಮುಗಿಲಂತೂ ತಿಳಿಯಾಗಲಿ. ಅಲ್ಲಿಂದ ಬೋಟಿನಲ್ಲಿ ಕುಳಿತು ಕೊಂಡೇ ನಿಮ್ಮ ಆ ದೀವಟಿಗೆಯ ಮೆರವಣಿಗೆಯನ್ನು ನೋಡೋಣ ಇದನ್ನು ನಾನು ಮೊದಲೇ ಗೋಡಬೊಲೆಯವರಿಗೆ ಬರೆದು ತಿಳಿಸಿದ್ದೆ; ಅವರು ಅದನ್ನು ಲಕ್ಷಕ್ಕೇ ತಂದಂತೆ ಕಾಣುವದಿಲ್ಲ! ಇದೇನು ಸತ್ತವರ ಸ್ಥಳವೇನು ಮತ್ತೆ ?'

'ನಿಮ್ಮ ಪತ್ರ ಆ ಮಂತ್ರಿಗಳಿಗೆ ಮುಟ್ಟಿರಲಿಕ್ಕೇ ಇಲ್ಲ ?'

'ಇಲ್ಲಿಯ ಗುಟ್ಟೇನಿದೆಯೊ ಏನೋ ನನಗೆ ಹೇಗೆ ಗೊತ್ತಾಗಬೇಕು ? ಮುದಕಲ್‌ದಲ್ಲಿ ನಮಗೆ ಬಹಳ ಚೆನ್ನಾದ ವ್ಯವಸ್ಥೆ ಇತ್ತು. ಸ್ವತಃ ಮಹಾ ರಾಜರೂ ಮಹಾರಾಣಿಯವರೂ ಬಂದು ನಮ್ಮನ್ನಾದರಿಸಿದರು. ಎಲ್ಲವನ್ನೂ ನಮಗೆ ತೋರಿಸಿದರು.

'ನೀವು ಅವರನ್ನು ಬಿಟ್ಟೇ ಬರತಕ್ಕದ್ದಿದ್ದಿಲ್ಲ ಹಾಗಾದರೆ ?'

ಇಷ್ಟೊತ್ತಿಗೆ ಅವರು ಗಾಡಿ ನಿಂತಲ್ಲಿಗೆ ಬಂದಿದ್ದರು. ಫೀಲ್ಡಿಂಗನು 'ರಾಲ್ಫ, ಒಳಗೆ ಜಿಗಿ.' ಎಂದು ಹೇಳಿದನು.

'ಮಿಸ್ಟರ ಕ್ವೆಸ್ಟೆಡ್ ಮತ್ತು ಫೀಲ್ಡಿಂಗ್, ನೀವೂ ಒಳಗೆ ಜಿಗಿಯಿರಿ.' ಎಂದು ಅಝೀಜನು ಉಳಿದವರಿಗೆಂದನು.

'ಅವರಾರಯ್ಯಾ ಕ್ವೆಸ್ಟೆಡ್‌ರು ?'

'ಆ ಪ್ರಸಿದ್ಧ ಹೆಸರನ್ನು ನಾನು ಮರೆಯಬಹುದೇ ? ನಿನ್ನ ಹೆಂಡತಿಯ ತಮ್ಮನಲ್ಲವೇ ಇವರು ?'

'ನಾನು ಯಾರನ್ನು ಮದುವೆಯಾಗಿರುವೆನೆಂದು ತಿಳಿದಿರುವಿರಿ ?'

'ನಾನು ರಾಲ್ಫ ಮೂರನ್ರೀ.' ಎಂದು ಆ ಹುಡುಗನು ನಾಚುತ್ತ ನುಡಿದನು.

ಆಗ ಮತ್ತೊಂದು ಸರುವು ಮಳೆ ಹೊಡೆಯಿತು. ಸುತ್ತಲೂ ಮಂಜು ಮುಸುಕಿದಂತಾಯಿತು. ಅಝೀಜನು ಹಿಂದಕ್ಕೆ ಸರಿಯಬೇಕೆಂದನು; ಅಷ್ಟರಲ್ಲಿ ಫೀಲ್ಡಿಂಗನು 'ಕ್ವೆಸ್ಟೆಡ್ ? ಕ್ವೆಸ್ಟೆಡ್ ? ನನ್ನ ಹೆಂಡತಿಯು ಮಿಸೆಸ್ ಮೂರರ ಮಗಳೆಂದು ನಿನಗೆ ಗೊತ್ತಿಲ್ಲವೆ ?' ಎಂದು ಕೇಳಿಯೇ ಬಿಟ್ಟನು.

ಅಝೀಜನು ನಡುಗಿದನು; ಅವನ ಮುಖವು ಒಮ್ಮೆಲೆ ಬಾಡಿತು.

'ಈ ಕಲ್ಪನೆಯಿಂದ ನೀನು ಹೀಗೆ ಮಾಡಿದೆಯೇನು?' ಎಂದು ಫೀಲ್ಡಿಂಗನು ಕೇಳಿದನು.

'ನಾನೇನು ಮಾಡಿದೆ ಹೇಳು ?'

'ನನಗೆ ಆ ಮಹಮುದಲಿಯ ಕಡೆಯಿಂದ ಅಸಂಬದ್ಧ ಪತ್ರ ಬರೆಯಿಸಿದಿ.'

'ಆ ಮಾತಿನಿಂದ ಈಗೇನೂ ಪ್ರಯೋಜನವಿಲ್ಲೆಂದು ನನಗೆನಿಸುತ್ತಿದೆ.'

'ಅಝೀಜ ! ನೀನಿಂಥ ತಪ್ಪನ್ನು ಮಾಡಿದೆಯಾದರೂ ಹೇಗೆ ? ನಾನೂ ಹತ್ತು, ಹನ್ನೆರಡು ಸಲ ನನ್ನ ಹೆಂಡತಿಯ ಹೆಸರನ್ನು ಹಾಕಿ ಪತ್ರ ಬರೆದಿದ್ದೇನೆ. ಅಂದರೂ ನೀನು ಮಿಸ್ ಕ್ವೆಸ್ಟೆಡ್ !.... ಏನು ನಿನ್ನ ಕಲ್ಪನೆ !...... ಅಝೀಜ, ನಾವಿಬ್ಬರೂ ಚರ್ಚಿಸಿ ಈ ತಪ್ಪುತಿಳಿವಳಿಕೆಯನ್ನು ದೂರಮಾಡಿಕೊಳ್ಳಬೇಕು.... ನನಗನಿಸುವದು, ಇದು ಮಹಮ್ಮದಲಿಯ ಕುತಂತ್ರವಿರಬೇಕೆಂದು.. ನಾನು ಮಿಸೆಸ್ ಮೂರರ ಮಗಳನ್ನು ಮದುವೆಯಾಗಿದ್ದೇನೆಂದು ಅವನಿಗೆ ಸ್ಪಷ್ಟವಾಗಿ ಗೊತ್ತಿದೆ... ಆದರೂ....'

ಅರ್ಥೀಜನಿಗೆ ಸಿಟ್ಟು ತಡೆಯದಾಯಿತು. 'ನಿಮ್ಮೆಲ್ಲರಿಗೂ ಒಂದು ದೊಡ್ಡ ನಮಸ್ಕಾರ! ನೀನು ಯಾರನ್ನು ಮದುವೆಯಾದದ್ದು ತೆಗೆದುಕೊಂಡು ನಾನೇನು ಮಾಡಬೇಕಾಗಿದೆ? ದಯವಿಟ್ಟು ಇಲ್ಲಿಯೂ ಒಂದು ಮತ್ತೆ ನನಗೆ ತೊಂದರೆ ಕೊಡಬೇಡಿರೆಂದು ಬೇಡಿಕೊಳ್ಳುತ್ತೇನೆ; ನಾನು ಮೂರ್ಖ ತನ ಮಾಡಿದೆ, ಒಪ್ಪಿಕೊಳ್ಳುತ್ತೇನೆ.. ಇನ್ನು ನಿಮ್ಮ ಸೋಬತಿ ಸಾಕು.. ನೀನು ಬೇಕಾದಷ್ಟು ನನ್ನನ್ನು ಬೈಯ್ಯಬಹುದು....ನನಗನಿಸಿದ್ದು ಇಷ್ಟು: ನೀನು ನನ್ನ ವೈರಿಯನ್ನು ಮದುವೆಯಾದೆ; ನೀನು ನನ್ನ ಹಣವನ್ನು ಕದ್ದಿ, ಎಂದು; ಆದರೆ......' ಎಂದು ಅವನು ಎರಡೂ ಕೈಗಳನ್ನು ಚಪ್ಪಳಿಕ್ಕಿ 'ಇನ್ನು ಮುಂದೆ ನನ್ನ ಅಂತಃಕರಣವು ನನ್ನ ಜನರ ನಲುವಾಗಿ.' ಎಂದು ನುಡಿದು ತಿರುಗಿ ಹೊರಟನು. ನಿರಿಲ್ಲನೂ ಕ್ಷಮೆ ಬೇಡುತ್ತ, ದೇಶಾವರಿ ನಗೆ ನಗುತ್ತ, ಅವನೊಡನೆ ಮತ್ತೆ ಚರ್ಚಿಸಿ ಸರಿಮಾಡಬೇಕೆಂದು, ಅವನಿಗೆ ತಾನು ಹೆನ್ಲೊಪನ ತಂಗಿಯನ್ನು ಮದುವೆಯಾಗಿರುವೆನೆಂದೂ ಅವನು ತಿಳಿದುಕೊಂಡವಳನ್ನಲ್ಲವೆಂದೂ ಸಪ್ರಮಾಣವಾಗಿ ಸಿದ್ಧಮಾಡುವದಕ್ಕಾಗಿ ಅವನ ಬೆನ್ನು ಹತ್ತಿ ಕೆಸರಲ್ಲಿ ನಡೆದನು. ಆದರೆ ಅರ್ಥೀಜನು ಅವನ ಕಡೆಗೆ ತಿರುಗಿ ಸಹ ನೋಡದೆ 'ನೀವು ಯಾರನ್ನಾದರೂ ಮದುವೆಯಾಗಿರಿ. ನಮ್ಮ ಬೆನ್ನು ಮಾತ್ರ ಹತ್ತಿ ಬರಬೇಡಿರಿ. ನಿಮ್ಮ ಜನರ ಗೆಳೆತನ ಮಾಡಬಾರದೆ ಮಾಡಿ ನನಗೆ ಸಾಕು ಬೇಕಾಯಿತು.' ಎಂದು ತನ್ನ ಮಕ್ಕಳೊಡನೆ ಹಾಗೆಯೆ ಮುಂದೆ ಸಾಗಿದನು. ಫೀಲ್ಡಿಂಗನೂ ಹೆಚ್ಚು ತಡವಲು ಇದು ಹೊತ್ತಲ್ಲವೆಂದು ತಿಳಿದುಕೊಂಡು ನಿರ್ವಾಹವಿಲ್ಲದೆ ಹಿಂತಿರುಗಿದನು.



## ಪ್ರಕರಣ ೪೫

ಅರಮನೆಯಲ್ಲಿ ಒಂದೇ ಸಮನೆ ಊದುವ-ಬಾರಿಸುವ ಸಪ್ಪಳವು ಇನ್ನೂ ನಡದೇ ಇತ್ತು. ಅರ್ಥೀಜನು ಜೇನ್ನೊಣ ಕಡಿದವರಿಗೆ ಔಷಧ ಕೊಡಬೇಕೆಂದು ಅತಿಥಿಭವನದ ಕಡೆಗೆ ಕುದುರೆ ಹತ್ತಿ ಹೊರಟಿದ್ದವನು ಅರ ಮನೆಯ ಹತ್ತಿರ ಹಾಯ್ದು ಹೋಗುವಾಗ ಮೆರವಣಿಗೆಯಿನ್ನೂ ಕೂಡುತ್ತಿ

ರುವದನ್ನು ನೋಡಿದನು. ಸಣ್ಣ ಪುಟ್ಟ ದೇವತೆಗಳನ್ನು ಪಲ್ಲಕ್ಕಿಯಲ್ಲಿ ತುಂಬುತ್ತಿದ್ದರು. ಪಲ್ಲಕ್ಕಿಯ ಮುಂದಿನ ತೋಳಿಗೆ ಬೆಳ್ಳಿಯ ಸಿಂಹದ ಮುಖವಿತ್ತು; ಮಹಾದ್ವಾರವು ಅರ್ಧ ತೆರೆದಿದ್ದರಿಂದ ಅದು ಹೊರಗಿನಿಂದಲೆ ಕಾಣುತ್ತಿತ್ತು. ಜನರು ಅದರ ಸುತ್ತಲು ನುತ್ತಿದ್ದರು. ಅಯ್ಯೀಜನು ಇಷ್ಟು ನೋಡಿದ್ದೇ ಸಾಕು ಎಂದು ತನ್ನ ದೃಷ್ಟಿಯನ್ನು ಬೇರೆ ಕಡೆಗೆ ಹೊರಳಿಸಿ ನೋಡಿದರೆ ಎದುರಿಗೇ ಶಿಕ್ಷಣಮಂತ್ರಿಗಳು! ಇನ್ನು ಸ್ವಲ್ಪ ಆಗಿದ್ದರೆ ಅಯ್ಯೀಜನು ಅವರನ್ನು ಹಾಯತಕ್ಕವನೆ; ಅಷ್ಟರಲ್ಲಿ 'ಏ! ತಡೆ, ತಡೆ! ಮುಟ್ಟಿದರೆ ಮತ್ತೆ ತಡವಾಗುತ್ತದೆ' ಎಂದು ಅವರು ಕೂಗಿಕೊಂಡದ್ದರಿಂದಲೆ ಅವನು ಸ್ವಲ್ಪ ಸಾವರಿಸಿಕೊಂಡು ನಿಂತಲ್ಲಿಯೆ ನಿಂತನು. ಮತ್ತು 'ಕ್ಷಮಿಸಿರಿ' ಎಂದು ಬೇಡಿಕೊಂಡನು. ಮಂತ್ರಿಗಳಿಗೆ ಆಗ ಗೊತ್ತಾಯಿತು ಇವನು ಅಯ್ಯೀಜನೆಂದು. ಕೂಡಲೆ ನಕ್ಕರು; ಅಲ್ಲಿಂದ ಒಮ್ಮೆಲೆ ಅತಿಥಿಭವನದ ಮಾತನ್ನೇ ಎತ್ತಿದರು. ಮತ್ತು ಅದರಲ್ಲಿಯೂ ಮದುವೆಯ ವಿಷಯವೇ ಮೊದಲು ಬಂತು. ಆಗ ಮಂತ್ರಿಗಳು 'ಛೇ; ಅಲ್ಲ, ಅಲ್ಲ. ಅವನು ಹನ್ನೊಪನ ತಂಗಿಯನ್ನು ಮದುವೆಯಾಗಿದ್ದಾನೆ. ಅದು ನನಗೆ ಗೊತ್ತಾಗಿ ವರ್ಷದ ಮೇಲಾಯಿತು.' ಎಂದು ನಿರ್ವಿಕಾರವಾಗಿ ಹೇಳಿದರು.

'ಹಾಗಿದ್ದರೆ ಇದನ್ನು ನೀವು ಇಷ್ಟು ದಿನ ಯಾಕೆ ಹೇಳಲಿಲ್ಲ? ನೀವು ಸುಮ್ಮನಿದ್ದುದರಿಂದಲೆ ನಾನು ಗೊಂದಲದಲ್ಲಿ ಬಿದ್ದೆ.' ಅಯ್ಯೀಜನೆಂದನು.

ಮಂತ್ರಿಗಳಾದ ಗೋಡಬೊಲೆಯವರು ಎಂದೂ ಯಾರಿಗೂ ಏನೂ ಹೇಳಿದವರಲ್ಲ. ಅವನ ಮಾತಿಗೆ ಬರಿ ಹುಸಿನಗೆ ನಕ್ಕು ಮುಂದೆ ಸಾಗಿದರು.

ಅಯ್ಯೀಜನು ಪೆಚ್ಚಾಗಿ ಏನೂ ತಿಳಿಯದೆ ಗದ್ದಲವು ಹೆಚ್ಚಾದ್ದರಿಂದ ಸಮೀಪದ ಸಂದಿಯಲ್ಲಿ ಕುದುರೆಯನ್ನು ತಿರುವಿದನು. ಅಲ್ಲಿಯೂ ಎದುರಿಗೆ ಅಂಗಳ ಉಡುಗುವ ಹೊಲೆಯರ ತಂಡವೊಂದು ಜಯಶಾಲಿಯಾದ ಸೈನ್ಯದ ಠೀವಿಯಿಂದ, ತಮ್ಮ ದಂಧೆಯ ಚಿನ್ಹಗಳಾದ ಬುಟ್ಟಿ ಕಸಬರಿಗೆಗಳನ್ನು ಮೇಲಕ್ಕೆತ್ತಿಕೊಂಡು, ಹಲಿಗೆ ಬಾರಿಸುತ್ತ, ಕೇಕೆಹಾಕುತ್ತ, ನೇರವಾಗಿ ಬಂದರು. ಉಳಿದ ವಾದ್ಯಗಳೆಲ್ಲ ಈಗ ಬಂದಾದವು. ಉತ್ಸವ ಸಮಾರಂಭದಲ್ಲಿ ಅದು ಹೊಲೆಯರಿಗಾಗಿ ಕಾಯ್ದಿಟ್ಟ ಹೊತ್ತು. ಈ ಹೊಲಸು ಹೊಲೆಯರು ಬಾರಿಸದ ಹೊರತು ದೇವರು ಹೊರಬೀಳಲಾರನು! ಒಂದು ಕ್ಷಣಕಾಲ ಆ

ದೃಶ್ಯವು ಒಳ್ಳೆ ಮನೋಹರವಾಗಿತ್ತು. ಮಹಾದ್ವಾರವು ಸಂಪೂರ್ಣವಾಗಿ ತೆರೆಯಲು ಒಳಗಿನ ದರ್ಬಾರವೆಲ್ಲ ದೃಗ್ಗೋಚರವಾಯಿತು. ಎಲ್ಲರೂ ಬರಿಗಾಲು, ಬರಿನೆತ್ತಿ, ಬಿಳಿವಸ್ತ್ರ; ಮಧ್ಯದಲ್ಲಿ ದೇವರ ಪಲ್ಲಕ್ಕಿ. ಅದರ ಮೇಲೆ ಜರದ ಪೀತಾಂಬರ ಹೊದಿಸಿದ್ದಾರೆ; ಎರಡು ಮಗ್ಗಲುಗಳಿಂದ ಚವರ ಬೀಸುತ್ತಿದ್ದಾರೆ; ಕೆಂಪುಬಣ್ಣದ ಅಪ್ತಾಗಿರಿಗಳನ್ನು ಎತ್ತಿಹಿಡಿದಿದ್ದಾರೆ; ಪಲ್ಲಕ್ಕಿಯಲ್ಲಿಯ ಪ್ರತಿಮೆಯು ಹೂಮಾಲೆಗಳಲ್ಲಿ ಮುಚ್ಚಿಹೋಗಿದೆ. ಭೋಯಿಗಳು ಅದನ್ನು ಹೊತ್ತ ಕೂಡಲೆ ವರ್ಷಾಕಾಲದ ಸೂರ್ಯನು ಮನೋಹರವಾಗಿ ಪ್ರಕಾಶಿಸಿದನು; ಅದರಿಂದ ಅರಮನೆಯ ಗೋಡೆಯ ಮೇಲಿದ್ದ ಹಳದಿಯ ಬಣ್ಣದ ಹುಲಿಗಳು ಜಿಗಿದೆದ್ದು ಬರುವಂತೆ ಕಂಡವು.

ಪಲ್ಲಕ್ಕಿಯು ಮುಂದೆ ಸಾಗಿತು. ಓಣಿ ಹಿಡಿಸಲಾರದೆ ಅರಮನೆಯ ಆನೆಗಳೂ ಬರಿ ಅಂಬಾರಿಗಳನ್ನು ಹೊತ್ತುಕೊಂಡು ಮುಂದೆ ಮುಂದೆ ಸಾಗಿದವ.

ಅಯ್ಥೀಜನು ಹೆಚ್ಚು ಹೊತ್ತು ಅಲ್ಲಿ ನಿಲ್ಲದೆ ಮುಂದೆ ಹೊರಟು ಊರೊಳಗಿಂದ ಹೊರಬಿದ್ದು ಕಾಡಿನಲ್ಲಿದ್ದ ದೊಡ್ಡ ಬಂಡೆಗಲ್ಲುಗಳ ಸಮೀಪಕ್ಕೆ ಬಂದೊಡನೆ ಕುದುರೆಯ ಲಗಾಮನ್ನು ಜಗ್ಗಿ ನಿಲ್ಲಿಸಿ, ಮಾವು ಕೆರೆಯು ದೂರದ ವರೆಗೆ ಹೇಗೆ ಹಬ್ಬಿರುತ್ತದೆಂಬುದನ್ನು ನೋಡಿದನು. ಸಂಜೆಯ ಬಣ್ಣಬಣ್ಣದ ಮೋಡಗಳು ಅದರಲ್ಲಿ ಪ್ರತಿಬಿಂಬಿತವಾಗಿದ್ದುದರಿಂದ ಪಾತಾಳಕ್ಕೂ ಒಂದು ಸೊಬಗು, ಕಾಂತಿ ಒಂದಿತ್ತು. ಅಲ್ಲಿ ಭೂಮಿ ಆಕಾಶಗಳೆರಡೂ ಒಂದರ ಕಡೆಗೊಂದು ಬಾಗಿ ಮುತ್ತಿಡುವಂತೆ ಕಂಡವು. ಅಯ್ಥೀಜನು ಅದನ್ನು ನೋಡುವ ತನಕ ನೋಡಿ ಮಂಗನ ಕುತೂಹಲದಿಂದ ಅದರಲ್ಲಿ ಉಗುಳಿದನು. ಎಲ್ಲವೂ ಕ್ಷಣಹೊತ್ತು ನಡುಗಿ ಆ ಚಮಕಿಸುವ ನೀರಿನಲ್ಲಿ ಮಾಯವಾಯಿತು. ಅದೇ ಹೊತ್ತಿಗೆ ಒಂದು ಕಪ್ಪು ಪದಾರ್ಥವೇನೊ ಮುಂದೆ ಸಾಗಿದಂತೆ ಅವನಿಗೆ ಕಂಡಿತು. ದಿಟ್ಟಿಸಿ ನೋಡಲಾಗಿ ಅತಿಥಿಭವನದ ಡೋಣಿಯೆಂದು ಗೊತ್ತಾಯಿತು. ಕೂಡಲೆ ಮತ್ತೆ ಇಂಗ್ಲಿಷರ ಮೇಲಿದ್ದ ಅವನ ರೊಚ್ಚು ಮರಕಳಿಸಿತು. 'ಇವರು ಹಿಂದುಸ್ತಾನವನ್ನು ನೋಡುವವರ ವೇಷದಿಂದಲೇ ಬಂದು ಅದನ್ನು ಆಳುತ್ತಿದ್ದಾರೆ; ಇವರಲ್ಲಿ ನಿಜವಾದ ಸಹಾನುಭೂತಿ ಇಲ್ಲ' ಎಂದುಕೊಂಡು ಅವನು ಹಾಗೆ ಮುಂದೆ

ಸಾಗಿದನು. ಕೆರೆಯ ದಂಡೆಗುಂಟಿದ್ದ ರಾಜರ ಗೋರಿಗಳ ಸಮೀಪದಲ್ಲಿ ಹಾಯ್ದು ಹೋಗುವಾಗ ಅವನಿಗೆ ಸ್ವಲ್ಪ ಭಯವೆನಿಸಿತು. ಮಬ್ಬುಗತ್ತಲೆಯಾಗಿತ್ತು; ತೊಗಲಬಾವಲಿಗಳು ಟೊಂಗೆಗಳಿಂದ ಕಳಚಿ ನೀರಲ್ಲಿ ಬಿದ್ದೊಡನೆ 'ಟಪಕ್' ಎಂದು ಸಪ್ಪಳವಾಗುತ್ತಿತ್ತು; ಎಲ್ಲ ಕಡೆಗೂ ಕಪ್ಪೆಗಳು 'ಕೊಡ್ರುರ್ ಕೊಡ್ರುರ್' ಎಂದು ಒಂದೇ ಸಮನೆ ಕೂಗುತ್ತಿದ್ದವು. ಒಟ್ಟಿನಲ್ಲಿ ಮರಣವೇ ಎಲ್ಲ ಕಡೆಗೂ ಮುಸುಕು ಹಾಕಿದಂತೆ ಅವನಿಗೆನಿಸಿತು.

ಅತಿಥಿಭವನವು ನೀರಿನಿಂದ ಇನ್ನೂರಡಿ ಎತ್ತರದ ಮೇಲೆ ಒಂದು ಬಂಡೆಯ ತುದಿಗೆ ಇತ್ತು. ಅರ್ಖೀಜನು ಅಲ್ಲಿಗೆ ಬರುವ ಹೊತ್ತಿಗೆ ನೀರೂ ಕಾಣದಾಯಿತು; ಡೋಣಿಯೂ ಕಣ್ಮರೆಯಾಯಿತು. ಅತಿಥಿಭವನದ ಹೊರಂಗಳದಲ್ಲಿ ಒಬ್ಬ ಕಾವಲುಗಾರನು ಮಲಗಿದ್ದನು. ತೆರವಿದ್ದ ಕೋಣೆಯಲ್ಲಿ ದೀಪಗಳು ಸುಮ್ಮನೆ ಉರಿಯುತ್ತಿದ್ದವು. ಅರ್ಖೀಜನು ಒಂದು ಕೋಣೆಯಿಂದ ಇನ್ನೊಂದು ಕೋಣೆಗೆ ತಿರುಗಾಡಿದನು. ಯಾರ ಸುಳಿವೂ ಕಾಣಲಿಲ್ಲ. ಕೊನೆಗೆ ಪೀಯಾನೋದ ಮೇಲಿದ್ದ ಎರಡು ಪತ್ರಗಳು ಅವನಿಗೆ ಕಂಡವು. ಕೂಡಲೆ ಅವನ್ನು ತೆಗೆದುಕೊಂಡು ಓದಿದನು. ಅವೆರಡರಲ್ಲಿ ಒಂದು ಪತ್ರವು ಮಾತ್ರ ಮಹತ್ವದ್ದಿತ್ತು. ಅದು ಹೆಸ್ಲೊಪನಿಂದ ಫೀಲ್ಡಿಂಗನಿಗೆ ಬಂದ ಪತ್ರ. ಅದನ್ನು ಓದುವದರಿಂದ ಅವನಿಗೆ ತನ್ನ ಸ್ನೇಹಿತನ ಮನಸ್ಸು ಮಾತ್ರ ಚೆನ್ನಾಗಿ ಗೊತ್ತಾಯಿತು. ಇನ್ನೂ ಆ ಪತ್ರವನ್ನು ಓದುತ್ತಿರುವಾಗಲೆ ನೀರಿನ ಮೇಲೆ ಭರಭರ ಸಪ್ಪಳವಾಯಿತು. ಅರ್ಖೀಜನು ಸ್ವಲ್ಪ ಗಾಬರಿಯಾಗಿ ಅತ್ತ ನೋಡಿದನು. ಸಮಾರಂಭವಿನ್ನೂ ಸಾಗಿತ್ತು. ಎರಡನೆಯ ಪತ್ರವನ್ನು ತೆಗೆದುಕೊಂಡನು. ಅದನ್ನು ಕ್ವೇಸ್ಟೆಡ್‌ಳೇ ಫೀಲ್ಡಿಂಗನಿಗೆ ಬರೆದಿದ್ದಳು. ಅದರಲ್ಲಿ ಒಂದೆರಡು ಹತ್ತುವಂಥ ಮಾತುಗಳಿದ್ದವು. 'ನನ್ನ ಸಾಲವನ್ನು ಸ್ವತಃ ನಾನು ತೀರಿಸಲು ಎಂದೂ ಸಾಧ್ಯವಿದ್ದಿಲ್ಲ.' ಇದೇ ಅರ್ಖೀಜನನ್ನು ದಿಗಲುಗೊಳಿಸಿತು. 'ಏನು ಮಾಡಲಿ ಇವರನ್ನು ?' ಎಂಬ ಆವೇಶ ಮೈಯಲ್ಲಿ ತುಂಬಿ ಬಂತು. ಆ ಆವೇಶದ ಭರದಲ್ಲಿ ಪೀಯಾನೋದ ಮೇಲೆ ಕೈ ಅಪ್ಪಳಿಸಿದನು. ಕೂಡಲೆ ಎಲ್ಲ ಸ್ವರಗಳೂ ಕೂಡಿ ಒಂದು ವಿಚಿತ್ರ ಧ್ವನಿಯಾಯಿತು.

'ಓ ! ಯಾರವರು ?' ಎಂದು ಗಾಬರಿಯಾದ ಒಂದು ವ್ಯಕ್ತಿಯು ಕೇಳಿತು. ಅರ್ಖೀಜನು ದನಿ ಬಂದ ಕಡೆಗೆ ನೋಡಹತ್ತಿದನು. ಮಗ್ಗಲು

ಕೋಣೆಯ ಮಂದ ಬೆಳಕಿನಲ್ಲಿ ಯಾರೊ ತನ್ನ ಕಡೆಗೇ ಬರುತ್ತಿರುವಂತೆ ಆವನಿಗೆನಿಸಿತು. ಕೂಡಲೆ ' ಸರಕಾರಿ ಡಾಕ್ಟರು ವಿಚಾರಿಸಲಿಕ್ಕೆ ಸವಾರಿ ಬಂದಿದ್ದಾರೆ. ಎಲ್ಲಿದ್ದಾರೆ ಅವರು ? ' ಎಂದು ತಾನೇ ಮುಂಗಡವಾಗಿ ಕೇಳಿ, ಆ ಪತ್ರಗಳನ್ನು ಗಡಿಬಿಡಿಯಿಂದ ಕಿಸೆಯಲ್ಲಿ ಹಾಕಿಕೊಂಡನು.

ರಾಲ್ಫ ಮೂರನು ಬೆಳಕಿನಲ್ಲಿ ಬಂದು ಅಝೀಜನೆದುರಿಗೆ ನಿಂತನು.

' ಕೆಲಸ ಬಹಳಿದ್ದುದರಿಂದ ನನಗೆ ಬೇಗನೆ ಬರುವದಾಗಲಿಲ್ಲ. ಈಗ ನೋವು ಹೇಗಿದೆ ? ' ಎಂದು ಗಂಭೀರವಾಗಿ ಅಝೀಜನೆ ಕೇಳಿದನು.

' ಈಗೇನೂ ಇಲ್ಲ; ಸಿದ್ದೆ ಹತ್ತಿತ್ತು.

' ಬಾ ಇಲ್ಲಿ ನೋಡೋಣ. ' ಎಂದು ಸಮೀಪಕ್ಕೆ ಕರೆದು ಕೈಮುಟ್ಟಿ ಎಲ್ಲ ಕಡೆಗೂ ನೋಡಿ ಉಪಚರಿಸಿದನು.

' ಈ ಹೊತ್ತು ಮುಂಜಾನೆ. . . . . . '

' ದೊಡ್ಡ ದೊಡ್ಡ ಡಾಕ್ಟರು ಸಹ ತಪ್ಪುಮಾಡುತ್ತಾರೆ. ಇಲ್ಲಿ ಬಾ; ಈ ದೀಪದ ಬೆಳಕಿನಲ್ಲಿ ನೋಡೋಣ. ನನಗೆ ಬಹಳ ಅವಕಾಶವಿಲ್ಲ ಮತ್ತೆ.'

' ಆ — ಹಾ— '

' ಯಾಕೆ ಏನಾಯಿತು ? '

' ನಿನ್ನ ಕೈ ಬಹಳ ಬಿರುಸಾಗಿದೆ. '

' ನನ್ನ ಕೈ ಹೇಗಿದ್ದ ಭಾಗ್ಯ ನಿನಗೇನು ? ನಾನೊಬ್ಬ ಪದವಿಯನ್ನು ಪಡೆದ ಡಾಕ್ಟರನಿದ್ದೇನೆ. ಏನೂ ನೋಯಿಸುವದಿಲ್ಲ ನಿನಗೆ. '

' ನಾನು ನೋವಿದ್ದರೂ ಲಕ್ಷ್ಯಕೊಡುತ್ತಿದ್ದಿಲ್ಲ. ಆದರೆ ನೋವೇ ಇಲ್ಲ. '

' ನೋವಿಲ್ಲವೇ ? '

' ನಿಜವಾಗಿಯೂ ಇಲ್ಲ. '

' ನೆಟ್ಟಗಿದೆ ಮಾತು ! '

' ಆದರೆ. . '

' ನಾನೊಂದು ಲೇಪನ ತಂದಿದ್ದೇನೆ; ಆದರೆ ನೀನು ಹೀಗೆ ಗಾಬರಿಯಾದರೆ ಅದನ್ನು ಹಚ್ಚಬೇಕಾದರೂ ಹೇಗೆ, ತಿಳಿಯದಾಗಿದೆ ? '

' ನಾನೇ ಹಚ್ಚಿಕೊಳ್ಳುತ್ತೇನೆ. ಅದನ್ನು ಕೊಟ್ಟು ಹೋಗಿರಿ. '

'ಆದಾಗದು. ಹೀಗೇಕೆ ನೀನು ಹುಚ್ಚನಂತೆ ಮಾಡುವಿ? ಫೀಲ್ಡಿಂಗ ನೆಲ್ಲಿದ್ದಾನೆ, ಹೇಳು?'

'ಅವರು ಡೋಣಿಯಲ್ಲಿ ಕುಳಿತುಕೊಂಡು ಹೋಗಿದ್ದಾರೆ.'

ಅಝೀಜನು ಅದನ್ನು ಕೇಳಿ ಆಶ್ಚರ್ಯಪಟ್ಟವನಂತೆ ನಟಿಸಿ 'ಅವರು ಮಾವು ಪಟ್ಟಣದ ಕಡೆಗೆ ಹೋಗಿರಲಿಕ್ಕಿಲ್ಲವಷ್ಟೇ? ಯಾಕಂದರೆ ಇಂಥ ದಿವಸಗಳಲ್ಲಿ ಜನರು ಉನ್ಮತ್ತರಾಗಿರುತ್ತಾರೆ!' ಎಂದನು.

'ಡಾಕ್ಟರ! ನೀವು ನಮ್ಮೊಡನೆ ಹೀಗೆ ನಡಕೊಳ್ಳಬಾರದು!' ಎಂದು ಧೈರ್ಯದಿಂದ ರಾಲ್ಫನು ಹೇಳಿಯೆಬಿಟ್ಟನು.

'ಹೀಗೆ ಅಂದರೆ ಹೇಗೆ?'

'ಡಾ. ಅಝೀಜ! ನಾವೇನು ನಿಮಗೆ ಅಂಥಾದ್ದು ಮಾಡಬಾರದ್ದನ್ನು ಮಾಡಿದ್ದೇವೆ?'

'ಓ! ನನ್ನ ಹೆಸರೂ ಬೇರೆ ಗೊತ್ತಿದೆಯಲ್ಲ! ಹೌದು, ನಾನು ಹೀಗೆ ನಡಕೊಳ್ಳಬಾರದೆಂದು ನನಗೆ ಬುದ್ಧೀ ಹೇಳುತ್ತೀಯಲ್ಲ, ನಿಮ್ಮ ಆ ಮಿಸ್ ಕ್ವೆಸ್ಟೆಡ್‌ಳು ಮಾರವಾರದಲ್ಲಿ ನನ್ನೊಡನೆ ಹೇಗೆ ನಡೆದುಕೊಂಡಿದ್ದಾಳೆಂಬು ದೇನಾದರೂ ಗೊತ್ತಿದೆಯೋ ನಿನಗೆ?'

ಸರಕಾರದ ತೋಫಿನ ಸಪ್ಪಳದಲ್ಲಿ ಅವನ ಕೊನೆಯ ಮಾತು ಅಡಗಿ ಹೋಯಿತು. ಒಮ್ಮಿಂದೊಮ್ಮೆ ಬೆಳಕು ಬಿದ್ದುದರಿಂದ ಅವರು ಬಾಗಿಲದ ಹೊರಗೆ ಬಂದರು. ಕೋಟೆಯ ಮೇಲಿನ ಹಿತ್ತಾಳಿಯ ತೋಫು ಒಂದೇ ಸಮನೆ ಮಿಂಚುತ್ತಿತ್ತು. ಊರನ್ನೆಲ್ಲ ತುಂಬಿದ ಆ ವಿದ್ಯುತ್ಪ್ರಕಾಶದಲ್ಲಿ ಮನೆಗಳೂ ಬೆಳಗುತ್ತಿದ್ದವು. 'ರಾಧಾಕೃಷ್ಣ ಜಯ ಕುಂಜವಿಹಾರಿ!' ಎಂಬ ಹಾಡು ಗಾಳಿಯ ಮೇಲೆ ತೇಲಿ ಬರುತ್ತಿತ್ತು.

ಈ ಹಾಡು ಕಾವಲುಗಾರನನ್ನು ಎಚ್ಚರಿಸಿತು. ಅವನು ಎದ್ದು ಕೈಯ್ಯ ಲ್ಲಿಯ ಬರ್ಚಿಯನ್ನು ನೆಲಕ್ಕೂರಿ ಅದರ ಮೇಲೆ ತನ್ನ ಮೈಭಾರ ಹಾಕಿ ನಿಂತನು.

'ಒಳ್ಳೇದು, ನಾನೀಗ ಹೋಗಬೇಕು; ನಮಸ್ಕಾರ' ಎಂದು ಅಝೀ ಜನು ಕೈ ಮುಂದೆ ಚಾಚಿದನು; ಅವನೂ ಕೈಕೊಟ್ಟ ಮೇಲೆ ಇಬ್ಬರೂ

ಕುಲುಕಿದರು. ಆಗ 'ಇನ್ನು ಮೇಲೆ ಮಾತ್ರ ನನ್ನ ಕೈ ಬಿರುಸೆಂದು ತಿಳಿಯುವದಿಲ್ಲವಷ್ಟೇ?' ಎಂದು ಅಝೀಜನು ಮೆಲ್ಲನೆ ಕೇಳಿದನು.

'ಇಲ್ಲ.'

ಅಝೀಜನು ಕೈಬಿಡಿಸಿಕೊಂಡು 'ಇಕಾ, ಇದನ್ನು ತೆಗೆದುಕೋ. ಹಚ್ಚುವಾಗ ನನ್ನನ್ನು ನೆನೆಸು. ನೀನು ಮಿಸೆಸ್ ಮೂರಳ ಮಗನಲ್ಲವೇ?' ಎಂದು ಆ ಮುಲಾಮಿನ ಡಬ್ಬಿಯನ್ನು ಅವನ ಕೈಯಲ್ಲಿ ಕೊಟ್ಟನು.

'ಹೌದು.'

'ಆದರೆ ನೀನು ಹೆಸ್ಲೋಪನ ತಮ್ಮನೂ ಹೌದು. ಅಯ್ಯೋ! ಈ ಎರಡೂ ರಾಷ್ಟ್ರಗಳು ಗೆಳೆತನವನ್ನು ಬೆಳೆಸಲಾರವು!'

'ಇನ್ನೂ ಈಗಲ್ಲ.'

'ನಿನ್ನ ತಾಯಿಯು ನನ್ನ ವಿಷಯವಾಗೇನಾದರೂ ಹೇಳಿದಳೇನು?'

'ಹುಂ, ತನ್ನ ಪತ್ರಗಳಲ್ಲಿ.'

ಅಝೀಜನಲ್ಲಿ ಕೃತಜ್ಞತೆಯ ಭಾವವು ತುಂಬಿ ಬಂತು. ಹುಡುಗನ ಬಗ್ಗೆ ಇದ್ದ ಮನಸ್ಸಿನಲ್ಲಿಯ ಕೊಂಕೆಲ್ಲವೂ ಮಾಯವಾಯಿತು. 'ಇಬ್ಬರೂ ಕೂಡಿಯೆ ಒಂದರ್ಧ ಗಂಟೆ ಕೆರೆಯಲ್ಲಿ ಸುತ್ತುಹಾಕಿಕೊಂಡು ಬರೋಣ, ನಡೆ' ಎಂದು ಸಲುಗೆಯಿಂದ ಅವನನ್ನು ಜಗ್ಗಿಕೊಂಡೇ ಹೋಗಿ ಡೋಣಿಯಲ್ಲಿ ಕುಳಿತುಕೊಂಡನು. ಕುಳಿತ ಮೇಲೆ ಅವನ ಮನದೊಳಗಿನ ಧಗಧಗಿಯು ಸ್ವಲ್ಪ ಕಡಿಮೆಯಾಯಿತು. ಅವನ ಆತಿಥ್ಯವು ಮತ್ತೆ ಅಮೋಘವಾಗಿ ಹರಿಯಹತ್ತಿತು. ಅತ್ತ ಮೆರವಣಿಗೆಯು ಇನ್ನೂ ಬೆಳೆಯುತ್ತಲೆ ಇತ್ತು. ಅದರ ದೀಪಗಳೂ ಈಗ ಹೆಚ್ಚಾದವು; ದನಿಯೂ ಹೆಚ್ಚಿತು. ಹೊಸ ಗಾಳಿಯು ಅವರಿಗೆ ಬೇಕಾದ ದಿಕ್ಕಿಗೇ ಬೀಸುತ್ತಿದ್ದುದರಿಂದ ಅವರಿಗೆ ಹುಟ್ಟುಕಡಿಯುವ ಕಾರಣವೇ ಬೀಳಲಿಲ್ಲ. ಹಾಗೆ ತೇಲುತ್ತ, ಎಲ್ಲೆಲ್ಲಿಯೊ ಸುತ್ತಾಡುತ್ತ ಹೊರಟರು. ಅವರು ಕುಳಿತ ಡೋಣಿಗೆ ಚುಕ್ಕಾಣಿ ಇದ್ದಿಲ್ಲ. ಅದರ ಮುಂದಿನ ಭಾಗದಲ್ಲಿ ಮುದುಡಿಕೊಂಡು ಕುಳಿತು ಉಳಿದ ಒಂದು ಜೋಡು ಹುಟ್ಟುಗಳನ್ನು ಕೈಯ್ಯಲ್ಲಿ ತೆಗೆದುಕೊಂಡು ಸಾವಕಾಶವಾಗಿ ಹುಟ್ಟುಹಾಕಹತ್ತಿದರು. ಕೂಡಲೆ ಆಕಾಶದಲ್ಲಿ ಮಿಂಚೊಂದು ಹೊಡೆಯಿತು. ಅದೇ ಬೆಳಕಿನಲ್ಲಿ ಆ ಹುಡುಗನು 'ಅದು ರಾಜನೇನು?' ಎಂದು ಏನೋ ನೋಡಿ ಕೇಳಿದನು.

'ಏನು—ಏನಂದಿ?'

'ಹಿಂದಕ್ಕೆ ಹುಟ್ಟು ಹಾಕು, ಹೇಳುತ್ತೇನೆ.'

'ರಾಜನಿಲ್ಲ—ಏನೂ ಇಲ್ಲ.'

'ಹಿಂದಕ್ಕೆ ತಿರುಗಿಸು, ಅಂದರೆ ನಾನು ಹೇಳಿದ್ದು ನಿನಗೇ ತಿಳಿಯು ವದು.'

ಎದುರು-ಗಾಳಿ ಬೀಸುತ್ತಿರುವಾಗ ಹುಟ್ಟು ಕಡಿಯುವದು ಅಝೀಜ ನಿಗೆ ಬಹಳ ಕಠಿಣವಾಯಿತು. ಆದರೆ ಅವನು ಅತಿಥಿಭವನದಲ್ಲಿಯ ಮಿಣಿ ಮಿಣಿ ದೀಪದ ಗುರುತು ಹಿಡಿದುಕೊಂಡು ಹಿಂದಕ್ಕೆ ನಾಲ್ಕು ಕೈಹೊಡೆದನು.

'ಆಹಾ, ಅಲ್ಲೆ....'

ಕತ್ತಲೆಯಲ್ಲಿ ತೇಲುತ್ತ ಝಗಝಗಿಸುವ ರಾಜವೇಷವನ್ನು ಹಾಕಿ ಕೊಂಡ ಒಬ್ಬ ಅರಸನು ಛತ್ರದ ಕೆಳಗೆ ಕುಳಿತು ಹೊರಟಿದ್ದನು.

'ನನಗದು ಏನೆಂಬುದು ಹೇಳಲಿಕ್ಕೆ ಸಾಧ್ಯವಿಲ್ಲ. ಯಾಕಂದರೆ ರಾಜನು ಸತ್ತಿದ್ದಾನೆ. ನಾವೀಗ ತಿರುಗಿ ಬೇಗನೆ ಹೊರಡಬೇಕೆಂದೆನಿಸುತ್ತದೆ' ಎಂದು ಆ ಹುಡುಗನ ಕಿವಿಯಲ್ಲಿ ಮೆಲ್ಲಗೆ ಹೇಳಿದನು.

'ಇನ್ನೂ ಮೆರವಣಿಗೆ ನಡೆದಿದೆ!'

'ನಾನು ಅತ್ತ ಸಮೀಪಕ್ಕೆ ಮಾತ್ರ ಹೋಗುವದಿಲ್ಲ. ಅವರ ಪದ್ಧತಿ ಗಳು ತೀರ ವಿಚಿತ್ರವಿರುವದರಿಂದ ನಿಮಗೇ ತೊಂದರೆಯಾಗಬಹುದು.'

'ಇನ್ನೂ ಸ್ವಲ್ಪ ಮುಂದೆ.'

ಅಝೀಜನು ನಿರ್ವಾಹವಿಲ್ಲದೆ ಒಪ್ಪಿದನು. ಡೋಣಿಯು ಮತ್ತೆ ಮುಂದೆ ಸಾಗಿತು. 'ರಾಧಾಕೃಷ್ಣ ಜಯ ಕುಂಜವಿಹಾರಿ' ಎಂಬ ಭಜನೆಯು ಕೇಳುತ್ತಿರುವ ಹಾಗೆಯೆ ಒಮ್ಮೆಲೆ ನಿಂತಿತು.

'ಮಿ. ಮೂರ್! ರಾಜನು ಸತ್ತಿದ್ದಾನೆಂದು ಯಾರಿಗೂ ಹೇಳಬೇಡ ಮತ್ತೆ. ಅದಿನ್ನೂ ಗುಪ್ತವಾದ ಸಂಗತಿ. ನಾನದನ್ನು ಹೇಳಬಾರದಾಗಿತ್ತು. ಈ ಸಮಾರಂಭವು ಮುಗಿಯುವ ವರೆಗೆ ಅವನು ಜೀವಂತವಿರುವನೆಂದೇ ತಿಳಿಯತಕ್ಕದ್ದು. ನಿನಗಿನ್ನೂ ಮುಂದೆ ಹೋಗಬೇಕಾಗಿದೆಯೆ?'

ಎದುರಿಗಿನ ದಂಡೆಯ ಮೇಲೆ ಉರಿಯುತ್ತಿರುವ ದೀವಟಿಗೆಗಳ ಬೆಳಕಿ ನಿಂದ ಅಝೀಜನು ಆದಷ್ಟು ದೂರಿರಲಿಕ್ಕೆ ಯತ್ನಿಸುತ್ತಿದ್ದನು. ಮುದ್ದು

ಬಾಣ ಬಿರುಸುಗಳು, ಬಂದುಕು ಒಂದೇ ಸಮನೆ ಹಾರುತ್ತಿದ್ದವು. ಒಮ್ಮಿಂ ದೊಮ್ಮೆ ಒಂದು ಹಾಳು ಗೋಡೆಯ ಹಿಂದಿನಿಂದ ಶ್ರೀಕೃಷ್ಣನ ಪಲ್ಲಕ್ಕಿಯು ಬಂದು ಪಾವಟಿಗೆಗಳ ಮೇಲೆ ಇಳಿಯಿತು. ಅದರ ಎರಡೂ ಮಗ್ಗಲಿಗಿದ್ದ ಹಾಡುವವರು ಮುಗ್ಗರಿಸಿದರು. ಒಬ್ಬ ತರುಣ, ಉನ್ಮತ್ತ, ಸಾಧ್ವಿ ಸ್ತ್ರೀಯು ಹೆಳಲಲ್ಲಿ ಹೂಗಳನ್ನು ಮುಡಿದುಕೊಂಡು ಎಲ್ಲರಕಿಂತಲೂ ಮುಂದೆ ಕಾಣುತ್ತಿದ್ದಳು. ಎಲ್ಲರೂ ಅಲ್ಲಿಂದ ಮೊಣಕಾಲ ವರೆಗೆ ನೀರಲ್ಲಿಳಿದು ನಿಂತರು. ಮತ್ತೆ ನೈವೇದ್ಯವಾಯಿತು, ಮಂಗಳಾರತಿಯಾಯಿತು. ಮುದುಕ ಗೋಡಬೊಲೆಯು ಅತ್ತಿತ್ತ ಅಲಿಯುತ್ತಿರುವ ಡೋಣಿಯನ್ನು ನೋಡಿ ಕೈಗಳನ್ನು ಬೀಸಿದನು. ಅಝೀಜನಿಗದು ಗೊತ್ತಾಗಲಿಲ್ಲ. ಮೇಲೆ ಮಾವು ಪಟ್ಟಣದ ಎಲ್ಲ ರಾಜೈಶ್ವರ್ಯವು— ಆನೆಗಳು, ಕುದುರೆಗಳು, ತೋಫುಗಳು, ಜನರು—ನಿಂತಿತ್ತು. ಎಲ್ಲರ ಮೇಲೂ ಬಿರುಗಾಳಿಯು ಬಿಸುತ್ತಿತ್ತು. ಒಬ್ಬ ಸೇವಕನು ಮಣೆಯ ಮೇಲಿರುವ ಮಣ್ಣಿನ ಗೋಕುಲವನ್ನು ತನ್ನ ತಲೆಯ ಮೇಲೆ ಹೊತ್ತುಕೊಂಡು ಜನರನ್ನು ಸರಿಸುತ್ತ ನೀರಿನಲ್ಲಿ ಸಾಗಿದನು. ಕುತ್ತಿ ಗೆಯ ತನಕ ನೀರಿನಲ್ಲಿ ಹೋಗಿ ಮುಳುಗಿ ಮೇಲಕ್ಕೆದ್ದನು. ದೇವರೆಲ್ಲ ನೀರು ಪಾಲಾಗಿದ್ದವು. ಅವನ ತಲೆಯ ಮೇಲೆ ಬರಿ ಮಣೆಯಿತ್ತು.

ಈ ಸಮಾರಂಭವನ್ನು ನೋಡುವ ಭರದಲ್ಲಿ ಯಾರಿಗೂ ಗೊತ್ತಿಲ್ಲದೆ ಎರಡು ಡೋಣಿಗಳು ಒಂದಕ್ಕೊಂದು ತಾಕಿದವು. ಕೂಡಲೆ ಒಳಗೆ ಕುಳಿ ತವರು ತಮ್ಮ ತೋಳುಗಳನ್ನು ಹೊರಗೆ ಬೀಸಿ ಒಬ್ಬರೊಬ್ಬರನ್ನು ಗಟ್ಟಿ ಯಾಗಿ ಹಿಡಿದರು. ಮತ್ತು ಸೊಂಟರಗಾಳಿಯಲ್ಲಿ ಗಿಮುಗಿಮಿ ಬೊಗಟ್ಟ-ಬೊಗರಿಯಾಡಿದಂತೆ ತಿರುಗಿದರು. ಇದರಿಂದ ಸ್ಟೇಲಾಳು ತನ್ನ ಗಂಡನ ಮೇಲೆ ಮೊದಲು ನೂಕಲ್ಪಟ್ಟು ಆಮೇಲೆ ಮುಂದೆ ಅಝೀಜನ ಮೇಲೆ ಬಿದ್ದಳು. ಅದರಿಂದ ಒಮ್ಮಾರಿಯಾಗಿ ಎಲ್ಲರೂ ನೀರಲ್ಲಿ ಬಿದ್ದರು. ಯಾರೂ ಗಾಬರಿಯಾಗದೆ ಮತ್ತೆ ಹತ್ತಿಕುಳಿತರು. ಅಝೀಜನ ಕಿಸೆಯಲ್ಲಿಯ ಅಡೀ ಲಾಳ ಪತ್ರಗಳು ಮೇಲೆ ಬಂದು ತೇಲಹತ್ತಿದವು. ಇದೇ ಹೊತ್ತಿಗೆ ತೋಫು ಗಳು ಹಾರಿದವು; ಆನೆಗಳು ಘೀಳಿಟ್ಟವು; ನಗಾರಿಗಳನ್ನು ಬಾರಿಸಿದರು; ಇವೆಲ್ಲವುಗಳನ್ನೂ ಮುಳುಗಿಸುವಂತೆ ಒಂದು ದೊಡ್ಡ ಗುಡುಗು ಗುಮ್ಮಟದ ಮೇಲೆ ಸುತ್ತಿಗೆಯಿಂದ ಹೊಡೆದಂತೆ ಖಟ್‌ಖಟಲ್ ಎಂದಿತು. ಮಳೆಯು

ಒಂದೇ ಸಮನೆ ಸುರಿಯಹತ್ತಿತು. ಜನರೆಲ್ಲರೂ ತೋಯಿಸಿಕೊಂಡರು; ಪಲ್ಲಕ್ಕಿಯ ಮೇಲಿನ ಜರತಾರಿ ಪೀತಾಂಬರ, ಬೆಲೆಯುಳ್ಳ ಛತ್ರ–ಚಾಮರಗಳು ಎಲ್ಲಾ ತೊಯ್ದುಹೋದವು; ದೀವಟಿಗೆಗಳು ನಂದಿದವು; ಮದ್ದುಗಳು ಹತ್ತಲಿಲ್ಲ; ತಾಳ ಪಾತಾಳ ಕಂಡವು; ಭಜನೆ ವಿಭಜನೆಯಾಯಿತು. ಎಲ್ಲರೂ ತಮ್ಮ ತಮ್ಮಷ್ಟಕ್ಕೆ ಊರ ಕಡೆಗೆ ಸಾಗಿದರು.

—

## ಪ್ರಕರಣ ೩೬

ಅಝೀಜ ಮತ್ತು ಫಿಲ್ಡಿಂಗರು ತಾವಿನ್ನೆಂದೂ ಕೂಡುವದು ಶಕ್ಯವಿಲ್ಲೆಂದು ಗೊತ್ತಿದ್ದರೂ ಮತ್ತೆ ಮಿತ್ರರಾಗಿ ಮಾವು ಅಡವಿಗಳಲ್ಲಿ ಕೊನೆಯ ಸಲ ಕುದುರೆ ಹತ್ತಿಕೊಂಡು ಹೊರಟರು. ನದಿಯ ಪ್ರವಾಹವೀಗ ಇಳಿದಿತ್ತು. ಮಹಾರಾಜನು ಸಾರ್ವಜನಿಕವಾಗಿ ಈಗ ತೀರಿಕೊಂಡಪ್ಪರಿಂದ ಆಚಾರಕ್ಕನುಸರಿಸಿ ಅತಿಥಿಭವನದಲ್ಲಿದ್ದ ಜನರು ಮರುದಿನ ಮುಂಜಾನೆ ಅಲ್ಲಿಂದ ಹೊರಡತಕ್ಕವರು. ಈ ಶೋಕಕ್ಕಾಗಿ ಅಥವಾ ಈ ಸಮಾರಂಭಕ್ಕಾಗಿ ಫಿಲ್ಡಿಂಗನು ಬಂದ ಕೆಲಸವೇನೂ ಆಗಿರಲಿಲ್ಲ. ಯಾಕಂದರೆ ಗೋಡಬೊಲೆಯವರೇ ಅವನ ಕಣ್ಣಿಗೆ ಬೀಳದೆ ತಪ್ಪಿಸಾಡುತ್ತಿದ್ದರು. ' ಈ ಹೊತ್ತು ಬೇಡ, ನಾಳೆ ತೋರಿಸುತ್ತೇನೆ ನಮ್ಮ ಶಾಲೆಯನ್ನು ' ಎಂದು ದಿನದಿನವೂ ಏನಾದರೊಂದು ತುಂಟು ನೆವ ಹೇಳಿ ಮರೆಯಾಗುತ್ತಿದ್ದರು. ಫೀಲ್ಡಿಂಗನಿಗೆ ಅವನು ಹೀಗೆ ತಪ್ಪಿಸುವದರ ಕಾರಣ ಮೊದಮೊದಲು ಗೊತ್ತೇ ಆಗಲಿಲ್ಲ. ಆದರೆ ಅಝೀಜನು ಒಮ್ಮೆ ' ನಿಮ್ಮ ಆ 'ಕಿಂಗ್ ಎಂಪಾಯರ್' ಶಾಲೆಯನ್ನು ಈಗ ಸಂಸ್ಥಾನದವರು ಧಾನ್ಯಸಂಗ್ರಹಮಾಡಲಿಕ್ಕೆ ಉಪಯೋಗಿಸುತ್ತಿದ್ದಾರೆ. ' ಎಂದು ಹೇಳಿ ಅವನ ಹೂರಣ ಹೊರಗೆ ಹಾಕಿದನು. ಒಮ್ಮೆ ಪ್ರೊಫೆಸರರಾಗಿ, ಈಗ ಶಿಕ್ಷಣಮಂತ್ರಿಗಳಾಗಿದ್ದ ಶ್ರೀಮಾನ್, ಶ್ರೀಯುತ ನಾರಾಯಣಸಾಹೇಬ ಗೋಡಬೊಲೆಯವರಿಗೆ ಈ ಕ್ಷುಲ್ಲಕ ವಿಷಯವನ್ನು ಫೀಲ್ಡಿಂಗನೆದುರಿಗೆ ಹೇಳಲಿಕ್ಕೆ ಮರ್ಯಾದೆ ಸಾಲುತ್ತಿರಲಿಲ್ಲ; ಅಂತೆಯೆ ಹೀಗೆ ಸುಳ್ಳು ಕುಟ್ಟಿ ತಪ್ಪಿಸುತ್ತಿದ್ದರು. ಇಷ್ಟಿದ್ದರೂ ಆ ಶಾಲೆಯನ್ನು ಮತ್ತೆ

ಸುರುವು ಮಾಡಬೇಕೆಂಬ ಹವ್ಯಾಸವೇನೂ ಆ 'ನಾರಾಯಣಪಂತ' ನಿಗೆ ಕಡಿಮೆಯಾಗಿರಲಿಲ್ಲ. ಆದರ ವಿದ್ಯಾರ್ಥಿಗಳು ಮೊಮ್ಮಕ್ಕಳನ್ನು ಕಾಣು ವದರೊಳಗಾಗಿ ಅದನ್ನು ಪುನಃ ಸ್ಥಾಪನೆ ಮಾಡದೆ ಬಿಡಲಿಕ್ಕಿಲ್ಲೆಂದು ಭೀಷ್ಮ ಪ್ರತಿಜ್ಞೆಯನ್ನು ಮಾಡಿದ್ದನು. ಈ ಜಾಲವನ್ನು ನೋಡಿ ಫೀಲ್ಡಿಂಗನು ನಕ್ಕಿದ್ದನು.

ಅವರೀಗ ಕಲ್ಲುಬಂಡೆಗಳ ನಡುವೆ ಹಾಯ್ದು, ಗಿಡಗಳ ಗುಂಪುಗಳನ್ನು ದಾಟಿ, ಬೆಳಕು ಹಬ್ಬಿದ ಬೈಲಿಗೆ ಬಂದರು. ನೆಲದ ಮೇಲೆ ಹಸಿರು ಹಾಸಿತ್ತು. ಪಾತರಗಿತ್ತಿಗಳು ಹಿರಿಯರಾರೂ ಇಲ್ಲದ ಹೊತ್ತಿನಲ್ಲಿ ಮಕ್ಕಳು ಜಿಗಿ ದಾಡುವಂತೆ ಸ್ವೇಚ್ಛೆಯಿಂದ ಕುಣಿದಾಡುತ್ತಿದ್ದವು, ನೆಗೆದಾಡುತ್ತಿದ್ದವು. ಹಾವೊಂದು ಎದುರಿಗೇ ಬಂದು ಗಿಡಗಳ ಮರೆಯಲ್ಲಿ ಹರಿದು ಹೋಯಿತು. ಆಕಾಶದಲ್ಲಿ ಬಿಳಿಮೋಡಗಳು ಅಲ್ಲೊಂದು ಇಲ್ಲೊಂದು ತೇಲುತ್ತಿದ್ದವು. ಭೂಮಿಯ ಮೇಲೆ ಅಲ್ಲಲ್ಲಿ ನಿಂತ ನೀರು ಆ ಆಕಾಶವನ್ನು ಕನ್ನಡಿಸಿತ್ತು. ದೂರದಲ್ಲಿ ಗುಡ್ಡಗಳು ಹೊಗೆಹೊಗೆಯಾಗಿ ಕಾಣುತ್ತಿದ್ದವು.

ಹಾವನ್ನು ನೋಡಿದೊಡನೆ ಒಮ್ಮೆಲೆ ಇಬ್ಬರೂ ಲಗಾಮನ್ನು ಜಗ್ಗಿ ದರು. ಕುದುರೆಗಳು ಗಕ್ಕನೆ ನಿಂತವು. ಆಗ ಆಝೀಜನು ತಾನು ಕ್ವೆಸ್ಟೆಡ್ ಳಿಗೆ ಬರೆದ ಪತ್ರವನ್ನು ಫೀಲ್ಡಿಂಗನ ಕೈಯಲ್ಲಿ ಕೊಟ್ಟು ಓದಲು ಹೇಳಿದನು. ಫೀಲ್ಡಿಂಗನು ಓದಿದನು: 'ನಾನು ಮತ್ತು ನನ್ನ ಗೆಳೆಯರು ಮಾವು ಪಟ್ಟ ಣದ ದೊಡ್ಡಕೆರೆಯಲ್ಲಿ ರಾತ್ರಿ ಡೋಣಿಯಿಂದ ಹೊರಳಿಬಿದ್ದಾಗ ನೀನು ಎಷ್ಟು ಶೂರಳಿರಬಹುದೆಂಬದರ ಕಲ್ಪನೆ ನನಗೆ ಚೆನ್ನಾಗಿ ಬಂತು. ನನಗೆ ಇಂಗ್ಲೀಷ ಭಾಷೆ ಅಷ್ಟೊಂದು ಚೆನ್ನಾಗಿ ಬರದಿದ್ದರೂ ಅನಿಸಿದ್ದನ್ನು ನಿನಗೆ ತಿಳಿಸಿಬಿಡ ಬೇಕೆಂದು ಗೊತ್ತುಮಾಡಿದ್ದೇನೆ. ' ನಿನ್ನ ಸಹಾಯದಿಂದಲೇ ನಾನು ಬಂದಿ ವಾಸವನ್ನು ಬಿಟ್ಟು ನನ್ನ ಮಕ್ಕಳ ಮರಿಗಳೊಡನೆ ಇಲ್ಲಿಗೆ ಬಂದು ಸುಖ ವಾಗಿದ್ದೇನೆ. ನಿನಗೆ ನಾನು ಏನಾದರೂ ನೋಯಿಸುವಂತೆ ನುಡಿದಿದ್ದರೆ, ಅದನ್ನೆಲ್ಲ ತಾಯಿಯಂತೆ ಹೊಟ್ಟೆಯಲ್ಲಿ ಹಾಕಿಕೊಳ್ಳಬೇಕು.'

ಓದುವದಾದ ಮೇಲೆ ಫೀಲ್ಡಿಂಗನು 'ಆಝೀಜ, ಕ್ವೆಸ್ಟೆಡ್‌ಳಿಗೆ ಇದನ್ನು ಓದಿ ತುಂಬಾ ಸಂತೋಷವಾಗುವದು. ಅಂತು ಅವಳ ಧೈರ್ಯ ಈಗ ನಿನಗೆ ಗೊತ್ತಾಯಿತಲ್ಲವೇ?' ಎಂದು ನಗುತ್ತ ಕೇಳಿದನು.

'ತಲೆಗೆ ಬಡಿದ ಮೇಲೆ ಎಲ್ಲವೂ ತಾನೆ ಗೊತ್ತಾಗುತ್ತದೆ.'

'ಈ ಮೂರವಾರ ಪ್ರಕರಣವನ್ನು ನನ್ನ ಹೆಂಡತಿಗಿಷ್ಟು ಹೇಳಬಾರದೇ? ಆವಳಿಗೇನೂ ಗೊತ್ತಿಲ್ಲ.'

'ಅದು ಹೇಗೆ?'

'ಮಾತೇ ಇಲ್ಲ. ಏನೊ, ನಿನ್ನೆದುರಿಗಾದರೆ ಒಮ್ಮೊಮ್ಮೆ ಸರಳ ಮಾತಾಡಿದರೂ ಮಾತಾಡಬಹುದು. ಅಝೀಜ! ಏನು ಹೇಳಲಿ ಸಂಸಾರದ ಸವಿ! ಎತ್ತು ಎರೆಗೆಳೆದರೆ ಕೋಣ ಕೆರೆಗೆಂಬಂತೆ ನಡೆದಿದೆ ನಮ್ಮ ಬಾಳು. ಸುಖವಿಲ್ಲ, ಅರೆಸತ್ತಂತೆ ಅರೆಗುರುಡಾಗಿ ಸೂಕುತ್ತಿದ್ದೆನೆ ಜೀವನ....'

'ಅಂದರೇನು ಸಿರಿಲ್? ಸ್ಟೇಲಾ ನಿನ್ನ ಮಾತು ಕೇಳುವದಿಲ್ಲೇನು? ಆಗಿದ್ದಾದರೂ ಏನು?'

ಫೀಲ್ಡಿಂಗನು ಮೌನವಾಗಿದ್ದನು. ತಾನು ಅವಳನ್ನು ಪ್ರೀತಿಸುವಂತೆ ಅವಳು ತನ್ನನ್ನು ಪ್ರೀತಿಸುವದಿಲ್ಲೆಂಬ ಅವನ ತಿಳುವಳಿಕೆಯೇ ಅವನ ದಾಂಪತ್ಯಜೀವನದಲ್ಲಿಯ ವಿರಸಕ್ಕೆ ಕಾರಣವಾಗಿತ್ತು.

ಇಬ್ಬರೂ ಒಬ್ಬರನ್ನೊಬ್ಬರು ನೋಡಿದರು. ಈ ಸಲ ಅವರ ದೃಷ್ಟಿಗೆ ಒಬ್ಬರೊಬ್ಬರ ಅಂತಃಕರಣಕ್ಕೆ ಮುಟ್ಟುವ ಶಕ್ತಿ ಬಂದಿತ್ತು. ಇಲ್ಲಿಯವರೆಗಿದ್ದ ಅವರಲ್ಲಿಯ ಹುಚ್ಚು ಹುಚ್ಚು ತಪ್ಪುತಿಳುವಳಿಕೆಗಳೆಲ್ಲ ಈಗ ಮಾಯವಾಗಿದ್ದವು. ಆದರೆ ಸಮಾಜದ ದೃಷ್ಟಿಯಿಂದ ಅವರನ್ನು ದೂರದೂರೇ ಉಳಿದರು. ಅದನ್ನು ಮೀರಿ ಸಮೀಪ ಬರುವದು ಅವರಿಂದಾಗಲಿಲ್ಲ. ಸ್ವಲ್ಪ ಹೊತ್ತು ಇಬ್ಬರೂ ಮೌನವಾಗಿಯೇ ಸಾಗಿದರು.

'ಅಝೀಜ, ನಿನಗೆ ಈ ಕೃಷ್ಣನ ವಿಷಯವಾಗೇನಾದರೂ ಗೊತ್ತಿದೆಯೇ?' ಎಂದು ಫೀಲ್ಡಿಂಗನೆ ಮೊದಲು ಮೌನವನ್ನು ಮುರಿದನು.

'ನನಗೆ ಉಳಿದದ್ದೇನೂ ಗೊತ್ತಿಲ್ಲ. ಇದಕ್ಕೆ ಸರಕಾರದಲ್ಲಿ 'ಗೋಕುಲಾಷ್ಟಮಿ' ಎಂದು ಕರೆಯುತ್ತಾರೆ. ಎಲ್ಲ ಕಚೇರಿಗಳೂ ಅಂದು ಬಂದ್ ಇರುತ್ತವೆ. ಇಲ್ಲವಾದರೆ ನಿನಗೂ ನನಗೂ ಅದರ ಸಂಬಂಧವೇನು?'

'ಚೆನ್ನಾಗಿದೆ; ಇದೇ ದೇಶದಲ್ಲಿದ್ದು ಈ ಹಣೆಬರಹವೇ? ನಿನಗಿಂತಲೂ ನನಗೇ ಹೆಚ್ಚಿಗೆ ಗೊತ್ತಿದೆಯೆಂದಂತಾಯಿತಲ್ಲ! ಗೋಕುಲವೆಂದರೆ ಕೃಷ್ಣನು ಹುಟ್ಟಿದ ಹಳ್ಳಿ; ಈ ಹಳ್ಳಿಗೂ ಇನ್ನೊಂದು ಹಳ್ಳಿಗೂ ತಿಕ್ಕಾಟವಿದ್ದಿತು.

ಕೃಷ್ಣ ಅದರಲ್ಲಿ ಗೆದ್ದ. ಆದರೆ ಇದು ನನಗೆ ಬೇಡ; ಅದರ ಆಧ್ಯಾತ್ಮಿಕ ಅರ್ಥ ವನ್ನು—ಇದ್ದರೆ—ತಿಳಿದುಕೊಳ್ಳಬೇಕೆಂದು ನನ್ನ ಆಶೆ. '

'ಫೀಲ್ಡಿಂಗ್ ನನ್ನೊಡನೆ ಈ ಹಿಂದೂಜನರ ವಿಷಯ ಚರ್ಚಿಸುವದು ವ್ಯರ್ಥ. ಅದರಲ್ಲಿ ನನಗೇನೂ ತಿಳಿಯದು. ಆದರೆ ಅವರ ಗೊಂಬಿಮನೆಗೆ ನಾನೇನಾದರೂ ಅಪ್ಪಿ-ತಪ್ಪಿ ಹೋದರೆ ಅವರು ನನ್ನನ್ನು ಸುಲಿದು ಬಿಡುತ್ತಾ ರೆನ್ನುವದೊಂದು ಮಾತ್ರ ನನಗೆ ಗೊತ್ತಿದೆ. '

'ಸಾಕು ಬಿಡು, ಇಲ್ಲದ್ದೊಂದು ಹೇಳಬೇಡ. ಆ ಕೃಷ್ಣನನ್ನು ತೆಗೆದುಕೊಂಡು ಈಗ ನಮಗೇನು ಮಾಡಬೇಕಾಗಿದೆ? ಮತ್ತೇನಾದರೂ ಮಾತಾಡೋಣ. '

ಇಬ್ಬರೂ ಅಲ್ಲಿಂದ ಆ ವಿಷಯವನ್ನೆ ಬಿಟ್ಟು ಮಾವು ಪಟ್ಟಣಕ್ಕೆ ಮುಟ್ಟುವ ವರೆಗೂ ರಾಜಕಾರಣದ ವಿಷಯವನ್ನೆ ಮಾತಾಡುತ್ತ ಬಂದರು. ಆಗ ಫೀಲ್ಡಿಂಗನು ಬೇಕೆಂತಲೆ ಅಝೀಜನನ್ನು ಪೀಡಿಸಬೇಕೆಂದು 'ಇಲ್ಲಿ ನೋಡು ಅಝೀಜ, ನಿಜವಾಗಿಯೂ ಬ್ರಿಟಿಶ್ ಸಾಮ್ರಾಜ್ಯಕ್ಕೆ—ಅದು ಎಷ್ಟೇ ದಬ್ಬಾಳಿಕೆ ಮಾಡಲಿ—ಎಂದಿಗೂ ಅಳಿಗಾಲವಿಲ್ಲ. ' ಎಂದನು. ಅಝೀ ಜನು ಒಮ್ಮೆಲೆ ನಾಗರಹಾವಿನಂತೆ ಭುಸುಗುಟ್ಟುತ್ತ 'ಅದೆಂದೂ ಸಾಧ್ಯ ವಿಲ್ಲ. ನಾವೇ ನಿಮ್ಮನ್ನು ಮಣ್ಣುಗೂಡಿಸುವೆವು!' ಎಂದು ಉತ್ತರ ಕೊಟ್ಟನು. ಫೀಲ್ಡಿಂಗನು ಯಾವ ರೀತಿಯಿಂದಲೂ ಉದ್ವೇಗಗೊಳ್ಳದೆ ಶಾಂತರೀತಿಯಿಂದ 'ಅಝೀಜ! ಸಾಕು ಬಿಡು, ಗೊತ್ತಿದೆ ನಿಮ್ಮ ಶೌರ್ಯ. ನೋಡಿರಿ, ನಿಮ್ಮ 'ಕಿಂಗ್ ಎಂಪಾಯರ್ ಹೈಯಸ್ಕೂಲನ್ನು! ಅಷ್ಟೇಕೆ, ನಿನ್ನನ್ನೇ ನೋಡಿಕೋ. ಔಷಧಗಳನ್ನು ಬಿಟ್ಟು ಮಂತ್ರ-ತಂತ್ರಗಳಿಗೆ ಗಂಟು ಬಿದ್ದಿರುವಿ; ನಿನ್ನ ಕವಿತೆಗಳನ್ನು ನೋಡಿದರೂ—ನಮ್ಮ ಹೆಂಗಸರನ್ನು ಬಿಡು ಗಡೆ ಮಾಡಿರಿ! ಅಂದರೇ ನಮಗೆ ಸ್ವಾತಂತ್ರ್ಯ ಸಿಕ್ಕುವದು!—ಎಂದು ಕೂಗಿಕೊಳ್ಳುತ್ತವೆ. ತಮಾಷ! ಒಂದಿಷ್ಟು, ಬರೆದಂತೆ ಮಾಡಲು ಪ್ರಯತ್ನ ಮಾಡು ನೋಡೋಣ? ಮೊದಲು ನಿನ್ನ ಸ್ತ್ರೀಗೇ ಸ್ವಾತಂತ್ರ್ಯಕೊಡು; ಆಮೇಲೆ ಈ ನಿನ್ನ ಅಹಮ್ಮದ, ಕರೀಮ ಮತ್ತು ಜಮೀಲಾರ ಮುಖವನ್ನು ಯಾರು ತೊಳಿಸುತ್ತಾರೋ ನೋಡೋಣ? ' ಎಂದು ನುಡಿದನು.

ಅಝೀಜನಿಗೆ ಒಳಗೆ ಅತ್ಯಂತ ತಳಮಳವಾಯಿತು. ಸಿಟ್ಟು ಸೈರಣೆ

ತಪ್ಪಿಸಿತು. ತನ್ನ ಕುದುರೆಯನ್ನು ಒಮ್ಮೆಲೆ ಜಗ್ಗಿ ಹಿಡಿದು ನಿಲ್ಲಿಸಿ 'ನಿಮ್ಮನ್ನು ಹತ್ತು ವರ್ಷಗಳ ಹಿಂದೆಯೇ ತಿಳಿಯಬೇಕಿತ್ತು; ಈಗ ಬಹಳ ತಡವಾಯಿತು. ಫೀಲ್ಡಿಂಗ್, ನಮ್ಮ ಈ ದುಃಖಕ್ಕೆ ಕಾರಣರಾರು ? ಇಷ್ಟು ದಿವಸ ನಿಮಗೇ ದೋಷ ಕೊಡುತ್ತಿದ್ದೆವು. ಆದರೆ ಈಗ ನಮ್ಮ ಮೇಲೆಯೆ ಹೊತ್ತುಕೊಳ್ಳುತ್ತೇವೆ. ನಾವೂ ಈಗ ಬುದ್ಧಿಗಲಿತಿದ್ದೇವೆ! ಇಂಗ್ಲಂಡಕ್ಕೆ ಸಂಕಟ ಬರುವ ವರೆಗೆ ಹೇಗಾದರೂ ಸುಮ್ಮನಿರುತ್ತೇವೆ. ಒಮ್ಮೆ ಯುದ್ಧವಾದರೂ ಪ್ರಾರಂಭವಾಗಲಿ, ಅಲ್ಲಿಂದ ತೋರಿಸುತ್ತೇವೆ ನಮ್ಮ ಕೈ.' ಎಂದು ಹಲ್ಲುಕಟಿಯುತ್ತ ಕೈಮುಷ್ಟಿಯನ್ನು ಮುಂದೆ ಮಾಡಿ ಅರಚಿದನು.

'ಹಾಗಾದರೆ ಅಯ್ಲೀಜ, ನಿಮಗೆ ಈ ಇಂಗ್ಲೀಷರು ಬೇಡಾಗಿದ್ದರೆ, ಅವರನ್ನು ಬಿಟ್ಟು ಯಾರು ಬೇಕು ? ಜಪಾನಿಯರೇನು ? ' ಎಂದು ಮೂದಲಿಸುವ ದನಿಯಲ್ಲಿ ಕೇಳಿದನು.

ಅಯ್ಲೀಜನು ಅವನ ಮಾತಿನ ಮರ್ಮ ತಿಳಿಯದೆ 'ಇಲ್ಲ, ನಮ್ಮ ಪೂರ್ವಜರಾದ ಅಫಗಾನರು.' ಎಂದು ಉತ್ತರಕೊಟ್ಟನು.

'ಅಂದರೆ, ನಿನ್ನ ಹಿಂದೂ ಮಿತ್ರರಿಗೆ ಇದು ರುಚಿಸುವದೇ ? '

'ರುಚಿಸದೆ ಏನು ? ರುಚಿಸಲೇಬೇಕು. ಅದಕ್ಕಾಗಿ ಬೇಕಾದರೆ ಒಂದು ರಾಜಕಾರಣಪಟುಗಳ ಪರಿಷತ್ತು ಕೂಡಿಸುವೆವು.'

'ಆಹಾ! ಕೂಡಿಸಬಹುದು!' ಎಂದು ವ್ಯಂಗ್ಯವಾಗಿ ನುಡಿದನು.

'ನಿಮ್ಮ ಗತ್ತೆಲ್ಲ ನಮಗೆ ಗೊತ್ತಿದೆ. 'ನಾವು ಹಿಂದಕ್ಕೆ ಪೇಶಾವರದಿಂದ ಕಲಕತ್ತೆಯ ವರೆಗೆ ಪ್ರತಿಯೊಬ್ಬ ಮನುಷ್ಯನನ್ನು ಸುಲಿದೆವು ಮತ್ತು ಹೆಂಗಸರನ್ನು ಕೆಡಿಸಿದೆವು' ಎಂದು ತಿರುಗ-ಮುರುಗ ಹಳೆಯ ಕಥೆಯನ್ನೆ ಮುಂದೆ ಮಾಡಿ ಅದನ್ನು ವರ್ತಮಾನ ಪತ್ರದಲ್ಲಿ ಮೇಲಿಂದ ಮೇಲೆ ಹಾಕಿ ನಮಗೂ ಹಿಂದುಗಳಿಗೂ ಬಡಿದಾಟ ಹಚ್ಚಿ ನಿಮ್ಮ ರಾಜ್ಯ ಸ್ಥಿರಗೊಳಿಸಬೇಕೆಂದು ಮಾಡಿದ್ದೀರಾ? ಇನ್ನದು ಸಾಧ್ಯವಿಲ್ಲ; ಎಂದಿಗೂ ಸಾಧ್ಯವಿಲ್ಲ. ಭಾರತವು ಇನ್ನು ಒಂದು ರಾಷ್ಟ್ರವಾಗುವದು! ಯಾವ ಪರದೇಶದವರಿಗೂ ಅದರಲ್ಲಿ ಸ್ಥಾನವಿಲ್ಲ! ಹಿಂದುಗಳು, ಮುಸಲ್ಮಾನರು, ಶೀಖರು ಎಲ್ಲರೂ ಒಂದಾಗುವರು! ಜಯ್ ಭಾರತ! ಜಯ್ ಭಾರತ!' ಎಂದು ಉನ್ಮಾದದಲ್ಲಿ ಜಯಜಯಕಾರ ಮಾಡಿದನು.

ಫೀಲ್ಡಿಂಗನು ಮತ್ತೆ ‘ಭಾರತವು ಒಂದು ರಾಷ್ಟ್ರವೇ!?’ ಎಂದು ಅಣಕಿಸಿ ಕೇಳಿದನು. ಅಝೀಜನಿಗೆ ತನ್ನ ಸಿಟ್ಟು ತಡೆಯುವದಾಗಲಿಲ್ಲ. ಅತ್ತಿತ್ತ ಹರಿದಾಡಿದನು. ಏನು ಮಾಡಬೇಕೆಂಬುದು ತಿಳಿಯಲಿಲ್ಲ. ಕೊನೆಗೆ ‘ಏನೇ ಆಗಲಿ, ಈ ಇಂಗ್ಲೀಷರನ್ನು ಬಗ್ಗುಬಡಿಯಿರಿ! ಇವರನ್ನು ಹೊಡೆದಟ್ಟಿರಿ! ನಮ್ಮ ನಮ್ಮ ಬಡಿದಾಟ ಒತ್ತಟ್ಟಿಗಿರಲಿ! ಫೀಲ್ಡಿಂಗ್, ನಮ್ಮ ಕಡೆಯಿಂದಾಗದಿವ್ವರೂ ನಮ್ಮ ಮಕ್ಕಳಾದರೂ ನಿಮ್ಮನ್ನು ಹೊರಗೆ ಹಾಕುವರು. ಐದು ವರ್ಷಬಿಟ್ಟು ಐದು ಸಾವಿರ ವರ್ಷವಾದರೂ ನಿಮ್ಮನ್ನಿಲ್ಲಿಂದ ತಳಕಿತ್ತಿಸಿಯೇ ತೀರುವೆವು! ಎಲ್ಲ ಇಂಗ್ಲೀಷರನ್ನೂ ಸಮುದ್ರದಲ್ಲಿ ಮುಳುಗಿಸಿ ಅಲ್ಲಿಂದ— ’ ಜೋರಿನಿಂದ ಕುದುರೆಯನ್ನು ಮುಂದಕ್ಕೆ ಹೊಡೆದು ‘ಅಲ್ಲಿಂದ ನಾನು ನೀನು ಗೆಳೆಯರಾಗೋಣ.’ ಎಂದು ಅವನ ಕೈಹಿಡಿದನು.

‘ಅಲ್ಲಿಂದೇಕೆ? ಈಗಲೇ ನಾವೇಕೆ ಗೆಳೆಯರಾಗಬಾರದು? ನನಗೆ ಬೇಕಾದದ್ದೂ ಅದೇ, ನಿನಗೆ ಬೇಕಾದದ್ದೂ ಅದೆ.’ ಎಂದು ಅಂತಃಕರಣದಿಂದ ನುಡಿದನು.

ಆದರೆ ಅವರು ಗೆಳೆಯರಾಗುವದು ಅವರ ಕುದುರೆಗಳಿಗೆ ಬೇಡಾಗಿತ್ತು; ಅವು ಸೆಡವಿನಿಂದ ಒಂದಕ್ಕೊಂದು ದೂರ ಸರಿದು ನಿಂತವು. ನೆಲ ಮುಗಿಲು, ಗುಡ್ಡ, ಕೆರೆ, ಗುಡಿ, ಅರಮನೆ, ಒಟ್ಟು ಆಗ ಅವರ ಕಣ್ಣಿಗೆ ಕಂಡದ್ದೆಲ್ಲ ಒಂದೇ ದನಿಯಿಂದ ‘ಬೇಡ, ಇನ್ನೂ ಹೊತ್ತು ಬಂದಿಲ್ಲ.’ ಎಂದು ಕೂಗಿ ಹೇಳಿದವು.

— ಮುಗಿದುದು —

——

# ಮನೋಹರ ಗ್ರಂಥಮಾಲೆಯಲ್ಲಿ ಇದುವರೆಗೆ
# ಅರಳಿದ ಕುಸುಮಗಳು

| | | | | |
|---|---|---|---|---|
| *೧ ಸುದರ್ಶನ | ಕಾದಂಬರಿ | ೦ | ೧೨ | ೦ |
| *೨ ಸವಿಲುಗರಿ | ಕತೆಗಳ ಸಂಗ್ರಹ | ೦ | ೧೨ | ೦ |
| *೩ ತ್ರಿಪುರದಹನ | ವಿಚಾರಾತ್ಮಕ ಗ್ರಂಥ | ೦ | ೧೨ | ೦ |
| *೪ ಬಾಳುರಿ | ಕಾದಂಬರಿ | ೦ | ೧೨ | ೦ |
| *೫ ಬ್ರಾಹ್ಮಣರ ಹುಡುಗಿ | ಕಾದಂಬರಿ | ೦ | ೧೨ | ೦ |
| *೬-೭ ವಿಶ್ವಾಮಿತ್ರನ ಸೃಷ್ಟಿ | ಕಾದಂಬರಿ | ೧ | ೧೨ | ೦ |
| *೮ ಜೀವನ | ಕತೆಗಳ ಸಂಗ್ರಹ | ೦ | ೧೨ | ೦ |
| ೯ ಕಾಳರಾತ್ರಿ | ಆಧ್ಯಾತ್ಮಿಕ ಕಾದಂಬರಿ | ೦ | ೧೨ | ೦ |
| ೧೦ ಧರ್ಮಸೆರೆ | ಕಾದಂಬರಿ | ೦ | ೧೪ | ೦ |
| *೧೧ ರಾಜಯೋಗಿ | ಐತಿಹಾಸಿಕ ಕಾದಂಬರಿ | ೦ | ೧೪ | ೦ |
| ೧೨ ಕೋಲ್ಮಿಂಚು | ಏಕಾಂಕ ಸಂಗ್ರಹ | ೧ | ೦ | ೦ |
| ೧೩-೧೪ ಇಜ್ಜೋಡು | ಕಾದಂಬರಿ | ೧ | ೮ | ೦ |
| ೧೫ ಕುರಿಹಿಂಡು | ಸಚಿತ್ರ ವಿಡಂಬನಗಳು | ೧ | ೦ | ೦ |
| ೧೬ ಧೂಮಕೇತು | ಕಾದಂಬರಿ | ೦ | ೧೪ | ೦ |
| ೧೭ ಧರ್ಮಜ್ಯೋತಿ | ವಿಚಾರಾತ್ಮಕ ಗ್ರಂಥ | ೧ | ೪ | ೦ |
| ೧೮ ಸೇವಾಪ್ರದೀಪ | ಐತಿಹಾಸಿಕ ನಾಟಕ | ೦ | ೧೨ | ೦ |
| ೧೯ ದಿಲ್ಲೀಶ್ವರನ ದಿನಚರಿ | ಚಾರಿತ್ರಿಕ ಗ್ರಂಥ | ೦ | ೧೨ | ೦ |
| ೨೦ ಪುಷ್ಪಮಾಲೆ | ಕತೆಗಳ ಸಂಗ್ರಹ | ೦ | ೧೨ | ೦ |
| ೨೧ ಸೋಲೋ ಗೆಲುವೋ | ನೀಳ್ಗತೆಗಳು | ೦ | ೧೨ | ೦ |
| ೨೨ ಹಳ್ಳಿಯ ಸಮಾಜ | ಕಾದಂಬರಿ | ೦ | ೧೪ | ೦ |
| ೨೩ ಪಾವನಪಾವಕ | ಸ್ವಪ್ನದೃಶ್ಯಗಳು | ೦ | ೮ | ೦ |
| ೨೪ ಸಮುದ್ರದಾಚೆಯಿಂದ ಭಾಗ ೧ | ದಿನಚರಿ | ೧ | ೦ | ೦ |
| ೨೫ ಸರಸಮ್ಮನ ಸಮಾಧಿ | ಕಾದಂಬರಿ | ೦ | ೧೨ | ೦ |
| ೨೬ ೨೭ ಎರಡು ಧ್ರುವ | ಕಾದಂಬರಿ | ೨ | ೦ | ೦ |
| ೨೮ ಸಮುದ್ರದಾಚೆಯಿಂದ ಭಾಗ ೨ | ದಿನಚರಿ | ೧ | ೦ | ೦ |

| | | | | |
|---|---|---|---|---|
| ೨೯ ಹೂಬಾಣಗಳು | ನಗೆಬರೆಹಗಳು | ೧ | ೮ | ೦ |
| ೩೦ ಮಹಾಪೂರ | ಕಾದಂಬರಿ | ೦ | ೧೨ | ೦ |
| ೩೧ ಸಂಧ್ಯಾರಾಗ | ಕಾದಂಬರಿ | ೧ | ೦ | ೦ |
| ೩೨-೩೩ ಪ್ರೇಮಾಹುತಿ | ಕಾದಂಬರಿ | ೧ | ೮ | ೦ |
| ೩೪ ಜನನಾಯಕ | ನಾಟಕ | ೦ | ೧೪ | ೦ |
| ೩೫ ಸುಳುವು-ಹೊಳವು | ಹರಟೆಗಳು | ೧ | ೦ | ೦ |
| ೩೬ ಕಾರಣಪುರುಷ | ಕಾದಂಬರಿ | ೧ | ೦ | ೦ |
| ೩೭ ಹತ್ತು ವರುಷ | ಆತ್ಮಚರಿತ್ರ | ೧ | ೦ | ೦ |
| ೩೮ ತುಟಿಮೀರಿದುದು | ಹಾಸ್ಯಪ್ರಬಂಧಗಳು | ೦ | ೧೪ | ೦ |
| ೩೯-೪೦ ಭಾರತ ಮಾರ್ಗ | ಕಾದಂಬರಿ | ೨ | ೮ | ೦ |
| ೪೧ ಗ್ರಾಮಪಂಚಾನನ | ಕಾದಂಬರಿ | ೦ | ೧೨ | ೦ |
| ೪೨ ಮಾರ್ಗದರ್ಶಕ | ಸಣ್ಣ ಕತೆಗಳು | ಅಚ್ಚಿನಲ್ಲಿ | | |

## ಬಿಡಿ ಮುತ್ತುಗಳು

| | | | | |
|---|---|---|---|---|
| ೧ ಸಾಹಿತ್ಯ ಮತ್ತು ವಿಮರ್ಶೆ | ಶ್ರೀ. ದ. ರಾ. ಬೇಂದ್ರೆ | ೦ | ೧೨ | ೦ |
| ೨ ಪಯಣ (ಕವನಸಂಗ್ರಹ) | ಶ್ರೀ. ವಿನಾಯಕ | ೦ | ೧೨ | ೦ |
| ೩ ತಿರುಪಾಣಿ (ಗೀತಪ್ರಧಾನ ನಾಟಕ) | 'ಶ್ರೀನಿವಾಸ' | ೦ | ೮ | ೦ |
| ೪ ಸಖೀ ಗೀತ | ,, | ೧ | ೦ | ೦ |
| ೫ ಸಾಹಿತ್ಯ-ಸಂಶೋಧನ | ಶ್ರೀ. ದ. ರಾ. ಬೇಂದ್ರೆ | ಅಚ್ಚಿನಲ್ಲಿ | | |
| ೬ ಸಿರಾಭರಣ ಸುಂದರಿ ಮತ್ತು | | | | |
| ೭ ವ್ಯಕ್ತಿ-ವಿಮರ್ಶೆ-ವಿಚಾರ | ,, | ,, | | |
| ೮ ಇತ್ಯಾದಿ. | ,, | ,, | | |

---

' ಗುರುತಿನ ಪುಸ್ತಕಗಳು ತೀರಿವೆ.